# ವೇದ ಸಂಸ್ಕೃತಿಯ ಪರಿಚಯ

ಕಾ

(ಸಂಪುಟಗಳು, ೯ ಮತ್ತು ೧೦)

‚‚ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ''

( ಶ್ರೀ ಮಹಾಲಕ್ಷ್ಮೀ
ಶ್ರೀ ಭೂ ನೀಳಾದಿಸೂಕ್ತ ವಿವರಣೆ )



ಗ್ರಂಥಕರ್ತರು :

ಕೆ. ಎಸ್. ನಾರಾಯಣಾಚಾರ್ಯ

ವೇದವಿದ್ಯಾ ಪ್ರಕಾಶನ

‚‚ಮಾಲೋಲ'', ರೇಲ್ವೆ ಗೂಡ್ಸ್‌ಷೆಡ್ ಹಿಂಬಾಗ

ಕಲ್ಯಾಣನಗರ, ಧಾರವಾಡ–೫೮೦,೦೦೭

# ವೇದ ಸಂಸ್ಕೃತಿಯ ಪರಿಚಯ

(ಸಂಪುಟಗಳು, ೯ ಮತ್ತು ೧೦)

,,ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ''

## ( ಶ್ರೀ ಮಹಾಲಕ್ಷ್ಮೀ
## ಶ್ರೀ ಭೂ ನೀಳಾದಿಸೂಕ್ತ ವಿವರಣೆ )

ಗ್ರಂಥಕರ್ತರು :

ಪ್ರೊ. ಕೆ. ಎಸ್. ನಾರಾಯಣಾಚಾರ್ಯ

ವೇದವಿದ್ಯಾ ಪ್ರಕಾಶನ

,,ಮಾಲೋಲ'', ರೇಲ್ವೆ ಗೂಡ್ಸ್‌ಷೆಡ್ ಹಿಂಬಾಗ

ಕಲ್ಯಾಣನಗರ, ಧಾರವಾಡ–೫೮೦,೦೦೭

ಪ್ರಕಾಶಕರು :

ಪ್ರೊ|| ಕೆ. ಎಸ್. ನಾರಾಯಣಾಚಾರ್ಯ
ವೇದವಿದ್ಯಾ ಪ್ರಕಾಶನ,
"ವ್ಯಾಲೋಲ", ರೇಲ್ವೆ ಗೂಡ್ ಷೆಡ್ ಹಿಂಭಾಗ
ಕಲ್ಯಾಣನಗರ, ಧಾರವಾಡ





ಪ್ರತಿಗಳು : ೧೦೦೦

ಬೆಲೆ : ಮೂವತ್ತು ರೂಪಾಯಿಗಳು (೩೦/-)

ಆಗಸ್ಟ್, ೧೯೮೬



ಮುದ್ರಕರು :

ಶ್ರೀ ಎನ್. ಕೆ. ಪೊತ್ನೀಸ,
ಕೃಪಾ ಮುದ್ರಣ,
ಧಾರವಾಡ-೫೮೦ ೦೦೧

ಗ್ರಂಥಕರ್ತೃರು



ಪ್ರೊ. ಕೆ ಎಸ್ ನಾರಾಯಣಾಚಾರ್ಯ

# ಲೇಖಕನ ಬಿನ್ನಹ

ಆಮ್ನಾಯಾಬ್ಜಂ ಸುರುಚಿರರುಚಿಂ ಯಸ್ಯ ಕಾರುಣ್ಯಲೇಶೈಃ
ಆಘ್ರಾತುಂ ಯದ್ಭವತಿ ಸುಲಭಂ
ಪಂಡಿತೈಃ ಶುದ್ಧಚಿತ್ತೈಃ ।
ಆಪತ್ಕಾಲೇ ಹಯಮುಖತನುಂ, ಮತ್ಸ್ಯರೂಪಂ ಚ ಧೃತ್ವಾ
ವೇದೋದ್ಧಾರಂ ತಮಸಿ ಕುರುತೇ
ಯಸ್ತಮೀಶಂ ನಮಾಮಃ ॥೧॥

ಸಮರ್ಥಾ ಜ್ಞಾನಿನೋ ಧೀರಾ
ಯತ್ರ ಭೀತಾ ಭವನ್ತಿ ಹಿ ।
ಮೂರ್ಖಾಸ್ತತ್ರ ಪ್ರಧಾವನ್ತಿ
ನಿರ್ಭೀತಾ ಲಜ್ಜಯಾ ವಿನಾ ॥೨॥

ಇತಿ ಶ್ರುತ್ವಾಽಭಿತೋ ಲೋಕೇ
ದೃಷ್ಟ್ವಾ ಸ್ವಾನುಭವೇನ ಚ ।
ಆರಬ್ಧೋಽಯಂ ಮಹಾಯತ್ನಃ
ಚಿರೇಣಾಪಿ ಮಯಾಽಧಿಯಾ ॥೩॥

ವೇದಾಪಚಾರರುಚಿಭಿಃ ವೇದವಿದ್ವೇಷದೀಕ್ಷಿತೈಃ ।
ಪೌರಸ್ತ್ಯೈರಸ್ಮದೀಯೈಶ್ಚ
ಬುಧೈಃ ಪಶ್ಚಿಮಬುದ್ಧಿಭಿಃ ॥೪॥

ವೇದಾರ್ಥವ್ಯಾಜಮಾತ್ರೇಣ
ಕ್ರಿಯಮಾಣಾನ್ ಮತಿಭ್ರಮಾನ್ ।

ವೇದಾರ್ಥನಿಂದಾವಿಕ್ಷೋಭಾನ್
ದೃಷ್ಟ್ವಾ ಕ್ಷುಬ್ಧಂ ಮನೋ ಮಮ ॥೫॥
ತತ್ ಕ್ಷೋಭಶಾಂತಯೇ ನೂನಂ ಗ್ರಥಿತಾ ಗ್ರಂಥಮಾಲಿಕಾ ।
ಮಯಾ ಹಿ ಗುರುಕಾರುಣ್ಯಾತ್
ಮಹತಾಂ ಚ ಸತಾಂ ಮುದೇ ॥೬॥

ವಿನಾ ದ್ರವ್ಯಂ ವಿನಾ ಜ್ಞಾನಂ ನಿರ್ವೇದೇನೈವ ಕೇವಲಂ ।
ಬುಧಭ್ರಮರ ಸೇವಾಯೈ
ಮಾಲೇಯಂ ಗುಂಫಿತಾ ಮಯಾ ॥೭॥

"ವೇದಾ ಸ್ತು ಬಾಲಿಶಾ ಹ್ಯರ್ಥೈಃ"
ಇತ್ಯೇಕೇ ವೇದನಿಂದಕಾಃ ।
"ಆರ್ಯದ್ರಾವಿಡವಾದಾಂ"ಶ್ಚ
ನುದಂತ್ಯೇಕೇsತಿಮತ್ಸರಾಃ ॥೮॥

ಅನ್ಯೇ ತು ನೈಕದೇವತ್ವಂ ಪಶ್ಯಂತ್ಯಂಧಾ ದುರಾಗ್ರಹಾತ್ ।
ಅಪರೇತ್ವೈಹಿಕಾನರ್ಥಾನ್
ದಿದೃಕ್ಷನ್ತೇ ತು ಕೇವಲಂ ॥೯॥

ಪರೇ ಪಶ್ಯಂತಿ ವಿದ್ವೇಷ್ಯಂ ತುಚ್ಛಂ ಪ್ರಕೃತಿಪೂಜನಂ ।
ವೇದೋದ್ದಿಷ್ಟಂ ಪರಂ ತತ್ತ್ವಂ
ನ ಪಶ್ಯನ್ತಿ ದುರಾಗ್ರಹಾತ್ ॥೧೦॥

ದೋಷೈಕ ದೃಷ್ಟಯಸ್ತ್ವೇತೇ ಕ್ರಿಸ್ತಧರ್ಮಾಭಿಮಾನಿನಃ ।
ಸ್ವಧರ್ಮಸ್ಯ ಪ್ರಚಾರಾರ್ಥಂ
ಯತಂತೇ ವೇದದೂಷಕಾಃ ॥೧೧॥

ಕುತೋಽಸ್ತಿ ತಾವಕೀ ನಿಷ್ಠಾ
ಶ್ರದ್ಧಾ ವೇದೇಷು ನಃ ಪುನಃ? ।
ಪ್ರತಿಕರ್ತುಂ ಚ ತದ್ದ್ವೇಷಂ
ಸಮವಾಯೇನ ಸರ್ವಥಾ ॥೧೨॥

ತಸ್ಮಾತ್ ಕ್ವ ತೋಽತ್ರ ಯತೋಽಯಂ
ಅಲ್ಪೀಯಾಂಶ್ಚ ಯಥಾ ಮತಿ ।
ಗುಣಾನೇವ ತು ಗೃಹ್ಣಂತು ಕ್ಷೀರಂ
ಹಂಸಾ ಯಥಾ ಬುಧಾಃ ॥೧೩॥

— o —

"ವೇದ ಸಂಸ್ಕೃತಿಯ ಪರಿಚಯ"ವೆಂಬ ಗ್ರಂಥಮಾಲೆಯ ಪ್ರಕೃತ ಒಂಭತ್ತು ಮತ್ತು ಹತ್ತನೆಯ ಸಂಪುಟಗಳನ್ನೊಳಗೊಂಡ ಈ ಗ್ರಂಥದೊಡನೆ ಈ ಮಾಲೆಯು ಒಂದು ರೀತಿಯಲ್ಲಿ ಪೂರ್ಣವಾಗುತ್ತಿದೆ. ಹತ್ತುಸಂಪುಟಗಳಲ್ಲಿ ಸನಾತನ ವೈದಿಕ ಸಂಸ್ಕೃತಿಯ ಒಂದು ವಿಹಂಗಮ ನೋಟವಾದರೂ ಸಹ, ಇಂದಿನ ಭೀಷಣ ಸ್ಥಿತಿಯಲ್ಲಿ, ನಮ್ಮ ಧರ್ಮದ ಬಗೆಗೆ ಅಪಚಾರ, ಅಪಪ್ರಚಾರ, ಅಜ್ಞಾನ, ಅನ್ಯಥಾಜ್ಞಾನ, ವಿಪರೀತಜ್ಞಾನಗಳು ನಮ್ಮನ್ನು ಸುತ್ತುವರೆದಿರುವ ಹಿನ್ನೆಲೆಯಲ್ಲಿ, ಜಿಜ್ಞಾಸುಗಳಿಗೆ ದೊರೆಯಬೇಕೆಂಬ ಉದ್ದೇಶ್ಯದಿಂದ ಆರಂಭಗೊಂಡ ಈ ಮಾಲೆಯು ತನ್ನ ಇಷ್ಟಾರ್ಥವನ್ನು ಈಡೇರಿಸುವಂತೆ ಭಗವಂತನು ಅನುಗ್ರಹಿಸಿರುವುದು ನಮ್ಮ ಭಾಗ್ಯ. ಈ ಮಾಲೆಯಲ್ಲಿ ಬಂದಿರುವ ವಿಷಯಗಳ ಪುನರುಕ್ತಿ, ಪರಿಶೀಲನೆ, ಈ ಪ್ರಸ್ತಾವನೆಯಲ್ಲಿ ಅಗತ್ಯವಾಗಿರುವುದಿಲ್ಲ. "ವೇದಸಂಸ್ಕೃತಿಯ ಎಲ್ಲ ಮುಖ

ಗಳೂ ಇಲ್ಲಿ ಪರಿಚಿತವಾದವೇ ಇಲ್ಲವೇ ?" ಎಂದು ನೋಡಿದಾಗ, ಪರಿಚಯ ಶಬ್ದಕ್ಕೆ ಎಷ್ಟು ಸಣ್ಣ ಅಥವಾ ದೊಡ್ಡ ಅರ್ಥವನ್ನಾದರೂ ಕಲ್ಪಿಸಲು ಶಕ್ಯವೆಂಬುದು ಕಂಡುಬರುತ್ತದೆ. ವೇದದಂಥ ಅಪಾರ ಜ್ಞಾನ ಭಂಡಾರದ ಬಗೆಗೆ ಸಾವಿರ ಪುಸ್ತಕಗಳನ್ನು ಬರೆದರೂ ಅದೂ 'ಪರಿಚಯ' ಮಾತ್ರವೇ ಆಗುವುದು ! ಆದ್ದರಿಂದ ಈ ಹತ್ತು ಸಂಪುಟಗಳಲ್ಲಿ ಸಾಕಷ್ಟು ಪರಿಚಯವಾಗಲಿಲ್ಲವೆಂದೆನಿಸಿದರೆ ಅದು ಸಹಜ ಮತ್ತು ಅನಿವಾರ್ಯವೇ ಹೌದು.

ಈ ಗ್ರಂಥಮಾಲೆಯನ್ನು ಹತ್ತು ಸಂಪುಟಗಳಿಗೆ ಸೀಮಿತಗೊಳಿಸಿದ್ದೂ ಆರ್ಥಿಕಪರಿಸ್ಥಿತಿಗನುಗುಣವಾಗಿ ಮಾತ್ರ. ಆರಂಭದಲ್ಲಿ ೨೫/- ರೂ.ಗಳಿಗೇ ಹತ್ತೂ ಸಂಪುಟಗಳನ್ನು ಕೊಡುವುದಾಗಿ ಸದಸ್ಯರಿಗೆ ಘೋಷಿಸಿ. ಕಾಲಕ್ರಮದಲ್ಲಿ ಈ ಹದಿಮೂರು ವರ್ಷಗಳಲ್ಲಿ ಅದು ೧೨೫-೦೦ ರೂ. ಗಳಿಗೇ ರಿಸಲ್ಪಟ್ಟರೂ ಮಾಲೆಗೆ ( ೮ ನೇ ಸಂಪುಟದ ನಂತರ) ವಿಪರೀತ ನಷ್ಟವಾಗಿ, ಕಲವು ಮಹನೀಯರ ಸಕಾಲ ನೆರವಿನಿಂದ ಮಾತ್ರ ನಮ್ಮ ಉದ್ದಿಷ್ಟ ಗುರಿಯನ್ನು ಮುಟ್ಟುವುದು ಸಾಧ್ಯವಾಯಿತು. ಈ ಪೈಕಿ (ಮುಖ್ಯವಾಗಿ ಕೆಳಕಂಡ ಮಹನೀಯರ ಉಪಕಾರವನ್ನು ಈ ಪ್ರಕಾಶನವು ಕೃತಜ್ಞತೆಯಿಂದ ನೆನೆಸುತ್ತದೆ :

೧ ಶ್ರೀಯುತ ಮನೋಹರ ಶ್ರೇಷ್ಠಿ, ಗಂಗಾವತೀ
— ರೂ. ೧೦೦೧-೦೦

೨ ಶ್ರೀಯುತ ಡಾ. ಬಿ. ಎಸ್. ಜಗನ್ನಾಥ, ಹಾಸನ
— ರೂ. ೫೦೧-೦೦

೩ ಶ್ರೀಯುತ ಎಸ್. ವಿ. ರಾಘವಾಚಾರ್ಯರು, ಬೆಂಗಳೂರು
— ರೂ. ೫೦೧-೦೦

೪ ಶ್ರೀಯುತ ಹೆಚ್. ಕೆ. ಎಲ್. ಆಚಾರ್ಯ, ಶಿವಮೊಗ್ಗ
— ರೂ. ೧೦೧-೦೦

೫ ಶ್ರೀಯುತ ಹೆಚ್. ಆರ್ ದಾಶರಥಿ, ಹುಬ್ಬಳ್ಳಿ
— ರೂ. ೨೦೦-೦೦

ಉಳಿಕೆ ದ್ರವ್ಯವನ್ನು ಲೇಖಕನು ಪೂರೈಸಬೇಕಾಯಿತು. ಕಾಗದದ ಬೆಲೆ, ಮುದ್ರಣ ವೆಚ್ಚಗಳ ಪರಿಸ್ಥಿತಿಯನ್ನು ಹೇಳುವಂತೆಯೇ ಇಲ್ಲ ! ಇಷ್ಟು ಮಾಡಿಯೂ, ಈ ಹತ್ತು ಸಂಪುಟಗಳು ಹೊರಬರಲು ೧೩ ವರ್ಷಗಳು ಬೇಕಾದುವು ! ಲೇಖಕನೇ ಮುದ್ರಣ ಉಸ್ತುವಾರಿಯನ್ನೂ, ಕರಡು ತಿದ್ದುವ ಕೆಲಸವನ್ನೂ, ವಿತರಣೆಯ ಕೆಲಸವನ್ನೂ, ಪ್ರಚಾರ ಕೆಲಸವನ್ನೂ, ಧನಸಂಗ್ರಹ ಕೆಲಸವನ್ನೂ, ಒಬ್ಬನೇ ಮಾಡಬೇಕಾಗಿ ಬಂದಿರುವುದೂ ಈ ವಿಲಂಬಕ್ಕೆ ಮುಖ್ಯ ಕಾರಣ. ಆದರೂ ನಮ್ಮ ಮೊದಲ ನಾಲ್ಕು ಸಂಪುಟ ಗಳು ಈಗಾಗಲೇ ಮರು ಮುದ್ರಣಗೊಂಡಿದ್ದು, ಐದನೆಯದು ಮರು ಮುದ್ರಣದಲ್ಲಿದ್ದು, ಇದೇ ಸ್ಥಿತಿ ಆರು ಮತ್ತು ಏಳನೆಯ ಸಂಪುಟಗಳಿಗೂ ಒದಗಿರುವುದನ್ನು ನೋಡಿದರೆ ವೇದಪುರುಷನು ಪ್ರೀತನಾಗಿದ್ದಾನೆಂದೇ ಹೇಳಬೇಕಾಗಿದೆ

ಹೇರಳ ಧನ ಸಹಾಯ ದೊರಕಿದರೆ ಈ ಮಾಲೆಯನ್ನು ಬೆಳೆಸಿ "ವೇದ ಸಂಸ್ಕೃತಿಯ ಪರಿಚಯ" ( ದ್ವಿತೀಯ ಮಾಲೆ ) ಎಂಬ ರೂಪದಲ್ಲಿ ಮತ್ತೆ ಹತ್ತು ಗ್ರಂಥಗಳನ್ನು ಬರೆದು ಪ್ರಕಟಿಸುವ ಉದ್ದೇಶ್ಯವಿದೆ. ಈಗಾ ಗಲೇ ಸದಸ್ಯರಾಗಿರುವವರು ತಾವು ಸಮರ್ಪಿಸಿದ ಮೊತ್ತಕ್ಕಿಂತ ಹೆಚ್ಚು ಬೆಲೆಯುಳ್ಳ ಗ್ರಂಥಗಳು ತಮಗೆ ದೊರಕಿರುವುದನ್ನೂ ನಮ್ಮ ಪ್ರಾಮಾ ಣಿಕತೆಯನ್ನೂ ಅನುಲಕ್ಷಿಸಿ, ತೃಪ್ತರಾಗಿ, ಸ್ವಯ ಪ್ರೇರಣೆಯಿಂದ ಮುಂದೆ ಬಂದು ಒಬ್ಬೊಬ್ಬರೂ ೨೦೦–೦೦ ರೂ. ಗಳನ್ನು ಸಲ್ಲಿಸಿ. ಹೊಸಮಾಲೆಗೆ ಸದಸ್ಯರಾಗಬೇಕೆಂದು ಕೋರುತ್ತೇವೆ. ( ಲಾಭ ನಷ್ಟವಿಲ್ಲದ ಯೋಜನೆ ಯಿದೆಂಬುದನ್ನು ಮತ್ತೆ ಮತ್ತೆ ಹೇಳಿ ಎಚ್ಚರಿಸುವುದನ್ನು ತಪ್ಪಾಗಿ ತಿಳಿಯ ಬಾರದು. ) ಈ ಮಂದಿನ ಮಾಲೆಯಲ್ಲಿನ ಹತ್ತು ಗ್ರಂಥಗಳ ವಿಷಯ ಗಳನ್ನು ಸದ್ಯಕ್ಕೆ ಸ್ಥೂಲವಾಗಿ ಹೀಗೆ ಸೂಚಿಸುತ್ತೇವೆ.

# ವೇದಸಂಸ್ಕೃತಿಯ ಪರಿಚಯ

## ( ದ್ವಿತೀಯ ಮಾಲಾ )

೧ ವೇದದಲ್ಲಿ ಕರ್ಮ, ಧರ್ಮ, ವರ್ಣವಿಚಾರ.

೨ ಬೃಹಸ್ಪತಿ, ಬೃಹ್ಮಣಸ್ಪತಿ.

೩ ಉಷೋದೇವಿ.

೪ ಉದಕಶಾಂತಿ (ಯಾಜುಷ) ಮಂತ್ರಗಳು, ಮೂಲ (ಸಸ್ವರ) ಅರ್ಥ, ವಿವರಣೆ, ವಿವೇಚನೆಯೊಡಗೂಡಿ

೫ ಆರುಣ (ತೈತ್ತಿರೀಯಾರಣ್ಯಕದ ಮೊದಲ ಪ್ರಶ್ನದ ಅರ್ಥ, ಸಾಂಕೇತಿಕ ವಿವರಣೆ, ಮೂಲ. ಮತ್ತು-ವಿವೇಚನೆಯೊಡನೆ.)

೬. ಭಾರದ್ವಾಜರು ಮತ್ತು ಈ ಋಷಿ ದೃಷ್ಟ ಮಂತ್ರಗಳ ವಿವೇಚನೆ.

೭ ಅಥರ್ವವೇದೀಯ ಲೋಕೋಪಯುಕ್ತ ವಿಚಾರಗಳು,

೮ ವೈದಿಕ ಯಜ್ಞ, ಯಾಗಗಳ ಸಾಂಕೇತಿಕಾರ್ಥ ವಿವೇಚನೆ.

೯ ಸೃಷ್ಟಿ ವಿಚಾರಸೂಕ್ತಗಳು, ವೇದದಲ್ಲಿ— ವಿವೇಚನೆ, ಸಮನ್ವಯ.

೧೦ ಹತ್ತು ಮುಖ್ಯ ವೈದಿಕ ಋಷಿಗಳು (ಒಂದು ಕಿರು ಪರಿಚಯ).

ಈ ಗ್ರಂಥವು ತಮಗೆ ದೊರಕಿದೊಡನೆಯೇ ತಾವು ೨೦೦-೦೦ ರೂ.ಗಳಿಗೆ M. O. ಅಥವಾ D. D. ಯನ್ನು ನಮ್ಮ ವಿಳಾಸಕ್ಕೆ ಕಳುಹಿದರೆ, ಮುಂದಿನ ಗ್ರಂಥಗಳನ್ನು ಆರಂಭಿಸಲು ಸಹಾಯವಾಗುವುದು.

ಹಳೆಯ ಮಾಲೆಯ ೧೨೫-೦೦ ರೂ ಗಳ ಸದಸ್ಯತ್ತ್ವ ಇದರೊಡನೆ ಮುಕ್ತಾಯವಾಗುತ್ತದೆ. ಹೊಸದಾಗಿ, ಹೊಸ ಮಾಲೆಗೆ ಸದಸ್ಯರಾಗ ಬಯಸು ವವರು ಈ ಹಳೆಯ ಮಾಲೆಯ ಹತ್ತು ಸಂಪುಟಗಳನ್ನು ಪಡೆಯ ಬಯಸಿದರೆ (ರಜಿಸ್ಟರ್ ಪೋಸ್ಟು ವೆಚ್ಚ ಸೇರಿ) ೧೫೦-೦೦ ರೂ. ಗಳನ್ನು D. D, ಅಥವಾ M. O. ಮೂಲಕ ಕಳುಹಬೇಕಾಗುವುದು. ( ಚೆಕ್ ಕಳುಹುವವರು ೫-೦೦ ಹೆಚ್ಚು ಕಳುಹಬೇಕಾಗುವುದು. )

ಲೇಖಕನ ಆರೋಗ್ಯಸ್ಥಿತಿ, ಕಾರ್ಯಭಾರ, ಈಗಾಗಲೇ ಕೈಗೆತ್ತಿಕೊಂಡಿರುವ ಇತರ ಕಾರ್ಯಗಳು (ಶ್ರೀ ರಾಮಾಯಣ ಸಾಹಸ್ರೀ ಮಾಲೆ, ಶ್ರೀ ವ್ಯಾಸಸೂಕ್ತಿ ಸುಧಾಮಾಲೆ, ಶ್ರೀ ಭಾಗವತ ಸ್ತೋತ್ರಮಾಲಾ, ಮುಂತಾದುವು.) ಇವುಗಳನ್ನು ನೋಡಿ ಹತ್ತಿರದವರು, ಆಪ್ತಮಿತ್ರರು ಈ ಹೊಸ ವೈದಿಕಮಾಲೆಯ ಕೆಲಸವನ್ನು ಈಗ ಎತ್ತಿಕೊಳ್ಳಬಾರದೆಂದು ನಿರ್ಬಂಧಿಸಿದರೂ, ಲೇಖಕನು ತನ್ನ ಉತ್ಸಾಹದಿಂದ ಅದನ್ನು ತಳ್ಳಿಹಾಕಿ, ಬದುಕಿರುವ ತನಕ ಈ ಕೈಂಕರ್ಯವನ್ನು ನಡೆಸುವುದಾಗಿ ಸಂಕಲ್ಪಿಸಿರುವುದರಿಂದ, ಸದಸ್ಯರು ಶೀಘ್ರವಾಗಿ ತಮ್ಮ ಶುಲ್ಕವನ್ನು ಸಲ್ಲಿಸಿ ಪ್ರೋತ್ಸಾಹಿಸಿ, ಗ್ರಂಥಗಳನು ಹೊರಬರುವಂತ ಮಾಡಬೇಕಾಗಿ ಕೋರಿಕೆ. ಪುಸ್ತಕಗಳ ಮಾತೃಕೆಗಳ ರಚನೆಗೆ ಪ್ರಧಾನ ಪ್ರೋತ್ಸಾಹವೆಂದರೆ. ಅವು ಶೀಘ್ರವಾಗಿ ಮುದ್ರಿತವಾಗಿ ಹೊರ ಬರುವ ಸಾಧ್ಯತೆಯೇ ಮಾತ್ರ. ನಮ್ಮಲ್ಲಿ ಅಪಾರ ಧನಸಂಪತ್ತಿರುವವರ ಧರ್ಮದ ಅನಾಸ್ಥೆಯ ಬಗೆಗೆ ಈರ್ಗಾಲೇ ಅಲ್ಲಿಇಲ್ಲಿ, ಹಿಂದಿನ ಸಂಪುಟಗಳಲ್ಲಿ ನಮ್ಮ ವಿಷಾದವನ್ನು ವ್ಯಕ್ತಪಡಿಸಲಾಗಿದೆ. ಇದು ದೂಷಣೆಯಲ್ಲ. ವಸ್ತುಸ್ಥಿತಿಯ ನಿವೇದನೆ ಮಾತ್ರ.

ನಮ್ಮ ಎಂಟನೆಯ ಸಂಪುಟವು ಉದ್ದಿಷ್ಟ ೨೦೦ ಪುಟಗಳ ಗಾತ್ರಕ್ಕೆ ಮೀರಿ. ಮೂರರಷ್ಟು ದೊಡ್ಡದಾಗಿ, ವೆಚ್ಚ ಅಧಿಕವಾಗಿ, ನಷ್ಟವಾದಾಗ, ೧೦೦-೦೦ ರೂ. ಗಳ ಸದಸ್ಯತ್ವವನ್ನು ೧೨೫-೦೦ ರೂ. ಗಳಿಗೇರಿಸಬೇಕಾಗಿ ಬಂದು, ಬಿನ್ನೈಸಿಕೊಂಡಾಗ, ಪರಿಣಾಮವಾಗಿ ಕೇವಲ ( ಸುಮಾರು ) ಮುವ್ವತ್ತು ನಾಲ್ವತ್ತು ಸದಸ್ಯರು ಮಾತ್ರ ಉಳಿಕೆ ೨೫-೦೦ ರೂ.ಗಳನ್ನು ಸಲ್ಲಿಸಿದರು,

ಪ್ರಕೃತ 'ಲಕ್ಷ್ಮಿ' ವಿಷಯಕ ೮ನೇ ಸಂಪುಟವು ಅರ್ಧ ಮುದ್ರಣದಲ್ಲಿ ನಿಲ್ಲುವ ಸ್ಥಿತಿ ಮುಟ್ಟಿದಾಗ, ಧಾರ್ಮಿಕತೆಗೆ ಖ್ಯಾತರಾದ ಒಬ್ಬರು ಮಠಾಧಿಪತಿಗಳಿಗೆ ನಮ್ಮ ಎಂಟೂ ಸಂಪುಟವನ್ನು ಅಂಚೆಯಲ್ಲಿ ಉಚಿತವಾಗಿ ಕಳುಹಿ. ಈ ಸ್ಥಿತಿಯಲ್ಲಿ ಕೇವಲ ೧೦೦೦-೦೦ ರೂ. ಗಳ ಸಹಾಯ ಕೇಳಿದಾಗ, ಈ ವರೆಗೂ ಉತ್ತರ ಬಂದಿಲ್ಲ! ಯಾವಳನ್ನು ಸೇವಿಸಿದರೆ ದಾರಿದ್ರ್ಯತೊಲಗುವುದೋ ಅವಳ ಕೈಂಕರ್ಯಕ್ಕೆ ಹೀಗಾದುದು ಲೇಖಕನಿಗೆ

ಅನೇಕ ದಿನ ರಾತ್ರಿ ನಿದ್ದೆ ಮಾಡಗೊಡಲಿಲ್ಲ. ಮತ್ತೊಬ್ಬ ಮಠಾಧಿಪತಿಗಳು ಸಹಾಯ ಮಾಡುತ್ತೇವೆಂದು ವಾಗ್ದಾನ ಮಾಡಿಯೂ, ಎರಡು ಪತ್ರಗಳನ್ನು ಬರೆದೂ ಪ್ರಯೋಜನವಾಗಲಿಲ್ಲ. ಆಗ, ಈಮೇಲೆ ಉದಾಹರಿಸಲ್ಪಟ್ಟ ಮಹನೀಯರು ನೆರವಿಗೆ ಬಂದು ಒಂಭತ್ತನೆಯ ಸಂಪುಟವನ್ನು ಪೂರ್ತಿ ಮಾಡಿದರು. ಶ್ರೀವೇದಾಂತದೇಶಿಕರು ಅವಿವಾಹಿತ ಬ್ರಹ್ಮಚಾರಿಯೊಬ್ಬನ ವಿವಾಹದ ನೆರವಿಗಾಗಿ ಕನಕವೃಷ್ಟಿ ಸುರಿಸುವಂತೆ ದೇವಿಗೆ ಪ್ರಾರ್ಥಿಸಿದ ಶ್ಲೋಕವೊಂದು (ಶ್ರೀಸ್ತುತಿಯಲ್ಲಿನದು) ಲೇಖಕನಿಗೆ ತನ್ನ ಮಹಿಮೆಯನ್ನು ತೋರಿಸಿತು. ಭಕ್ತಿಯಿಂದ ಜಪಿಸಿ, ಲೋಕಮಾತೆಯನ್ನು ಪ್ರಾರ್ಥಿಸಿದಾಗ ಸದ್ಯಕ್ಕೆ ಕನಕವೃಷ್ಟಿಯನ್ನೇ ಸುರಿಸಿ, ೯ನೇಯದು ಮಾತ್ರವಲ್ಲದೆ ಹತ್ತನೆಯ ಸಂಪುಟಕ್ಕೂ ಸಾಕಾಗುವಷ್ಟು ಧನವನ್ನೊದಗಿಸಿದಳು. ಈ ಬೇಸಿಗೆ ರಜೆಯಲ್ಲಿ ಸುಮಾರು ಎಂಟು ಕಡೆಗಳಲ್ಲಿ ಉಪನ್ಯಾಸಮಾಲಿಕೆಗಳನ್ನು ನಡೆಸಿ, ದೊರೆತ ದ್ರವ್ಯದಿಂದ ಇದು ಸಾಧ್ಯವಾಯಿತು ! ( ಶ್ರೀರಾಮಾಯಣಸಾಹಸ್ರಿಯ ಮಾಲೆಯ ಎರಡು ಸಂಪುಟಗಳಿಗೂ ಸಾಕಾಗುವ ದ್ರವ್ಯ ಸಂಗ್ರಹವಾಯಿತು. ಇದರ ಸಂದರ್ಭವನ್ನೂ, ಸಹಾಯಕರ ವಿವರಗಳನ್ನೂ ಈ ಮಾಲೆಯ ಮೂರನೆಯ ಸಂಪುಟದ ಮುನ್ನುಡಿಯಲ್ಲಿ ವಿಜ್ಞಾಪಿಸಿಕೊಳ್ಳುತ್ತೇವೆ. ಅದೂ ಅಚ್ಚಿನಲ್ಲಿದೆ.) ಹೇಗೋ ದೇವರು ತನ್ನ ಕೆಲಸ ಮಾಡಿಸಿಕೊಂಡ. ಇಂಥ ಪರಿಸ್ಥಿತಿ ಮತ್ತೆ ಆಗದಿರಬೇಕಾದರೆ, ನಮ್ಮ ಈವರೆಗಿನ ಎಲ್ಲ ಸದಸ್ಯರೂ ತಾವೂ ತಮ್ಮ ಹೊಸ ಮಾಲೆಯ ಸದಸ್ಯ ಶುಲ್ಕವನ್ನು ಕೂಡಲೇ ಸಲ್ಲಿಸಿ, ತಮ್ಮ ಮಿತ್ರರನ್ನೂ ಕೂಡಿಸಿಕೊಡುವ ಕೃಪೆ ಮಾಡಬೇಕು. ಉದಾರಿಗಳಾದ ದಾನಿಗಳು ತಮಗೆ ಪರಿಚಿತರಿದ್ದರೆ, ಅವರ ಮೂಲಕವೂ ಸಹಾಯ ಮಾಡಿಸಲು ನೋಡಬೇಕು. ಇದಕ್ಕಿಂತ ಹೆಚ್ಚಿಗೆ ನಾವು ಬರೆಯಲಾರೆವು.

ಪ್ರಕೃತ ಮುಕ್ತಾಯವಾದ ಮಾಲೆಯ ಎಲ್ಲ ಸಂಪುಟಗಳ ಸಾರಸಂಗ್ರಹರೂಪದ ಆಂಗ್ಲಭಾಷಾಸಂಪುಟಗಳೆರಡರ ಪ್ರಕಟಣೆಗೆ ಕೇಂದ್ರಸರ್ಕಾರದ ದ್ರವ್ಯಕ್ಕೆ ಶಿಫಾರಸು ಮಾಡಿ, ಸಹಾಯಮಾಡುವುದಾಗಿ ಒಬ್ಬ ಮಿತ್ರಮಹನೀಯರು ವಾಗ್ದಾನ ಮಾಡಿದ್ದಾರೆ. ಇವರು ಬಹುಸಮರ್ಥರೂ, ಮಹಾ

ಸಂಸ್ಥೆಯೊಂದರ ಕಾರ್ಯನಿರ್ವಾಹಕರೂ ಆಗಿದ್ದು, ಈ ಆಸೆ ನೆರವೇರುವು ದೆಂದು ಭಾವಿಸುತ್ತೇವೆ. ಕಾಲ ಕಾದು ನೋಡೋಣ.

ಆಳ್ವಾರುಗಳ ದ್ರಾವಿಡ ಪ್ರಬಂಧಗಳ ಬಗೆಗೆ ಹೀಗೆಯೇ ಮಾಲಾರೂಪ ದಲ್ಲಿ ಗ್ರಂಥಗಳನ್ನು ಅನೇಕರು ಅಪೇಕ್ಷಿಸುತ್ತಾರೆ. ಇದೂ ಸಂತೋಷದ ಕೆಲಸವೇ. ಆದರೂ ಇದಕ್ಕೂ ದ್ರವ್ಯಸಹಾಯ ಬೇಕಾಗಿದೆ. ದಾವಣಗೆರೆಯ ಮಿತ್ರರಾದ ಶ್ರೀ. ಉ. ವೇ ಕೆ ಟಿ. ಕೇಶವಮೂರ್ತಿಯವರು ಈಗಾಗಲೇ ನಮ್ಮ ಕೈಯ್ಯಲ್ಲಿ ಗೋದಾದೇವಿಯ ತಿರುಪ್ಪಾವೈ ಪ್ರಬಂಧದ ಮೂಲ ಮತ್ತು ಕನ್ನಡ 'ಸುಬೋಧಿನೀ' ಎಂಬ ನಮ್ಮ ವ್ಯಾಖ್ಯಾನವನ್ನು ಬರೆಸಿ, ಮುದ್ರಿಸಿ, ೧೯೮೫ನೆಯ ಧನುರ್ಮಾಸದಲ್ಲಿ ಸಾವಿರ ಪ್ರತಿಗಳನ್ನು ಉಚಿತವಾಗಿ ಹಂಚಿ ದರು! ಅದರ ಪ್ರತಿಗಳು ಮುಗಿದಿದ್ದು, ನಮ್ಮ ಪ್ರಕಾಶನದ ವತಿಯಿಂದ ಪ್ರಕಟಿತವಾದ ಅದೇ ಗ್ರಂಥದ ಬೇರೆ ಪ್ರತಿಗಳು ಕೆಲವೇ ಮಾತ್ರ (ಬೆಲೆ ರೂ. ೧೦-೦೦ ಮಾತ್ರಕ್ಕೆ) ದೊರಕುತ್ತವೆ. ಉಳಿದವಕ್ಕೆ ಹೀಗೆ ಯಾರಾ ದರೂ ವೆಚ್ಚ ಹೊರಲು ಮುಂದೆ ಬಂದರೆ ಮಾತ್ರ ಈ ಮಾಲೆಯೂ ಸಾಧ್ಯ.

* * *

ಇನ್ನು ನಮ್ಮ ಗ್ರಂಥಮಾಲೆಯ ವಿಷಯಗಳು, ಅವುಗಳನ್ನು ಇಲ್ಲಿ ಪ್ರತಿಪಾದಿಸಿರುವ ಕ್ರಮ, ಭಾಷಾಶೈಲಿ, ನಿರೂಪಣೆಗಳ ಬಗೆಗೆ ಈ ಹದಿ ಮೂರು ವರ್ಷಗಳ ಉದ್ದಕ್ಕೂ ನೂರಾರು ವಾಚಕರು ತಮ್ಮ ಸಂತೋಷ, ಮೆಚ್ಚುಗೆಗಳನ್ನು ಅಭಿವ್ಯಕ್ತ ಮಾಡಿ ಪತ್ರಗಳನ್ನು ಬರೆದಿದ್ದಾರೆ. ಗ್ರಂಥಗಳಲ್ಲಿನ ದೋಷಗಳನ್ನು ಕಾಣದೆ ಗುಣೈಕ ಪಕ್ಷಪಾತಿಗಳಾದ ಈ ಎಲ್ಲ ಮಹನೀಯರಿಗೂ ನಮ್ಮ ಗ್ರಂಥಮಾಲೆಯು ಕೃತಜ್ಞವಾಗಿರುತ್ತದೆ. ಉದಾಹರಣಾರ್ಥವಾಗಿ ಕೆಲವು ಆಯ್ದ ಪತ್ರಗಳ ಒಕ್ಕಣೆಗಳನ್ನು ಉಳಿದ ವಾಚಕರ ಅವಗಾಹನೆಗಾಗಿ ಇಲ್ಲಿ ನಿವೇದಿಸಲಾಗಿದೆ. (ಇವರಲ್ಲಿ ಹಲವರು ಅಪರಿಚಿತರೂ, ಮುಖಪರಿ ಚಯ ಸಹ ಇಲ್ಲದವರೂ ಇರುತ್ತಾರೆ. ಇವರಿಗೆಲ್ಲ ಜನ್ಮಜನ್ಮಾಂತರಗಳಲ್ಲೂ ಗ್ರಂಥಕರ್ತನು ಉಪಕಾರ ತೀರಿಸಲಾರ.)

—o—

ಪ್ರೊ. ಎಂ. ಆರ್. ರಾಮಕೃಷ್ಣಭಟ್
ವಿದ್ಯಾಭಾಸ್ಕರ, ವಿದ್ಯಾಸಾಗರ, ವಿದ್ವಾನ್,
(ನಿವೃತ್ತ) ಸಂಸ್ಕೃತ ವಿಭಾಗ ಮುಖ್ಯಸ್ಥರು,
ಹಿಂದೂ ಕಾಲೇಜ,
ದೆಹಲಿ ವಿಶ್ವವಿದ್ಯಾಲಯ.

"ಬೆನಕ", ರಥಬೀದಿ,
ವಿಟ್ಲ ಅಂಚೆಕಛೇರಿ.
ದಕ್ಷಿಣ ಕನ್ನಡ ಜಿಲ್ಲೆ
ದಿನಾಂಕ : ೫-೧೦-೧೯೮೮

ಓಂಕಾರಕಾಯಃ ಸ ಸುಜನಮವತಾತ್
ಸಿದ್ಧಯೇ ವಿಘ್ನರಾಜಃ ॥

ನಾರಾಯಣಂ ನೌಮಿ ಹೃದಾ
ಮುದೋದ್ಯತ್ಸದ್ಭಾವನಾ ಸಂತತಿನಾ ವಿನೀತಃ ।
ಗೀರ್ವಾಣವಾಣೀ ಶ್ರುತಿರಮ್ಯ ವೀಣಾ-
ನಿಕ್ವಾಣಲುಬ್ಧೋsಭಿಹಿತಾದ್ಯಧರ್ಮಂ ॥೧॥

ಭವತಾ ಭವತಾಪನೋದನಂ
ರಚಿತಂ ಪುಸ್ತಕತಲ್ಲಜವ್ರಜಂ ।
ಶ್ರುತಿಸಂಸ್ಕೃತಿ ಕಲ್ಪವಲ್ಲರೀ ಸುಫಲಂ
ಪ್ರಾಶ್ಯ ಶಮಂ ಹ್ಯಗಾಂ ಹೃದಿ ॥೨॥

ವಿದ್ವನ್ಮೂರ್ಧನ್ಯರೂ, ಭಗವದ್ಭಕ್ತವರೇಣ್ಯರೂ, ಧರ್ಮಜಾಗೃತಿಯೇ ಜೀವನದ ಪ್ರಧಾನೋದ್ದೇಶ್ಯವಾಗಿ ಇರಿಸಿಕೊಂಡವರೂ, ಗುಣಪಕ್ಷಪಾತಿಗಳೂ ಆದ ಶ್ರೀಮಾನ್ ಪ್ರೊ. ಕೆ. ಎಸ್. ನಾರಾಯಣಾಚಾರ್ಯರವರ ಸೌಹಾರ್ದಾಭಿಲಾಷುಕನಾದ ರಾಮಕೃಷ್ಣಭಟ್ಟನ ವಿನಯಪೂರ್ವಕ ಪ್ರಣಾಮಗಳಿಂದೊಡಗೂಡಿದ ವಿಜ್ಞಾಪನೆಗಳು ನೀವು 'ವೇದ ಸಂಸ್ಕೃತಿಯ ಪರಿಚಯ'ವೆಂಬ ಗ್ರಂಥಮಾಲೆಯನ್ನು ಅತಿಪರಿಶ್ರಮ ಧನವ್ಯಯಗಳಿಂದ, ಭಗವದರ್ಪಣ ಬುದ್ಧಿಯಿಂದ, ರಚಿಸಿ, ಇಂತಹ ಕಷ್ಟಕಾಲದಲ್ಲಿಯೂ ನಿತರಾಂ ಉತ್ಸಾಹ

ದಿಂದ ಪ್ರಚಾರಗೊಳಿಸುವುದನ್ನು ನೋಡಿದರೆ, ಸನಾತನ ಧರ್ಮದಲ್ಲಿ ಲೇಶವಾದರೂ ವಿಶ್ವಾಸವುಳ್ಳವರಿಗೆ ಅನ್ಯಾದೃಶವಾದ ಆನಂದವಾಗುತ್ತವೆಂಬುದು ಅತಿಶಯೋಕ್ತಿಯಲ್ಲ. "ಧನ್ಯಂಭವಜ್ಜೀವಿತಂ, ಧನ್ಯಂ ಚ ಭವದ್ಗ್ರಂಥ ರಚನಾ ಪಾಟವಂ" ಎಂದು ಹೇಳಬೇಕು. ನಾನು ಶ್ರೀಮರ್ನ್ ಕೆ. ಶಾಮ ಭಟ್ಟರಿಂದ ನಿಮ್ಮ ಕೆಲ ಸಂಚಿಕೆಗಳನು ಪಡೆದು. ಓದಿ, ತುಂಬಾ ಪ್ರಭಾವಿತನಾಗಿದ್ದೇನೆ ನೀವು ಎಸಗಿದ ಭಗವಾನ್ ವೇದಪುರುಷನ ಸೇವೆಯು ವರ್ಣನಾತೀತವಾದುದು. ನಿಮ್ಮ ವೇದವಾಙ್ಮಯದ ಶಾಸ್ತ್ರಗ್ರಂಥಗಳ ಗವೇಷಣಾ ಚಾತುರಿಯು ಶ್ಲಾಘನೀಯವೆಂದು ಹೇಳಲು ಸಂತೋಷವಾಗುತ್ತದೆ. ಒಂದು ವೈದಿಕ ಸಾಹಿತ್ಯಪ್ರಚಾರ ಸಂಘವು, (ಇದಕ್ಕೆ ಮಹಾಜನರ ಹಾಗೂ ಸರಕಾರದ ಉದಾರ ಸಾಹಾಯ್ಯವು ಅವಶ್ಯಕವೆಂಬುದನ್ನು ಒತ್ತಿ ಹೇಳಬೇಕು;) ಹಲವು ವರ್ಷಗಳ ಪರಿಶ್ರಮದಿಂದ ಸಾಧಿಸಬೇಕಾದ ಕಾರ್ಯಜಾತವನ್ನು ನೀವು ಒಬ್ಬರೇ ಕಾರ್ಯಾಂತರಗಳ ಮಧ್ಯದಲ್ಲಿಯೂ ನೆರವೇರಿಸುತ್ತಿರುವುದು, ನಿಮ್ಮಲ್ಲಿ ವೇದಸ್ತುತೆಯಾದ ದೇವೀ ಸರಸ್ವತಿಯ ಹಾಗೂ ಪರಮಪುರುಷನ ಅಪಾರ ಕರುಣೆ ಮತ್ತು ಪ್ರೇರಣೆಗಳನ್ನು ಸೂಚಿಸುತ್ತದೆ.

ಈಗಿನ ಧರ್ಮದ್ವೇಷಿಗಳಾದ, ಹಲವು ಹೊಸ ಹೆಸರುಗಳಿಂದ ಪ್ರಸಿದ್ಧಿಗಾಗಿ ಹೆಣಗಾಡುತ್ತಿರುವ, ಮಾನುಷರಾಕ್ಷಸರು, ದುರ್ಜನರು ಬಹುಲವಾದ ಈಗಿನ ಸಮಾಜದಲ್ಲಿ ಕೆಲಕಾಲ (ಅಪ)ಕೀರ್ತಿಯನ್ನು ಗಳಿಸಿದರೂ ತಮ್ಮ ಹೃದಯಾಂತರಾಳದಲ್ಲಿ ಅಡಗಿರುವ ಧರ್ಮದ್ವೇಷದ ಬೆಂಕಿಯೇ ಅವರನ್ನು ಸಂಹಾರ ಮಾಡುವುದರಲ್ಲಿ ಸಂದೇಹವಿಲ್ಲ— 'ತರುಶಾಖಾಂತ ನಿರ್ಘರ್ಷಜೋsನಲಃ' ಎಂದು ಕವಿಯು ಹೇಳುವಂತೆ !

ನಿಮ್ಮ ಗವೇಷಣ ಕಾರ್ಯವು ಭಗವತ್ಕಾರುಣ್ಯದಿಂದ ನಿರ್ವಿಘ್ನವಾಗಿ ಮುಂದೆ ಸಾಗಲಿ. ಈ ಶುಭಕಾರ್ಯದಲ್ಲಿ, ಇನ್ನು ನಮ್ಮ ದೇಶದಲ್ಲಿ ಉಳಿದ ಸಕಲ ಸಜ್ಜನರೂ ನಿಮಗೆ ನೆರವನ್ನು ತನುಮನೋಧನಗಳಿಂದ ನೀಡಲೆಂದು ಹಾರೈಸುತ್ತಾ, ನಿಮಗೆ, ಆ ಪರಮಕಾರುಣಿಕನಾದ ವೇದಪುರುಷನು ಆಯುರಾರೋಗ್ಯ, ಸಮಸ್ತ ಸನ್ಮಂಗಳಗಳನ್ನೂ ಕರುಣಿಸಲೆಂದು

ಪ್ರಾರ್ಥಿಸುತ್ತಾ ನಿಮಗೆ ನನ್ನ ನಮಸ್ಕಾರಗಳನ್ನು ಸಲ್ಲಿಸಿ, ನನ್ನ ಅಲ್ಪಕಾಣಿಕೆ ಯನ್ನು ಸಮರ್ಪಿಸುತ್ತೇನೆ,

ಇತಿ ಪ್ರಣಾಮ ಪೂರ್ವಕ,
ಸಜ್ಜನವಶಂವದ

(ಸಹಿ) ಎಂ. ಆರ್. ಭಟ್

'ಪಂಡಿತರಾಜ', ವ್ಯಾಕರಣವಿದ್ವಾನ್, ಬೆಂಗಳೂರು
ಶ್ರೀ ಎನ್. ಟಿ. ಶ್ರೀನಿವಾಸ ಅಯ್ಯಂಗಾರ್ಯರು ೪-೮-೧೯೭೩
(ನಿವೃತ್ತ) ವ್ಯಾಕರಣಶಾಸ್ತ್ರ ಪ್ರಧಾನೋಪಾಧ್ಯಯರು,
ಚಾಮರಾಜೇಂದ್ರ ಸಂಸ್ಕೃತ ಮಹಾಪಾಠಶಾಲಾ

ಶ್ರೀಯುತ ಪ್ರೊ. ಕೆ. ಎಸ್. ನಾರಾಯಣಾಚಾರ್ಯರವರ ಸಂನ್ನಿಧಿ ಯಲ್ಲಿ ಪ್ರಣಾಮಪೂರ್ವಕ ವಿಜ್ಞಪ್ತಯಃ.

ತಾವು ಆದರದಿಂದ ಕಳುಹಿದ 'ವೇದಸಂಸ್ಕೃತಿಯ ಪರಿಚಯ'ದ ಎಂಟನೇ ಸಂಪುಟವು ತಲುಪಿತು...... ಭಗವದ್ರಾಮಾನುಜ ಸಿದ್ಧಾಂತದಲ್ಲಿ ಕೃತಭೂರಿಶ್ರಮರಾದ ತಾವು ಈ ಸಂಪುಟದಲ್ಲಿ ಮಹಾವಿಷ್ಣುವಿನ ಪಾರಮ್ಯವು ಸರ್ವಶ್ರುತಿ ಪ್ರಮಾಣಸಿದ್ಧವೆಂಬುದನ್ನು ತೃಪ್ತಿಕರವಾಗಿ ಪ್ರತಿಪಾದನೆ ಮಾಡಿ ರುವುದು ಅತ್ಯಂತ ಅಭಿನಂದನೀಯ. ಕೇವಲ ಶ್ರೀವೈಷ್ಣವ ಸಂಪ್ರದಾ ಯಸ್ಥರಲ್ಲದ ಇತರ ಸಂಪ್ರದಾಯದವರೂ ಅಕಾಮೇನಾಪಿ ಒಪ್ಪಲೇಬೇಕಾಗಿ ರುವುದನ್ನೂ. ಒಪ್ಪಿರುವುದನ್ನೂ ನಿಪುಣವಾಗಿ ಪ್ರತಿಪಾದಿಸಿರುವಿರಿ. ಯಾವ ಅಭಿನಿವೇಶ ಮತ್ತು ಪೂರ್ವಗ್ರಹ ಪೀಡೆ ಇಲ್ಲದವರು ತಾತ್ವಿಕವಾಗಿ ವಿಮರ್ಶೆ ವಿಚಾರ ಮಾಡಿದರೆ ಸರಿಯೆಂಬಂತೆ ಪ್ರತಿಪಾದಿಸಿರುವುದರ ಜೊತೆಗೆ, ಸಾಕಷ್ಟು

ತಿಳಿವಳಿಕೆ ಇಲ್ಲದೆ, ಪರಮಾತ್ಮನನ್ನೇ ನಂಬುವವರಿಗೂ ಅನೇಕರ ಅಭಿಪ್ರಾಯ ಗಳಲ್ಲಿರುವ ಲೋಪದೋಷಗಳನ್ನು ಕನ್ನಡಿಯಂತೆ ತೋರಿರುವುದರಿಂದ ಎಚ್ಚರಗೊಳ್ಳುವ. ತತ್ತ್ವವನ್ನು ತಿಳಿಯಲು ಅವಕಾಶವು ಈ ಸಂಪುಟದ ಅಧ್ಯಯನದಿಂದ ಆಗುತ್ತದೆ ಎಂದು ನಂಬುತ್ತೇನೆ. ನಿಮ್ಮ ವಿಮರ್ಶನಾಶಕ್ತಿ, ಪರಿಶೀಲನಾ ಸಾಮರ್ಥ್ಯ ಅತ್ಯಂತ ಸ್ತುತ್ಯ. ನಿಮ್ಮ ವಿಷಯದಲ್ಲಿ ಎಷ್ಟು ಹೊಗಳಿದರೂ ಭೂತಾರ್ಥವ್ಯಾಹೃತಿಯೇ ಹೊರತು 'ನ ಸ್ತುತಿಃ'. ಅಮೂಲ್ಯ ವಾದ ಪುಸ್ತಕರತ್ನವನ್ನು ಕರುಣಿಸಿರುವ ತಮಗೆ ನಾನು ಅತ್ಯಂತ ಕೃತಜ್ಞ.

ತಮ್ಮ ಅನುಗ್ರಹಾಕಾಂಕ್ಷೀ, ದಾಸಃ

(ಸಹಿ) ಎ. ಟಿ. ಶ್ರೀನಿವಾಸ ಅಯ್ಯಂಗಾರ್



ಸಾಹಿತ್ಯವೇದಾಂತವಿದ್ವಾನ್, 'ವಿದ್ವನ್ಮಣಿ',
'ಸಾರಸಾರಜ್ಞ' ಕೋಟಿಕನ್ನಿಕಾದಾನಂ
ಶ್ರೀ ಕೆ. ಎಸ್. ಕೃಷ್ಣತಾತಾಚಾರ್ಯರು
(ನಿವೃತ್ತ ಪ್ರಾಧ್ಯಾಪಕರು, ನ್ಯಾಷನಲ್ ಹೈಸ್ಕೂಲು)

ಬೆಂಗಳೂರು
೧೬-೮-೧೯೮೩

ಶ್ರೀಮದಿತ್ಯಾದಿ ಕೆ. ಎಸ್. ನಾರಾಯಣಾಚಾರ್ಯರ ಸಂನಿಧಿಯಲ್ಲಿ ಕೋ. ಶ್ರೀ. ಕೃಷ್ಣತಾತಾಚಾರ್ಯದಾಸನ ಸವಿನಯ ವಿಜ್ಞಪ್ತಿ.

ತಮ್ಮ "ಶ್ರೀ ಮಹಾವಿಷ್ಣು" ಎಂಬ ಗ್ರಂಥವನ್ನು ಪೂರ್ತಿ ವ್ಯಾಸಂಗ ಮಾಡಿದೆ ಬಹು ಬೋಧಜನಕವಾಗಿದೆ. ಎಂತಹವರಿಗೂ ಅಜ್ಞಾತ ಜ್ಞಾಪನ ಪ್ರಚುರವಾದುದಿದು. ಇದರಲ್ಲಿ ಶ್ರೀವಿಷ್ಣುಪಾರಮ್ಯ ಬಹುವಿಸ್ತಾರವಾಗಿ ಸಪ್ರಮಾಣವಾಗಿ ನಿರೂಪಿತವಾಗಿದೆ. ಶೈಲಿ ಸರಳ, ಸುಲಭ ಮತ್ತು ಮನೋ

ಹರವಾಗಿದೆ. ತಮ್ಮ "ಪ್ರಕಾಶಕರ ವಿಜ್ಞಾಪನೆ" ಅನೇಕ ಆಶ್ಚರ್ಯ ಸಂಗತಿಗಳಿಂದ ಕೂಡಿದೆ. ಆದರಲ್ಲಿರುವಂತೆ ಭಗವದನುಗ್ರಹ, ಆಚಾರ್ಯಾನುಗ್ರಹ ತಮ್ಮಲ್ಲಿ ಪೂರ್ಣವಾಗಿದೆ. ಕೇವಲ ಭಗವದನುಗ್ರಹವೊಂದೇ ಇದ್ದಲ್ಲಿ "ವಿಣ್ಣುಲಹಿಲ್ ಸರ್ವಜ್ಞರಾಹ ವಾಳಲಾಂ; ಆಚಾರ್ಯ ಕೃಪೆಯಾಲ್ ಇಮ್ಮಣ್ಣುಲಹಿಲುಂ ಸರ್ವಜ್ಞರಾಹ ವಾಳಲಾಂ" ಎಂಬ ಪೂರ್ವಾಚಾರ್ಯ ಸೂಕ್ತಿಯನ್ನು (ಕೇವಲ ದೇವರ ಕೃಪೆಯಿದ್ದವರು ಪರಲೋಕದಲ್ಲಿ ಸರ್ವಜ್ಞರಾಗಿ ಬಾಳಬಹುದು; ಆಚಾರ್ಯಾನುಗ್ರಹವಿದ್ದರೆ ಈ ಭೂಲೋಕದಲ್ಲೂ ಸರ್ವಜ್ಞರಾಗಿ ಬಾಳಲು ಸಾಧ್ಯ ಎಂಬ ಸೂಕ್ತಿಯನ್ನು) ತಮ್ಮ ಬಗ್ಗೆ, ನನಗೆ ಜ್ಞಾಪಿಸುತ್ತಿದೆ. ಇದು 'ವರ್ಧತಾಂ, ಅಭಿವರ್ಧತಾಂ' ಎಂಬುದು ನನ್ನ ಆಶಂಸೆ...... ಇತಿದಾಸಃ

(ಸಹಿ) ಕೆ. ಎಸ್. ಕೃಷ್ಣತಾತಾಚಾರ್ಯ



ಶ್ರೀಸುಕೃತೀಂದ್ರ ಧರ್ಮಾಭಿಲಾಶಿನೀ ಸಭಾ
ವಟಪುರಕ್ಷೇತ್ರಂ

ಲಕ್ಷ್ಮಣ ಪ. ಭಂಡಾರಕಾರ್, ಬಂಟ್ವಾಳ (ದ. ಕ.)
೩-೧೯ ವಟಪುರೇಶ ಕೃಪಾ ೧೯-೧-೧೯೮೬
ಗೋವಿಂದ ಬಾಗ್
ಅವುಟಾಡಿ, ಶಿ೭ಳ, ೭೬೨

ಪೂಜ್ಯರೇ.

ಸಪ್ರೇಮ ವಂದನೆ, ನಿಷ್ಕರ್ಷೆಯಾಗಿ ಜ್ಞಾನ ನೀಡುವ ವೇದವಾಹಿನಿಯ ಅಮೃತೋಪಮ ತರಂಗಗಳಲ್ಲಿ ಮಿಂದು ಪುನೀತರಾಗುವ ಭಾಗ್ಯವನ್ನು

'ವೇದಸಂಸ್ಕೃತಿಯ ಪರಿಚಯ' ಮಾಲೆಯ ಮೂಲಕ ನಮಗೆಲ್ಲ ಒದಗಿಸಿ ಕೊಟ್ಟ "ಅಭಿನವ ವೇದವ್ಯಾಸ" ಎಂದು ನಾವೆಲ್ಲ ಗೌರವಪೂರ್ವಕ ಆದರಿಸುವಂತಹ ಶ್ರೇಷ್ಠ ಕಾರ್ಯ ಮಾಡಿದ್ದೀರಿ. ಸಭಾದ ಎಲ್ಲರ ಪರವಾಗಿ ಅಭಿನಂದನೆಗಳು.

ಎಲ್. ಪಿ. ಭಂಡಾರಕರ್

ಕಾರ್ಯವಾಹ



**Sri B N. Sampath,** Varanasi-6
Professor of Law, 12-4-1985
Banaras Hindu University.

Dear Professor Narayanachar,

Indeed you have put an ocean of knowledge in the small volumes ...... However I am amazed to find that the clarity with which you have presented the abstruse knowledge of our scriptures is unparallelled. I am not sure whether there is any work in English, what to speak of Kannada, in which the author has established such a rapport with the reader as you have done in your books. I am an ardent admirer of Kane's Encyclopadeaic work, History of Dharma Sastra which I make use of for teaching some branches of Hindu Law. But I must point out that you have expressed things in a clearer way than that celebrated writer in many ways.

I must again draw your kind attention to my

earlier request that you must express these ideas in English so that it can cater to the needs of a wider audience. In fact I have expressed my reaction to your work with many of our friends who do not know Kannada and everyone of them has exclaimed ' how nice it would have been if it had been written in English! ' Publication problems and monetary implications, I firmly believe, can be taken care of, once the manuscript is ready.

I am particularly delighted to read those portions where you have refuted effectively ' The great western Orientalists ' who have distorted the sacred texts. In fact, we, educated ( but unenlightened in Sanskrit ) people have relied upon these works so blindly that we take their interpretation as gospel truth. We do not give a second thought to their verdict on our scriptures because they are so 'objective' ! What a generosity on our part ! .......

With affectionate regards,

Yours forever,

(Sd/-) B. N. Sampath



ಶ್ರೀ ಜೀವಣ್ಣ ಮಸಳಿ

ಸಂಪಾದಕ

"ವಿಶ್ವದರ್ಶನ" ವಾರಪತ್ರಿಕೆ, ೧೯-೧-೮೬

ಬಾಗಲಕೋಟೆ-೫೮೭,೧೦೧

ಪ್ರೊ. ಕೆ. ಎಸ್. ನಾರಾಯಣಾಚಾರ್ಯ, ವೇದವಿದ್ಯಾಪ್ರಕಾಶನ, ಧಾರವಾಡ, ಇವರಿಗೆ :

ವಂದನೆಗಳು. ತಮ್ಮ ಅಂತರಂಗಿಕ ಶಕ್ತಿಯ ಪರಿಚಯವನ್ನು ಚೆನ್ನಾಗಿ ಮಾಡಿಕೊಂಡಿದ್ದರೂ, ನಿಮ್ಮ ಸ್ಥೂಲಪರಿಚಯ ನನಗಿಲ್ಲ.

ನಿಮ್ಮ "ವೇದ ಸಂಸ್ಕೃತಿಯ ಪರಿಚಯ" ಭಾಗಗಳನ್ನು ಓದಿಕೊಂಡಿದ್ದೇನೆ. ಸ್ವತಃ ಅವು ನನಗೆ ಹೆಚ್ಚಿನ ಜ್ಞಾನ ಮಾಡಿಕೊಳ್ಳಲು ಪ್ರಮುಖ ಪಾತ್ರವನ್ನು ವಹಿಸಿದವು. ನಿಜಕ್ಕೂ ನೀವು ವೇದಗರ್ಭದಲ್ಲಡಗಿದ ಮಹಾ ಪ್ರಜ್ಞೆಯನ್ನು ಹೊರಗೆ ತೆಗೆದಿದ್ದೀರಿ. ನೀವು ಬರೀ ವ್ಯಕ್ತಿಯಲ್ಲ, "ಶಕ್ತಿ" ಯಾಗಿದ್ದೀರಿ. ವೇದಗಳ ನರನಾಡಿಗಳನ್ನು ಹಿಡಿದು, ನುಡಿಸಿ, ಅದರ ಇಂಪಾದ ಸ್ವರಮಾಧುರ್ಯವನ್ನು ನೀವು ಓದುಗರ ಕರ್ಣಗಳಿಗೆ ನೀಡುತ್ತಿದ್ದೀರಿ. ಅದಕ್ಕಾಗಿ ನಾನು ನಿಮಗೆ ಕೃತಜ್ಞತೆಗಳನ್ನು ಅರ್ಪಿಸುತ್ತಿದ್ದೇನೆ...... ನೀವು ಯಾವುದೇ ವಿಷಯವನ್ನು ಸಹ ಹಿಂಜಿ ಹಿಂಜಿ ಇಡುತ್ತೀರಿ. ಕೊನೆಗೆ ಅಧ್ಯಾತ್ಮದಲ್ಲಿ ಲೀನ ಮಾಡಿಬಿಡುತ್ತೀರಿ. ಅದು ನನಗೆ ತುಂಬಾ ಹಿಡಿಸಿದೆ. ಸಾಧ್ಯವಾದರೆ, ಕೆಲವೊಂದು ವಿಷಯಗಳನ್ನು ತಮ್ಮೊಡನೆ ಚರ್ಚಿಸಿ, ಇನ್ನಷ್ಟು ಹಸಿದ ನನ್ನ ಜ್ಞಾನಪಿಪಾಸೆಗೆ ಆಹಾರವನ್ನೊದಗಿಸಿಕೊಳ್ಳುತ್ತೇನೆ.

ಇಂತು, ವಂದನೆಗಳು

ತಮ್ಮ ವಿಶ್ವಾಸಿ

(ಸಹಿ) ಜೀವಣ್ಣ ಮಸಳಿ.



ಶ್ರೀ ಎಂ. ಸೀತಾರಾಮ ಅಯ್ಯಂಗಾರ್ಯರು, ಎಂ. ಎ.
(ನಿವೃತ್ತ) ಸರ್ಕಾರಿ ಕಾಲೇಜು ಪ್ರಿನ್ಸಿಪಾಲರು
ವಿದ್ಯಾಭ್ಯಾಸ ಇಲಾಖೆ
ಕರ್ನಾಟಕ ಸರ್ಕಾರ

270, II Main,
West of Chord Road
II stage
BANGALORE-86
10-10-1985

Dear Sir,

.. .. These books have given me a sense of pride and they are an asset to any home library. I am giving my second reading and I feel they are like real gems. They give a clear insight deep into out standing revelations of Vedic lore and your approach to many items is realistic and outstanding, creating an everlasting impression in the mind of the reader. Yours is a monumental service to mankind. I forvently pray **Sri Mahavishnu** to bless you with long life, good prosperity and the needed strength and determination, not only to complete the valuable series on hand but also to publish other series of our heritage in the coming years.

With Pranams,

Yours sincerely,
(Sd) M. Sitarama Iyengar



ಪ್ರಾಧ್ಯಾಪಕ, ಡಾ॥ ಬಿ ಆರ್. ಮೋಡಕ,ಎಂ.ಎ., ಪಿಹೆಚ್.ಡಿ.,
ಮುಖ್ಯಸ್ಥರು, ಸಂಸ್ಕೃತ ವಿಭಾಗ,
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ.

[ಸಂಪುಟ ೭, "ಅಶ್ವಿನೀ ದೇವತೆಗಳು" ಬಗೆಗೆ]

## (ವೇದ ಸಂಸ್ಕೃತಿಯ ಪರಿಚಯ (ಸಂಪುಟ ೭)

ವೇದ ಸಂಸ್ಕೃತಿಯ ಪರಿಚಯ ಈ ಗ್ರಂಥಮಾಲೆಯ ಏಳನೆಯ ಸಂಪುಟವು ಅಶ್ವಿನೀ ದೇವತೆಗಳ ಮಹತ್ವವನ್ನು ತೋರಿಸುತ್ತದೆ. ಕತ್ತಲೆ ತುಂಬಿದ ಆಕಾಶದಲ್ಲಿ ಆಶಾದೀಪಗಳಂತೆ ಬೆಳಗಿ ಬರುವ ಜ್ಯೋತಿಃಸ್ವರೂಪವೇ ಈ ಅಶ್ವಿನೀ ದೇವತೆಗಳು ಕತ್ತಲೆ ಕ್ರಮೇಣ ಕಡಿಮೆಯಾಗುತ್ತ ಬೆಳಕು ಕ್ರಮೇಣ ಹೆಚ್ಚಾಗುವ ಸಮಯದಲ್ಲಿ ಬರುವ ಅಶ್ವಿನೀ ಕುಮಾರರು ಅಜ್ಞಾನ ಹೋಗಿ ಜ್ಞಾನೋದಯವಾಗುವ ಸ್ಥಿತಿಯ ಸಂಕೇತ. ಆದ್ದರಿಂದ ಇವರನ್ನು ಯಮಳರೆಂದು ವರ್ಣಿಸಿದುದು ತುಂಬಾ ಮಾರ್ಮಿಕವಾಗಿದೆ.

ವೇದಗಳಲ್ಲಿ ಹಾಗೂ ಪುರಾಣಗಳಲ್ಲಿರುವ ಅಶ್ವ ಸಂಕೇತದ ಅರ್ಥವನ್ನು ಪ್ರೊ. ಕೆ. ಎಸ್. ನಾರಾಯಣಾಚಾರ್ಯರು ಚೆನ್ನಾಗಿ ವಿವರಿಸಿದ್ದಾರೆ. ಗೋವು ಜ್ಞಾನಸಂಕೇತವಾಗಿರುವಂತೆ ಅಶ್ವವು ಬಲಸಂಕೇತವಾಗಿದೆ. ಅಶ್ವಿನಿಗಳಿಗಿರುವ ರುದ್ರುವರ್ತನೀ, ಹಿರಣ್ಯವರ್ತನೀ, ಶುಭಸ್ಪತೀ, ದ್ರವತ್ಪಾಣೀ, ಪುರುಭುಜಾ, ಪುರುದಂಸಸಾ, ಮುಂತಾದ ವಿಶೇಷಣಗಳ ಮಾರ್ಮಿಕಾರ್ಥವನ್ನು ಸ್ಪಷ್ಟೀಕರಿಸಿದ್ದಾರೆ ತಮ್ಮ ವಿಚಾರದ ಪುಷ್ಟ್ಯರ್ಥ ವೇದ, ಉಪನಿಷತ್ತು, ರಾಮಾಯಣ, ಮಹಾಭಾರತ ಮುಂತಾದ ಗ್ರಂಥಗಳಿಂದ ಆಯ್ದ ಆಧಾರಗಳನ್ನು ಕೊಟ್ಟಿದ್ದಾರೆ.

ಪರಮಾರ್ಥದ ಮಾರ್ಗದಲ್ಲಿ ವೇಗದಿಂದ ಪ್ರಗತಿಮಾಡಲು ಹಾಗೂ ಶಬ್ದಗಳಿಗೆ ಅತೀತವಾದ ಆನಂದವನ್ನು ಅನುಭವಿಸಲು ಬೇಕಾಗುವ ಅಂತಃಕರಣದ ಶಕ್ತಿಯನ್ನು ಅಶ್ವಿನೀದೇವತೆಗಳು ಕೊಡುತ್ತಾರೆ ಅವರ ರಥದ ಮೂರು ಚಕ್ರಗಳೆಂದರೆ ಭೂತ, ವರ್ತಮಾನ ಹಾಗೂ ಭವಿಷ್ಯತ್‌ಕಾಲ.

ಅವರು ಜ್ಞಾನೋಪದೇಶ ಮಾಡುವದು ಮೂರು ಪ್ರಕಾರಗಳಲ್ಲಿ ಎಂದರೆ ಮೇಲ್ನೋರಿಕೆಯ ವಾಚ್ಯಾರ್ಥ, ದೇವತಾಪರವಾದ ಐತಿಹಾಸಿಕಾರ್ಥ ಮತ್ತು ಆಧ್ಯಾತ್ಮಪರವಾದ ಅರ್ಥ ಎಂಬ ಮೂರು ಬಗೆಯ ಅರ್ಥ. ಅವರ ಹೆಂಡತಿ ಯಾಗಿರುವ ಸೂರ್ಯೆಯು ಶಬ್ದಬ್ರಹ್ಮಾತ್ಮಕ ವಾಗ್ದೇವತೆ ಹಾಗೂ ಅವರಿಗೆ ಪ್ರಿಯವಾಗಿರುವ ಸೋಮವು ಬ್ರಹ್ಮಾನಂದದ ಸಂಕೇತ. ಗಂಧರ್ವ, ಭೋಗದ, ಅಗ್ನಿ, ಪ್ರಜ್ಞೆಯ ಮತ್ತು ಸೂರ್ಯ, ಬ್ರಹ್ಮಜ್ಞಾನದ ಸಂಕೇತ. ಸೂರ್ಯೋ ದಯವೆಂದರೆ ಪೂರ್ಣ ಜ್ಞಾನೋದಯ. ಸ್ವಾನುಭವದ ಜ್ಞಾನೋದಯ ಎಂಬುದನ್ನು ಹೇಳಿ ಮಂತ್ರಗಳಲ್ಲಿ ಅಡಗಿದ ಗೂಢ ಹಾಗೂ ವಿಶಾಲವಾದ ಅರ್ಥವನ್ನು ತೋರಿಸಿದ್ದಾರೆ. ವೈದಿಕ ಋಷಿಗಳ ಮನಸಿನ ಗುಹೆಯನ್ನು ಪ್ರವೇಶಿಸಿ, ಹೃದಯದ ಗರ್ಭಗುಡಿಯಲ್ಲಿ ನಿಂತು ಅವರ ಪ್ರಜ್ಞೆಯ ಪದರು ಪದರುಗಳನ್ನು ಬಿಡಿಸಿ ಬಿಡಿಸಿ ತೋರಿಸಿದ್ದಾರೆ. ಮಂತ್ರಗಳ ಮರ್ಮವನ್ನು ಗ್ರಹಿಸಿ ಪ್ರಕಟಮಾಡಿದ್ದಾರೆ. ಅತಿಪ್ರಾಚೀನವಾಗಿದ್ದರಿಂದ ತಿಳಿಯಲು ಕಠಿಣ ವಾದ ವೇದಮಂತ್ರಗಳ ಅರ್ಥವನ್ನು ಸುಬೋಧ ಶಬ್ದಗಳಲ್ಲಿ ಹಾಗೂ ಆಕ ರ್ಷಕ ಶೈಲಿಯಲ್ಲಿ ಬರೆದು ಗ್ರಂಥಕಾರರು ಸಮಾಜದ ಮೇಲೆ ಉಪಕಾರ ಮಾಡಿದ್ದಾರೆ.

ಪೌರ್ವಾತ್ಯ ಹಾಗು ಪಾಶ್ಚಾತ್ಯ ವಿದ್ವಾಂಸರ ಸಂಶೋಧನೆಯ ಅಧ್ಯ ಯನವೂ ವೇದವಾಙ್ಮಯದ ಪ್ರಗಾಢ ಚಿಂತನವೂ ಈ ಗ್ರಂಥಮಾಲೆಯಲ್ಲಿ ಕಾಣುತ್ತದೆ. ದಶ ಶತಮಾನಗಳವರೆಗೆ ದಾಸ್ಯವನ್ನನುಭವಿಸಿ ಮುದಿಯಾದ ನಮ್ಮ ಭಾರತರಾಷ್ಟ್ರಕ್ಕೆ ನವತಾರುಣ್ಯ ಪ್ರಾಪ್ತಮಾಡಲು ಅಶ್ವಿನೀ ದೇವತೆ ಗಳಿಂದ 'ಚ್ಯವನಪ್ರಾಶ' ಪಡೆಯಬೇಕಾಗಿದೆ. ವೇದಸಾಗರದ ಮಂಥನದಿಂದ ಹುಟ್ಟಿ ಬರುವ ಇನ್ನೂ ಅನೇಕ ರತ್ನಗಳಿಗಾಗಿ ನಾವು ಕಾಯುತ್ತಿದ್ದೇವೆ.

(ಸಹಿ) ಪ್ರಾ. ಭಾ. ರ. ಮೋಡಕ



Professor S. S. Raghavachar,
(Rtd.) Head of the dept. of Philosophy,
MYSORE UNIVERSITY
MYSORE 18-6-83

Prof. Narayachar is a phenomenon in many significant ways. He is an outstanding professor of English Literature, with enviable equipment in the field, with deep understanding of the latest achievements in English poerty such as that of T S. Eliot. If this is just a high degree of professional distinction in his specialisation, he has added to this many more dimensions of attainment by his own choice and devoted and penetrating study. He is a student of remarkable depth and width in Sanskrit studies. The wide range of knowledge has shaped him into a passionate and powerful champion of what may be described as the Religio-philosophical spirit of Indian Culture. He is an ardent and throughgoing student of Vedic literature which has led him on to **Visitadvaitic Vaishnavism**, a spiritual tradition, for placing him in which he is deeply thankful to providence. He has mastered all the connected literature in all its principal languages. This acquisition of the great heritage has fired him, as it were, to throw himself, with abandon to the propagation of it with exceptional powers of discourse and writing. He seems to be so made that quiet comprension without zealous transmission of the light and heat of the exalted wisdom is impossible for him. The consequence is that he is bringing forth a lengthening series of

brilliant studies in Kannada under the caption 'Veda Samskritiya Parichaya', and delivering discourses to enthralled and crowded audiences all over the country. It is difficult to believe that such a thing is possible in times such as ours But incredibility is the mark of 'The Holy Ghost'

The latest volume of his writing seems almost to touch the summit of the creative rethinking. It is devoted to the supremacy of **Vishnu**, a theme naturally central to his devotional passion.

ಈ ಪ್ರಶಸ್ತಿ ಪತ್ರದ ಉಳಿದ ಭಾಗದಲ್ಲಿ ಶ್ರೀಯುತರು ನಮ್ಮ ಎಂಟನೆಯ ಸಂಪುಟದ ಅಧ್ಯಾಯಗಳ ವಿಮರ್ಶಾತ್ಮಕ ಪರಿಚಯ, ಸಂಗ್ರಹ ಮಾಡಿರುತ್ತಾರೆ. ಅಲ್ಲದೆ ಒಂದೆರಡು ಪ್ರಶ್ನೆಗಳನ್ನು ಎಬ್ಬಿಸಿದ್ದಾರೆ. ಅವುಗಳ ಸಂಗ್ರಹ, ಅವಕ್ಕೆ ನಾವು ಅವರಿಗೆ ಬರೆದ ಸಮಾಧಾನ, ವಿವರಣೆಗೆ ಅವರು ಕೊಟ್ಟ ಉತ್ತರಗಳ ಸಂಗ್ರಹ ಇಲ್ಲಿ ಪ್ರಸ್ತುತವೆನಿಸಿದೆ.

೧. ಅಲ್ಲಲ್ಲೇ ಪಾಶ್ಚಾತ್ಯರ ಅಪಾರ್ಥಗಳನ್ನು ವೇದಸೂಕ್ತಗಳ ಬಗೆಗೆ ಪರಾಮರ್ಶಿಸುವಾಗ ನಾವು : " 'ಗೋಮಾಂಸ ಭಕ್ಷಕರಿಗೆ' ಸದರ್ಥಗಳು ಹೇಗೆ ತಿಳಿಯಬೇಕು? " ಎಂದು ಬರೆದಿರುವುದು ಶ್ರೀಯುತರಿಗೆ ಒಪ್ಪಿಗೆಯಾದಂತಿಲ್ಲ. " ಭವಭೂತಿಯನ್ನು ನಂಬುವುದಾದರೆ ವಸಿಷ್ಠರೂ ಗೋಮಾಂಸಭಕ್ಷಕರೇ ! " ಎಂದು ವಿಮರ್ಶಿಸಿರುತ್ತಾರೆ. ಅಲ್ಲದೆ ಗೋವಿನಂತೆ ಸಾಧುವಾದವರೆಲ್ಲ ಋಷಿಗಳಾಗಬೇಕೆಂದೇನಿಲ್ಲವೆಂದೂ. ದಡ್ಡಶಿಖಾಮಣಿಗಳೂ ಆಗಬಹುದೆಂದೂ ಸೇರಿಸಿರುತ್ತಾರೆ ! (one may be 'the placidest cow' in dietic habits and still be an idiot.")

ಇದಕ್ಕೆ ನಮ್ಮ ಉತ್ತರ : ಗೋವನ್ನು ವೇದದಲ್ಲಿ "ಅಘ್ನ್ಯಾ" —"ಕೊಲ್ಲಲ್ಪಡತಕ್ಕದಲ್ಲ"ವೆಂದು ವೇದದಲ್ಲೇ ಪರ್ಯಾಯ ಪದದಲ್ಲಿ ಕರೆದಿದೆ ಯಾಸ್ಕರ ನಿರುಕ್ತಿ ಗಮನೀಯ, ಜಮದಗ್ನಿಗಳ ಸೂಕ್ತದಲ್ಲಿ,

"ಮಾ ಗಾಂ ಅನಾಗಾಂ ಅದಿತಿಂ ವಧಿಷ್ಟ" "ನಿರೋಗಳಾದ ಗೋಮಾತೆ -ಅದಿತಿಯನ್ನು-ಕೊಲ್ಲಬೇಡ" ಎಂದಿರುವುದು ವೈದಿಕರಿಗೆಲ್ಲ ಆಜ್ಞಾರೂಪದ್ದು. ಒಬ್ಬ ಸಾಮಾನ್ಯ ಕವಿ ಹೇಳಿದ ಮಾತು ವೈದಿಕ, ಪ್ರಾಚೀನ ಋಷಿಗಳಿಗೆ ಬಾಧಕವಲ್ಲ. ಮಹಾಪಾತಕಗಳಲ್ಲಿ ಗೋವಧೆ ಧರ್ಮಶಾಸ್ತ್ರಗಳಲ್ಲಿ ಸೇರಿಸಲ್ಪಟ್ಟಿದೆ ವಸಿಷ್ಠ ಚರಿತ್ರೆಯಲ್ಲೇ ಇವರಾಶ್ರಮದ ಗೋ ಹಿಂಸೆಯ ದೆಸೆಯಿಂದಲೇ, ಗೋಮಾಂಸ ಭಕ್ಷಣೆಯಿಂದಲೇ "ತ್ರಿಶಂಕು"ವು (ಮೂರು ಪಾತಕಗಳನ್ನು ಮಾಡಿದವನೆಂದು) ಹಾಗೆ ಕರೆಯಲ್ಪಟ್ಟನು. ಋಷಿಗಳಲ್ಲಿ ಈ ಬಗೆಯ ದುರಾಚಾರವಿತ್ತೆಂದು ಮೊದಲು ಅಪಪ್ರಚಾರ ನಡೆಸಿದವರು ಐರೋಪ್ಯರು. ಇತ್ಯಾದಿ.

ಅಲ್ಲದೆ, "ನಾವಿರತೋ ದುಶ್ಚರಿತಾತ್......" ಇತ್ಯಾದಿ ಉಪನಿಷತ್ತಿನ ಸೂಕ್ತಿಯಂತೆ ದುರಾಚಾರ ಬಿಟ್ಟಿಲ್ಲದವನಿಗೆ ಭಗವದನುಭೂತಿ ಅಸಾಧ್ಯವೆಂದೇ ನಮ್ಮ ನಂಬಿಕೆ. ಗೋಮಾಂಸ ಭಕ್ಷಕರಿಗೂ ದಿವ್ಯಜ್ಞಾನ ಶಕ್ಯವೆಂದು ಯಾವ ಮಂತ್ರವೂ, ಋಷಿಯೂ, ಭಾಷ್ಯಕಾರರೂ ಹೇಳಿಲ್ಲ. ಬದಲಾಗಿ: "ಆಹಾರ ಶುದ್ಧೌ ಸತ್ತ್ವಶುದ್ಧಿಃ ಸತ್ತ್ವಶುದ್ಧೌ ಧ್ರುವಾ ಸ್ಮೃತಿಃ, ಸ್ಮೃತಿ ಲಂಭೇ ಗ್ರಂಥೀನಾಂ ವಿಪ್ರಮೋಕ್ಷಃ" ಎಂಬ ಛಾಂದೋಗ್ಯ ಶ್ರುತಿಯಂತೆ, ಆಹಾರಶುದ್ಧಿಯಿದ್ದ ಹೊರತು, ಭಗವದ್ಭಕ್ತಿಯಾಗಲೀ, ಮೋಕ್ಷವಾಗಲೀ ಇಲ್ಲವೆಂದೇ ಸಾರಿ ಹೇಳಿದೆ. ಎಲ್ಲ ಆಚಾರ್ಯರಿಗೂ ಸಮ್ಮತವೂ ಪೂಜ್ಯವೂ ಆದ ಈ ಬಗೆಯ ಶ್ರುತಿಗಳ ಹಿನ್ನೆಲೆಯಲ್ಲಿ ಗೋಮಾಂಸ ನಿಷೇವಣದಿಂದಾಗುವ ಭ್ರಾಂತಿ, ದುರ್ಬುದ್ಧಿಗಳಿಂದ ಕೂಡಿದವರಿಗೆ ಯಥಾರ್ಥ ಜ್ಞಾನ ವೇದವಾಕ್ಯಗಳ ಬಗೆಗೆ ಹೇಗೆ ಸಾಧ್ಯ? ನಮ್ಮದು ಸನಾತನ ಧರ್ಮ ರೀತಿಯ ಗ್ರಹಿಕೆ. ವೈಯ್ಯಕ್ತಿಕ ಜೀವನ ಮತ್ತು ಬಾಹ್ಯ ಸಿದ್ಧಿಸಾಧನೆಗಳು ಒಂದಕ್ಕೊಂದು ಸಂಬಂಧಿಸಿವೆ ಎಂದು ನಮ್ಮ ದೃಢವಾದ ಗ್ರಹಿಕೆ, 'ವೈಯ್ಯಕ್ತಿಕ ಜೀವನ ಹೇಗಾದರಿರಲಿ'— ಸಿದ್ಧಿಯಾದರೆ ಸಾಕೆಂಬುದು ಇಂದಿನವರ ಗ್ರಹಿಕೆ. ಬಾಹ್ಯಜೀವನವು ಆಚಾರ, ಆಹಾರ, ವಿಹಾರ ಶುದ್ಧಿಗಳು ಅಂತರಂಗಜೀವನ, ಪರಿಷ್ಕಾರಾದಿಗಳಿಗೆ ಸಂಬಂಧಪಡದಿದ್ದರೆ, ಸಾಂಖ್ಯರ ಪುರು

ಷನು ಪ್ರಕೃತಿಯಿಂದ ದೂಷಿತನಾಗುವುದಿಲ್ಲವೆಂಬ ಅವೈದಿಕ ಗ್ರಹಿಕೆಗೇ ಸಮ ವಾಗುವುದು ! ಸಾಧನ ಸಪ್ತಕ'ಗಳಲ್ಲಿ 'ವಿವೇಕ'ವೆಂಬುದಕ್ಕೆ ಪೂರ್ವಾಚಾರ್ಯರು ಕೊಟ್ಟಿರುವ ಅರ್ಥವು ವ್ಯರ್ಥವೂ ಆದೀತು !

ಹಾಗೆಂದ ಮಾತ್ರಕ್ಕೆ, ಆಹಾರಶುದ್ಧಿಯಿದ್ದ ಮಾತ್ರಕ್ಕೇ ಭಗವದನುಭೂತಿ ಆಗಿಯೇ ಬಿಡಬೇಕೆಂದಿಲ್ಲ. ಇದು ಒಂದು ಅಂಗ ಮಾತ್ರ. ಉಳಿದ ಅಂಗ ಗಳೂ ಬೇಕೇಬೇಕು. ಅಷ್ಟಾಂಗಯೋಗದಲ್ಲಿ ಯಮ, ನಿಯಮಗಳಂತೆ. ಆಹಾರಶುದ್ಧಿಯು ಬೇಕೇ ಹೊರತು ಸಾಕಲ್ಲ. ಬೇಕೆಂದುದರಿಂದ, ಸಾಕೆಂದೂ ವಾದಿಸಿ, ಇದಿದ್ದವರಿಗೆಲ್ಲ ಬ್ರಹ್ಮಾನಂದವಾಗಿದೆಯೋ ? ಎಂದು ಕೇಳುವುದು ಸರಿಯಾದ ತರ್ಕವಲ್ಲ. (ವಿತ್ತಂಡಾವಾದವಾದೀತು !)

(೨) ಹಾಗಾದರೆ ಪಾಶ್ಚಾತ್ಯರಲ್ಲೂ ನಾವು ಉದಾಹರಿಸಿರುವ ಕೆಲವರಿ ಗಾದರೂ ಯಥಾರ್ಥಜ್ಞಾನ ಬಂದದ್ದು ಹೇಗೆ ? ಎಂದು ಕೇಳುತ್ತಾರೆ ! "ಗಹನಾ ಕರ್ಮಣೋಗತಿಃ" ಎಂದಷ್ಟೇ ಹೇಳಬೇಕಲ್ಲವೇ ? ನಮ್ಮ ಗ್ರಂಥ ಗಳಲ್ಲಿ ಇದನ್ನು ವಿಮರ್ಶಿಸುವುದು ಉದ್ದೇಶ್ಯವಲ್ಲ. ಸಾಧುವಿಚಾರಗಳನ್ನು ಯಾರು, ಎಲ್ಲೇ, ಬರೆದರೂ ಗ್ರಹಿಸುವುದೂ, ಅಸಾಧು ವಿಚಾರಗಳನ್ನು, ಅದರಲ್ಲೂ ವೈದಿಕ ಗ್ರಂಥಗಳಿಗೆ —ಉದ್ದೇಶ್ಯಪೂರ್ವಕವಾಗಿ —ಅಪಾರ್ಥ, ಅಪಚಾರ ಮಾಡುವವರು, ಯಾರೇ ಆದರೂ, ಭಾರತೀಯರೋ, ಹೊರಗಿ ನವರೋ ಆದರೂ, ಖಂಡಿಸಿ, ನಿಜಾರ್ಥಗಳನ್ನು ಪ್ರಕಟಿಸುವ ಉದ್ದೇಶ್ಯ ಮಾತ್ರ ನಮ್ಮದು. ನಾವು ಮೆಚ್ಚಿಕೊಂಡವರನ್ನು 'ಅಟ್ಟಕೇರಿಸಿ ಹೊಗಳು' ವುದೂ, ಮೆಚ್ಚದವರನ್ನು 'ಪಾತಾಳಕ್ಕಿಳಿಸಿ ತೆಗಳುವುದೂ ಏಕೆ ? ಎಂದೂ ಇವರು ಕೇಳುತ್ತಾರೆ! ಇವರಲ್ಲಿ ಪಾಶ್ಚಾತ್ಯರೂ ಪೌರಸ್ತ್ಯರೂ ಇರುತ್ತಾ ರಾದಿ, ಒಬ್ಬರದೇ ಕೆಲವು ಸೂಕ್ತಿಗಳನ್ನು ಮೆಚ್ಚಿಯೂ, ಇನ್ನು ಕೆಲವನ್ನು ಟೀಕಿಸಿಯೂ ಇರುವುದರಿಂದ ನಾವು ಪಾಶ್ಚಾತ್ಯ ಪೌರಸ್ತ್ಯರೆಂಬ ಭೇದವಿಲ್ಲದೆ, ಕೇವಲ ಗುಣಗ್ರಾಹಿಗಳು ಮಾತ್ರವಾಗಿದ್ದೇವೆಂಬುದನ್ನು ಇವ ರೇಕೆ ಕಾಣಲಾರರೋ, ಸೋಜಿಗವಾಗಿದೆ. ನಾವು ಯಾರನ್ನೂ ಅಟ್ಟಕ್ಕೇ ರಿಸಿಯೂ ಇಲ್ಲ, ಪಾತಾಳಕ್ಕೆ ತಳ್ಳಿಯೂ ಇಲ್ಲ! ಗುಣದೋಷಗಳನ್ನು

ಎತ್ತಿಡುವುದೇ ಇಂದಿನ ರೀತಿಯ ಬರೆವಣಿಗೆಯು ಅನೇಕರ ರೀತಿಗೆ ವಿರುದ್ಧ ವಿರಬಹುದು. ನಮ್ಮ ಗ್ರಂಥಮಾಲೆಯ ಮೂಲೋದ್ದೇಶ್ಯವೇ ಈ ಬಗೆಯ ವೇದಾಪಚಾರಗಳನ್ನು ಬಯಲಿಗೆಳೆದು, ನಮ್ಮವರನ್ನು ಎಚ್ಚರಿಸುವುದೆಂದು ಅನೇಕಸಲ ಬರೆದಿದ್ದೇವೆ. ವಿಶ್ವವಿದ್ಯಾಲಯ ಪಠ್ಯಪುಸ್ತಕಕ್ರಮದಲ್ಲಿ ಬರೆಯಲ್ಪಡುವ ಪುಸ್ತಕಗಳಲ್ಲಿ ಇದಕ್ಕೆ ಅವಕಾಶವಿಲ್ಲವೆಂಬುದನ್ನು ಬಲ್ಲೆವು. ಅಂತಾರಾಷ್ಟ್ರೀಯ ಪ್ರಪಂಚದಲ್ಲಿ ಈ ರೀತಿ ಪ್ರಸಿದ್ಧರನ್ನು ಬಯಲಿಗೆಳೆಯುವುದು 'ಅಸಭ್ಯ'ವೆಂದು ಪರಿಗಣಿಸಲ್ಪಟ್ಟಿರುವುದಲ್ಲದೆ, ಅವರು ಬರೆದದ್ದನ್ನೆಲ್ಲ ಮೆಚ್ಚಿಯೇ (ಅಂತರಾತ್ಮ ಒಪ್ಪದಿದ್ದರೂ ಸಹ) ಶಹಭಾಸ್‌ಗಿರಿ ಹೇಳುವುದೇ ಪರಿಪಾಠವಾಗಿರುವುದು ವಿದಿತ ಮತ್ತು ಶೋಚನೀಯ. ನಾವು ಯಾವ ಪ್ರಸಿದ್ಧಿಗಾಗಿಯೋ, ಪ್ರಶಸ್ತಿಗಾಗಿಯೂ ಈ ಗ್ರಂಥವನ್ನು ಬರೆಯುತ್ತಿಲ್ಲವಾದ್ದರಿಂದಲೂ, ವೇದಾರ್ಥಗಳನ್ನು ಯಥಾರ್ಥವಾಗಿ ಭಾರತೀಯರಿಗೆ ಮೊದಲು ಮನದಟ್ಟು ಮಾಡಿಕೊಡಲು ಹೊರಟಿರುವುದರಿಂದಲೂ ನಮಗೆ ಉಳಿದವರು ಕೃತಕವಾಗಿ ನಿರ್ಮಿಸಿಟ್ಟಿರುವ 'ಸಭ್ಯತೆ'ಯ ಮಾನದಂಡವು ಬಾಧಕವಲ್ಲ. 'ಸಭ್ಯತೆ'ಯ ಸೋಗಿನಲ್ಲಿ ಅಡಗಿಸಿಡಲ್ಪಟ್ಟ ಸತ್ಯವನ್ನು, ಆ ಸೋಗು ಹರಿಯದೇ ಹುಡುಕಿತೋರಿಸುವುದೆಂತು ? ಸತ್ಯವು ಕಠೋರವಿರಬಹುದು ! ಒಪ್ಪುವ ಧೈರ್ಯವಷ್ಟೇ ಬೇಕು. ಸಭ್ಯವೋ, ಅಸಭ್ಯವೋ, ಉಳಿದ ವಾಚಕರೇ ತೀರ್ಮಾನಿಸಲಿ.

(೩) ಪಾಶ್ಚಾತ್ಯ ವಿಮರ್ಶಕರನ್ನು 'ಪಾದ್ರಿ'ಗಳೆಂದು ಎತ್ತಿ ತೋರಿಸುವುದೇಕೆ ? ಎಂದು ಇನ್ನೊಂದು ಪ್ರಶ್ನೆ ! ಕ್ರೈಸ್ತಮತವನ್ನು ಭಾರತದಲ್ಲಿ ಪ್ರತಿಷ್ಠಿಸುವ ಉದ್ದೇಶ್ಯದಿಂದ ವೈದಿಕ ಧರ್ಮವನ್ನು ತೆಗಳಿ, ಬುಡಮೇಲೆ ಮಾಡುವ ಉದ್ದೇಶ್ಯದಿಂದಲೇ Sacred Books of the East ಮಾಲೆಯು, ಮ್ಯಾಕ್ಸ್‌ಮ್ಯುಲ್ಲರ್ ಪ್ರಭೃತಿಗಳಿಂದ ತೊಡಗಲ್ಪಟ್ಟದ್ದನ್ನೂ, ಅವರ ಮಾತುಗಳಲ್ಲೇ ಅವರ ಈ ಉದ್ದೇಶ್ಯವನ್ನೂ ತೋರಿಸಿಕೊಟ್ಟಮೇಲೆಯೂ ಈ ಪ್ರಶ್ನೆಯನ್ನು ಇವರು ಕೇಳುತ್ತಾರೆಂದರೆ, ಇವರು ನಮ್ಮ ಗ್ರಂಥಗಳಿಂದ ಏನನ್ನು ನಿರೀಕ್ಷಿಸುವವರೋ ತಿಳಿಯದು ! ಕೀಥ್ ಪಂಡಿತನು ಪಾದ್ರಿಯಲ್ಲದಿದ್ದರೂ ಅವನನ್ನು ಹಾಗೇಕೆ ಕರೆದೆವೆಂದು ಕೇಳುತ್ತಾರೆ. ಅದಕ್ಕೆ ನಮ್ಮ ಉತ್ತರ :

'ಪಾದ್ರಿತನ'ವೆಂಬುದೊಂದುಂಟಲ್ಲ ! ಕ್ರೈಸ್ತಮತವೇ ಉಳಿದೆಲ್ಲ ಮತಗಳಿಗಿಂತ ಶ್ರೇಷ್ಠವೆಂದೂ, ಇತರ ಮತಗಳನ್ನು ನಿರ್ನಾಮಗೊಳಿಸಿ, ಕ್ರೈಸ್ತಮತವನ್ನು ಹೇಗಾದರೂ ಅಲ್ಲಿ ಸ್ಥಾಪಿಸುವುದೇ ತಮ್ಮ ಜೀವನದ ಉದ್ದೇಶ್ಯವೆಂದೂ ಭಾವಿಸುವ ಶ್ರದ್ಧೆಗೇ ನಾವು 'ಪಾದ್ರಿತನ'ವೆನ್ನುತ್ತೇವೆ. ಇದನ್ನು ಮಾಡುವವರು ಚರ್ಚ ಎಂಬ ಸಂಸ್ಥೆಯ ಸಕ್ರಿಯ, ಸಂಬಳ ಪಡೆದ ಸೇವೆಯಲ್ಲಿರಲಿ, ಬಿಡಲಿ, ಅವರೆಲ್ಲ ಪಾದ್ರಿಗಳೇ ! ಅವರ ವಿಮರ್ಶೆಗಳಲ್ಲಿ ಸುಪ್ತವಾಗಿ ಅಡಗಿರುವ ಕ್ರೈಸ್ತಮತೋತ್ಕರ್ಷಗ್ರಹಿಕೆಯ ನಿಮಿತ್ತ ಸೂಚಿತವಾದ ವೈದಿಕಮತ ತಿರಸ್ಕಾರ ಭಾವನೆಯನ್ನು ಹೊರಗೆಳೆದು, ಅವರ ಹೊಗಳಿಕೆಯಿಂದಲೂ ನಾವು ವಂಚಿತರಾಗತಕ್ಕದ್ದಲ್ಲವೆಂದು ತೋರಿಸಿರುವುದು ತಪ್ಪಲ್ಲವಷ್ಟೆ ! ಕ್ರೈಸ್ತರ ಬಗಗೆ ನಮಗೆ ಆಗ್ರಹವಿಲ್ಲ. ಅವರು ನಮ್ಮ ಧರ್ಮವನ್ನು ತೆಗಳಲು ಹೂಡಿದ ನಾನಾ ಉಪಾಯಗಳಷ್ಟೇ ನಮ್ಮ ಆಕ್ಷೇಪಕ್ಕೆ ಗುರಿಯಾಗಿದೆ. ವೈಟ್‌ಹೆಡ್ ಮಹಾಶಯನು ಈ ಗುಂಪಿನಲ್ಲಿ ಸೇರಿದವನಲ್ಲ. ಸ್ವತಂತ್ರ ವಿಚಾರವಾದಿಯಾಗಿ, ಸ್ವತಂತ್ರ ತತ್ತ್ವಚಿಂತಕನಾಗಿರುವುದರಿಂದ, ಅವನ ವಿಚಾರಧಾರೆಯಲ್ಲಿ ವೈದಿಕ ತತ್ತ್ವಗಳಿಗೆ ಸರಿಹೋಲುವುದನ್ನು ನಾವು ಪ್ರಶಂಸಿಸಿರುವುದು ವಿಶಾಲದೃಷ್ಟಿಗೆ ಸಾಕ್ಷಿಯಾಗಬೇಕು ಮಾತ್ರ ! "ಅವನು ಮಾಂಸ ತಿನ್ನುತ್ತಿರಲಿಲ್ಲವೆ ?" ಎಂದು ಕೇಳುತ್ತಾರೆ ! ಅವನು ವೇದಭಾಷ್ಯ ಬರೆಯಲೂ, ವಿಮರ್ಶಿಸಲೂ ಹೊರಟವನಲ್ಲವಾಗಿ, ಈ ಪ್ರಶ್ನೆಯು ವ್ಯರ್ಥ ಚೋದ್ಯ ಮಾತ್ರ !! (ಅವನು ಯಾವ ದುಃಚಟಗಳೂ ಇಲ್ಲದವನೆಂದು (Teatotaller) ಅವನ ಚರಿತ್ರಕಾರರು ಬರೆದೂ ಇದ್ದಾರೆ )

(ಳ) ವೈಟ್ ಹೆಡ್ಡನ ತತ್ತ್ವಗಳೂ ಶ್ರೀರಾಮಾನುಜರ ವಿಚಾರಗಳೂಗಳೂ ಸರಿಹೊಂದುವುವೋ ಹೇಗೆಂಬ ವಿಚಾರಕ್ಕೆ ಸುಮಾರು ೨೦ ವರ್ಷಗಳಿಂದಲೂ ನಮಗೂ ಇವರಿಗೂ ವಿಸ್ತಾರ ಚರ್ಚೆ ನಡೆಯುತ್ತಿರುವುದು ಬೇರೆ ವಿಚಾರ. ಈ ಗ್ರಂಥಮಾಲೆಗೆ ಅದು ಪ್ರಾಸಂಗಿಕಮಾತ್ರ, ಪ್ರಧಾನವಲ್ಲ. ದೇವರು ಜಗತ್ತಿನೊಡನೆ ಅವಿನಾಭಾವದ ಸಂಬಂಧವನ್ನು ಹೊಂದಿರುವನೋ, ಇದು ಏಕಮುಖವೋ ದ್ವಿಮುಖವೋ ? ಎಂಬುದನ್ನು ನಮ್ಮ ಸಂಪುಟದ ಲನೆಯ ಸಂಪುಟದಲ್ಲಿ ಕೊನೆಯ ಅಧ್ಯಾಯದಲ್ಲಿ ಚರ್ಚಿಸಿರುವ (ಅವತಾರ

ತತ್ತ್ವವಿವೇಚನೆಯ) ಸಂದರ್ಭದಲ್ಲಿ ಈ ವಿಚಾರವನ್ನು ಎತ್ತಿ ನಮ್ಮ ನಿರೂಪಣೆಯ ಬಗೆಗೆ ತಮ್ಮ ಅಸಮ್ಮತಿಯನ್ನು ಸೂಚಿಸಿರುತ್ತಾರೆ. ಒಳ್ಳೆಯದು. ಅವರ ಅಭಿಪ್ರಾಯ ಅವರಿಗಿದ್ದೇ ಇದೆ. ಉಳಿದ ವಾಚಕರೂ ತಮ್ಮ ದೃಷ್ಟಿಯಲ್ಲಿ ಅದನ್ನು ವಿವೇಚಿಸಲಿ.

ಇದೇ ಗ್ರಂಥಮಾಲೆಯನ್ನು ಆಂಗ್ಲಭಾಷೆಯಲ್ಲಿ ಬರೆಯುವಾಗ, ಬೇರೊಂದು ಮನಃಸ್ಥಿತಿಯಿರುವ, ಆಂಗ್ಲೀಕೃತವ ನಸ್ಕರಾದ ಭಾರತೀಯರಿಗಾಗಿಯೂ, ಹೊರಗಿನವರಿಗಾಗಿಯೂ ಬರೆಯಬೇಕಾದ್ದರಿಂದ ಆ ಪುಸ್ತಕಗಳ ಭಾಷೆಯೂ, ಶೈಲಿಯೂ, ವಿಚಾರ ವಿಮರ್ಶೆಯ ರೀತಿಯೂ ಬೇರೆಯೇ ಆಗುವುದೆಂದೂ ಇವರಿಗೆ ಬರೆದು ತಳಿಸಿದ್ದೇನೆ.

ಈ ಉತ್ತರವನ್ನೊಳಗೊಂಡ ನಮ್ಮ ಪತ್ರಕ್ಕೆ ಈ ಹಿರಿಯರು ತಮ್ಮ (೨೬-೩-೮೩) ಪತ್ರದಲ್ಲಿ "I am in receipt of your letter, which owing to my linguistic dificiency, I can describe only as extremely 'good natured'" ಎಂದು ಬರೆದು ಈ ಕೆಳಕಂಡ ಮಂಗಳಾ ಶಾಸನವನ್ನು ಮಾಡಿದ್ದಾರೆ:

"I have given a second reading to your book. It crowns all you have brought out in your series, and it touches deeply my own religious concern. And the labour and inspired exposition carries me off my feet. ...Let me conclude you have produced a splendid piece of work, at once spirited, enormously scholarly, and deadly in polemics Backed as you are by all these resources, you can hardly be refuted. But the pity of it all is that you can not even be competently admired."

ಮತ್ತೆ ೩೦-೬-೮೩ರ ಪತ್ರದಲ್ಲಿ "I have your long letter, containing an immense quantum of matter and also full of grace" ಎಂದು ಬರೆದು "I fully accept your explanation of the minor oddities" ಎಂದು ಮುಗಿಸಿದ್ದಾರೆ.

ಈ ಮಹನೀಯರ ಬಗೆಗೆ ಲೇಖಕನಿಗೆ ಅತ್ಯಂತ ಪೂಜ್ಯ ಭಾವನೆಯಿರುವುದರಿಂದ ಅವರ ಅಭಿಪ್ರಾಯಗಳಿಗೆ ಇಷ್ಟೊಂದು ಬೆಲೆಕೊಟ್ಟು, ಕೆಲವಕ್ಕೆ ಸಮಾಧಾನ, ವಿವರಣೆಗಳನ್ನು ಬರೆಯುವುದವಶ್ಯವಾಯಿತು.

ಮೊದಮೊದಲಿನ ನಮ್ಮ ಗ್ರಂಥಗಳಲ್ಲೂ ಪಾಶ್ಚಾತ್ಯರ ಅಭಿಪ್ರಾಯಗಳನ್ನು ನಾವು ಟೀಕಿಸಿರುವುದನ್ನು ಇವರು "ನಿನ್ನ ಈ ಪಟಾಕ್ಷಿ ಹೊಡೆಯುವ ಕೆಲಸವನ್ನು ಸಾಕುಮಾಡಿ, ಮಂಡನೀಯ ವಿಚಾರಗಳನ್ನು ಮಂಡಿಸು, ಸಾಕು." ಎಂದೂ ಬರೆದಿದ್ದರು. ಇದು ಒಂದುರೀತಿಯ ಅಪೇಕ್ಷೆ. ವಿಮರ್ಶೆ ಬೇಕೆಂಬುದು ಇನ್ನೊಂದು ಅಪೇಕ್ಷೆ. ವಾಚಕರ ದೃಷ್ಟಿಯಲ್ಲಿ ಎರಡೂ ಇವೆಯೆಂಬುದನ್ನು ಈ ಪತ್ರಗಳು ತೋರಿಸುತ್ತವೆ.

### "ಸಮೀಕ್ಷಕ"ರೊಬ್ಬರ ಆಕ್ಷೇಪಕ್ಕೆ ಆದೇ ಪತ್ರಿಕೆಯಲ್ಲಿ ಅಪ್ರಕಟಿತ ವಾದ ನಮ್ಮ ಉತ್ತರ !

ಕೊನೆಯದಾಗಿ ನಮ್ಮ ಗ್ರಂಥದ ೮ನೇ ಸಂಪುಟದ ವಿಮರ್ಶೆಯ ಹೆಸರಿನಲ್ಲಿ ತಮ್ಮ ಹೃದಯದಲ್ಲಿರುವ ವಿಷವನ್ನೇ ಕಕ್ಕಿದಂತೆ ಬರೆದಿರುವ ಒಬ್ಬ ಮಿತ್ರರ ಕೆಲವು ಮಾತುಗಳಿಗೆ ಇಲ್ಲಿ ಉತ್ತರಿಸಬೇಕಾಗುವುದು ಅನಿವಾರ್ಯವಾಗಿದೆ. ಇವರು ನಮ್ಮ ಪರಮಾಪ್ತ ಮಿತ್ರರ ವರ್ಗಕ್ಕೆ ಸೇರಿದವರಾಗಿದ್ದರೂ, ಈ ಮಹನೀಯರ 'ವಿಮರ್ಶೆ'ಯ ಹಿನ್ನೆಲೆ ನಮಗೆ ಅರ್ಥವಾಗಿಲ್ಲ. (ಈ ವಿಮರ್ಶೆ ಹೊರಬಂದುದು ೨೨–೧೧–೮೩ ರ 'ಸಂಯುಕ್ತ ಕರ್ನಾಟಕ' ಹುಬ್ಬಳ್ಳಿಯ ಸಂಚಿಕೆಯಲ್ಲಿ. 'ವಿಮರ್ಶ'ಕರು : ಡಾ. ದ. ನ. ಶಾನಭಾಗ, ಸಂಸ್ಕೃತ ವಿಭಾಗದಲ್ಲಿ ಆಗ ಪ್ರಾಧ್ಯಾಪಕರು, ಈಗ ಮುಖ್ಯಸ್ಥರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.) ಈ 'ಸಮೀಕ್ಷೆಗೆ'ಗೆ ಲೇಖಕರ ಪ್ರತಿಕ್ರಿಯೆಯೊಂದನ್ನು ಅಂದೇ ಬರೆದು ಕಳುಹಿದರೂ, ಪತ್ರಿಕೆಯವರು ಅದನ್ನು ಪ್ರಕಟಿಸುವ ಕೃಪೆಮಾಡಲಿಲ್ಲವಾಗಿ, ಆ ಸಮೀಕ್ಷೆಯನ್ನೂ, ನಮ್ಮ ಉತ್ತರವನ್ನೂ, ಸಂಗ್ರಹಿಸಿ, ಓದುಗರ ಮುಂದಿಟ್ಟು ಯಾವುದು ಸರಿಯೆಂದು ತೀರ್ಮಾನಿಸಿಕೊಳ್ಳುವ ಹಕ್ಕನ್ನು ಅವರಿಗೇ ಬಿಡ

ಲಾಗಿದೆ.

'ಸಮೀಕ್ಷೆ'ಯ ಆರಂಭದ ಪ್ಯಾರಾದಲ್ಲಿನ ಒಂದೆರಡು ಮಾತುಗಳನ್ನು ಬಿಟ್ಟರೆ, ಸಮೀಕ್ಷಕರು ಗ್ರಂಥದ ಪ್ರಧಾನ ಪ್ರಮೇಯದ ಬಗೆಗಾಗಲೀ, ಅದನ್ನು ಅಲ್ಲಿ ನಿರೂಪಿಸಿರುವ ಬಗೆಗಾಗಲೀ, ಅಲ್ಲಿ ಬಂದಿರುವ ಹಲವಾರು ಅಪೂರ್ವ ವಿಷಯಗಳ ಬಗೆಗಾಗಲೀ, ಯಾವುದೊಂದು ವಿಶೇಷವಾದ, ವಿಚಾರಪೂರಿತವಾದ ವಿಮರ್ಶೆಯನ್ನೂ ಮಾಡದೆ, ವಿಷಯಾನುಕ್ರಮಣಿಕೆ ಯನ್ನು ನೋಡಿಯೇ ಯಾರೊಬ್ಬರೂ ಬರೆಯಬಹುದಾದ ರೀತಿಯಲ್ಲಿ ಗ್ರಂಥವನ್ನು ಸಂಗ್ರಹಿಸಿ, ಮುದ್ರಣ ದೋಷಗಳ ಬಗೆಗೂ, ಬಸವಣ್ಣನವರ ವಚನಗಳನ್ನು ಇಲ್ಲೇಕೆ ಉದಾಹರಿಸಲಿಲ್ಲವೆಂಬ ಆಕ್ಷೇಪವೆತ್ತಿಯೂ ಇಂಥ ಕ್ಷುಲ್ಲಕ, ಅಪ್ರಸಕ್ತ ಆಕ್ಷೇಪಗಳನ್ನೇ ತಮ್ಮ ಸಮೀಕ್ಷೆಯಲ್ಲಿ ತುಂಬಿರುವುದು ಆಶ್ಚರ್ಯಕರವಾಗಿದೆ!

ಗ್ರಂಥ ಶರೀರದಲ್ಲಿ ಬಂದಿರುವ ಯಾವೊಂದು ಮಂತ್ರಾರ್ಥ ವಿವ ರಣೆಯ ಬಗೆಗೂ ಗುಣ-ದೋಷ ಹೇಳದೆ, ನಿರೂಪಣೆ, ಶೈಲಿ, ಗ್ರಂಥ ಮತ್ತು ಈ ಮಾಲೆಯ ಪ್ರಧಾನೋದ್ದೇಶ್ಯವನ್ನೂ ಪರಿಗಣಿಸದೆ, ಒಂದೇ ಒಂದು ಒಳ್ಳೆಯ ಮಾತನ್ನೂ ಆಡಲು ಎಲ್ಲೂ ಇವರು ಅವಕಾಶವನ್ನೇ ಕಾಣಲಿಲ್ಲವೆಂದು ಕಾಣುತ್ತದೆ !

'ಲೇಖಕ ಪ್ರಕಾಶಕರ ವಿಜ್ಞಾಪನೆ'ಯೆಂಬ ಗ್ರಂಥಶರೀರದ ಹೊರಗಿನ ಭಾಗವೊಂದರಲ್ಲೂ, ಕೊನೆಯ 'ಉಪಸಂಹಾರ' ಭಾಗದಲ್ಲೂ, ನಾನು ಈ ಗ್ರಂಥಕ್ಕೆ ಮೂಲ ಪ್ರೇರಣೆಯು ಹೇಗೆ ಬಾಲ್ಯದಿಂದಲೂ, ಅಥವಾ ಮಾತೃ ಗರ್ಭಸ್ಥನಾಗಿದ್ದಾಗಲೂ, ನನಗೆ ಗುರುಕರುಣೆಯಿಂದ ಬಂದಿತೆಂಬುದನ್ನು ಬರೆದು ಕೊಂಡಿರುವುದನ್ನಷ್ಟೇ ಆಕ್ಷೇಪಿಸಿದ್ದಾರೆ. ಇದು ವಿಮರ್ಶಾರ್ಹವಾದ ವಿಷ ಯವೇ ! ನನ್ನ ಮೇಲೆ ಗುರುಕರುಣೆಯಾಯಿತೆಂಬುದನ್ನು ಇವರು ನಂಬಿ ದರೂ ನಂಬದಿದ್ದರೂ ನನಗೇನೂ ನಷ್ಟವಿಲ್ಲ !! ವಿಷ್ಣುಭಗವಂತನ ಮಹಿ ಮೆಯು ನನ್ನನ್ನು ಎಂದು ಗುರುಕರುಣಾಪೂರ್ವಕ, ಹೊಕ್ಕಿತೆಂದು ನಾನು ಬರೆದುಕೊಂಡದ್ದು ಧನ್ಯಭಾವದಿಂದಲೂ, ಗುರುಕಟಾಕ್ಷಮಹಿಮೆಯನ್ನು ಸ್ಮರಿ

ಸುವ ಕೃತಜ್ಞ ಭಾವದಿಂದಲೂ ಮಾತ್ರವೇ ಹೊರತು, ನಾನು ದೊಡ್ಡವನೆಂದು ತೋರಿಸಿಕೊಳ್ಳಲು ಅಲ್ಲ: "ಇದರಲ್ಲಿ ನನ್ನ ಯೋಗ್ಯತೆ ಏನೂ ಇಲ್ಲ; ಇದ್ದಿದ್ದರೆ ನನಗೆ ಇದೆಲ್ಲ ಆಶ್ಚರ್ಯವಾಗುತ್ತಿರಲಿಲ್ಲ! ಆದುದರಿಂದ ಈ ವಿವರಣೆಯಲ್ಲಿ ತಾವು ನನ್ನ ದೊಡ್ಡತನವನ್ನೇನೂ ಕಾಣತಕ್ಕದ್ದಲ್ಲ ...... ಅಯೋಗ್ಯನಾದ, ಅಪಾತ್ರನಾದ ನನ್ನನ್ನು ಈ ಕೈಂಕರ್ಯಕ್ಕೆ ದೇವರು ಏಕೆ ಆರಿಸಿಕೊಂಡನೆಂದು ಹೇಗೆ ಉತ್ತರಿಸಲಿ?" (ಪುಟ ೧೭) ಎಂದು ಅಲ್ಲೇ ಬರೆದಿರುವುದೂ ಇವರ ಕಣ್ಣಿಗೆ ಬಿದ್ದಿಲ್ಲ!! (ದುರದೃಷ್ಟ ನನ್ನದೇ.) ಈಗಲೂ ನಾನು ಈ ಗ್ರಂಥಮಾಲಾ ರಚನೆಗೆ ಅಯೋಗ್ಯನೂ ಅಪಾತ್ರನೂ ಆಗಿರುವನೆಂದೇ ನಂಬಿದ್ದರೂ, ಯಾವುದೋ ಒಂದು ದಿವ್ಯಶಕ್ತಿಯು ಹಿನ್ನಲೆ ನನ್ನ ಬೆನ್ನಿಗಿರುವ ಅನುಭವ ನನಗಾಗುತ್ತಲೇ ಇದೆ. ದೇವರನ್ನೇ ನಂಬ ದಿರುವವರಿಗೆ, ಆಸ್ತಿಕರು ಹೇಳುವುದೆಲ್ಲ ವಿಶ್ವಾಸಾತೀತ ಪವಾಡವೆನಿಸಿದಂತೆ, ನನ್ನ ಬಾಲ್ಯಾನುಭವಗಳು ಆ ಬಗೆಯ ಅನುಭವವಾದವರಿಗೆ ಮಾತ್ರ ವಿಶ್ವಾಸಾರ್ಹಗಳಾದಾವು! ಇದನ್ನು ನಾನು ಬರೆದದ್ದು ಆ ದಿವ್ಯ ಅಗೋ ಚರ ಶಕ್ತಿಯ ಮಹಿಮೆಯಲ್ಲಿ ವಿಶ್ವಾಸದಿಂದ, ಧನ್ಯತೆಯಿಂದ ಮಾತ್ರ. ಈ ಶಕ್ತಿ ನನ್ನ ಬೆನ್ನಿಗಿರುವ ಅನುಭವವಿದ್ದರೂ, "ನಾನು ಬರೆದುದೆಲ್ಲ ಸರಿಯೆಂದು ಇದರರ್ಥವಲ್ಲ; ನ್ಯೂನಾತಿರೇಕಗಳು ಖಂಡಿತ ನನ್ನವೇ; ಮಾನು ಷ್ಯಪ್ರಜ್ಞೆಯ ಮಿತಿ ಇಲ್ಲಿ ಕಾಣುತ್ತದೆ. ಇದಕ್ಕೆ ಹೊರತಾದ ದಿವ್ಯ ಪ್ರಕಾ ಶವು ಇಲ್ಲಿ ಮಿಂಚುವಂತಿದ್ದರೆ, ಅದಕ್ಕೆ ಗುರುಕರುಣೆ, ದೈವ ಕೃಪೆಗಳೇ ಕಾರಣವಾಗಿದ್ದು, ಈ ಮೂಲಗಳೇ, ಆ ಸಿದ್ಧತೆಯನ್ನು ದಾಸನಲ್ಲಿ ಮಾಡಿ ಕೊಂಡು ತಾವೇ ಅಭಿವ್ಯಕ್ತವಾಗಿವೆ ಎಂದು ದೃಢವಾಗಿ ನಂಬಿದ್ದೇನೆ." (ಪುಟ ೧೭) ಎಂದೂ ಅಲ್ಲಿಯೇ ಬರೆದಿದ್ದೇನೆ. ಇದಾವುದನ್ನೂ ಓದ ದೆಯೋ, ಓದಿದರೂ ಸರಿಯಾಗಿ ತಿಳಿದುಕೊಳ್ಳದೆ, ತಿಳಿದಷ್ಟರಲ್ಲಿ ಸಂದರ್ಭ ಗಳನ್ನು ಸರಿಯಾಗಿ ಉದಾಹರಿಸದೆಯೇ, ಓದುಗರಿಗೆ ವಿವಂಚನೆ ಮಾಡು ವಂತೆ ಇವರು ಬರೆದಿರುವುದೇನೆಂದರೆ, ನಾವು "ಸ್ವಪ್ರಶಂಸೆ, ಪರನಿಂದೆ" ಗಳಲ್ಲಿ ಮಾತ್ರ ಇಲ್ಲಿ ತೊಡಗಿದ್ದೇವೆಂದು ಬೀಸಿ ಆರೋಪಿಸಿದ್ದಾರೆ! ಇದು ಕಣ್ಣಿದ್ದೂ ಕುರುಡುತನಕ್ಕಲ್ಲದೆ ಬೇರಾವುದಕ್ಕೆ ಸಾಕ್ಷಿಯೋ, ವಾಚಕರೇ

ತೀರ್ಮಾನಿಸಲಿ !

ಇವರ ಸೋದರ ವರ್ಗಕ್ಕೆ ಸೇರಿದವರೊಬ್ಬರು ಹಿಂದೆ ಭಗವದ್ಗೀತಾ ಪ್ರವಚನವೊಂದನ್ನು ಕೇಳಿ ಮಾಡಿದ ಆಕ್ಷೇಪದ ಕಥೆಯೊಂದು ನೆನಪಿಗೆ ಬರುತ್ತದೆ. ಶ್ರೀಕೃಷ್ಣದ್ವೇಷದಲ್ಲೂ, ಗೀತಾದ್ವೇಷದಲ್ಲೂ ಮುಳುಗಿ ತೇಲಿದ್ದ ಮಹನೀಯನೊಬ್ಬನನ್ನು ಆಸ್ತಿಕ ಸ್ನೇಹಿತ ಒಂದು ದಿನ ಗೀತಾ ಪ್ರವಚನಕ್ಕೆ ಬಲಾತ್ಕಾರವಾಗಿ ಕರೆದೊಯ್ದನಂತೆ ! ಅಂದು ಪ್ರಮೇಯವೇನಿತ್ತೆಂದರೆ :

,, ಮತ್ತಃ ಪರತರಂ ನಾಸ್ತಿ ಕಿಂಚಿದಸ್ತಿ ಧನಂಜಯ ''
,,ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ''

ಉಪನ್ಯಾಸಕರು ಅದ್ಭುತವಾಗಿ ಇದನ್ನು ವರ್ಣಿಸಿದಷ್ಟೂ ಆ ನಾಸ್ತಿಕ ಮಹಾಶಯನಿಗೆ ವಿಪರೀತಾರ್ಥವೇ ಆಯಿತು. ಹೊರಬರುತ್ತಾ ಆಸ್ತಿಕ ಮಿತ್ರನು ತನ್ನ ನಾಸ್ತಿಕ ಮಿತ್ರನಲ್ಲಿ ಪರಿವರ್ತನೆಯಾಗಿದ್ದೀತೆಂದು ನಿರೀಕ್ಷಿಸಿ, "ಹೇಗಿತ್ತು, ಇಂದಿನ ಉಪನ್ಯಾಸ !" ಎಂದು ಕೇಳಿದನಂತೆ. ನಾಸ್ತಿಕ ಹೇಳುತ್ತಾನೆ : "ನಿನ್ನ ಗೀತೆ ಹೇಗಿದೆಯೆಂದು ಇಂದು ತಿಳಿಯಿತಪ್ಪಾ ! ಅದರಲ್ಲಿರುವುದೆಲ್ಲ ಸ್ವಪ್ರಶಂಸೆ ಮಾತ್ರವೇ" ಎಂದಾಗ ಆಸ್ತಿಕ ಬೆಪ್ಪಾದನಂತೆ ! ಇನ್ನಷ್ಟುದಿನ ಬಿಟ್ಟು, ಮತ್ತೊಮ್ಮೆ "ಇಂದಾದರೂ ಬಾ, ಮನಸ್ಸು ಬದಲಾಗಲಿ" ಎಂದು ಕರೆದೊಯ್ದ. ಅಂದಿನ ಪ್ರಮೇಯ ಹೀಗಿತ್ತು ।

ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।
ಪ್ರಭವಂತ್ಯುಗ್ರಕರ್ಮಾಣೋ ಕ್ಷಯಾದಿಜಗತೋಽಹಿತಾಃ॥
ಮೋಘಾಶಾಃ, ಮೋಘಕರ್ಮಾಣೋ, ಮೋಘಜ್ಞಾನಾ
ವಿಚೇತಸಃ ।......ಇತ್ಯಾದಿ

ಉಪನ್ಯಾಸಕರು ಮತ್ತಷ್ಟು ಅದ್ಭುತವಾಗಿ ಇದನ್ನೆಲ್ಲ ವಿವರಿಸಿದರು. ಮಿತ್ರ ಮತ್ತೆ ಕೇಳಿದ ! "ಹೇಗಿತ್ತು !" ನಾಸ್ತಿಕ ಹೇಳುತ್ತಾನೆ : "ಅಂದು

ಸ್ವಪ್ರಶಂಸೆ, ಇದು ಪರನಿಂದೆ. ನಿನ್ನ ಗೀತೆಯಲ್ಲಿ ತುಂಬಿರುವುದೆಲ್ಲ ಇವೆರಡೇ. ನನಗೆ ಮೊದಲೇ ಗೊತ್ತಿತ್ತು. ಅದಕ್ಕೇ ಬರುತ್ತಿರಲಿಲ್ಲ !!" ಎಂದು, ಆಸ್ತಿಕ ಇವನನ್ನು ಮಿತ್ರನನ್ನಾಗಿ ಪಡೆದು ಪರಿತಪಿಸಿದಂತೆ ! ಗೀತಾಚಾರ್ಯ ನಿಗೇ ಈ ಬಿರುದುಗಳನ್ನು ಹೊದಿಸಿದವರಿರುವಾಗ, ನಮ್ಮ ಅನುಭವ ಶೋಚ ನೀಯವಲ್ಲ : ಇಂಥ ವಿಮರ್ಶಕರು ನಿರಸನಾರ್ಹರಲ್ಲವೆಂದೂ, ಶೋಚನೀಯ ರೆಂದೂ, ಹಿರಿಯರು ಎಂದೋ ಬರೆದಿದ್ದಾರೆ ! 'ನಿಂದಕರು ಇರಬೇಕು' ಎಂದು ದಾಸರೂ ಹೇಳಿದ್ದಾರೆ. ನಮಗೆ ಸೃಜನಾತ್ಮಕ ವಿಮರ್ಶೆ ಖಂಡಿತ ಬೇಕು: ಗ್ರಂಥಗಳಲ್ಲಿ ಲೋಪದೋಷ ಇರುವುದು ಸಹಜ. ಅದನ್ನು ಹೇಳು ವುದನ್ನು ಬಿಟ್ಟು ಗ್ರಂಥಾತೀತ ವಿಷಯದಲ್ಲಿ, ವೈಯಕ್ತಿಕ ಅನುಭವದಲ್ಲಿ ಇವರು ಕೈಹಾಕುವುದಕ್ಕೇಕೆ ? ದುರುದ್ದೇಶ್ಯವೋ, ಅಸೂಯೆಯೋ, ಅಸಹನೆಯೋ ಮಾತ್ರವೇ ಇದಕ್ಕೆ ಮೂಲವಾಗಿರಬೇಕಲ್ಲವೆ ?

ಗ್ರಂಥದಲ್ಲಿ ಪಾಶ್ಚಾತ್ಯ, ಪೌರಸ್ತ್ಯ 'ವಿಮರ್ಶಕ'ರ ಅಪಚಾರಗಳನ್ನೂ ದುರುದ್ದೇಶ್ಯಗಳನ್ನೂ ನಾವು ಬಯಲಿಗೆಳೆದುದೆಲ್ಲ ಇವರಿಗೆ 'ಪರನಿಂದೆ'ಯಾಗಿ ಕಾಣುತ್ತದೆ ! ವೇದಗಳನ್ನು ಕೀಳು ಭಾವನೆಯಿಂದ ಕಂಡು, ಟೀಕಿಸಿ, ವೈದಿಕ ಧರ್ಮವನ್ನು ಬುಡಮೇಲಾಗಿ ಮಾಡುವ ಉದ್ದೇಶದಿಂದ ಹೊರಟ ಇವರನ್ನು ನಾವು ಹೊಗಳಬೇಕಾಗಿತ್ತೇ ? ಉಪೇಕ್ಷಿಸಬೇಕಾಗಿತ್ತೇ ! ಅವರ ದೋಷ ಪೂರಿತ ಪದ್ಧತಿಯನ್ನೂ, ಹೃದಯದ ವಿಷವನ್ನೂ ಹೊರತೆಗೆದ ನಮ್ಮನ್ನು ಅಭಿನಂದಿಸುವ ಬದಲು, ನಮ್ಮನ್ನೇ 'ಪರನಿಂದಕರೆಂದು ಕರೆದಿರುವ ಇವರಿಗೆ ಹಿಂದೂಧರ್ಮಾಭಿಮಾನವಿದೆಯೇ ? ( ಹಿಂದೂ ಸಂಸ್ಥೆಯೊಂದರ ಕಾರ್ಯ ನಿರ್ವಾಹಕರೂ ಆದಿರುವ ಇವರ ಬಗೆಗೆ ಈ ಪ್ರಶ್ನೆ ತುಂಬ ಉಚಿತವೂ ಆಗು ತ್ತದೆ.) ಆತ್ಮಗೌರವವಿರುವ ಯಾವನೊಬ್ಬ ಹಿಂದುವೂ ಕುದಿದೇಳಬೇಕಾದ, ಸ್ವಾಭಿಮಾನದ ಪ್ರಶ್ನೆ ಇದು.

.......

ಈ 'ಪರನಿಂದೆ'ಗಳನ್ನೂ 'ಸ್ವಪ್ರಶಂಸೆ'ಯನ್ನೂ ಯಾವುದೋ ದಿವ್ಯ ಶಕ್ತಿಯು ಕೈಹಿಡಿದು ಬರೆಸಿತೆಂದು ನಂಬುವುದು ಕಷ್ಟವೆಂದೂ, "ಇದೆಲ್ಲ ಇವರಿಗೆ ತಾಯಿಯ ಗರ್ಭದಲ್ಲೇ ಸಿದ್ಧತೆಯಾಯಿತಂತೆ !" ಎಂದು ಅಣಕ

ಮಾಡಿಯೂ ಬರೆದಿರುವ ಇವರ ಗುರಿ ನಮ್ಮ ಇಡೀ ಪ್ರಯತ್ನವನ್ನೇ ಅಪಹಾಸ್ಯ ಮಾಡುವುದೇ ಎಂದು ಕಾಣುತ್ತದೆ! ಗ್ರಂಥವಿಮರ್ಶೆಯಲ್ಲ!! ಅಣಕಕ್ಕೆ ಏನುತ್ತರ ನೀಡೋಣ! ಅವರನ್ನು ನಾವೂ ಅಣಕವಾಡಬೇಕಾದೀತು! ಆಂಗ್ಲಭಾಷೆಯ ಗಂಧವೇ ಇಲ್ಲದ ಇವರು ಆಂಗ್ಲದಲ್ಲಿ ಮಾತಾಡುವ ಸೊಗಸನ್ನು (Suppose if..., very must,... ಇತ್ಯಾದಿ) ಕೇಳಿಯೇ ಆನಂದಿಸಬೇಕಷ್ಟೇ! ಸಂಸ್ಕೃತದ ಪ್ರಾಧ್ಯಾಪಕರಾದ ಇವರಿಗೆ ಸಂಸ್ಕೃತವೂ ಸಹ ಬಂದಂತಿಲ್ಲ. ಮುದ್ರಣದೋಷಗಳ ಪಟ್ಟಿಯನ್ನು ಸೇರಿಸದ ಮಾತ್ರದಲ್ಲಿ ನಾವು 'ಸೌಜನ್ಯ'ರಹಿತರೆಂದು ಆರೋಪಿಸಿದ್ದಾರೆ. 'ದುರ್ಜನ–ಸುಜನ' ಭೇದವೂ ತಿಳಿಯದವರು ಯಾವುದು ಸೌಜನ್ಯ, ಯಾವುದಲ್ಲ ಎಂದು ಬರೆಯುವುದೇ ಸಾಹಸ!

ಬಸವಣ್ಣನವರ ವಚನಗಳ ಉದಾಹರಣೆಯನ್ನು ವೇದಗ್ರಂಥಗಳ ವಿವೇಚನೆಯ ಹೃದಯದಲ್ಲಿ ನಿರೀಕ್ಷಿಸುವ ಇವರಿಗೆ ವೇದಗಳ ಬಗೆಗೆ ಜ್ಞಾನವೆಷ್ಟು ಎಂಬುದನ್ನು ತೋರಿಸುವುದಲ್ಲದೆ. ಇವರ ಮೂಲಪ್ರವೃತ್ತಿಯೇ ಈ ಬಗೆಯ ಕ್ಷುಲ್ಲಕ ರಾಜಕೀಯಾತ್ಮಕ ಗೊಂದಲಗಳನ್ನೂ, ದ್ವೇಷಗಳನ್ನೂ ಪಂಗಡ ಪಂಗಡಗಳಲ್ಲಿ ಎಬ್ಬಿಸುವುದೆಂದೂ ತೋರಿಸುತ್ತದೆ.

ಮಂತ್ರಾರ್ಥಗಳ ವಿವರಣೆಯಲ್ಲಿ ನಾವು ಹಿಡಿದಿರುವುದು ವೇದಗಳಿಗೆ ಗೌರವತರುವ ಮಾರ್ಗ. 'ವೇದಗಳಲ್ಲಿ ನಿಗೂಢ ತತ್ತ್ವಗಳು ಅಡಗಿವೆ' ಎಂದು ನಾವು ದೃಢವಾಗಿ ನಂಬಿದವರು. "ಅದು ಹಾಗಿಲ್ಲ" ಎಂದು ಯಾರೇ ಬರೆದರೂ, ನಮ್ಮವರೋ, ಹೊರಗಿನವರೋ, —ಯಾರೇ ಆಗಲಿ— ಅವರು ನಮ್ಮ ಟೀಕೆಗೊಳಗಾಗುವವರು— ಮತ್ತು ಸಪ್ರಮಾಣವಾಗಿ; ಬರಿಯ ಆಗ್ರಹದಿಂದಲ್ಲ. ಹೀಗಿರುವಾಗ, ನಮಗೆ ಒಪ್ಪಿಗೆಯಾದವರನ್ನೆಲ್ಲ ನಾವು ಪ್ರಶಂಸಾರ್ಹರೆಂದು ಹೊಗಳಿದ್ದೇವೆಂದೂ, ಒಪ್ಪಿಗೆಯಾಗದವರೆಲ್ಲ "ಕಡು ನಿಂದೆಗೆ ಪಾತ್ರ"ರೆಂದೂ ಇವರು ಬರೆದುದು ನಿರಾಧಾರ. ಅವರೇ ತೋರಿಸಿದ ಉದಾಹರಣೆಗಳೇ ಇವಕ್ಕೆ ಸಾಕ್ಷಿ. ಕೀಥ್ ಪಂಡಿತನನ್ನೇ ಒಮ್ಮೆ ಮೆಚ್ಚಿಯೂ ಮತ್ತೆ ಟೀಕಿಸಿಯೂ ಮುಂತಾಗಿ ಮಾಡಿರುವುದನ್ನು ಅವರೇ ತೋರಿಸಿರುವ

ಪ್ರಸಂಗಗಳಲ್ಲಿ ಬೇರೇನು ಕಾಣಬಂದೀತು? ಒಬ್ಬನೇ ಸರಿಯಾಗಿ ಬರೆದಾಗ ಪ್ರಶಂಸನೀಯನೆಂದೂ, ಹಾಗೆ ಮಾಡದಾಗ ಟೀಕಾರ್ಹನೆಂದೂ ಸಿದ್ಧವಾದರೆ, ನಮ್ಮ ದೃಷ್ಟಿ ನಿಷ್ಪಕ್ಷಪಾತವಾದದ್ದೆಂದು ಕಾಣಲಾರದೆ? ಗ್ರಾಹ್ಯಾಗ್ರಾಹ್ಯತೆಗೆ ಆಧಾರ ನಾವು ಒಪ್ಪಿದವೆಂದಲ್ಲ; ಅವು ವೇದಕ್ಕೆ ಗೌರವ ತರುವಂಥ ಅರ್ಥವೇ ಅಲ್ಲವೇ ಎಂದು ಮಾತ್ರ. ಹಾಗೆ ಗೌರವ ತಂದ ಹೊರಗಿನವರೂ ಉಂಟು; ಅಗೌರವ ಮಾಡಲೆಳೆಸಿದ 'ನಮ್ಮವರೂ' ಉಂಟು. ಉದಾಹರಣೆಗೆ ನಮ್ಮ ಗ್ರಂಥದ ಪುಟ ೩೬೦ ರಲ್ಲಿ ನಾವು ವ್ಯಾನ್ ಬ್ಯೂಟೆನಿನ್ ಎಂಬವನ ಗ್ರಂಥವೊಂದರ, ಅಭಿಪ್ರಾಯವೊಂದರ ಪ್ರಸ್ತಾಪ ಮಾಡಿರುವುದನ್ನು ಮೂಲ ಪ್ರಸಂಗ ವಿವರಿಸದೆಯೇ, ಈ 'ಸಮೀಕ್ಷಕ'ರು, ಓದುಗರನ್ನು ವಂಚಿಸಿ, ತಪ್ಪು ದಾರಿಗೆಳೆಯುವಂತೆ ಉಲ್ಲೇಖಿಸಿದ್ದಾರೆ. ಇದು ಡಾ. ಸರ್ವಪಲ್ಲಿ ರಾಧಾಕೃಷ್ಣನ್ ಅವರು ತಮ್ಮ Indian Philosophy (Vol- II, p. 720) ಎಂಬ ಗ್ರಂಥದಲ್ಲಿ ಶ್ರೀ ರಾಮಾನುಜರ ಬಗೆಗೆ ಅಸಭ್ಯವಾಗಿ, ಕೊಂಕು ಮಾತಿನಲ್ಲಿ ಅಣಕವಾಡಿದ ಟೀಕೆಗೆ ವ್ಯಾನ್ ಬ್ಯೂಟೆನಿನ್ನನ ಉತ್ತರದ ಪ್ರಸಂಗ. ಗ್ರಂಥಮೂಲದಲ್ಲಿ 'ವಿಷ್ಣುಪದ'ವೆಂಬ ವೈಕುಂಠ ಲೋಕದ ಸತ್ಯಾಸತ್ಯತೆಯನ್ನು ವೈದಿಕ ಮಂತ್ರಾಧಾರಗಳಿಂದ ವಿವರಿಸುವ ಪ್ರಸಂಗದಲ್ಲಿ, ಇಂಥ ಲೋಕದ ವರ್ಣನೆಯನ್ನು ಶ್ರೀ ರಾಮಾನುಜರು ಮಾಡಿರುವುದನ್ನು ಡಾ. ರಾಧಾಕೃಷ್ಣನ್ ಅವರು, ವಿದ್ವಾಂಸರಿಗೆ ಸಲ್ಲದ, (ನಾಸ್ತಿಕರನ್ನು ಮೆಚ್ಚಿಸಹೊರಟ) ರೀತಿಯಲ್ಲಿ ಅಪಹಾಸ್ಯ ಮಾಡಿರುವುದನ್ನು ಎತ್ತಿತೋರಿಸಿ, ಅದಕ್ಕೆ ಬ್ಯೂಟೆನಿನ್ನನ ಉತ್ತರವನ್ನು ತೋರಿಸಿ, ೧) ರಾಧಾಕೃಷ್ಣನ್ ಅವರ ಅಪ್ರಾಮಾಣಿಕತೆಯನ್ನೂ, ೨) ಬ್ಯೂಟೆನಿನ್ನನ ಪ್ರಾಮಾಣಿಕತೆಯನ್ನೂ ತೋರಿಸಿದರೆ, ಇದರಲ್ಲಿ ನನ್ನ ಸ್ವಾರ್ಥವೇನು? ಇಬ್ಬರ ವಾಕ್ಯಗಳನ್ನೂ ನೋಡಿ :

1) Ramanuja's beautiful stories of the other world, which he narrates with the confidence of one who had personally assisted at the origination of the world, carry no conviction".

("ರಾಮಾನುಜರು ಹೇಳುವ ಪಾರಲೌಕಿಕ ಸಂಬಂಧದ ಸುಂದರ ಕಥೆಗಳು ಹೇಗಿವೆಯೆಂದರೆ, ದೇವರು ಪರಲೋಕವನ್ನು ಸೃಷ್ಟಿಸುವಾಗ ತಾವೇ ಅವನ

ಸಹಾಯಕ್ಕೆ ಸ್ವಂತ ನಿಂತು ಉಪಕರಿಸಿದವರ ಶ್ರದ್ಧೆಯಿಂದ ಕೊಡಿದವು. ಆದರೂ ಅವು ಮನಸ್ಸಿಗೆ ನಾಟುವುದಿಲ್ಲ.")

2) "Other wordly stories never sound convincing to unbelieving ears; neither do Shankara's." (J. A. B. Van Buitenin, Vedartha Samgraha p. 36.)
("ಪಾರಲೌಕಿಕ ಕಥೆಗಳು, ನಂಬದವರ ಕಿವಿಗೆ ಎಂದೂ ಸತ್ಯವೆಂದೂ ಮನ ನಾಟುವಂತೆ ತೋರಲಾರವು. ಶಂಕರಾಚಾರ್ಯರು ಹೇಳಿದ ಕಥೆಗಳಾದರೂ ಅಷ್ಟೆ!")

ಈ ವಾಕ್ಯಗಳಲ್ಲಿ ಶ್ರೀ ರಾಧಾಕೃಷ್ಣನ್ ಅವರ ಕುಚೋದ್ಯಾತ್ಮಕ. ಕುಹಕ ಯುಕ್ತ ಟೀಕೆಯನ್ನು ಈ ಸಮೀಕ್ಷಕರು ಏಕೆ ವಿಮರ್ಶಿಸಲಿಲ್ಲ ? ಒಂದು ರಾಷ್ಟ್ರದ ಅಧ್ಯಕ್ಷ ಪದವಿಗೂ. ಬರೆಹಕ್ಕೂ ಏನೂ ಸಂಬಂಧವಿಲ್ಲವೆಂದು ಇದರಿಂದ ತಿಳಿಯಬರುವುದಲ್ಲವೇ ? ಎಷ್ಟು ದೊಡ್ಡ ವ್ಯಕ್ತಿಯಾದರೂ ತಪ್ಪು ಮಾಡದವನು ಯಾರೂ ಇಲ್ಲ. ಮಾಡಿದಾಗ ಉಪೇಕ್ಷಿಸುವುದೂ ಸರಿಯಲ್ಲ. ತಪ್ಪೆಂದು ಹೇಳುವುದೇ ತಪ್ಪಾದರೆ ವಿಮರ್ಶೆಗೆ ಉಳಿದುದೇನು? ಪರಲೋಕದಲ್ಲಿ ನಂಬಿಕೆಯಿದ್ದವನೊಬ್ಬ. "ಜನ್ಮಾದ್ಯಸ್ಯಯತಃ" ಎಂಬ ಬ್ರಹ್ಮ ಸೂತ್ರ ನೋಡಿದವನೊಬ್ಬ, ವಿಷ್ಣುಲೋಕವರ್ಣನೆಯನ್ನು ವೇದದಲ್ಲಿ ಕಂಡೂ 'ವಿಷ್ಣುಪದ'ವೆಂಬ ಉಪನಿಷತ್ತುಗಳ ಬಳಕೆಯ ಪದವನ್ನು ಕಂಡೂ ಹೀಗೆ ಬರೆಯುತ್ತಾನೆಂದರೆ, ಎಂಥ ವಿಪರ್ಯಾಸ ? ಪೂರ್ವದೇಶಜ್ಞಾನವನ್ನು ಪಶ್ಚಿಮ ದವರಿಗೆ ತಿಳಿಯ ಹೇಳುವ ಜ್ಞಾನಿಯೆಂದು ಬಿರುದಾಂತ ಒಬ್ಬ ತತ್ತ್ವ ಜ್ಞಾನಿಯ ಲೇಖನಿಯಿಂದ ಈ ಅವಹೇಳನಾತ್ಮಕ ಬರೆಹವನ್ನು ಯಾರಾ ದರೂ ನಿರೀಕ್ಷಿಸುವವರೇ ? ಹಾಗೆ ಅವರು ಬರೆದುದನ್ನು ನಾವು ಟೀಕಿಸಿ ದರೆ " ಲೇಖಕರ ಅಭಿಪ್ರಾಯಕ್ಕೆ ಸರಿ ಹೊಂದುವರೆಲ್ಲ ಪ್ರಶಂಸಾರ್ಹರು, ವಿರೋಧವಾಗಿ ಬರೆದವರೆಲ್ಲ ಕಡು ನಿಂದೆಗೆ ಪಾತ್ರರು " ಎಂಬ ಈ "ಸಮೀ ಕ್ಷಕರ" ಅರೋಪ ಪಿತ್ತಾಧಿಕ್ಯದಿಂದ ಬರೆದುದಲ್ಲವೇ ? ಈ ಎಲ್ಲ ಟೀಕೆಗಳೂ ನಮ್ಮ ಗ್ರಂಥದಲ್ಲಿ 'ವಿಷ್ಣುಲೋಕ' ಪ್ರಸಂಗದಲ್ಲಿಯೇ ಬಂದಿದ್ದರೂ, "ಬಲಾ ತ್ಕಾರವಾಗಿ ಎಳೆತಂದು" ಎಂದೂ ಇವರು ಬರೆಯುತ್ತಾರೆ.

ಇದೇ ಮಾತು ಐನಸ್ಟೈನನ ಬಗೆಗೂ ಸಹ. "ಐನ್‌ಸ್ಟೀನನನ್ನು ಎಳೆದು ತಂದು ವಾಚಾಮಗೋಚರವಾಗಿ ಟೀಕಿಸಿದ್ದು... ಅದರ ಹಿಂದು ಮುಂದು ಗೊತ್ತು ಮಾಡಿಕೊಳ್ಳುವ ಅತ್ಮಗತ್ಮ ತಾಳ್ಮೆ ತೋರಿಸದೇ, ಲೇಖಕರು ಐನ್‌ಸ್ಟೈನನು 'ಅಸಹನೆಯ ಅಲಿಪ್ತ ಭಾವನೆಯ, ಬೇಜವಾಬ್ದಾರೀ ಜನ'ವೆಂದು ನಿರ್ಣಯಿಸಿ ಬಿಡುತ್ತಾರೆ." ಎಂದು ಕುಚೋದ್ಯ ಮಾಡಿದ್ದಾರೆ.

ಪ್ರಸಂಗ ನೋಡಿ : "ದೇವರು ಅವತಾರ ಮಾಡಬೇಕಾದ ಆವಶ್ಯಕತೆ—ತಾತ್ತ್ವಿಕ ನಿರ್ಬಂಧ"— ಎಂಬುದು ನಮ್ಮ ಶೀರ್ಷಿಕೆ. (ಪುಟ ೯೮-೨) ಈ ಪ್ರಸಂಗದಲ್ಲಿ ದೇವರಿಗೂ ಜಗತ್ತಿನ ಇತಿಹಾಸಕ್ಕೂ ಸಂಬಂಧವಿಲ್ಲವೆಂಬ ವಾದವನ್ನು ಟೀಕಿಸಿ, ಜಗತ್ತಿನ ಇತಿಹಾಸದಲ್ಲಿ ಅವನು ಹೊಗುವುದೇ ಅವತಾರವೆಂದು ತೋರಿಸಹೊರಟು, ಕೆಲವೊಮ್ಮೆ ಇತರ ಕ್ಷೇತ್ರಗಳಲ್ಲಿ ಹೆಸರಾಂತ ದೊಡ್ಡ ವ್ಯಕ್ತಿಗಳೂ, ತಮ್ಮದಲ್ಲದ ಮತಕ್ಷೇತ್ರದಲ್ಲಿ, ದೇವರೆಂದರೆ ಹೇಗಿರಬೇಕೆಂಬ ಪೂರ್ವಗ್ರಹ ಮಾಡಿಕೊಂಡು, "ಹಾಗಿರುವ ದೇವರು ಬೇಡ" ಎಂದು ಪ್ರಚಾರ ಮಾಡಿರುವ ಹಿನ್ನೆಲೆಗೆ ಉದಾಹರಣೆಯನ್ನಾಗಿ ಇಲ್ಲಿ ಐನ್‌ಸ್ಟೈನನ್ನು ಸ್ಮರಿಸಿದೆಯೇ ವಿನಾ, "ಎಳೆದು" ತಂದುದಲ್ಲ. ಅವನು ವಿಜ್ಞಾನಿಯೇ ಹೊರತು 'ಸಂತ'ನಲ್ಲ. ಅವನ ಕ್ಷೇತ್ರಕ್ಕೆ ಸಂಬಂಧಪಡದ ಒಂದು ವಿಷಯದಲ್ಲಿ, ಅವನು ನಿರ್ಣಯವೆಂಬಂತೆ ಮಾಡಿದ ಜಗತ್ಪ್ರಸಿದ್ಧ ತೀರ್ಪೊಂದನ್ನು ನಾನು ಇಲ್ಲಿ ಉದಾಹರಣಾರ್ಥವಾಗಿ ಬಳಸಿದ್ದೇನೆ. ಇತರರು ಈ ತಪ್ಪಿನ ಹಾದಿಯಲ್ಲಿ ಬೀಳದಿರಲೆಂದು. (ಐನ್‌ಸ್ಟೈನನ ಜೀವನ ಚರಿತ್ರೆಯನ್ನು ಆಮೂಲಾಗ್ರವಾಗಿ ಓದಿ, ಅದನ್ನು ನಾನು ವಿದ್ಯಾರ್ಥಿಗಳಿಗೆ ಪಾಠ ಹೇಳುವ ಸಂದರ್ಭವೂ ಇದ್ದು, ಉಳಿದ ವಿಷಯಗಳಲ್ಲಿ ಗೌರವಾರ್ಹ ಸರಳ ವ್ಯಕ್ತಿಯಾಗಿದ್ದರೂ, ತನ್ನದಲ್ಲದ ಕ್ಷೇತ್ರದಲ್ಲಿ ಅವನು ಹೀಗೆ ಇತ್ತ 'ತೀರ್ಪ'ನ್ನು ಇಲ್ಲಿ ಮಾತ್ರವಲ್ಲದೆ ಬೇರೆವೇದಿಕೆಗಳಲ್ಲೂ ಖಂಡಿಸಿರುವೆನೇ ವಿನಾ 'ಹಿಂದೆ ಮುಂದೆ ಗೊತ್ತು ಮಾಡಿಕೊಳ್ಳುವ ಅಗತ್ಯ ತಾಳ್ಮೆತೋರದ' ಅಲ್ಲ. (ಈ ತಾಳ್ಮೆಯೂ, ಆಂಗ್ಲದಲ್ಲಿ (!) ಐನ್‌ಸ್ಟೈನನ ಚರಿತ್ರೆಯನ್ನು ಓದಿ ಅರ್ಥಮಾಡಿಕೊಳ್ಳುವ ಶಕ್ತಿಯೂ ಸಮೀಕ್ಷಕರಿಗೆ ಖಂಡಿತ ಇರಲಾರದು ಎಂದೇ ನಮ್ಮ ಭಾವನೆ.)

ಇತಿಹಾಸದ ಗೌತಮ ಬುದ್ಧನನ್ನು, ವಿಷ್ಣು, ಭಾಗವತಾದಿ ಪುರಾಣಗಳಲ್ಲಿ ಅವತಾರವೆಂದು ಗಣಿಸದೇ ಅಲ್ಲಿ ಉಕ್ತನಾದ ಬುದ್ಧನು ಬೇರೆಯೆಂದು ನಾವು ತೋರಿಸಿದ್ದಕ್ಕೆ ಇವರ ಆಕ್ಷೇಪ ಉಂಟು. ಇದು ಭಾಗವತ, ವಿಷ್ಣು ಪುರಾಣಗಳ ಖಂಡನೆಯಲ್ಲೇ ಮುಕ್ತಾಯವಾಗುವುದು. ನಮ್ಮ ವಿಚಾರ ಮಾತ್ರ ಖಂಡನೆಯಲ್ಲ. ಈ ಮೂಲ ಗ್ರಂಥಗಳ ಪರಿಚಯಾಭಾವ ಸಮೀಕ್ಷಕರಿಗೆ ಎಷ್ಟು ಇದೆಯೆಂದೂ ಇದರಿಂದ ವ್ಯಕ್ತವಾಗುವುದು. ಮತತ್ರಯಾಚಾರ್ಯರೂ ಯಾರೂ ಇತಿಹಾಸದ ಬುದ್ಧನನ್ನು ಹಾಗೆ ಒಪ್ಪಿಯೂ ಇಲ್ಲ. (ಇಂದಿನ ಹಿಂದೂ ಸಮಾಜದೊಳಗೆ ಜೈನ ಬೌದ್ಧರನ್ನೂ ಸೇರಿಸದಿದ್ದರೆ, ನಮಗೆ ಉಳಿಗಾಲವಿಲ್ಲವೆಂಬುದು ಅನುಕೂಲದ ಮಾತು. ಶಾಸ್ತ್ರದ ಮರ್ಯಾದೆಯಲ್ಲ. ಅನುಕೂಲಕ್ಕೆ ಶಾಸ್ತ್ರವನ್ನು ಎಳೆಯಬೇಕೆಂಬ 'ಸಂ-ಈಕ್ಷಕರ' ರಾಜಕೀಯ ವಾದ ಶಾಸ್ತ್ರಕ್ಕೆ ಒಪ್ಪಿಗೆಯಿಲ್ಲ.)

ಶ್ರೀಮಧ್ವಾಚಾರ್ಯರು ಯಾಸ್ಕರ ನಿರುಕ್ತಕ್ಕೆ ಅಷ್ಟೊಂದು ಬೆಲೆ ಕೊಡದೆ, ಅದಕ್ಕಿಂತ ಪ್ರಾಚೀನವಾದ ಆರ್ಷ ನಿರುಕ್ತಗಳನ್ನೇ ಬಳಸಿರುವರೆಂಬರ್ಥದಲ್ಲಿ ನಾನು ಬರೆದ ಒಂದು ವಾಕ್ಯದ ("ಮಧ್ವಾಚಾರ್ಯರು ಯಾಸ್ಕರ ನಿರುಕ್ತವನ್ನು ಕಣ್ಣೆತ್ತಿಯೂ ನೋಡಿದ್ದಿಲ್ಲ") ಅರ್ಥವನ್ನು ಸರಿಯಾಗಿ ಮಾಡಿಕೊಳ್ಳದೆ, ಅವರಿಗೆ ಅದು ಪರಿಚಯವೇ ಇರಲಿಲ್ಲವೆಂದು ನಾನು ಬರೆದುದಾಗಿ ಗ್ರಹಿಸಿರುವ ಸಮೀಕ್ಷಕರ ಅರ್ಥೈಕೆಯ 'ದಕ್ಷತೆ'ಯ ಬಗೆಗೆ ಏನೆನ್ನಬೇಕು ?

ಡಾ. ಜಾನ್ಸನ್ ಎಂಬ ಆಂಗ್ಲವಿದ್ವಾಂಸನು ಯಾವನೋ ಒಬ್ಬ ಜಿಜ್ಞಾಸುವಿಗೆ, ಅವನು ಕೇಳಿದ್ದಕ್ಕೆ ಉತ್ತರಿಸಿಯೂ ಅವನಿಗೆ ತಿಳಿಯದಿದ್ದಾಗ: "Sir, I can find you an argument; do you expect me to find you an understanding also ?" ಎಂದು ಕೇಳಿದುದು ನೆನಪಾಗುತ್ತದೆ. ("ಸ್ವಾಮಿ, ನಿಮಗೆ ಒಂದು ಉತ್ತರವನ್ನು ನಾನು ಹುಡುಕಬಲ್ಲೆ ಮಾತ್ರ; ಅದನ್ನು ತಿಳಿಯುವ ಶಕ್ತಿಯನ್ನೂ ಹೇಗೆ ಹುಡುಕಿ ಕೊಡೆಂದು ನಿರೀಕ್ಷಿಸುತ್ತೀರಿ ?")

ಶ್ರೀ ಶಂಕರರು ಸ್ಥಾಪಿಸಿದ್ದು ಅದ್ವೈತ ಮತವೊಂದನ್ನು ಮಾತ್ರವೋ ಅಥವಾ ಷಣ್ಮತಗಳನ್ನೋ ? ಎಂಬ ವಿಷಯಕ್ಕೆ ನಾನು ಬರೆದ ಸುದೀರ್ಘ ವಿವರಣೆಯನ್ನೂ, ಅಲ್ಲಿ ಕೊಟ್ಟಿರುವ, ವಿಪುಲ ಆಧಾರಗಳನ್ನೂ ನೋಡ ದೆಯೇ, ಸಮೀಕ್ಷಕರು, ಶಂಕರಕೃತಗಳೆಂದು ಭಾವಿಸಲ್ಪಡುವ ಕೆಲವೊಂದು ಸ್ತೋತ್ರಗಳ ಬಗೆಗಿನ ನನ್ನ ಸಂಶಯವನ್ನು ಪ್ರಸ್ತಾಪಿಸಿ, ನನ್ನ ಅಭಿಪ್ರಾಯ ವನ್ನು ಅಣಕವಾಡಿದ್ದಾರೆ. ಅಲ್ಲೇ ನಾನು ಉದಾಹರಿಸಿರುವ (ಪುಟ ೯೪) ದೇವ್ಯಪರಾಧಕ್ಷಮಾಪಣ ಸ್ತೋತ್ರದ ಐದನೆಯ ಶ್ಲೋಕದಲ್ಲಿ ಶಂಕರರ ಜೀವಿತದ ಕಾಲದ ಬಗೆಗೆ ಪ್ರಚಲಿತ ಮಾಹಿತಿಗೆ ವಿರುದ್ಧವಾಗಿ, ಅವರು ಲಶೀನೆಯ ವರ್ಷ ವಯಸ್ಸಿನಲ್ಲಿ ಈ ಸ್ತೋತ್ರವನ್ನು ಬರೆದರೆಂದು ಹೇಳಿ ಕೊಂಡಿರುವುದರಿಂದ, ಈ ಬಗೆಯ ಸ್ತೋತ್ರಗಳು ಅವರವಲ್ಲವೆಂದು ತೋರಿ ಸಿದರೆ, ಬಾಧಕವೇನು? ಸಮೀಕ್ಷಕರ ಅಭಿಪ್ರಾಯವಾದರೂ ಏನು? ನನ್ನ ಶೋಧನೆ ಹೇಗೆ ಹಾಸ್ಯಾಸ್ಪದ?

"ಸಮೀಕ್ಷೆ" ಎಂದರೆ ಸಂ– ಚೆನ್ನಾಗಿ, "ನೋಡುವುದು". ಸಹೃದಯತೆ ಪ್ರಮಾಣಶರಣ್ಯತೆ, ನಿಷ್ಪಕ್ಷಪಾತತೆ, ದುರಾಗ್ರಹರಹಿತತೆ ಇಲ್ಲದೆ ಮಾಡಿದ ಈ ಬಗೆಯ ವಿಡಂಬನೆಗಳು ಸಾಹಿತ್ಯ ಪ್ರಪಂಚದಲ್ಲಿ ಧೂಮಕೇತುಗಳೇ ಹೊರತು ನಕ್ಷತ್ರವಾಗಲಾರವು.

ಇರಲಿ. ಇಂಥವರೆಲ್ಲೋ ಒಬ್ಬರಿದ್ದರೆ, ಗುಣಗ್ರಾಹಿಗಳೂ ಉಂಟೆಂಬು ದನ್ನು ಉಳಿದ, ಇಲ್ಲಿ ಪ್ರಕಟಿತ ಪತ್ರಗಳು ತೋರಿಸುವುವು. (ಇದನ್ನು ಪ್ರಕಟಿಸಿರುವುದೂ ಸ್ವಪ್ರಶಂಸೆ. ಪರನಿಂದೆಯೆಂದೇ ಈ ಸಮೀಕ್ಷಕರಂಥವರು ಹೇಳಿಯಾರು ! ) ಮಿತ್ರರ ಅಪೇಕ್ಷೆಯಂತೆ ಮಾತ್ರ ಇವನ್ನು ಪ್ರಕಟಿಸ ಲಾಗಿದೆ,

* * *

ನಮ್ಮ ಗ್ರಂಥಮಾಲೆಗೆ ಈವರೆಗೆ ಸದಸ್ಯರಾಗಿ ಪ್ರೋತ್ಸಾಹಕೊಟ್ಟ ಎಲ್ಲ ಮಹನೀಯರಿಗೂ, ಸದಸ್ಯರ ನೋಂದಾಣಿಕೆಯಲ್ಲಿ ಸಹಾಯ ಮಾಡಿದ

ಎಲ್ಲರಿಗೂ, ಉಪನ್ಯಾಸಕಾಲಗಳಲ್ಲಿ ಪುಸ್ತಕಗಳ ಪ್ರಚಾರಕ್ಕೆ ನೆರವಾದ ಮಹನೀಯರಿಗೂ, ಮಾತೃಕೆಗಳನ್ನು ಓದಿ ಸಲಹೆಗಳನ್ನಿತ್ತ ಮಿತ್ರರಿಗೂ, ನನಗೆ ಅಧ್ಯಯನ ಮಾಡಿಸಿ, ವೇದಾಕ್ಷರ-ಸ್ವರಗಳ ರುಚಿ ಹಿಡಿಸಿದ ಗುರುಗಳಿಗೂ ಮಂತ್ರಾರ್ಥಗಳ ಗ್ರಹಿಕೆಯಲ್ಲಿ ಎಂದೆಂದೂ ಅಂತರಂಗದಲ್ಲಿ ನಿಂತು ನಡೆಸಿ, ದಾರಿತೋರುತ್ತಿರುವ ಗುರುಗಳಿಗೂ— ಸರ್ವಾಂತರಾತ್ಮನಾದ ಭಗವಂತನಿಗೂ ಈ ಗ್ರಂಥಕರ್ತನು ಎಂದೆಂದೂ ಋಣಿಯಾಗಿರುತ್ತಾನೆ.

ಸುಂದರವಾಗಿ, ಸಕಾಲಕ್ಕೆ ಮುದ್ರಣ ಮಾಡಿ ಕೊಟ್ಟ ಕೃಪಾ ಮುದ್ರಣಾಲಯದ ಶ್ರೀ ಎನ್. ಕೆ. ಪೋತ್ನೀಸ್ ಇವರಿಗೂ, ಅಕ್ಕರೆಯಿಂದ ಕೆಲಸ ಮಾಡಿದ ಮುದ್ರಣಾಲಯದ ಸಿಬ್ಬಂದಿ ವರ್ಗದವರಿಗೂ ಗ್ರಂಥಕರ್ತನು ಚಿರಋಣಿಯಾಗಿರುತ್ತಾನೆ.

ವೇದಗಳು ಎಂದೆಂದೂ ಲೋಕಕ್ಕೆ ಬೆಳಕಾಗಿರಲಿ. ಅಂಧಕಾರವು ತೊಲಗಿ, ಸುಜ್ಞಾನವು ಎಲ್ಲೆಡೆಮೂಡಲಿ. ನಮ್ಮಲ್ಲಿ ಹಬ್ಬುತ್ತಿರುವ ಪರಸ್ಪರ ದ್ವೇಷಾಸೂಯಾ ಭಾವನೆಗಳೂ, ಸಂಶಯ ಪ್ರವೃತ್ತಿಯೂ ನಿರ್ನಾಮವಾಗಿ, ಸಮರಸದಲ್ಲಿ ಒಳ್ಳೆಯ ಸಮಾಜವಾಗಿ ನಾವೆಲ್ಲ ಬಾಳೋಣ ಎಂದು ಪ್ರಾರ್ಥಿಸಿ, ವಿರಮಿಸುವ.

ಸಜ್ಜನ ಸೇವಕ,

ಧಾರವಾಡ
೮-೭-೧೯೮೭ ಕೆ. ಎಸ್. ನಾರಾಯಣಾಚಾರ್ಯ

—o—

## ಎಂಟನೆಯ ಸಂಪುಟದಿಂದ ಈಚೆಗೆ ಬೆಳೆದ ನಮ್ಮ ಗ್ರಂಥಮಾಲೆಯ ಸದಸ್ಯ ಬಳಗ

| ಕ್ರಮಾಂಕ | ಹೆಸರು | ಮೊತ್ತ |
|---|---|---|
| ೩೮೮ | ಶ್ರೀ ಬಿ ಆರ್. ಸಂಪತ್‌ನರಸಿಂಹನ್, ಹಾಸನ | ೧೨೫-೦೦ |
| ೩೮೯ | ,, ತಿರುಮಲಾಚಾರ್ಯ ನವಲಿ, ಗುಲ್ಬರ್ಗಾ | " |
| ೩೯೦ | " ವಿ. ವಿ. ಕುಲಕರ್ಣಿ " | " |
| ೩೯೧ | " ನರಸಿಂಹ ಗುಡಿ " | " |
| ೩೯೨ | " ಕೆ. ಆರ್. ಮಂಗಳಮೂರ್ತಿ " | " |
| ೩೯೩ | " ಎನ್. ಕೆ. ಶಾಮ ಜೋಯಿಸ್ " | " |
| ೩೯೪ | " ಎಸ್. ವಿ. ಗಡ " | " |
| ೩೯೫ | " ಕೆ ಟಿ. ಗೋವಿಂದರಾಜ್ " | " |
| ೩೯೬ | " ಶ್ರೀರಾಯರ ಆರಾಧನಾ ಸಮಿತಿ " | " |
| ೩೯೭ | " ಎ ಕೆ. ದೇಸಾಯಿ " | " |
| ೩೯೮ | ಶ್ರೀಮತಿ ಭಾಗೀರಥೀ ತಂತ್ರಿ " | " |
| ೩೯೯ | ಶ್ರೀ ಲಕ್ಷ್ಮೀಕಾಂತರಾವ್ " | " |
| ೪೦೦ | ಶಂಕರಮಠ, ಕೋಲಾರ | " |
| ೪೦೧ | ಶ್ರೀ ಟಿ. ಎನ್. ಪ್ರಭಾಕರ್, ಕೋಲಾರ | " |
| ೪೦೨ | ಡಾ ಟಿ. ಎಸ್. ಅಹೋಬಿಲಾಚಾರ್ " | " |
| ೪೦೩ | ಡಾ. ವಿ. ಎಸ್. ಕೃಷ್ಣಮೂರ್ತಿ " | " |
| ೪೦೪ | ಶ್ರೀ ಎಸ್. ಎಸ್. ಬಾಳಿಗಾರ್, ಧಾರವಾಡ | " |
| ೪೦೫ | " ಎ. ವಿ. ಕುಲಕರ್ಣಿ. ಬಾಗಲಕೋಟೆ | " |
| ೪೦೬ | " ಎಸ್. ಕೆ, ಕುಂಬಾರ್, ಆಲಮಟ್ಟಿ ಅಣೆಕಟ್ಟು | " |

| | | | |
|---|---|---|---|
| ೪೦೭ | ಶ್ರೀ ಪ್ರಿನ್ಸಿಪಾಲರು. ಭುವನೇಶ್ವರ ಕಾಲೇಜು. ಕಾರ್ಕಳ | | ೧೨೫-೦೦ |
| ೪೦೮ | ಶ್ರೀ ಸಿ. ಎಸ್. ಬಸಪ್ಪ, ಆಲಮಟ್ಟಿ ಆಣೆಕಟ್ಟು | | ,, |
| ೪೦೯ | ತುದಿಯಡ್ಕ ವಿಷ್ಣ್ವಯ್ಯ, ಸುಳ್ಯ, (ಎರಡನೆಯ ಕಂತಿನ ದೇಣಿಗೆ) | | ೧೦೦-೦೦ |
| ೪೧೦ | ಶ್ರೀ ಎಸ್. ಎಂ. ವಿಶ್ವಾರಾಧ್ಯ, ಆಲಮಟ್ಟಿ ಆಣೆಕಟ್ಟು | | ೧೨೫-೦೦ |
| ೪೧೧ | ,, ಎಸ್ ಎಂ, ಮುಗದಾಳ | ,, | ,, |
| ೪೧೨ | ,, ಎಸ್, ಎಂ. ರಂಗನಗೌಡ | ,, | ,, |
| ೪೧೩ | ,, ಎಸ್. ಡಿ. ಪಾಟೀಲ | ,, | ,, |
| ೪೧೪ | ,, ಎಸ್. ಐ. ಕೋರಿ | ,, | ,, |
| ೪೧೫ | ಶ್ರೀ ಎಸ್. ಎಸ್. ಶಿರೂರ, ಆಲಮಟ್ಟಿ | | ,, |
| ೪೧೬ | ,, ವಿ. ಆರ್. ಸೊಣ್ಣದ | ,, | ,, |
| ೪೧೭ | ,, ಕೆ. ಆರ್. ಶ್ರೀನಿವಾಸರಾವ್ | ,, | ,, |
| ೪೧೮ | ,, ಎಸ್. ಎಸ್. ಬಿರಾದಾರ | ,, | ,, |
| ೪೧೯ | ,, ವಿರೂಪಾಕ್ಷಪ್ಪ | ,, | ,, |
| ೪೨೦ | ,, ಇಲ್ಲಾಳ | ,, | ,, |
| ೪೨೧ | ,, ಎಂ. ವಿ. ಗದ್ದನಕೇರಿ | ,, | ,, |
| ೪೨೨ | ,, ಎಚ್. ಬಿ. ಆಲೂರ | ,, | ,, |
| ೪೨೩ | ,, ಪ್ರೊ. ಬಿ. ಎಚ್. ಸಂಪತ್ ಮತ್ತು ಕುಟುಂಬ, ವಾರಣಾಸಿ | | ೭೫೦-೦೦ |
| ೪೨೪ | ಶ್ರೀ ಎಸ್. ಪಿ ಹಳ್ಳಿಕೇರಿ, ಧಾರವಾಡ | | ೧೨೫-೦೦ |
| ೪೨೫ | ,, ಡಾ. ಕೆ. ವೆಂಕಟಾಚಲ ಐಯ್ಯಂಗಾರ್, ಬೆಂಗಳೂರು (ಮತ್ತೆ) | | ೧೫೦-೦೦ |
| ೪೨೬ | ಡಾ. ಯು. ಆರ್. ಅನಂತಮೂರ್ತಿ. ಮೈಸೂರು | | ೧೨೫-೦೦ |
| ೪೨೭ | ಶ್ರೀ ಎಸ್. ವರದರಾಜನ್. ಮೈಸೂರು | | ,, |
| ೪೨೮ | ,, ಬಿ. ವಿ. ವೆಂಕಟೇಶಮೂರ್ತಿ. ನಂಜನಗೂಡು | | ,, |

| | | |
|---|---|---|
| ೪೨೯ | ಡಾ. ವಿ. ಆರ್. ಪಂಚಮುಖಿ, ಧಾರವಾಡ | ೧೨೫-೦೦ |
| ೪೩೦ | ಶ್ರೀ ಪಿ. ರಾಜಮನ್ನಾರ, ಹೈದರಾಬಾದ | " |
| ೪೩೧ | " ಹೆಗಡೆ ಪಿ. ಎನ್. ಪೈ. ಮಂಗಳೂರು (ಮತ್ತೆ) | ೧೦೫-೦೦ |
| ೪೩೨ | " ಎಸ್. ಪಿ. ಕೃಷ್ಣಮಾಚಾರ್ ಹುಬ್ಬಳ್ಳಿ | ೧೨೫-೦೦ |
| ೪೩೩ | " ಎನ್ ಕೃಷ್ಣೈಯಂಗಾರ್, ಧಾರವಾಡ | " |
| ೪೩೪ | ಕ್ಯಾಪ್ಟನ್ ಬಿ. ಎ. ಶ್ರೀನಿವಾಸ ಅಯ್ಯಂಗಾರ್, ದಾವಣಗೆರೆ | " |
| ೪೩೫ | ಶ್ರೀ ಕೆ. ಅನಂತರಾಮಯ್ಯ, ಹಾಸನ | " |
| ೪೩೬ | " ಕೆ. ಆರ್. ರಾಧಾಕೃಷ್ಣ ಅಯ್ಯಂಗಾರ್. ಮೈಸೂರು | " |
| ೪೩೭ | " ಟಿ. ಎನ್. ಚಕ್ರವರ್ತಿ " | " |
| ೪೩೮ | ಡಾ. ಎ. ರಾಮ ಅಯ್ಯಂಗಾರ್ " | " |
| ೪೩೯ | ಶ್ರೀ ಎಂ. ಆರ್ ಬದ್ರೀ ನಾರಾಯಣ್, ದಾವಣಗೆರೆ | " |
| ೪೪೦ | " ಎ. ಆರ್. ಬುರ್ಲಿ. ಬಾಗಲಕೋಟೆ (ಮತ್ತೆ) | ೧೦೦-೦೦ |
| ೪೪೧ | ಪ್ರೊ. ಐ. ಅಚ್ಯುತರಾವ್ ಮಣಿಪಾಲ | ೧೨೫-೦೦ |
| ೪೪೨ | ಶ್ರೀ ನಾರಾಯಣ ಭಟ್ " | " |
| ೪೪೩ | ಶ್ರೀಮತಿ ಕೆ. ಶಾಂತಬಾಯಿ " | " |
| ೪೪೪ | ಶ್ರೀ ಮೋಹನ ಕೋಟಿಯಾನ್ " | " |
| ೪೪೫ | ಶ್ರೀ ಸಂಪಿಗೆತ್ತಾಯಾ, ಮಣಿಪಾಲ | ೧೨೫-೦೦ |
| ೪೪೬ | " ಕೆ. ವಿ. ಕೆ. ಕಾರಂತ, " | ೧೨೫-೦೦ |
| ೪೪೭ | " ಮೇಜರ್ ಸಿ. ಚಂದ್ರಪಾಲ್, ಕುಂಜಿಬೆಟ್ಟು, ಉಡುಪಿ | " |
| ೪೪೮ | " ಡಾ. ವಿ. ಎಲ್. ನಾಯಕ, ಮಣಿಪಾಲ | " |
| ೪೪೯ | " ಎಸ್. ವಿ. ರಾಘವಾಚಾರ್, ಬೆಂಗಳೂರು (ದೇಣಿಗೆಯಾಗಿ ಮತ್ತೆ) | ೫೦೫-೦೦ |
| ೪೫೦ | " ಎ. ಮನೋಹರಶೆಟ್ಟಿ, ಗಂಗಾವತಿ " | ೧೦೦೧-೦೦ |
| ೪೫೧ | " ಡಾ. ಎಸ್. ಜಗನ್ನಾಥ್, ಹಾಸನ " | ೫೦೦-೦೦ |

| | | | |
|---|---|---|---|
| ೪೫೨ | " ಎಚ್. ಆರ್. ದಾಶರಥಿ, ಹುಬ್ಬಳ್ಳಿ, | " | ೨೦೦-೦೦ |
| ೪೫೩ | " ಎಚ್. ಕೆ. ಎನ್. ಆಚಾರ್ಯ, ಶಿವಮೊಗ್ಗ (ದೇಣಿಗೆಯಾಗಿ ಮತ್ತೆ) | | ೧೦೧-೦೦ |
| ೪೫೪ | " ಎಚ್. ಶ್ರೀನಿವಾಸ ಅಯ್ಯಂಗಾರ್, ಹಾಸನ | | ೧೨೫-೦೦ |
| ೪೫೫ | " ಎಚ್. ವಿ. ಶ್ರೀನಿವಾಸಮೂರ್ತಿ, | " | " |
| ೪೫೬ | " ಎಂ. ಸಿ. ಗುಂಡೂರಾವ್, | " | " |
| ೪೫೭ | " ಸಿ. ಎಸ್. ಕೃಷ್ಣಸ್ವಾಮಿ, | " | " |
| ೪೫೮ | " ಶಂಕರನಾರಾಯಣಶಾಸ್ತ್ರಿ, | " | " |
| ೪೫೯ | " ಎಚ್ ಕೆ. ಭಾಸ್ಕರ, | " | " |
| ೪೬೦ | " ವಿ. ಎಸ್. ರಂಗನ್, | " | " |
| ೪೬೧ | " ಕೆ. ಸುಬ್ಬರಾವ್, | " | " |
| ೪೬೨ | " ಕೆ. ಎ. ಕೃಷ್ಣಸ್ವಾಮಿ, | " | " |
| ೪೬೩ | " ಕೆ. ಶ್ರೀನಿವಾಸಮೂರ್ತಿ, | " | " |
| ೪೬೪ | " ಇ. ರಾಮಾನುಜಂ, ಚನ್ನಪಟ್ಟಣ | | " |
| ೪೬೫ | " ಎಚ್. ನಾಗರಾಜ್. ಆಲಮಟ್ಟಿ | | " |

(ವಿ. ಸೂ : ಇದಲ್ಲದೆ ಈ ಮಹನೀಯರು ೫೦೦-೦೦ ರೂಗಳ ದೇಣಿಗೆಯನ್ನು ಇತ್ತಿದ್ದಾರೆ.)

| | | |
|---|---|---|
| ೪೬೬ | ಶ್ರೀ ಎಚ್. ಸಿ. ಮಜ್ಜಗಿ, ಆಲಮಟ್ಟಿ | ೧೨೫-೦೦ |
| ೪೬೭ | " ಕಾಳೇಗೌಡ, ಹಾಸನ | " |
| ೪೬೮ | " ಎಚ್. ಎನ್. ಸುಬ್ರಾಯಶೆಟ್ಟಿ, ಅರಸೀಕೆರೆ | " |
| ೪೬೯ | " ವಿ ಬಿ. ದೇಶಪಾಂಡೆ, ಆಲಮಟ್ಟಿ | " |
| ೪೭೦ | " ಎ. ಬಿ ಜೋಷಿ, " | " |
| ೪೭೧ | " ಬಿ. ಶ್ರೀನಿವಾಸ ಅಯ್ಯಂಗಾರ್, ಬೆಂಗಳೂರು | ೨೨೫-೦೦ |
| ೪೭೨ | " ಸ್ವಾಮಿ ಹರ್ಷಾನಂದಜಿ, ಮೈಸೂರು | ೧೨೫-೦೦ |
| ೪೭೩ | " A. G. V. N. ಅಯ್ಯಂಗಾರ್, ಮೈಸೂರು | " |

೪೭೪ " ಹಿಂದೂ ಸೇವಾ ಪ್ರತಿಷ್ಠಾನ. ಬೆಂಗಳೂರು
(ಎರಡು ಸದಸ್ಯತ್ವ) ೨೫೦-೦೦

೪೭೫ " ಸುರೇಶ ದತ್ತಾತ್ರಯರಾವ್ ಹೆರೂರು,
ಗುಲ್ಬರ್ಗಾ ೧೨೫-೦೦

೪೭೬ " ಗೋಪಾಲರಾವ ಹಜೀಬ ಹೆರೂರು,
ಗುಲ್ಬರ್ಗಾ ೧೨೫-೦೦

೪೭೭ ಪ್ರಿನ್ಸಿಪಾಲರು, ಎನ್. ವಿ ಸೊಸಾಯಿಟಿ,
ಇನ್‌ಸ್ಟಿಟ್ಯೂಟ್ ಆಫ್ ಪಿ. ಜಿ. ಡಿಪ್ಲೊಮ ಇನ್
ಎಂ. ಎಸ್. ಎಮ್, ಗುಲ್ಬರ್ಗಾ ೧೨೫-೦೦

೪೭೮ ಶ್ರೀನಿವಾಸಾಚಾರ್ಯ ಹುಣಸಿಗಿ, ಗುಲ್ಬರ್ಗಾ "

೪೭೯ ಶ್ರೀ ಕೆ. ಎ ತಿಳಗುಳ, ಷೋರಾಪುರ, " "

೪೮೦ " ಪಿ ಎನ್. ರಾಮಸ್ವಾಮಿ ಅಂಡ ಸನ್,
ದಾವಣಗೆರೆ ೧೨೫-೦೦

೪೮೧ " ಶ್ರೀನಿವಾಸಯ್ಯ, ದಾವಣಗೆರೆ "

೪೮೨ " ಕೆ. ಕೃಷ್ಣಮೂರ್ತಿ, " "

೪೮೩ " ಎಚ್. ಎ. ಶ್ರೀರಾಮ " "

೪೮೪ " ಎಸ್. ನರಸಿಂಹಮೂರ್ತಿ " "

೪೮೫ ಶ್ರೀಕೋದಂಡರಾಮ ದೇವರ ದೇವಾಲಯ
ಸಂಘ ದಾವಣಗೆರೆ "

೪೮೬ ಶ್ರೀ ಕೆ. ಸಿದ್ದಪ್ಪ, ದಾವಣಗೆರ "

೪೮೭ " ಡಿ. ಕೆ. ಸೀತಾರಾಮಶಾಸ್ತ್ರಿ, " "

೪೮೮ " ಕೆ. ಶಂಕರನಾರಾಯಣರಾವ್, ಬೆಂಗಳೂರು "

೪೮೯ " ಬಿ. ಕೆ ವಿಶ್ವನಾಥ್, ಆಲಮಟ್ಟಿ "

೪೯೦ " ಮುರಳೀಧರ ಕುಕನೂರು" "

೪೯೧ " ಬಿ. ಕೆ. ಕಾವೇರಿ, " "

೪೯೨ " ಬಿ. ಎನ್. ಸದಾಶಿವರೆಡ್ಡಿ " "

೪೯೩ " ಆರ್. ವಿ. ಗೋಪಾಲಶಾಸ್ತ್ರಿ " "

| | | |
|---|---|---|
| ೪೯೪ | " ಎನ್. ಆರ್. ಅಷ್ಟಪುತ್ರೆ " | " |
| ೪೯೫ | " ಎಚ್. ಎಸ್. ಚಿನಿವಾಲ್ " | " |
| ೪೯೬ | " ಟಿ. ಜಿ. ರಾಧಾಕೃಷ್ಣ, " | " |
| ೪೯೭ | " ಲಕ್ಷ್ಮೀಪತಿ ಎನ್. ಎಸ್. " | " |
| ೪೯೮ | " ಪಿ. ಎಸ್. ಶ್ರೀನಿವಾಸಶಾಸ್ತ್ರಿ, ಧಾರವಾಡ | " |
| ೪೯೯ | " ಜೋಷಿ / ಶ್ರೀ ಅಡವಿರಾವ್ ಕುಲಕರ್ಣಿ, ಗಂಗಾವತಿ | ೧೨೫-೦೦ |
| ೫೦೦ | " ಕೆ. ರಾ. ವೆ. ಸುಬ್ರಹ್ಮಣ್ಯಶಾಸ್ತ್ರಿ, ಬೆಂಗಳೂರು | ೧೦೦-೦೦ |
| ೫೦೧ | " ಜಿ. ರಾಮಪ್ಪ, ಬಳ್ಳಾರಿ | ೧೨೫-೦೦ |
| ೫೦೨ | " ಪ್ರಿನ್ಸಿಪಾಲ್, ಎಂ. ಐ. ಟಿ. ಮಣಿಪಾಲ | ೧೨೫-೦೦ |
| ೫೦೩ | " ಸಿ. ವಿ. ವೆಂಕಟಾಚಲಂ, " | " |
| ೫೦೪ | " ಕೆ. ಆರ್. ಅಯ್ಯಂಗಾರ್, " | " |
| ೫೦೫ | " ಹನುಮಂತಾಚಾರ್ಯ ಇಟಗಿ, ಧಾರವಾಡ | " |
| ೫೦೬ | " ಎಸ್. ಕೆ ಲಕ್ಷ್ಮೀನಾರಾಯಣರಾವ್, ಧಾರವಾಡ | " |
| ೫೦೭ | " ಎಚ್. ಎಸ್. ಕೃಷ್ಣಸ್ವಾಮಿ, ಹಾಸನ | " |
| ೫೦೮ | " ಡಾ. ಎಚ್. ಕೆ. ಕೃಷ್ಣಸ್ವಾಮಿ, ದಾವಣಗೆರೆ | " |
| ೫೦೯ | " ಎಸ್. ಕೃಷ್ಣಮಾಚಾರ್, ಬೆಂಗಳೂರು | " |
| ೫೧೦ | " ಎಂ. ಸೀತಾರಾಮ ಅಯ್ಯಂಗಾರ್ಯರು, ಬೆಂಗಳೂರು | ೨೨೫-೦೦ |
| ೫೧೧ | " ಪ್ರೊ. ಎಂ. ರಾಮಚಂದ್ರಭಟ್, ವಿಟ್ಟಲ, (ದ. ಕ.) | ೨೨೫-೦೦ |
| ೫೧೨ | " ಕೆ. ವೈ. ವೀರರಾಘವಾಚಾರ್, ಬೆಂಗಳೂರು | ೨೦೦-೦೦ |

ಈ ಎಲ್ಲ ಮಹನೀಯರಿಗೂ ನಮ್ಮ ಪ್ರಕಾಶನವು ಕೃತಜ್ಞವಾಗಿರುತ್ತದೆ. ಮತ್ತು "ವೇದಸಂಸ್ಕೃತಿಯ ಪರಿಚಯ''ದ (ಹೊಸ) ದ್ವಿತೀಯ ಮಾಲೆಗೂ ಹೀಗೇ ಸದಸ್ಯರಾಗಬೇಕೆಂದು ಅವರನ್ನು ಕೋರುತ್ತದೆ.

# ವಿಷಯಾನುಕ್ರಮಣಿಕೆ

## ಶ್ರೀ ಮಹಾಲಕ್ಷ್ಮೀ (೯ನೆಯ ಸಂಪುಟ)



## ಮೊದಲನೆಯ ಅಧ್ಯಾಯ

೭ ಅಧ್ಯಾಯ ಎರಡು

## ಶ್ರೀಸೂಕ್ತ— ವಿವರಣೆ

೧೦ ನೆಯ ಸಂಪುಟ

# ಭೂಸೂಕ್ತಗಳು, ನೀಳಾ, ಆಂಭೃಣೀ, ವಾಕ್, ಶ್ರದ್ಧಾ. ಮೇಧಾದಿ ಸೂಕ್ತಗಳು

## ಮೊದಲನೆಯ ಅಧ್ಯಾಯ— ಭೂಸೂಕ್ತ-ವಿವರಣೆ

## ಎರಡನೆಯ ಅಧ್ಯಾಯ

### ಕೃಷ್ಣಯಜುರ್ವೇದೀಯ ಭೂಸೂಕ್ತ (ತೈ. ಸಂ. I-5-3)

## ಮೂರನೆಯ ಅಧ್ಯಾಯ

## ನಾಲ್ಕನೆಯ ಅಧ್ಯಾಯ

ಶ್ರೀ ಮಾಲೋಲ ಪ್ರಕಾಶನ

ಶ್ರೀ ರಾಮಾಯಣಸಾಹಸ್ರೀ ಮಾಲೆಯ

## ಯೋಜನೆಯ ಪ್ರಕಟಣೆ

ಮಹನೀಯರೇ,

ಸಮಗ್ರ ಶ್ರೀಮದ್ವಾಲ್ಮೀಕಿ ರಾಮಾಯಣದ ಬಗೆಗೆ ಸುಮಾರು ಮುವ್ವತ್ತು (೩೦) ಸಂಪುಟಗಳಲ್ಲಿ ಇದರ ಆಧ್ಯಾತ್ಮಿಕ, ಸಾಂಕೇತಿಕ, ನೈತಿಕ, ಕೌಟುಂಬಿಕ, ಸಾಮಾಜಿಕ, ರಾಜಕೀಯಾದಿ ಸಂದೇಶಗಳ ರಸ್ಯ ರಹಸ್ಯಾರ್ಥಗಳ ವಿವರಣೆಗಳನ್ನೊಳಗೊಂಡಂತೆ ಈ ವರೆಗೆ ಯಾವ ಗ್ರಂಥವೂ ಕನ್ನಡದಲ್ಲಿ ಇಲ್ಲದ ಕೊರತೆಯನ್ನು ತುಂಬಲು ಯತ್ನಿಸಿ, ಈ ವರೆಗೆ ನಮ್ಮ ಮಾಲೋಲ ಪ್ರಕಾಶನದ ಆಶ್ರಯದಲ್ಲಿ ಎರಡು ಸಂಪುಟಗಳು ಹೊರಬಂದಿವೆ. ಈಗ ಮುಂದಿನ ಗ್ರಂಥಗಳು ಹೊರಬರದಂತಹ ಈ ದುಃಸ್ಥಿತಿಯಲ್ಲಿ ಒಂದು ಪರಿಮಿತ ವ್ಯಾಪ್ತಿಯಲ್ಲಿ ಸದಸ್ಯತ್ವವನ್ನು ಹೀಗೆ ಉದ್ದೇಶಿಸಿದೆ:

ತಾವು ೫೦/– ರೂ.ಗಳನ್ನು ಸಲ್ಲಿಸಿ ಸದಸ್ಯರಾದರೆ, ತಮಗೆ ಈಗ ಪ್ರಕಟಿತವಾಗಿರುವ ಎರಡು ಸಂಪುಟಗಳು (ಹತ್ತು ರೂ. ಬೆಲೆಯವು) ಕೊಡಲ್ಪಟ್ಟು ಈ ಬಗ್ಗೆ ರಶೀತಿಯನ್ನು ಕೊಡಲಾಗುವುದು. ಮುಂದೆ ಸಂಗ್ರಹವಾದ ಮೊತ್ತದಲ್ಲಿ ತಮಗೆ ಇನ್ನೂ ಸುಮಾರು ೪೦ ರೂ. ಬೆಲೆಯುಳ್ಳ ೩ ಅಥವಾ ೪ ಪುಸ್ತಕಗಳೂ ಕಳುಹಲ್ಪಡುವವು. ತಾವು ಸಲ್ಲಿಸುವ ೫೦/– ರೂ. ಮೊತ್ತ, ಈ ಮಾಲೆಯ ಭಾಗಶಃ ಸದಸ್ಯತ್ವ ಶುಲ್ಕವೆಂಬುದನ್ನು ಮಾತ್ರ ನಾವು ನೆನಪಿಡಬೇಕು. ನಮಗೆ ಮುಂಗಡವಾಗಿ ತಾವು ಹಣ ಸಲ್ಲಿಸಿ ಪುಸ್ತಕಗಳ ಪ್ರಕಟಣೆಗೆ

ಸಹಾಯ ಮಾಡಿದ ಪುಣ್ಯ ತಮಗೆ ಸಲ್ಲುತ್ತದೆ. ಈ ೩ ಅಥವಾ ೪ ಪುಸ್ತಕಗಳು ಹೊರಬಂದ ನಂತರ ಮುಂದಿನ ೫ ಪುಸ್ತಕಗಳ ಬಗೆಗೆ ಮತ್ತೆ ತಮಗೆ ವಿನಂತಿಸಿ ಕೊಳ್ಳಲಾಗುವುದು. ಮತ್ತೆ ಸದಸ್ಯರಾಗುವುದೂ ಬಿಡುವುದೂ ನಿಮ್ಮ ಕೈಯ್ಯಲ್ಲಿ ರುತ್ತದೆ. ಲಾಭ-ನಷ್ಟವಿಲ್ಲದ ಈ ಯೋಜನೆಯ ದ್ವಾರಾ ಒಂದ ಮಹಾ ಗ್ರಂಥದ ಕನ್ನಡಾವತಾರ ಆಗುವ ಕಾರ್ಯದಲ್ಲಿ ತಮ್ಮದೂ ಪಾಲಿರುತ್ತದೆ.

ಶ್ರೀಮದ್ರಾಮಾಯಣವನ್ನು ಈ ಲೇಖಕನು ಪ್ರವಚನ ಮಾಡುವಾಗ ಲೆಲ್ಲ, ಎಲ್ಲೆಲ್ಲೂ ಜನರು ಈ ಬಗೆಯ ಗ್ರಂಥಗಳನ್ನು ಅಪೇಕ್ಷಿಸುತ್ತಿರುವುದೇ ಇದರ ಮೂಲ ಸ್ಫೂರ್ತಿ. ಗ್ರಂಥಗಳನ್ನೋದುವಾಗ ತಮಗೆ ನಮ್ಮ ಉಪ ನ್ಯಾಸವನ್ನು ಕೇಳಿದಂತೆಯೇ ಆಗಬೇಕೆಂಬ ಉದ್ದೇಶ್ಯ ನಮ್ಮದು. ಶ್ರೀರಾಮಾ ಯಣದ ಮೇಲೆ ಬಂದ ಗೋವಿಂದರಾಜೀಯ, ಶನಿಶ್ಲೋಕೀ ಮುಂತಾದ ಅನೇಕ ವ್ಯಾಖ್ಯಾನಗಳ ರಮ್ಯಾಂಶಗಳೂ, ಉಪಬೃಹ್ಮಣಗಳಾದ ಚಂಪೂ ರಾಮಾಯಣ, ಕಂಬರಾಮಾಯಣ (ತಮಿಳು, ತುಳಸೀರಾಮಾಯಣ (ಹಿಂದೀ) ಮೊದಲಾದವುಗಳ ವಿಶೇಷ ಪೋಷಕಾಂಶಗಳೂ, ವೇದಗಳು, ವೇದಭಾಷ್ಯಗಳು, ಧರ್ಮಶಾಸ್ತ್ರ, ದೈನಂದಿನ ಜೀವನಕ್ಕೆ ಇವುಗಳ ಹೊಂದಾಣಿಕೆ ಮುಂತಾದ ಅನೇಕ ಅಪೂರ್ವಾರ್ಥ, ಅಪೂರ್ವಾಂಶಗಳ ರಸಾಯನ ರೂಪದಲ್ಲಿ ಹೊರಬರುತ್ತಿರುವ ಈ ಗ್ರಂಥಗಳಿಗೆ ನಾಡಿನ ಅನೇಕ ವಿದ್ವಾಂಸರೂ ಪ್ರತಿ ಭಾನ್ವಿತ ಲೇಖಕರೂ, ಪ್ರತಿಷ್ಠಿತರೂ, ಚುರುಕು ಬುದ್ಧಿಯ ಆಸ್ತಿಕ ಸಾಮಾ ನ್ಯರೂ ಈಗಾಗಲೇ ಮೆಚ್ಚುಗೆ ತೋರಿ, ಯಶಸ್ಸು ಕೋರಿದ್ದಾರೆ.

ಇಂಥ ಯೋಜನೆಗೆ ತಾವು ನೀಡುವ ಯಾವುದೇ ಬೆಂಬಲ ವ್ಯರ್ಥವಾಗ ಲಾರದೆಂಬ ಆಶ್ವಾಸನೆ ನೀಡುವುದು ನಮ್ಮ ಕರ್ತವ್ಯ.

ನಾವಾಗಿ ಕೇಳದೆಯೇ ಹಲವರು ಈಗಾಗಲೆ ೧೦೦/- ರೂ. ಗಳ ಸಹಾಯ ಧನವನ್ನು ಸಲ್ಲಿಸಿರುತ್ತಾರೆ. ಆ ಮೊತ್ತಕ್ಕೆ ಸಮವಾದ/ಅಧಿಕವಾದ ಬೆಲೆಯ ಹೊತ್ತಿಗೆಗಳನ್ನು ಅವರಿಗೆ ಮುಟ್ಟಿಸುವುದು ನಮ್ಮ ಕರ್ತವ್ಯವೆಂದುನಮ್ಮ ನಂಬಿಕೆ.

ಆಸ್ತಿಕರಾದ ತಾವು ಈ ಮಾಲೆಗೆ ಉದಾರವಾಗಿ ಸಹಾಯ ಮಾಡುವಿ ರೆಂದು ನಂಬಿರುವ,

ತಮ್ಮ ಸೇವಾಸಕ್ತ

ಕೆ. ಎಸ್. ನಾರಾಯಣಾಚಾರ್ಯ

(ಪ್ರಧಾನ ಸಂಪಾದಕ.)

'ಮಾಲೋಲ', ಕಲ್ಯಾಣನಗರ,
ಧಾರವಾಡ, ೫೮೦ ೦೦೭

# ಮುನ್ನುಡಿ

ಬಹುಶ್ರುತರೂ ವೇದಸಾರಜ್ಞರೂ ಆದ ಪ್ರೊ. ಕೆ. ಎಸ್. ನಾರಾಯಣಾಚಾರ್ಯರು ಈಗ ಹದಿಮೂರು ವರ್ಷಗಳ ಹಿಂದೆ ಪ್ರಾರಂಭಿಸಿದ 'ವೇದ ಸಂಸ್ಕೃತಿ ಪರಿಚಯ' ಮಾಲೆಯ ಒಂಭತ್ತು ಮತ್ತು ಹತ್ತನೆಯ ಸಂಪುಟಗಳನ್ನು ಈಗ ಒಟ್ಟಿಗೆ ಪ್ರಕಾಶಪಡಿಸುತ್ತಿರುವುದು ಬಹಳ ಸಂತೋಷದ ಸಂಗತಿಯಾಗಿದೆ. ಈ ಎರಡು ಸಂಪುಟಗಳಲ್ಲಿ ಶ್ರೀತತ್ತ್ವವನ್ನು ಕುರಿತ ವ್ಯಾಪಕವಾದ ವಿವೇಚನೆಯನ್ನು ಮಾನ್ಯ ಲೇಖಕರು ಸಮರ್ಥವಾಗಿ ಮಾಡಿದ್ದಾರೆ. ಶ್ರೀ ಮಹಾಲಕ್ಷ್ಮಿಯ ಸ್ವರೂಪವನ್ನು ಒಂಭತ್ತನೆಯ ಸಂಪುಟದಲ್ಲಿಯೂ, ಶ್ರೀ ಭೂ ನೀಳಾ ಸೂಕ್ತಗಳ ವಿವರಣೆಯನ್ನು ಹತ್ತನೆಯ ಸಂಪುಟದಲ್ಲಿಯೂ ಪ್ರತಿಪಾದಿಸಲಾಗಿದೆ.

ಶ್ರೀ ಮಹಾಲಕ್ಷ್ಮಿಯೂ ಹೇಗೆ ವೇದ ಪ್ರತಿಪಾದ್ಯಳಾಗಿದ್ದಾಳೆಂಬುದನ್ನು ಅನೇಕ ಆಧಾರಗಳಿಂದ ಪ್ರತಿಪಾದಿಸಿ ಶ್ರೀಸೂಕ್ತದ ವಿವರಣೆಯನ್ನು ವಿಸ್ತಾರವಾಗಿ ಇಲ್ಲಿ ನೀಡಿದ್ದಾರೆ. ವೇದ ಪರತತ್ತ್ವ ಸ್ವರೂಪಿಯಾದ ಶ್ರೀಮನ್ನಾರಾಯಣನನ್ನು ಸತ್, ಜ್ಯೋತಿ, ಆಕಾಶ, ಪ್ರಾಣ. ಭೂಮಾ ಆತ್ಮಾ ಮೊದಲಾದ ಹೆಸರುಗಳಿಂದ ಹೇಗೆ ಕೊಂಡಾಡಿದೆಯೋ ಹಾಗೆಯೇ ಜಗನ್ಮಾತೆಯಿಂದ ಶ್ರೀದೇವಿಯನ್ನು ಅದಿತಿ, ವಾಗಾಂಭೃಣೀ, ಮೇಧಾ, ಸ್ವಧಾ, ಶ್ರದ್ಧಾ ಮೊದಲಾದ ಶಬ್ದಗಳಿಂದ ಸ್ತುತಿಸಿದೆ. ಇವೆಲ್ಲ ದಿವ್ಯನಾಮಗಳೂ ಆ ಒಬ್ಬ ದೇವಿಗೇ ಅನ್ವಯಿಸುಸುವುವೆಂಬುದನ್ನು ಸಪ್ರಮಾಣವಾಗಿ ತೋರಲಾಗಿದೆ.

ಶ್ರೀ ದೇವಿಯನ್ನು ಅನುಪಮವಾಗಿ ಸ್ತುತಿಸುವ 'ಶ್ರೀಸೂಕ್ತ' ಋಗ್ವೇದಕ್ಕೆ ಸೇರಿದುದಾಗಿದೆ. ಆದರೂ ಇದನ್ನು ಎಲ್ಲ ಶಾಖೆಯವರೂ ಲಕ್ಷ್ಮೀನಾರಾಯಣರ ಆರಾಧನೆಯಲ್ಲಿ ಪುರುಷಸೂಕ್ತದೊಡನೆ ಅನುಸಂಧಾನ ಮಾಡುತ್ತಾರೆ. ಇದು 'ಖಿಲ ಸೂಕ್ತ' ಎಂದು ಪ್ರಸಿದ್ಧವಾಗಿದ್ದರೂ ಇತರ ವೇದ ಭಾಗಗಳಂತೆ ವೇದ ಭಾಗವೇ ಆಗಿ ಪವಿತ್ರತೆಯನ್ನೂ ಪ್ರಾಮಾಣ್ಯವನ್ನೂ ಹೊಂದಿದೆ, 'ಪಂಚದಶರ್ಚ' ಎಂದು ಕರೆಯಲ್ಪಡುವ ಈ ಸೂಕ್ತ ಅಗ್ನಿ

ಯನ್ನು ಸ್ತುತಿಸುವಂತೆ ಕಂಡುಬಂದರೂ ಸಂಪದಭಿಮಾನಿ ದೇವತೆಯೂ, ಜಗನ್ಮಾತೆಯೂ, ವಿಷ್ಣುಪತ್ನಿಯೂ ಆದ ಲಕ್ಷ್ಮೀದೇವಿಯನ್ನು ಸ್ತುತಿಸುವುದೆಂದು ಪ್ರಸಿದ್ಧವಾಗಿದೆ. 'ಶ್ರೀ' ಶಬ್ದದ ಅರ್ಥನಿರೂಪಣೆ ಮಾಡುವಾಗ ಆರು ಬಗೆಯಾಗಿ ನಿರ್ವಚನ ಮಾಡಿದ್ದಾರೆ.

ಶೃಣಾತಿ ನಿಖಿಲಾನ್ ದೋಷಾನ್ ಶ್ರೀಣಾತಿ ಚ
ಗುಣೈರ್ಜಗತ್ ।
ಶ್ರೀಯತೇ ಚಾಖಿಲೈರ್ನಿತ್ಯಂ ಶ್ರಯತೇ ಚ ಪರಂಪದಂ ।
ಶ್ರಯಂತೀಂ ಶ್ರಿಯಮಾಣಾಂಚ ಶೃಣ್ವತೀಂ ಶೃಣತೀಮಪಿ ॥

ಸಾಪರಾಧರಾದ ನಮ್ಮ ಮೊರೆಯನ್ನು ಕೇಳುವವಳು ಅವಳು. ಭಗವಂತನಲ್ಲಿ ನಮ್ಮ ಮೊರೆಯನ್ನು ಬಿನ್ನಯಿಸುತ್ತಾಳೆ ಶ್ರೀದೇವಿ. ಉಪಾಯಾಧಿಕಾರಿಗಳ ದೋಷಗಳನ್ನೆಲ್ಲಾ ಹೋಗಲಾಡಿಸುತ್ತಾಳೆ. ತನ್ನ ಕಾರುಣ್ಯಾದಿ ಗುಣಗಳಿಂದ ಆಶ್ರಿತರಿಗೆ ಕೈಂಕರ್ಯ ಪರ್ಯಂತವಾದ ಗುಣಪರಿಪಾಕವನ್ನುಂಟು ಮಾಡುತ್ತಾಳೆ. ಚೇತನರು ತಮ್ಮ ಉಜ್ಜೀವನಕ್ಕಾಗಿ ಇವಳನ್ನು ಆಶ್ರಯಿಸುತ್ತಾರೆ, ಚೇತನರನ್ನು ಉಜ್ಜೀವನಗೊಳಿಸುವುದಕ್ಕಾಗಿ ಇವಳು ಭಗವಂತನನ್ನು ಆಶ್ರಯಿಸಿದ್ದಾಳೆ.

ವಿಶಿಷ್ಟಾದ್ವೈತ ಸಂಪ್ರದಾಯಕ್ಕನುಸಾರವಾಗಿ ಶ್ರೀದೇವಿಗೆ ವಿಶಿಷ್ಟವಾದ ಸ್ಥಾನವಿದೆ. 'ಆಕಾರತ್ರಯಸಂಪನ್ನಾಂ' ಎಂದು ಹೇಳಿದಂತೆ ಇವಳಿಗೆ ಉಪಾಯತ್ವ, ಉಪೇಯತ್ವ ಮತ್ತು ಪುರುಷಕಾರತ್ವ ಎಂಬ ಮೂರು ಆಕಾರಗಳಿವೆ. ಶ್ರೀದೇವಿಯ ಅನುಗ್ರಹವಿಲ್ಲದೆ ಚೇತನೋದ್ಧಾರವಾಗದು. ಭಗವಂತನೊಡನೆ ಅನಪಾಯಿನೀ ಆಗಿರುವಳು ದೇವಿ ಬ್ರಹ್ಮಲಕ್ಷಣವನ್ನು ಹೇಳುವಾಗ 'ಲಕ್ಷ್ಮೀ ಪತಿತ್ವೇ ಸತಿ ಚೇತನತ್ವಂ' ಎಂದೂ ಹೇಳಬಹುದು. ಬ್ರಹ್ಮ ವಸ್ತುವಿನ ಸ್ವರೂಪನಿರೂಪಕ ಧರ್ಮಗಳಲ್ಲಿ ಲಕ್ಷ್ಮೀಪತಿತ್ವವೂ ಒಂದು. ಲಕ್ಷ್ಮೀನಾರಾಯಣರಿಬ್ಬರೂ ಸೇರಿ ಒಂದೇ ತತ್ತ್ವವೆಂಬುದನ್ನು ಲಕ್ಷ್ಮೀತಂತ್ರ ' ಲಕ್ಷ್ಮೀನಾರಾಯಣಾಖ್ಯಾತಮತೋ ಬ್ರಹ್ಮ ಸನಾತನಂ ' ಎಂದು ಹೇಳುತ್ತದೆ.

'ಅನ್ಯೋನ್ಯೇನಾವಿನಾಭಾವಾತ್ ಅನ್ಯೋನ್ಯೇನ
ಸಮನ್ವಯಾತ್ ।
ತಾದಾತ್ಮ್ಯಂ ವಿದ್ಧಿ ಸಂಬಂಧಂ ಮಮ ನಾಥಸ್ಯ
ಚೋಭಯೋಃ ॥

ಲಕ್ಷ್ಮೀ ದೇವಿಯನ್ನು ಮಹಾವಿಷ್ಣುವಿನ ಶಕ್ತಿ ಎಂದು ಲಕ್ಷ್ಮೀತಂತ್ರ ನಿರೂಪಿಸುತ್ತದೆ. ಶಕ್ತಿ ಎಂಬುಲದು ಇಲ್ಲಿ ಗುಣವಲ್ಲ. ಆದರೆ ಅಧಿಷ್ಠಾತೃವಾದ ದೇವತೆ.

'ವಿಷ್ಣೋಃ ಸರ್ವಾಂಗ ಸಂಪೂರ್ಣಾ ಭಾವಾಭಾವಾನು
ಗಾಮಿನೀ ।
ಶಕ್ತಿರ್ನಾರಾಯಣೀ ದಿವ್ಯಾಸರ್ವಸಿದ್ಧಾಂತ ಸಮ್ಮತಾ ॥
ದೇವಾಚ್ಛಕ್ತಿಮತೋ ಭಿನ್ನಾ ಬ್ರಹ್ಮಣಃ ಪರಮೇಷ್ಠಿನಃ ।
ಏಷ ಚೈಷಾ ಚ ಶಾಸ್ತ್ರೇಷು ಧರ್ಮಧರ್ಮಿಸ್ವಭಾವತಃ ॥
ಭವದ್ಭಾವ ಸ್ವರೂಪೇಣ ತತ್ತ್ವಮೇಕಮಿವೋದಿತಾ ॥

ಶ್ರೀದೇವಿಯು ಭಗವಂತನಿಗಿಂತಲೂ ಭಿನ್ನಳಾದಳೂ ಅವನನ್ನು ಬಿಟ್ಟಿರದವಳಾಗಿ ಅವನೊಡನೆಯೇ ಎಂದೆಂದೂ ಕೂಡಿರುವವಳಾಗಿ ಅವನೊಡನೆ ಸೇರಿ ಒಂದೇ ತತ್ತ್ವವೆನಿಸಿದ್ದಾಳೆ. ' ಅನನ್ಯಾರಾಘವೇಣಾಹಂ ಭಾಸ್ಕರೇಣ ಪ್ರಭಾ ಯಥಾ ' ಎಂಬ ಶ್ರೀ ಸೂಕ್ತಿಯಲ್ಲಿ ಇದನ್ನು ಕಾಣಬಹುದು.

ಚಿದಚಿದಾತ್ಮಕವಾದ ಸಮಸ್ತ ಜಗತ್ತೂ ಲಕ್ಷ್ಮೀನಾರಾಯಣರಿಗೆ ಶೇಷಭೂತವಾದುದು. ಆ ಶ್ರೀದೇವಿಯು ಭಗವಂತನಿಗೆ ಶೇಷಭೂತೆಯಾಗಿದ್ದಾಳೆ. ಶ್ರೀಮನ್ನಿಗಮಾಂತ ಮಹಾದೇಶಿಕರು 'ಪುರುಷಾಸ್ತವ ವಿಭೂತಿಃ ಅಚ್ಯುತ ಲಕ್ಷ್ಮ್ಯಾಃ ಸ್ತ್ರೀಸಂಜ್ಞಾಃ । ನಾಸ್ತಿಪರಂ ಯುವಯೋಃ ಸಾ ಪಿ ಶ್ರೀರ್ಭವತಿ ತವ ಕಿಂ ಪುನರಿತರತ್ ॥ ಎಂದು ಸ್ತುತಿಸಿದ್ದಾರೆ. ' ತಿರುವುಕ್ಕುಂ ತಿರು

ವಾಹಿಯ ಶೆಲ್ವ' ಎಂದು ಆಳ್ವಾರ್ರವರೂ ಕಃ ಶ್ರೀಃ ಶ್ರಿಯಃ ' ಪರಮ ಸತ್ವಸಮಾಶ್ರಯಃ ಕಃ ' ಎಂದು ಯಾಮುನರೂ ಸ್ತುತಿಸಿರುವುದನ್ನು ಕಾಣ ಬಹುದು.

ಶ್ರೀತತ್ತ್ವದ ಬಗೆಗೆ ಬಹಳ ವಿಚಾರ ನಡೆದಿದೆ. ಶ್ರೀದೇವಿ ಚೇತನ ಕೋಟಿಯಲ್ಲಿ ಸೇರುವಳೇ ? ಹಾಗೆ ಸೇರಿದರೆ ಅವಳಿಗೇನಾದರೂ ವೈಶಿಷ್ಟ್ಯ ವಿದೆಯೇ ? ಅಥವಾ ಅವಳು ಈಶ್ವರ ಕೋಟಿಯಲ್ಲಿ ಸೇರುವಳೇ ? ಶ್ರೀ ದೇವಿ ಮತ್ತು ಮಹಾವಿಷ್ಣು ಇವರು ಬೇರೆ ಬೇರೆಯೇ ಅಲ್ಲವೇ ? ಮಹಾ ವಿಷ್ಣುವಿನ ಶಕ್ತಿ ಎಂಬ ಗುಣವನ್ನೇ ಶ್ರೀದೇವಿಯೆಂದು ರೂಪಣ ಮಾಡಿ ದೆಯೇ ? ವಿಷ್ಣುಶಕ್ತಿ ಎಂದು ಯಾವ ಅರ್ಥದಲ್ಲಿ ಹೇಳಬಹುದು ? ಮಹಾ ವಿಷ್ಣುವಿಗೂ ಶ್ರೀದೇವಿಗೂ ಸಾಮ್ಯವೇ ? ಅದು ಹೇಗೆ ? ಮೋಕ್ಷಾರ್ಥಿ ಯಾದವನು ಯಾರನ್ನು ಆಶ್ರಯಿಸಬೇಕು ? ಇವರಿಬ್ಬರನ್ನೂ ಒಟ್ಟಾಗಿ ಆಶ್ರಯಿಸಬೇಕೆ ? ಅಥವಾ ಇವರಲ್ಲಿ ಒಬ್ಬನಾದ ಮಹ ವಿಷ್ಣುವನ್ನು ಮಾತ್ರ ಆಶ್ರಯಿಸಬೇಕೇ ? ಮುಕ್ತನಾದವನು ಕೈಂಕರ್ಯವನ್ನು ಸಲ್ಲಿಸುವುದು ಯಾರಿಗೆ ? ಇಲ್ಲಿ ಬೇರೆ ಬೇರೆ ಸಿದ್ಧಾಂತೆಗಳನ್ನು ಬೇರೆ ಬೇರೆ ಸಂಪ್ರದಾಯ ದವರು ಮುಟ್ಟಿದ್ದಾರೆ. ಆದರೆ ಅವರೆಲ್ಲಾ ಶ್ರೀದೇವಿಯು ವಿಷ್ಣುಪತ್ನೀ ಎಂದೂ ಅವಳು ಮಹಾವಿಷ್ಣುವಿನೊಡನೆ ಎಡೆಬಿಡದೆ ಯಾವಾಗಲೂ ಕೂಡಿ ರುವಳೆಂದೂ, ಅವಳ ಅನುಗ್ರಹವಿಲ್ಲದೆ ಲೌಕಿಕವಾದ ಸಂಪತ್ತಾಗಲೀ ಮೋಕ್ಷ ಸಂಪತ್ತಾಗಲೀ ಲಭಿಸುವುದಿಲ್ಲವೆಂದೂ, ಶ್ರೀಮನ್ನಾರಾಯಣನನ್ನು ಹೇಳು ವಾಗ ಶ್ರಿಯಃಪತಿ' ಎಂದೇ ನಿರೂಪಿಸಬೇಕೆಂದೂ ಒಪ್ಪಿದ್ದಾರೆ.

ಶ್ರೀಮನ್ನಿಗಮಾಂತ ಮಹಾದೇಶಿಕರವರ ಅಭಿಪ್ರಾಯದಂತೆ ಲಕ್ಷ್ಮೀ ನಾರಾಯಣರು ಕೂಡಿ ಒಂದು ತತ್ತ್ವ. ಲಕ್ಷ್ಮೀವಿಶಿಷ್ಟನಾದ ನಾರಾಯ ಣನೇ ಉಪಾಯ ಮತ್ತು ಪ್ರಾಪ್ಯ. 'ಮಾಮೇಕಂ' ಎಂಬ ನುಡಿ ಹೇಗೆ ಗುಣ ವಿಗ್ರಹಯುಕ್ತನಾದವನನ್ನು ಹೇಳುವುದೋ ಹಾಗೆಯೇ ಲಕ್ಷ್ಮೀ ವಿಶಿಷ್ಟ ನಾದವನನ್ನೇ ಹೇಳುತ್ತದೆ.

ವಿಶಿನಷ್ಟಿ ತಥಾಪಿ ಶ್ರೀಃ ಗುಣವಿಗ್ರಹವತ್ಪ್ರಭುಂ ।
ಈಶ್ವರೀ ಸರ್ವಭೂತಾನಾಂ ಇಯಂ ಭಗವತಃ ಪ್ರಿಯಾ ॥

ಸಂಶ್ರಿತತ್ರಾಣದೀಕ್ಷಾಯಾಂ ಸಹಧರ್ಮಚರೀ ಸ್ಮೃತಾ ॥ '
'ಯಥಾ ಗುಣಾದಿ ವೈಶಿಷ್ಟ್ಯೇ ಸಿದ್ಧೋಪಾಯ್ಯೈಕಮಕ್ಷತಂ।
ಏವಂ ಪತ್ನೀ ವಿಶಿಷ್ಟತ್ವೇಪಿ ಅಭೀಷ್ಟಂ ಶಾಸ್ತ್ರಚಕ್ಷುಷಾಂ ॥

ಈಶ್ವರ ಕೋಟಿಗೇ ಸೇರುವ ಶ್ರೀದೇವಿ ಭಗವಂತನಂತೆಯೇ ಅವಾಙ್ಮನಸ ಗೋಚರವಾದ ವೈಭವವನ್ನುಳ್ಳವಳು. ಲಕ್ಷ್ಮೀನಾರಾಯಣರಿಬ್ಬರಿಗೂ ಜ್ಞಾನಾನಂದಾದಿಗಳು ಸಮವಾದುದರಿಂದಲೂ, ಜಗಜ್ಜನಕತ್ವ, ಶೇಷಿತ್ವ, ಶರಣ್ಯತ್ವ, ಪ್ರಾಪ್ಯತ್ವ ಮೊದಲಾದವುಗಳಲ್ಲಿ ಸಾಮ್ಯವಿರುವುದರಿಂದಲೂ ಇಬ್ಬರಿಗೂ ಸಾಮ್ಯವಿದೆ ಎಂದು ನಿರ್ವಾಹ ಮಾಡಬೇಕು. ಇಬ್ಬರೂ ಸೇರಿ ಒಂದು ಹೇಗೆ ಎಂದರೆ ದೇವತಾದ್ವಂದ್ವದ ರೂಪದಲ್ಲಿ ಎಂದು ತಿಳಿಯಬೇಕು. ಅತ್ಯಂತ ಸಮವಾಗಿರುವ ದೇವತಾ ದ್ವಂದ್ವ ಇದು. ಸಮಸ್ತ ಪ್ರಪಂಚಕ್ಕೆ ಇವರಿಬ್ಬರೂ ಏಕ ಶೇಷಿಗಳಾಗಿದ್ದಾರೆ. ಅಗ್ನೀಷೋಮೀಯ ದೋಪಾದಿಯಲ್ಲಿ. ಸಮಸ್ತಾತ್ಮ ಹವಿಸ್ಸಿಗೆ ಉದ್ದೇಶ್ಯರಾದ ದೇವತಾ ವಿಶೇಷ ಇವರು. ಶ್ರೀದೇವಿ ವಿಷ್ಣುಶಕ್ತಿ ಎಂದು ಹೇಳುವಲ್ಲಿ ತಾತ್ಪರ್ಯ ವೇನೆಂದರೆ ಶ್ರೀದೇವಿ ಮಹಾವಿಷ್ಣುವಿಗೆ ಪತ್ನಿಯಾಗಿರುವ ರೂಪದಲ್ಲಿ ವಿಶೇಷ ಣತ್ವವನ್ನು ಹೊಂದಿದ್ದಾಳೆಂಬುದೇ ಆಗಿದೆ. ಸೃಷ್ಟ್ಯಾದಿಗಳಲ್ಲಿ ಪ್ರೇರಕತ್ವ ಮತ್ತು ಸಹಕಾರಿತ್ವ ಇವಳಿಗೆ ಇರುವ ಕಾರಣ ಇವಳನ್ನು 'ಶಕ್ತಿ' ಎಂದು ಹೇಳಿದ್ದಾರೆ.

'ನಿತ್ಯಂ ಅಜ್ಞಾತ ನಿಗ್ರಹಾ' ಆದ ಶ್ರೀದೇವಿಯ ಅನುಗ್ರಹವಾಗದೇ ಭಗವಂತನನ್ನು ಸಮೀಪಿಸುವುದಕ್ಕೂ ಆಗುವುದಿಲ್ಲ. ಎಲ್ಲರೂ ಮೊದಲು ಆಶ್ರಯಿಸುವುದು ಶ್ರೀದೇವಿಯನ್ನು. ದೇವಿ 'ಸಕಲಭುವನಪ್ರಾರ್ಥನಾಕಾಮ ಧೇನು' ಆಗಿದ್ದಾಳೆ. ಅವಳ ನಿಜಸ್ವರೂಪವನ್ನು ಅರಿತು ಅವಳನ್ನು ಸೇವಿಸಿ ಸಕಲಾಭೀಷ್ಟಗಳನ್ನೂ ಕರಗತಮಾಡಿಕೊಳ್ಳಬಹುದು.

ಹೀಗೆ ಈ ಎರಡು ಸಂಪುಟಗಳಲ್ಲಿ ನಮ್ಮ ನಾಡಿನ ಶ್ರೇಷ್ಠ ವಿದ್ವಾಂಸ ರಾದ ಪ್ರೊ. ಕೆ. ಎಸ್. ನಾರಾಯಣಾಚಾರ್ಯರು ಶ್ರೀತತ್ತ್ವದ ನಿರೂಪಣೆ ಯನ್ನು ಅತ್ಯಂತ ಪ್ರಭಾವಶಾಲಿಯಾಗಿ ಮಾಡಿದ್ದಾರೆ. ೯೨ ಪುಟಗಳ ವಿಸ್ತಾರ

ವಾದ ಪ್ರವೇಶದಲ್ಲಿ ಲಕ್ಷ್ಮೀತತ್ತ್ವಸ್ವರೂಪವನ್ನೂ, ವೇದಾಗಮಗಳ ಪರಸ್ಪರ ಸಂಬಂಧವನ್ನೂ, ಲಕ್ಷ್ಮೀತತ್ತ್ವ ವೇದಪ್ರತಿಪಾದ್ಯವಾಗಿರುವುದೆಂಬುದನ್ನೂ ಸಾಧಾರವಾಗಿ ಪ್ರತಿಪಾದಿಸಿದ್ದಾರೆ. ಈ ಗ್ರಂಥದಲ್ಲಿ ಶ್ರೀಸೂಕ್ತದ ವಿವರಣೆ ಮುಖ್ಯವಾದ ಭಾಗವಾಗಿದೆ. ಶ್ರೀಸೂಕ್ತದ ಒಂದೊಂದು ನಾಮದ ನಿರ್ವಚನವನ್ನೂ ವಿಸ್ತಾರವಾಗಿ ನಿರ್ವಹಿಸಿದ್ದಾರೆ. ವಿಶೇಷವಾಗಿ ಲಕ್ಷ್ಮೀತಂತ್ರದ ಪ್ರಮಾಣವನ್ನು ಒಂದೊಂದು ಸಂದರ್ಭದಲ್ಲಿಯೂ ಪುಷ್ಕಲವಾಗಿ ಉದಾಹರಿಸಿ ಸಮರ್ಥಿಸಿದ್ದಾರೆ. ಲಕ್ಷ್ಮೀತಂತ್ರವು ಹೇಗೆ ಶ್ರೀಸೂಕ್ತದ ರಹಸ್ಯಾರ್ಥಗಳ ಕೈಗನ್ನಡಿಯಾಗಿದೆ ಎಂಬುದನ್ನು ಪ್ರಮಾಣೀಕರಿಸಿದ್ದಾರೆ. ಹತ್ತನೆಯ ಸಂಪುಟದಲ್ಲಿ ಅಥರ್ವವೇದೀಯ ಭೂಸೂಕ್ತದ ೬೩ ಮಂತ್ರಗಳನ್ನೂ ಸಮಗ್ರವಾಗಿ ವ್ಯಾಖ್ಯಾನಿಸಿರುವುದು ಬಹಳ ಪ್ರಯೋಜನಕರವಾಗಿದೆ. ಇದೊಂದು ಅದ್ಭುತವಾದ ಸೂಕ್ತ. ಕೃಷ್ಣಯಜುರ್ವೇದದಲ್ಲಿ ಬರುವ ಭೂಸೂಕ್ತ, ಶ್ರದ್ಧಾಸೂಕ್ತ, ಮೇಧಾಸೂಕ್ತ, ಅದಿತಿಸೂಕ್ತ ಮುಂತಾದವುಗಳನ್ನೂ ಇಲ್ಲಿ ವಿವರಿಸಲಾಗಿದೆ.

'ವೇದ ಸಂಸ್ಕೃತಿ ಪರಿಚಯ'ದ ಹತ್ತು ಸಂಪುಟಗಳನ್ನು ಪ್ರಕಾಶಪಡಿಸುವ ಯೋಜನೆಯನ್ನು ಪೂರ್ಣಗೊಳಿಸಿ ಮಾನ್ಯ ಲೇಖಕರು ಕೃತಕೃತ್ಯರಾಗಿದ್ದಾರೆ. ಈ ಸಂಪುಟಗಳ ನಾಮಧೇಯಕ್ಕನುಸಾರವಾಗಿ ಲೇಖಕರು ವ್ಯಾಪಕವಾಗಿ ಅನೇಕ ವೇದ ಭಾಗಗಳ ಅರ್ಥವನ್ನು ಅಪೂರ್ವವಾದ ರೀತಿಯಲ್ಲಿ ನಿಶ್ಚಯಿಸಿದ್ದಾರೆ. ವೇದಗಳು ಬಹಳ ಗಹನವಾದವೆಂದೇ ನಮ್ಮ ಹಿರಿಯರು ಬಹಳ ಹಿಂದಿನಿಂದಲೂ ಹೇಳುತ್ತಾ ಬಂದಿದ್ದಾರೆ. ಅದರ ರಹಸ್ಯಗಳನ್ನು ಭೇದಿಸಿ ಅರಿಯಬೇಕಾದರೆ ಗಾಢವಾದ ತಪಸ್ಸು ಆವಶ್ಯಕ. ಮೇಲ್ನೋಟಕ್ಕೆ ಕಂಡುಬರುವ ಅರ್ಥವೇ ಎಲ್ಲಾ ಎಂದೇ ಸಾಧಿಸುವುದಕ್ಕಾಗದೇ, ಆಳವಾಗಿ ವಿಚಾರಮಾಡಿ ವೇದಸೂಕ್ತಿಗಳ ಸಾಮಂಜಸ್ಯವನ್ನೂ ರಹಸ್ಯಾರ್ಥವನ್ನೂ ಕಾಣಬೇಕಾಗಿದೆ. ಈ ನಿಟ್ಟಿನಲ್ಲಿ ಸನ್ಮಾನ್ಯ ಕೆ. ಎಸ್. ನಾರಾಯಣಾಚಾರ್ಯರು ಸಫಲ ಪ್ರಯತ್ನ ಮಾಡಿ ಯಶಸ್ಸನ್ನು ಗಳಿಸಿದ್ದಾರೆ. ಆಳವಾಗಿ ವೇದಾಧ್ಯಾಯನ ಮಾಡಿ, ಸಂಪ್ರದಾಯದ ರಹಸ್ಯಗಳನ್ನರಿತು, ಸ್ವತಂತ್ರವಾಗಿ ಆಲೋಚನೆ ಮಾಡಿ, ಅಪವ್ಯಾಖ್ಯಾನಗಳ ಸುಳಿಗೆ ಸಿಕ್ಕದೆ, ತುಲನಾತ್ಮಕವಾದ ವಿಚಾರಗಳನ್ನು

ಶೀಸಿ ವೇದಸೂಕ್ತಿಗಳಿಗೆ ಸಮಂಜಸವಾದ ಅರ್ಥಗಳನ್ನು ನಿರೂಪಿಸಿದ್ದಾರೆ. ಇವರು ನೀಡಿರುವ ಅನೇಕ ವಿವರಣೆಗಳು ಅಪೂರ್ವವಾಗಿ ಸಂಶೋಧಕರ ಕಣ್ಣನ್ನು ತೆರೆಯಿಸುವಂತಿವೆ

ವೇದಸಂಸ್ಕೃತಿಯ ಪರಿಚಯುವನ್ನು ಸಾಕಷ್ಟು ವ್ಯಾಪಕವಾಗಿ ಈ ಹತ್ತು ಸಂಪುಟಗಳಲ್ಲಿ ಪರಿಣಾಮಕಾರಿಯಾಗಿ ಮಾಡಿಕೊಟ್ಟಿರುವ ಪ್ರೊ. ಕೆ ಎಸ್. ನಾರಾಯಣಾಚಾರ್ಯರಿಗೆ ಕನ್ನಡ ಜನತೆ, ಸಂಶೋಧಕವರ್ಗ ಹಾಗೂ ಆಸ್ತಿಕ ಸಮುದಾಯ ಅತ್ಯಂತ ಕೃತಜ್ಞವಾಗಿದೆ. ಈ ಸಂಪುಟಗಳನ್ನು ಜಿಜ್ಞಾಸು ಗಳೆಲ್ಲರೂ ಅಧ್ಯಯನ ಮಾಡಬೇಕೆಂದೂ ಅದರಿಂದ ಸ್ಫೂರ್ತಿಯನ್ನು ಪಡೆಯ ಬೇಕೆಂದೂ ನಾನು ಕೋರುತ್ತೇನೆ.

ವೇದಾಂತ ವಿದ್ವಾನ್, ಡಾ॥ ಎಸ್. ಎಸ್ ಅನಂತರಂಗಾಚಾರ್ಯ

(ನಿವೃತ್ತ) ಉಪನಿರ್ದೇಶಕರು, ಸಾಹಿತ್ಯ ಮತ್ತು ಸಂಸ್ಕೃತಿ ವಿಭಾಗ

(ಕರ್ನಾಟಕ ಸರ್ಕಾರ)

ಸದಸ್ಯರು, ಸಂಸ್ಕೃತ ಸಂಶೋಧನ ಸಂಸತ್. ಮೇಲ್ಕೋಟೆ,

ಮತ್ತು, ಗೌರವ ಕುಲಸಚಿವರು, ಭಾರತೀಯ ವಿದ್ಯಾಭವನ.

ಬೆಂಗಳೂರು.

—೦—

(ವಿ. ಸೂ : ಸುಂದರವಾದ ಮುನ್ನುಡಿಯನ್ನು ಆತ್ಮೀಯತೆಯಿಂದ, ಅಭಿಮಾನದಿಂದ. ಶೀಘ್ರವಾಗಿ ಬರೆದು ಕಳಿಸಿ ಕೃಪೆಮಾಡಿದ ಡಾ. ಎಸ್ ಎಸ್. ಅನಂತರಂಗಾಚಾರ್ಯರಿಗೆ ಲೇಖಕನು ಅತ್ಯಂತ ಕೃತಜ್ಞನಾಗಿದ್ದಾನೆ.

—ಕೆ. ಎಸ್. ನಾರಾಯಣಾಚಾರ್ಯ)

# ಅಭಿನಂದನೆ

ಜ್ಞಾನಾನಂದಮಯಂ ದೇವಂ ನಿರ್ಮಲ ಸ್ಫಟಿಕಾಕೃತಿಮ್
ಆಧಾರಂ ಸರ್ವ ವಿದ್ಯಾನಾಂ ಹಯಗ್ರೀವ ಮುಪಾಸ್ಮಹೇ ॥

ಪ್ರೊ. ಕೆ. ಎಸ್. ನಾರಾಯಣಾಚಾರ್ಯ ಅವರಿಂದ ಇದುವರೆವಿಗೂ ವೇದ ಸಂಸ್ಕೃತಿ ಪರಿಚಯ ಗ್ರಂಥಮಾಲೆಯಲ್ಲಿ ಅರಳಿದ ಎಂಟು ಸಂಪುಟಗಳನ್ನೂ ನಾನು ಓದಿದೆ. ಇವು ಅತ್ಯಂತ ಮಹತ್ವದಿಂದ ಕೂಡಿದ ಶ್ರೇಷ್ಠ ಕೃತಿಗಳು ಎನ್ನುವುದರಲ್ಲಿ ಯಾವ ಸಂಶಯವೂ ಇಲ್ಲ. ವೇದದ ಮಹಾ ಮೌಲ್ಯಗಳು ಇದರಲ್ಲಿವೆ. ಜಗತ್ತು ಇಂದು ಅಧಃಪತನದ ಹಾದಿಯಲ್ಲಿ ನಡೆಯಲು ಹೊರಟಿರುವಾಗ ಜನತೆಯನ್ನು ಎಚ್ಚರಿಸಿ ಪ್ರಜ್ಞೆ ಮೂಡಿಸುವಂತಹ ಸನಾತನ ಶ್ರೇಷ್ಠ ವಿಚಾರಗಳನ್ನು ನಾವು ಇದರಲ್ಲಿ ಕಾಣಬಹುದು. ಮಾನವ ತನ್ನ ಜೀವನದಲ್ಲಿ ತನ್ನ ಕರ್ತವ್ಯವೇನು ಎಂಬುದನ್ನು ತಿಳಿದು ಅದರಂತೆ ನಡೆಯಬೇಕೆಂಬುದೇ ವೇದದ ಸಾರ. ಅವನ ಸರ್ವತೋಮುಖ ಶ್ರೇಯೋಭಿವೃಧಿಗಾಗಿ ಕತ್ತಲೆಯಿಂದ ಬೆಳಕಿಗೆ ನಡೆಸುವ ದಿವ್ಯಚಕ್ಷುಗಳನ್ನು ನಾವು ಈ ಉತ್ತಮ ಕೃತಿಗಳ ಅಧ್ಯಯನದಿಂದ ಪಡೆಯಬಹುದಾಗಿದೆ. ವೃತ್ರಾಸುರನ ವೃತ್ತಾಂತದಿಂದ, ನಚಿಕೇತ ಯಮನ ಪ್ರಶ್ನೋತ್ತರಗಳಿಂದ, ಯಮ–ಯಮಿಯರ ಸಂವಾದದಿಂದ 'ಗೋ'ವನ್ನು 'ಅಗ್ನಿ'ಯ ರಹಸ್ಯವನ್ನೂ, ಉಪನಿಷತ್ತಿನ ಒಳಗುಟ್ಟನ್ನು ವಸಿಷ್ಠ–ವಿಶ್ವಾಮಿತ್ರರಂತಹ ಋಷಿಮುಗಳ ನಡೆನುಡಿಯನ್ನು, ದಾಂಪತ್ಯದ ಸರಿಯಾದ ಅರ್ಥವನ್ನು, 'ಮಹಾವಿಷ್ಣು'ವನ್ನು ನಾವು ಅಭ್ಯಸಿಕೊಂಡಲ್ಲಿ ನಮಗೆ ಇಹಪರಗಳೆರಡಲ್ಲೂ ಸರ್ವ ಸುಖ ಸಂತೋಷಗಳೂ ಲಭಿಸುವುದರಲ್ಲಿ ಅನುಮಾನವಿಲ್ಲ. ಭಾರತೀಯ ಸಂಸ್ಕೃತಿಯ ಉಜ್ವಲ ಪರಂಪರೆಯನ್ನು ಹಿಡಿದೆತ್ತಲು ಈ ವೇದ ಸಂಸ್ಕೃತಿ ಪರಿಚಯ ಸಂಪುಟಗಳು ಮಾರ್ಗದರ್ಶಕವಾಗಿವೆ. ಜ್ಞಾನದೀವಿಗೆ ಆಗಿವೆ. ಇಂತಹ ಕೃತಿಗಳನ್ನು ಸಮಾಜಕ್ಕೆ ಕೊಟ್ಟ ಗ್ರಂಥಕರ್ತರು ಪುಣ್ಯಪುರುಷರು—

ಎ. ಪಂಕಜಾ
ಕನ್ನಡ ಕಾದಂಬರೀಕಾರರು.
ಸ್ಥಾಪಕರು :
ಮಹಿಳಾ ಸಹಕಾರ ಬ್ಯಾಂಕು. (ನಿಯಮಿತ)

ಬೆಂಗಳೂರು–೫೬೦,೦೦೩
ದಿನಾಂಕ : ೧೦-೭-೮೬

# ಅರ್ಪಣೆ



ಶ್ರಿಯೇ ಶೇಷಾಚಲಮಣೇಃ ಶಾಂರ್ಗಿಣೋ ಹೃದಯಂಗಮಾಂ ।
ಅನುಕಂಪಾಮಿವಾಕಂಪಾಂ ಅಂಬುಮಂಬುಜವಾಸಿನೀಂ ॥

# ಶ್ರೀ ಮಹಾಲಕ್ಷ್ಮೀ

ಶ್ರಿಯಃ ಪತಿತ್ವ ಮಾತ್ರೇಣ ಪರತ್ವಂ ಯಸ್ಯ ಸಿದ್ಧ್ಯತಿ।
ತಂ ವಂದೇ ಪರಮಾನಂದಂ ಪ್ರಣತಾರ್ತಿಹರಂ ಹರಿಂ ॥೧॥

ಉದ್ಧೃತಾ ಯಾ ವರಾಹೇಣ, ಧೃತಾ ಶಿರಸಿ ಶೇಷಿಣಾ।
ಶೇಷರೂಪೇಣ ಭೂದೇವೀ ಸಾ ಮಾಮವತು ಸರ್ವದಾ ॥೨॥

ಯಸ್ಯಾಃಕಟಾಕ್ಷಕ್ಷೇಪೇಣ ಶ್ರೀಹರೇಃ ಪರಮಾತ್ಮನಃ।
ದಯಾಪೂರ್ಣಾ ಭವೇಲ್ಲೀಲಾ ಸಾ ಮಾಂ ನೀಳ್ಯಾವತು ಸ್ವಯಂ ॥೩॥

ಶ್ರೀವಿಷ್ಣೋರ್ದೇವದೇವಸ್ಯ ಸ್ವರೂಪಕಥನಾತ್ಪರಂ।
ವರ್ಣ್ಯತೇ ಮಹಿಮಾ ತಸ್ಯ ಮಹಿಷೀಣಾಂ ಯಥಾಮತಿ ॥೪॥

ಶ್ರೀದೇವಿಗೆ ಒಡೆಯನಾದ ಮಾತ್ರದಿಂದಲೇ ಯಾವ (ಶ್ರೀವಿಷ್ಣುವಿಗೆ) ಸಕಲದೇವತೆಗಳಿಗಿಂತ ಒಂದು ಹೆಚ್ಚಾದ ದೊಡ್ಡತನವು, ಉತ್ಕರ್ಷವು, ಸಿದ್ಧಿಸುವುದೋ, ಆ ಪರಮಾನಂದಸ್ವರೂಪನೂ, ಶರಣಾಗತರ ದುಃಖನಿವಾರಕನೂ ಆದ ಶ್ರೀಹರಿಯನ್ನು ನಮಸ್ಕರಿಸುತ್ತೇನೆ." ॥೧॥ (ಇದು ಲಕ್ಷ್ಮೀಸ್ತುತಿಯಾಗಿರುವಂತೆ, ಹರಿಸ್ತುತಿಯೂ ಆಗಿದೆ.)

"ಯಾವ ಭೂದೇವಿಯು ಹಿಂದೆ ವರಾಹಾವತಾರರೂಪೀ ವಿಷ್ಣುವಿನಿಂದ (ಹಿರಣ್ಯಾಕ್ಷನ ದೆಸೆಯಿಂದ, ಮುಳುಗುತ್ತಿರುವ ಅವಸ್ಥೆಯಲ್ಲಿ) ಉದ್ಧರಿಸಲ್ಪಟ್ಟಳೋ, ಸರ್ವಲೋಕಕ್ಕೂ ಶೇಷಿಯಾದ (ಒಡೆಯನಾದ) ಆ ವಿಷ್ಣುವಿನಿಂದಲೇ, ಶೇಷರೂಪದಲ್ಲಿ ತಲೆಯಮೇಲೆಯೂ ಧರಿಸಲ್ಪಟ್ಟಳೋ, ಆ ಪರದೇವತೆಯಾದ ದೇವಿ ನನ್ನನ್ನು ರಕ್ಷಿಸಲಿ." ॥೨॥ (ಇದು ಭೂಸ್ತುತಿ.)

"ಪರಮಾತ್ಮನಾದ ಶ್ರೀಹರಿಯ ಜಗತ್ಸೃಷ್ಟ್ಯಾದಿ ಲೀಲೆಯು ಯಾವ ನೀಳಾದೇವಿಯ ಕಟಾಕ್ಷದ ಕೇವಲ ಒಂದಂಶದಿಂದಲೇ ದಯೆಯಿಂದಲೂ ಪೂರ್ಣವಾಗಿರುವುದೋ, (ಹಾಗಿಲ್ಲದೇ ಹೋಗಿದ್ದರೆ ಯಾವ ಈ ಜಗದ್ವ್ಯಾಪಾರವೆಲ್ಲ ದಯಾರಹಿತವಾದ ಕ್ರೂರಲೀಲೆಯಾಗಿ ಬಿಡುತ್ತಿತ್ತೋ.) ಆ ದೇವಿಯು ತಾನೇ ನನ್ನನ್ನು ರಕ್ಷಿಸಲಿ." ॥೩॥ (ಇದು ನೀಳಾಸ್ತುತಿ.)

"ದೇವತಾ ಸಾರ್ವಭೌಮನಾದ ಶ್ರೀವಿಷ್ಣುವಿನ ಗುಣ ಸ್ವರೂಪಾದಿಗಳನ್ನು (ಈ ಹಿಂದಿನ ನಮ್ಮ 'ವೇದಸಂಸ್ಕೃತಿಯ ಪರಿಚಯದ' ಎಂಟನೆಯ ಸಂಪುಟದಲ್ಲಿ) ವರ್ಣಿಸಿ, ನಿರೂಪಿಸಿದ ಮೇಲೆ, ಅವನ ದಿವ್ಯ ಮಹಿಷಿಯರಾದ ಶ್ರೀದೇವಿ, ಭೂದೇವಿ, ನೀಳಾದೇವಿಯರ ಮಹಿಮೆಯು ಈಗ, ಪ್ರಕೃತ ಈ ಒಂಭತ್ತನೆಯ ಸಂಪುಟದಲ್ಲಿ ನಮ್ಮ ಬುದ್ಧಿಗೆ ಎಟುಕಿದಷ್ಟು ವರ್ಣಿಸಲ್ಪಡುತ್ತದೆ." ॥೪॥

## ಪ್ರವೇಶ

ವೇದಗಳ ಆಳಪರಿಚಯವಿಲ್ಲದ, ಅರ್ಧಮರ್ಧ ತಿಳುವಳಿಕೆಯ ಶ್ರದ್ಧಾಳುಗಳಿಗೆ ಏಳಬಹುದಾದ ಒಂದು ಸಂದೇಹವನ್ನು ಮೊದಲಿನಲ್ಲಿ ಪರಿಹಾರ ಮಾಡಿಕೊಳ್ಳಬೇಕಾದುದು ನಮ್ಮ ಆದ್ಯ ಕರ್ತವ್ಯ. ಅದೇನೆಂದರೆ, ಲಕ್ಷ್ಮೀವಿಷಯಕವಾದ ಯಾವುದೊಂದು ಪೂರ್ಣಸೂಕ್ತವೂ ವೇದದಲ್ಲಿ (ಅದರಲ್ಲೂ ಋಗ್ವೇದದಲ್ಲಿ,) —ಅವಳ ಈ ಹೆಸರಿನೊಡನೆಯೇ ಎಲ್ಲೂ ಕಂಡು ಬರುವುದಿಲ್ಲವೆಂದೂ, ಆದರೆ ಶ್ರೀವಿಷಯಕವಾದ ಸುಪ್ರಸಿದ್ಧ ಶ್ರೀಸೂಕ್ತವು 'ಈಚಿನ'ದೆಂದೂ ಆದರೂ ಇದೂ ಯಾವ ವೇದದ ಯಾವ ಶಾಖೆಯ ಎಷ್ಟನೇ ಮಂತ್ರವೆಂಬುದೂ ತಿಳಿಯದೆ, 'ಖಿಲ'ವಾಗಿ, 'ಪರಿಶಿಷ್ಟ' ಮಂತ್ರವೆಂದು ಪರಿಗಣಿಸಲ್ಪಟ್ಟು, ಋಗ್ವೇದ ಸಂಹಿತೆಯ ಐದನೇ ಮಂಡಲದ ಕೊನೆಯಲ್ಲಿ ಸೇರಿಸಲ್ಪಟ್ಟಿರುವುದರಿಂದ, ಇದರ ವೈದಿಕ ಉಗಮವು ಸಂದೇಹಾಸ್ಪದವೆಂದೂ. ವಾಗಾಂಭೃಣೀ ಸೂಕ್ತವು (ಋ. ಸಂ. X–125). ಈ ಲಕ್ಷ್ಮೀವಿಷಯಕವಾಗಿರದೆ ಬೇರಾವ ದೇವತೆಯದೋ ಆಗಿರುವುದರಿಂದಲೇ,

ಈ ಶ್ರೀಸೂಕ್ತದಂತೆ, ಇದಕ್ಕೆ ಸಮಾನವಾಗಿ ಪರ್ಯಾಯವಾಗಿ ಅದನ್ನು ವೈದಿಕರು ಪಠಿಸುವ ರೂಢಿಯಿಲ್ಲವೆಂದೂ, ಮೇಧಾ, ಶ್ರದ್ಧಾ ಸೂಕ್ತಾದಿಗಳೂ ಹೀಗೇ ಬೇರೆಬೇರೆ ದೇವತೆಗಳಿಗೆ ಸಂಬಂಧಿಸಿದ್ದೆಂದೂ, ಇವೂ 'ಆರ್ಯ' ಮೂಲವಲ್ಲದವೆಂದೂ ಮುಂತಾಗಿ ಹರಡಿರುವ ಒಂದು ಕಲ್ಪನೆ.

ಈ ಕಲ್ಪನೆಯನ್ನೂ, ವಿವಾದವನ್ನೂ ಸಂಶೋಧನೆಯ ರೂಪದಲ್ಲಿ ಎಬ್ಬಿಸಿದವರು, ಮೊದಲಿಗೆ, ಪಾಶ್ಚಾತ್ಯರು. ಅವರ ಪ್ರಕಾರ ಶ್ರೀಸೂಕ್ತವು ಪಂಚರಾತ್ರ ಆಗಮ ಮೂಲದಿಂದ ಹುಟ್ಟಿಬಂದುದೆಂದೂ, ಈ ಆಗಮವು 'ಅವೈದಿಕ'ವೆಂದೂ, 'ಆರ್ಯಪೂರ್ವದ ದ್ರಾವಿಡ'ರಲ್ಲಿ ಪ್ರಚುರವಿದ್ದ ಇದು ಲಕ್ಷ್ಮೀನಾರಾಯಣೋಪಾಸಕರ ಸ್ತೋತ್ರಗ್ರಂಥವೆಂದೂ, ಮುಂದೆ 'ಆರ್ಯ'ರೂ ದ್ರಾವಿಡರೂ ಬೆರೆತು ಹೋದಮೇಲೆ, ಈ ಸ್ತೋತ್ರಕ್ಕೆ ವೈದಿಕ ಘನತೆಯನ್ನು ಕೊಡಮಾಡಿದ ಮಿಶ್ರಿತ ಜನಾಂಗವು ಇದನ್ನು 'ಖಿಲ'ವೆಂದೂ, 'ಪರಿಶಿಷ್ಟ'ವೆಂದೂ ಕಳ್ಳತನದಲ್ಲಿ ಋಕ್ಸಂಹಿತೆಯ ನಡುವೆ ಕೂಡಿಸಿತೆಂದೂ ಈ ವಾದದ ಸಾರಾಂಶ.

ಇಂಥ ಬುಡವಿಲ್ಲದ ಅನೇಕ ದುರ್ವಾದಗಳಿಗೆ, ಪ್ರಸಂಗೋಚಿತವಾಗಿ, ಮೇಲಿಂದಮೇಲೆ ನಮ್ಮ ಗ್ರಂಥಮಾಲೆಯ ಈ ವರೆಗಿನ ಎಂಟೂ ಸಂಪುಟಗಳಲ್ಲಿ ಉತ್ತರ ಕೊಡುತ್ತಾ ಬಂದದ್ದಾಗಿದೆ. ಈ ಉತ್ತರಗಳ ಉದ್ದೇಶ್ಯವನ್ನೂ, ಹಿನ್ನೆಲೆಯನ್ನೂ, ನಮ್ಮ ಸನಾತನ ವೈದಿಕ ಶ್ರದ್ಧೆಯನ್ನು ಮನಗಾಣದ ಒಬ್ಬ ಸಂಸ್ಕೃತ ಪಂಡಿತಂಮನ್ಯರು (ತಾವು ಉದ್ದಾಮ ಸಂಶೋಧಕರೆಂದು ಭಾವಿಸಿ, ತಮ್ಮ ತಲೆಯಲ್ಲಿ ತುಂಬಿದ ಪಾಶ್ಚಾತ್ಯಮೂಲ ವಿಷಮಯ ವಿಷಮ ವಿಚಾರಗಳನ್ನು ಸಂಶೋಧಿಸುವ ಗೋಜಿಗೆ ಹೋಗದೆ) ನಾವು ಈ ಪಾಶ್ಚಾತ್ಯರನ್ನು ಪ್ರಶ್ನಿಸುವುದೇ ತಪ್ಪೆಂಬ ಹಾಗೆ ಅರ್ಥಬರುವಂತೆ ನಮ್ಮ ಎಂಟನೆಯ ಸಂಪುಟವನ್ನು ಪತ್ರಿಕೆಯೊಂದರಲ್ಲಿ ವಿಮರ್ಶೆಯ ಸೋಗಿನಲ್ಲಿ ಟೀಕಿಸಿದ್ದಾರೆ! ಪಾಶ್ಚಾತ್ಯರನೇಕರ ಸಾಮಾನ್ಯಧೋರಣೆ ಒಂದು ಬಗೆಯದಾದರೆ, ಅಲ್ಲೇ ಅವರಲ್ಲೂ ಅಲ್ಲಲ್ಲಿ ವಿವೇಕಿಗಳುಂಟೆಂಬುದನ್ನು, ನಾವು ಜೊತೆಜೊತೆಗೆ ತೋರಿಸುತ್ತಾ, ಅವರಿಂದ ಉದಾಹರಣ ವಾಕ್ಯಗಳನ್ನು ಎತ್ತಿ ಕೊಟ್ಟಿರುವುದೂ ನಮ್ಮ ವಿಶಾಲದೃಷ್ಟಿಗೆ ಸಾಕ್ಷಿ ಎಂಬುದನ್ನು ಅವರು

ಒಪ್ಪದವರು ! 'ಲೇಖಕರ ಅಭಿಪ್ರಾಯಕ್ಕೆ ಸರಿಹೊಂದಿ ಬರೆದವರೆಲ್ಲ ಇವರಿಗೆ ಪರಮಮಿತ್ರರೆಂದೂ, ವಿರೋಧಿಗಳಾಗಿ ಬರೆದವರೆಲ್ಲ ಕಡುವೈರಿಗಳೆಂದೂ' ನಮ್ಮನ್ನು ಕುಚೋದ್ಯಮಾಡಲು ಇವರು ಹೋರಟಿದ್ದಾರೆ. ಈ ಲೇಖಕನ ಸ್ವಂತ ಅಭಿಪ್ರಾಯವೊಂದು ಸಂಪ್ರದಾಯಕ್ಕೆ ಸೇರದಾದು— ಈ ಗ್ರಂಥಗಳಲ್ಲಿ ಎಲ್ಲೂ ಇಲ್ಲವೆಂಬುದನ್ನು ಅವರು ತಿಳಿಯುವ ಯತ್ನವನ್ನೇ ಮಾಡಿದಂತಿಲ್ಲ. ನಮ್ಮದು ಸನಾತನ ದೃಷ್ಟಿ. ಭಾರತೀಯ ಮೂಲದ ದೃಷ್ಟಿಕೋನದಿಂದಲೇ ವೇದವನ್ನು ಗೌರವದಿಂದ. ನಿರುಕ್ತಾದಿ ಶಾಸ್ತ್ರಗಳ ಸಹಾಯದಿಂದ ನೋಡಿ, ಅಭ್ಯಸಿಸಿದಾಗ ಮಾತ್ರ, ಈ ಗ್ರಂಥರಾಶಿಗೆ ಪೂರ್ಣ ನ್ಯಾಯ ದೊರೆತು, ಅದರ ಅರ್ಥಭಂಡಾರಕ್ಕೆ ನಾವು ಸಮೀಪಿಸುವೆವೆಂಬುದು ನಮ್ಮ ದೃಢ ಗ್ರಹಿಕೆ. ಇದಕ್ಕೆ ಪೋಷಕವಾಗಿ ಯಾರು ಎಲ್ಲಿ ಯಾವ ಭಾಷೆಯಲ್ಲಿ ಬರೆದಿದ್ದರೂ ಅದು ನಮಗೆ ಗ್ರಾಹ್ಯ. ಇದನ್ನು ದೂಷಿಸುವಂತೆ— ಎಷ್ಟೇ ನಿಷ್ಪಕ್ಷಪಾತವೆಂದು ತೋರುವ ಸೋಗಿನಲ್ಲಿ— ಯಾರೇ, ಈ ಪಂಡಿತಂಮನ್ಯರೇ, ಬರೆದರೂ ಅದು ನಮ್ಮ ಟೀಕೆಗೊಳಗಾಗುವುದು. ಇದರಲ್ಲಿ ಅಸಾಮಂಜಸ್ಯವಾಗಲೀ, ಆಕ್ಷೇಪಾರ್ಹವಾದದ್ದಾಗಲೀ ಏನೂ ಇಲ್ಲ ! ಹೀಗೆ ಭಾರತೀಯ ಮೂಲದ ದೃಷ್ಟಿಯಿಂದಲೇ ನೋಡಿದಾಗ ಬರುವ ಅಮೂಲ್ಯ ಅರ್ಥಗಳನ್ನೂ ಹಾಗೆ ಮಾಡದಾಗ ಆಗುವ ಅಪಾರ್ಥಗಳನ್ನೂ ಎತ್ತಿ ತೋರಿಸಿದ ಮೇಲೆಯೂ ಈ ದೃಢಗ್ರಹಿಕೆಯಲ್ಲಿ ವಿಶ್ವಾಸ ಬಾರದವರಿಗೆ ಪೂರ್ವಗ್ರಹಪೀಡೆಯೋ, ಕುರುಡುತನವೋ, ಅಭಿಮಾನಶೂನ್ಯತೆಯೋ ಮಾತ್ರವೇ ಉಂಟೆಂದು ವಿಷಾದದಿಂದ ಹೇಳಬೇಕಾಗಿದೆ. ನಮ್ಮ ಗ್ರಂಥಗಳಲ್ಲಿ ಸ್ವಂತಿಕೆ ಇದ್ದರೆ ಅದು ಈ ಸನಾತನ ಋಷಿವಾಣಿಯ ಸಾರ್ವಕಾಲಿಕ ಸತ್ಯವನ್ನು ವಿಶದೀಕರಿಸುವಲ್ಲಿ ಮಾತ್ರ— ಆ ಸತ್ಯವನ್ನೇ ಅಲ್ಲಗಳೆಯುವುದರಲ್ಲಲ್ಲ ! ವೇದದ ತಲೆಯ-ಮೇಲೆ ಕುಳಿತು 'ವೇದ ಹೇಳಿರುವುದು ತಪ್ಪೇಕಾಗಿರಬಾರದು ?' ಎಂಬ ಸಾಧನೆ ಮಾಡ ಹೊರಡುವುದು ನಮ್ಮ ಉದ್ದೇಶ್ಯವಲ್ಲ. 'ವೇದವೆಂದೂ ತಪ್ಪು ಹೇಳಲಾರದು' ಎಂಬ ದೃಢಗ್ರಹಿಕೆಗೇ ಗಂಟುಬಿದ್ದವರು ನಾವು ! ಇದನ್ನು ಸಮರ್ಥಿಸಿ, ವಿಷಯಗಳನ್ನು ನಿರೂಪಿಸುವುದೂ, ಪ್ರಮಾಣಗಳನ್ನು ತೋರಿಸುವುದೂ, ಅವುಗಳ ನೆರವಿನಿಂದ ವೈದಿಕ ಸತ್ಯಗಳ ನಿತ್ಯತೆಯನ್ನೂ ನೂತನತೆಯನ್ನೂ, ಇಂದಿನ ನಮ್ಮ ದುಃಸ್ಥಿತಿಯ

ಹಿನ್ನೆಲೆಯ ವೈದಿಕ ಬಂಧುಗಳಿಗೆ ಮನದಟ್ಟು ಮಾಡಿಕೊಡಯತ್ನಿಸುವುದೇ ನಮ್ಮ ಉದ್ದೇಶ್ಯ. ಇದರಲ್ಲಿ ನಮ್ಮ ಗ್ರಹಿಕೆ ಕುರುಡಲ್ಲವೆಂಬುದನ್ನು ನಮ್ಮ ಸಂಪುಟಗಳನ್ನು ಓದಿ ಮೆಚ್ಚಿದ ನೂರಾರು ವಾಚಕರು ಪತ್ರಮುಖೇನ ಬರೆದು ತಿಳಿಸಿ, ನಮ್ಮನ್ನು ಪ್ರೋತ್ಸಾಹಿಸಿದ್ದಾರೆ. ಇವರಲ್ಲಿ ಪ್ರಚಂಡಪಂಡಿತರೂ, ವಿಮರ್ಶಕರೂ, ಪಾಶ್ಚಾತ್ಯ ಗ್ರಹಿಕೆಗಳಿಗೆ ಈವರೆಗೆ ಬಲಿಯಾಗಿ ನಮ್ಮ ಪುಸ್ತಕಗಳಿಂದ ಈಗ ಕಣ್ಣುತೆರೆದವರೂ, ಸಾಮಾನ್ಯ ಶ್ರದ್ಧಾಳುಗಳೂ, ಮೊದಮೊದಲಿಗೆ ವೇದಗಳನ್ನು ಅರಿಯುವ ಪ್ರಯತ್ನಪಟ್ಟು ಓದಿ ತೃಪ್ತರಾದವರೂ, ಈರೀತಿ ಬಗೆಬಗೆಯ ವಾಚಕರುಂಟು. ಮಂತ್ರಾರ್ಥಗಳ ವಿವರಣೆಯಲ್ಲಿ ನಮ್ಮ ತಪ್ಪಿದ್ದರೆ, ವಿಮರ್ಶೆಗೆ ಸದಾ ಸ್ವಾಗತವಿದೆ. ಮೂಲ ಗ್ರಹಿಕೆಯೇ ತಪ್ಪಿದ್ದರೆ, ತಪ್ಪೆಂದು ತೋರಿಸಿಕೊಡುವ ಯತ್ನ ಮಾಡಿ ಸಿದ್ಧರಾದರೆ, ಇನ್ನು ಮುಂದೆ ಬರೆಯುವುದನ್ನೇ ಬಿಡೋಣ! ಹಿಂದೆ ಬರೆದುದಕ್ಕೆ ಪ್ರಾಯಶ್ಚಿತ್ತವನ್ನೂ ಮಾಡಿಕೊಂಡು 'ನಾವು ಅವೈದಿಕರು' ಎಂದು ಬೋರ್ಡು ಹಾಕಿಕೊಳ್ಳೋಣ!! ನಮ್ಮ ಪ್ರಾಮಾಣಿಕತನವನ್ನು ಬೇರೆ ಹೇಗೆ ನಿರೂಪಿಸೋಣ?

ನಾವು ಸನಾತನ ದೃಷ್ಟಿಕೋನವುಳ್ಳವರೆಂದರೆ, ಈಚಿನವರು ಬರೆದುದೆಲ್ಲ ತಪ್ಪೆಂದು ಹಾರಾಡುವ ಗೊಡ್ಡು, ಅಂಧ, ಅಭಿಮಾನಿಗಳಲ್ಲ! ಈ ದೃಷ್ಟಿಕೋನವು ಈಚಿನವರಾದ ಶ್ರೀ ಅರವಿಂದರಲ್ಲಿಯೂ, ಟ್ಯಾಗೋರರಲ್ಲಿಯೂ, ಆಂಗ್ಲಕವಿ ಟಿ ಎಸ್ ಎಲಿಯಟ್‌ನಲ್ಲೂ, ಈ ಕೋನಕ್ಕೆ ಪೋಷಕಾರ್ಥಗಳೂ ಹಲವೊಮ್ಮೆ ಕೆಲವು ಪಾಶ್ಚಾತ್ಯತತ್ತ್ವಜ್ಞರಲ್ಲಿಯೂ, ಹೀಗೆ ಎಲ್ಲೆಲ್ಲಿ ದೊರೆತು ಉತ್ತಮಾಂಶಗಳೂ, ಹೊಸಬೆಳಕೂ ಕಂಡರೂ ಅವನ್ನೆಲ್ಲ ಮುಕ್ತಮನಸ್ಸಿನಿಂದ ಸ್ವಾಗತಿಸುವೆವೆಂಬುದನ್ನು ನಮ್ಮ ಎಲ್ಲ ಗ್ರಂಥಗಳೂ ತೋರಿಸುತ್ತವೆ.

ಹಿಂದೆ, ಶ್ರೀ ಅರವಿಂದರು ವೇದಾರ್ಥಯತ್ನ ಮಾಡಿ, ಉಪನಿಷತ್ತುಗಳಿಗಿಂತ ಅಥವಾ ಅವುಗಳಷ್ಟೇ, ನಿಗೂಢ ತತ್ತ್ವಗಳು ಋಕ್ಸಂಹಿತೆಯಲ್ಲಿಯೂ ಇವೆಯೆಂದೂ, ನಮ್ಮವರೇ (ಪೂರ್ವಮೀಮಾಂಸಕರ ಕಾಲದಿಂದೀಚಿನವರು) 'ಕರ್ಮಕಾಂಡ'ವೆಂಬ ಕೃತಕ ಹೆಸರಿನಲ್ಲಿ ಸಂಹಿತೆಗಳೆಲ್ಲವನ್ನೂ ಈ ಗುಂಪಿನಲ್ಲಿ ಸೇರಿಸಿದುದು ತಪ್ಪೆಂದೂ ದುರ್ದೈವವೆಂದೂ ನಿರೂಪಿಸಿ, ಸ್ಥಾಪಿಸಿ, ಬರೆದು

ದಕ್ಕೆ (ದಿವಂಗತ) ಡಾ॥ ರಾಧಾಕೃಷ್ಣನ್ ಅವರೇ ವಿರೋಧ ವ್ಯಕ್ತಪಡಿಸಿ, "ಹಾಗಾದರೆ, ಉಪನಿಷತ್ತುಗಳು, ಆ ಸಂಹಿತೆಯ (ಋಕ್ಸಂಹಿತೆಯ) ಉನ್ನತಾರ್ಥದಿಂದ ಪತನ ಹೊಂದಿದ ರೀತಿಯಲ್ಲಿ ಭಾರತೀಯ ತತ್ವ ಬೆಳೆದು ಬಂದಿತೆಂದು" ಹೇಳಬೇಕಾಗಿ ಬರುವುದೆಂದೂ, ಇದು ತಮಗೆ ಒಪ್ಪಿಗೆಯಿಲ್ಲ ವೆಂದೂ ಬರೆದು, ಪಾಶ್ಚಾತ್ಯರು ಹೇಳುವಂತೆ, ಋಕ್ಸಂಹಿತೆಯು 'ಬಾಲಿಶಭಾವನೆ' ಗಳಿಂದ ಕೂಡಿದ್ದು, ದೇವತೆಗಳನ್ನು ನಿರ್ಮಿಸುವ ಕಾರ್ಖಾನೆಯು ಆಗಿದೆ ಯೆಂದೂ, ಉಪನಿಷತ್ತುಗಳು ಆಮೇಲೆ ಬಂದ ಉನ್ನತ ವಿಚಾರಗಳನ್ನೊಳ ಗೊಂಡಿರುವುದೇ ಹೆಚ್ಚು ಸಂಭವವೆಂದೂ ಬರೆದು, ಮತ್ತೆ ಅರವಿಂದರ ಟೀಕೆಗೊಳಗಾದರು :

"It is not likely that the whole progess of Indian thought has been a steady fal ing away from the highest spiritual truths of the Vedic hymns. It is more in accordance with what is known as the general nature of human development, and easier to concede that the later religions and philosophies rose out of the crude suggestions and elementary moral ideas and spiritual aspirations of the early mind, than that they were a degradation of an original perfection" –*Indian philosophy* vol. I p. 70.

"The process of god-making in the factory of man's mind cannot be seen so clearly anywhere else as in the *Rig Veda*".

" .. the religion of the undeveloped man" —Ibid, p. 74.

ಇಬ್ಬರೂ ಒಂದೇ ಕಾಲದವರಾದರೂ ಯಾರ ಶ್ರದ್ಧೆ ಹೆಚ್ಚು ಪ್ರಾಚೀನ, ಹೆಚ್ಚು ಸಾಂಪ್ರದಾಯಿಕ ಎಂಬುದನ್ನು ವಾಚಕರೇ ತೀರ್ಮಾನಿಸಲಿ ! ವೇದಗಳ ಅರ್ಥೈಕೆಯಲ್ಲಿ ಸಾಯಣರಿಗಿಂತ ನಿರುಕ್ತಕಾರರಿಗಿಂತ ಹೆಚ್ಚು ಗೌರವಾರ್ಹ, ಸುಸಂಬದ್ಧ, ಗಹನಾರ್ಥಗಳನ್ನು ಯಾರೇ ಮಾಡಿದರೂ ಸರಿಯೇ, ಅವರು ನಮ್ಮ

ಮನ್ನಣೆಗೆ ಪಾತ್ರರಾಗುವರು. ಹೀಗೆ ಒಳ್ಳೆಯ ದೃಷ್ಟಿಯಿಂದ ಹೊರಟು ಯಶಸ್ವಿಯಾಗದಿದ್ದರೂ ಬಾಧಕವಿಲ್ಲ! ಉದ್ದೇಶ್ಯ ಒಳ್ಳೆಯದಾದ್ದರಿಂದ ಇವರೂ ಪೂಜ್ಯರೇ. ಉದ್ದೇಶ್ಯವೇ ವೇದಗಳ ಅವಹೇಳನವಾಗಿ, ಭಾರತೀಯರ ತೇಜೋವಧೆಯಾಗಿ, ನಮ್ಮ ಗ್ರಹಿಕೆಗಳನ್ನೆಲ್ಲ ವಕ್ರದೃಷ್ಟಿಯಿಂದ ನೋಡುವವರನ್ನು ಟೀಕಿಸದೇ ಬೇರೇನು ಮಾಡಬೇಕು ?

ಪ್ರಕೃತ ವಿಷಯವೂ ಇಂಥದೇ. ವೇದ, ಆಗಮ, ಇತಿಹಾಸ, ಪುರಾಣ, ಮುಂತಾದ ಪ್ರಾಚೀನ ಋಷಿವಾಣಿಗೆಲ್ಲ ಏಕಾರ್ಥವುಂಟೆಂಬುದೇ ನಮ್ಮ ಗ್ರಹಿಕೆ ಇದನ್ನು ಈವರೆಗೆ ನಿರೂಪಿಸಿಯೂ ಆಗಿದೆ. ಆ ಏಕಾರ್ಥವು ಯಾವ ಸಂಪ್ರದಾಯವೆಂಬುದೂ ಅಷ್ಟು ನಮಗೆ ಮುಖ್ಯವಲ್ಲ. ಪ್ರಾಚೀನವಾಗಿ, ವೇದಗಳನ್ನು ಪೂಜ್ಯತೆಯಿಂದ ನೋಡುವುದಾಗಿದ್ದರೆ ಸಾಕು. ವೇದವೇ 'ಅನಾಗರಿ'ಕರ ಸಾಹಿತ್ಯವೆನ್ನುವವರಿಗೆ, ಆಗಮ ಇತಿಹಾಸಗಳಲ್ಲಿ ಏನು ಪೂಜ್ಯತೆ ಕಂಡೀತು ? ಭಾರತೀಯರನ್ನು 'ಆರ್ಯ' 'ದ್ರಾವಿಡ' ಎಂದು ಒಡೆದು, ಒಬ್ಬರಮೇಲೊಬ್ಬರನ್ನು ಜನಾಂಗಕಲಹದಲ್ಲಿ ಎತ್ತಿಕಟ್ಟಿ ಜಗಳ ಹಚ್ಚುವವರು ಘಾತಕರೋ, 'ನಿಷ್ಪಕ್ಷಪಾತದೃಷ್ಟಿಯ ವಿಮರ್ಶಕ'ರೋ ? ಇವರಿಗಾಗಿ ಈಗ ಈ ಗ್ರಂಥದ ಪ್ರವೇಶ ಬರೆಯಲ್ಪಡುತ್ತಿದೆ! ಅರ್ಧ ಮುಗ್ಧಮನಸ್ಸಿನ ಓದುಗರನ್ನು ತಪ್ಪುದಾರಿಯಲ್ಲಿ ಹಾಕುವ ವಿಮರ್ಶಕರ ಸೋಗಿನ, ಸತ್ಯಾನ್ವೇಷಿಗಳ ಸೋಗಿನ, ಪಂಡಿತಂಮನ್ಯರು ಈ ಕೆಳಗಿನ ವಿಷಯಗಳನ್ನು ಗಮನಿಸಬೇಕು.

೧) ಶ್ರೀಸೂಕ್ತವು ಅನ್ಯಮೂಲದ್ದೆಂದು ಬಾಯಿಮಾತಿಗೆ ಒಪ್ಪಿಕೊಂಡರೂ, ದಿನು ಪ್ರತಿ ಸಕಲ ವೈದಿಕರೂ ಪಠಿಸುವ ಪುರುಷಸೂಕ್ತದ (ಋ. ಸಂ. X-90) ಅನುಬಂಧಿಯಾಗಿ ಪಠಿಸಲ್ಪಡುವ ವಿಶ್ವಕರ್ಮಸೂಕ್ತದ ಕೊನೆಯಲ್ಲಿ ಬರುವ— ಹ್ರೀಶ್ಚ (ಶ್ರೀಶ್ಚ)ತೇ ಲಕ್ಷ್ಮೀಶ್ಚ ಪತ್ನ್ಯೌ— ಎಂಬ ಋಗ್ವೇದ ಮಂತ್ರವೊಂದರಲ್ಲೇ ಸ್ಪಷ್ಟವಾಗಿ ಲಕ್ಷ್ಮೀದೇವಿಯನ್ನೂ (ಅವಳ ಶ್ರೀ ಶಬ್ದಪರ್ಯಾಯದೊಡನೆ), ಅಥವಾ ಹ್ರೀ ವಾಚ್ಯಳಾದ ಭೂದೇವಿಯನ್ನೂ ವಿಷ್ಣುವಿನ ಪತ್ನಿಯರೆಂದು ಕಂಠೋಕ್ತವಾಗಿಯೇ ಹೇಳಿರುವುದು ಈ ದುರ್ವಾದಿಗಳ ಕಣ್ಣಿಗೆ ಬೀಳಬೇಕು. ಪುರುಷ ಸೂಕ್ತವೇ ಅವೈದಿಕವೆಂದೂ

ಅದೂ ಈ ಮಿಶ್ರಿತ ಜನಾಂಗದ್ದೆಂದೂ. ಋಕ್ ಸಂಹಿತೆಯ ಹತ್ತನೇ ಮಂಡಲ ಪೂರ್ತಾ ಇಂಥವೇ ಮಂತ್ರಗಳಿಂದ ತುಂಬಿದೆಯೆಂದೂ ಇವರು ವಾದಿಸಿ ಯಾರು ! (ವಾದಿಸಿಯೂ ಇದ್ದಾರೆ !) ಆದರೆ ಹೀಗೆ ವಾದ ಮಾಡುತ್ತಾ ಹೋದಲ್ಲಿ ವೇದದ ಎಲ್ಲ ಮಂತ್ರಗಳೂ, ಮತ್ತು ಋಕ್ ಸಂಹಿತೆಯ ಎಲ್ಲ ಮಂತ್ರಗಳೂ, ಮಂಡಲಗಳೂ ಇದೇ ಮಿಶ್ರಿತ ಜನಾಂಗದ್ದೆಂದು ಹೇಳ ಬೇಕಾದ ನಿರ್ಬಂಧವು ಬರುವಷ್ಟು ಮಟ್ಟಿಗೆ ನಾವು ಇಂಥ ಪ್ರಮಾಣಗಳನ್ನು ತೋರಿಸುತ್ತಲೇ ಹೋಗಬಹುದು. ಪ್ರಕೃತದಲ್ಲಿ ಅಷ್ಟು ದೊಡ್ಡ ಕೆಲಸ ಅಪ್ರಕೃತ. (ಆದರೂ ಹೀಗೆ ಬರೆಯುವ ಒಬ್ಬ ಸಂಶೋಧಕರೂ ಈಗ ಕನ್ನಡದಲ್ಲಿ ಹುಟ್ಟಿಕೊಂಡಿದ್ದಾರೆ. ಇವರಿಗೂ ನಮ್ಮ ಸಂಪುಟಗಳಲ್ಲಿ ಮೇಲಿಂದ ಮೇಲೆ ಉತ್ತರ ಬರೆಯುತ್ತಿದೇವಷ್ಟೆ.)

'ಲಕ್ಷ್ಮೀ'ಶಬ್ದವೂ, ಈ ದೇವತಾ ವಿಷಯಕವಾದ ಮಂತ್ರಗಳೂ ಆಗಾಗ ವೇದದಲ್ಲಿ, ನಾವು ಸಂಖ್ಯೆಯಲ್ಲಿ ಕೇಳುವಷ್ಟು ಮಟ್ಟಗೆ, ಬರದಿದ್ದ ಮಾತ್ರಕ್ಕೇ ಈ ಶಬ್ದವಾಚ್ಯಳಾದ ದೇವತೆಯೇ ಈಚಿನವಳೆಂದೋ ವಾದಿಸುವುದು ಹಾಸ್ಯಾಸ್ಪದವಾಗುವುದು. ಇದೇ ವಾದವನ್ನು ವಿಷ್ಣುಸೂಕ್ತಗಳ ಸಂಖ್ಯೆಯ ಬಗೆಗೆ ಎಬ್ಬಿಸಿರುವವರಿಗೆ ನಮ್ಮ ಎಂಟನೆಯ ಸಂಪುಟದಲ್ಲಿ ಈಗಾಗಲೇ ಉತ್ತರ ಕೊಟ್ಟಾಗಿದೆ. ವೇದದಲ್ಲಿನ ನಿಗೂಢ ತತ್ತ್ವಗಳೂ, ದೇವತೆಗಳೂ, ಇವುಗಳ ಹಿಂದಿನ ರಹಸ್ಯವೂ ಯುಗಾಂತರದಲ್ಲಿ ಉಪಾಸನೆ ಯೊಂದನ್ನೇ ಉಸಿರನ್ನಾಗಿ ಹೊಂದಿದ್ದ ಇತರ ಋಷಿಗಳಿಗೂ, ಪುರಾಣ ಕರ್ತೃಗಳಾದ ವ್ಯಾಸಪರಾಶರಾದಿಗಳಿಗೂ, ಮನು, ಯಾಜ್ಞವಲ್ಕ್ಯ ಮೊದ ಲಾದ ಸ್ಮೃತಿಕಾರರಿಗೂ ಎಟುಕಿದಂತೆ. ಇಂದಿನ ಯುಗದ ಕುತ್ಸಿತಾರ್ಥವಾದಿ ಗಳಾದ ನಮಗೆ ಎಟುಕುವುದು ದುರ್ಲಭ ಯಾವ ವೈದಿಕ ಪರಂಪರೆಯಲ್ಲಿ ನೋಡಿದರೂ ಶ್ರೀ ಸೂಕ್ತವೂ ಶ್ರೀ ತತ್ತ್ವವೂ ವೈದಿಕದರ್ಶನದಲ್ಲಿ ಬಹು ಮುಖ್ಯ ಸ್ಥಾನ ಪಡೆದಿವೆ. ಅದರ ಹೃದಯವಾಗಿವೆ.

(೨) ಋಕ್ ಸಂಹಿತೆಯನ್ನು ಬಿಟ್ಟರೂ ಯಜುಸ್ಸಾಮಾಥರ್ವಣ ವೇದಗಳಲ್ಲೂ ಈ ದೇವದೇವಿಯರ ಪ್ರಸ್ತಾಪ ಅಲ್ಲಲ್ಲೇ ಇದ್ದೇ ಇದೆ. ಇವೆಲ್ಲವೂ ಪ್ರಕ್ಷೇಪವೆನ್ನುವುದಾದರೆ, ಈ ಪ್ರಕ್ಷೇಪಕರಿಗೆ ಈ ಕ್ರಮದಲ್ಲಿ

ಇವುಗಳನ್ನು ಪ್ರಕ್ಷಿಪ್ತಮಾಡುವ ಅವಶ್ಯಕತೆಯೇನಿತ್ತು ಎಂಬುದು ತಿಳಿಯುವುದಿಲ್ಲ. ಪ್ರಕ್ಷೇಪವೇ ಮಾಡುವುದಾದರೆ ಇನ್ನಷ್ಟು ಹೆಚ್ಚಾಗಿಯೇ ಅದನ್ನು ಮಾಡುವುದನ್ನು ಅವರೇಕೆ ಕೈಬಿಟ್ಟರೆಂಬುದಕ್ಕೂ ಉತ್ತರ ಹೇಳಬೇಕಾಗುತ್ತದೆ.

## ೧. ಬೃಹಸ್ಪತಿಗೆ ಕಂಡ 'ಲಕ್ಷ್ಮಿ'

(೩) ಲಕ್ಷ್ಮೀ ಅಥವಾ ಶ್ರೀ ಇತ್ಯಾದಿ ನಾಮಗಳು ಬಂದಲ್ಲಿ ಮಾತ್ರ ಲಕ್ಷ್ಮೀದೇವಿಯ ಸ್ತುತಿ, ವರ್ಣನೆ ಮೊದಲಾದವು ವೇದದಲ್ಲಿ ಇರಬೇಕೆಂಬ ನಿರ್ಬಂಧವೂ, ಹಾಗೆ ಬಂದಲ್ಲಿಯೂ ನೇರವಾಗಿ ಕಾಣುವಂತೆ ಇರಬೇಕೆಂಬುದೂ ನಿಯಮ ಇದ್ದಂತೆ ಕಾಣುವದಿಲ್ಲ. ಉದಾಹರಣೆಗೆ :

ಬೃಹಸ್ಪತಿ ದೃಷ್ಟವಾದ ಮಂತ್ರವೊಂದರಲ್ಲಿ,

ಸಕ್ತುಮಿವ ತಿತ ಉನಾ ಪುನನ್ತೋ ಯತ್ರ ಧೀರಾ
ಮನಸಾ ವಾಚಂ ಅಕ್ರತ ।
ಅತ್ರಾ ಸಖಾಯಃ ಸಖ್ಯಾನಿ ಜಾನತೇ ಭದ್ರೈಷಾಂ
ಲಕ್ಷ್ಮೀರ್ನಿಹಿತಾಧಿ ವಾಚಿ ॥ [ಋ. ಸಂ X-71-2]

ಎಂಬಲ್ಲಿ 'ಲಕ್ಷ್ಮೀ'ಶಬ್ದವು ಬಂದಿರುವುದನ್ನು ಗಮನಿಸಿದಾಗ, ಇದು ಪ್ರಕ್ಷೇಪವೋ ಹೇಗೆ ಎಂಬುದನ್ನು ವಿವೇಕಿಗಳು ವಿಚಾರ ಮಾಡಬೇಕು. ಈ ಮಂತ್ರದ ಹೊರತೋರಿಕೆಯ ಅರ್ಥ ಹೀಗಿದೆ :

"ಜರಡಿ (ಒಂದರ್ರಿ)ಯಿಂದ ಗೋಧಿಯನ್ನು (ಹಿಟ್ಟನ್ನು) ಶೋಧಿಸುವಂತೆ ಪ್ರಾಜ್ಞರು ಎಲ್ಲಿ (ಯಾವಾಗ) ತಮ್ಮ ಮನಸ್ಸಿನಿಂದ ವಾಕ್ಕನ್ನು (ವಾಕ್ ತತ್ತ್ವವನ್ನು) ಶೋಧಿಸುವರೋ, ಅಲ್ಲಿ, ಆಗ, ಮಿತ್ರರು ತಮ್ಮ ಮಿತ್ರತ್ವ

ವನ್ನು ಅರಿಯುತ್ತಾರೆ. ಇಂಥವರ ವಾಕ್ಕಿನಲ್ಲಿ ಮಂಗಳಮಯವಾದ ಶ್ರೇಯಸ್ಸು ಭದ್ರವಾಗಿ ಸ್ಥಾಪಿತವಾಗಿರುತ್ತದೆ."

ಇಲ್ಲಿ ಗ್ರಿಫಿತ್ ಮಹಾಶಯನು ಲಕ್ಷ್ಮೀ ಶಬ್ದವನ್ನು blessed sign ಎಂದು ಭಾಷಾಂತರಿಸಿದ್ದಾನೆ. ಸಾಯಣರು "ಭದ್ರಾ ಕಲ್ಯಾಣೀ ನಿಹಿತಾ ಲಕ್ಷ್ಮೀರ್ಭವತಿ" ಎಂದು ಆ ಶಬ್ದವನ್ನು ಹಾಗೇ ಇಟ್ಟು ಭಾಷ್ಯ ಮಾಡಿದ್ದಾರೆ! ಯಾವುದೋ ಒಳ್ಳೆಯ ಲಕ್ಷಣ ಎಂದಷ್ಟೇ ಮೇಲ್ನೋಟಕ್ಕೆ ತಿಳಿದುಬರು ವುದು. ಇದಾವುದು ?

ಇಲ್ಲಿ ಶ್ರೀ ಯಾಸ್ಕಮಹರ್ಷಿಗಳು (IV–9) ನಿರುಕ್ತದಲ್ಲಿ ಈ ಶಬ್ದಕ್ಕೆ:

"ಲಕ್ಷ್ಮೀರ್ಲಾಭಾದ್ವಾ, ಲಕ್ಷಣಾದ್ವಾ, ಲಪ್ಸ್ಯನಾದ್ವಾ, ಲಾಂಛನಾದ್ವಾ, ಲಷತೇರ್ವಾ ಸ್ಯಾತ್, ಪ್ರೇಪ್ಸಾಕರ್ಮಣೋ, ಲಗ್ಯತೇರ್ವಾಸ್ಯಾತ್ ಆಶ್ಲೇಷ ಕರ್ಮಣೋ. ಲಜ್ಜತೇರ್ವಾ ಸ್ಯಾತ್, ಅಶ್ಲಾಘಾ ಕರ್ಮಣಃ" —ಎಂದು ಏಳುಬಗೆಯ ಅರ್ಥಗಳನ್ನು ಬರೆದಿದ್ದಾರೆ:

೧) ಲಾಭಾದ್ವಾ — ಹೊಂದುವುದು ಎಂಬರ್ಥದ ಧಾತುವಿನಿಂದ, (ಹೊಂದಲ್ಪಡುವವಳು ಎಂದೂ),

೨) ಲಕ್ಷಣಾದ್ವಾ — ನೋಡು. ಚಿಹ್ನಿಸು, ಚಿಂತಿಸು, ಎಂಬರ್ಥದ ಧಾತುವಿನಿಂದಲೂ,

೩) ಲಪ್ಸ್ಯನಾದ್ವಾ — ಅಪೇಕ್ಷಿಸಲ್ಪಡುವವಳು, ಎಂಬುದರಿಂದಲೂ,

೪) ಲಾಂಛನಾದ್ವಾ — ಚಿಹ್ನೆಯನ್ನು ಸೂಚಿಸುವವಳು ಎಂಬುದ ರಿಂದಲೂ,

೫) ಲಷತೇರ್ವಾ — ಬೆಳಗುವವಳು ಎಂಬುದರಿಂದಲೂ,

೬) ಲಗ್ಯತೇರ್ವಾ — ಹೊಂದಿಕೊಂಡು, ಅಂಟಿಕೊಂಡಿರುವವಳು, ಎಂಬುದರಿಂದಲೂ,

೭) ಲಜ್ಜತೇರ್ವಾ — ನಾಚುವವಳು, ಎಂದರೆ ಸ್ವಪ್ರಶಂಸೆ ಮಾಡಿ ಕೊಳ್ಳದವಳು, ಎಂಬುದರಿಂದಲೂ

ಈ ಶಬ್ದದಉತ್ಪತ್ತಿಯನ್ನು ತೋರಿಸಿರುವರು.

ಮೇಲ್ನೋಟಕ್ಕೆ ಇದರಿಂದ ಏನೂ ತಿಳಿಯಲಾರದಲ್ಲವೇ ? ಶ್ರೀವಿಷ್ಣುವಿಗೆ ಇವಳು ಲಭಿಸಿದ್ದರಿಂದ ಲಕ್ಷ್ಮೀ ಎನಿಸಿದಳೆಂದರೆ ಮೊದಲಿನ ನಿಷ್ಪತ್ತಿ ತಿಳಿಯುವುದು. ಎಲ್ಲರೂ ಯಾವಳ ಲಾಭಕ್ಕಾಗಿ, ಪ್ರಾಪ್ತಿಗಾಗಿ (ಲಕ್ಷ್ಮೀ ಕಟಾಕ್ಷ ಮತ್ತು ಸಾಂನ್ನಿಧ್ಯಕ್ಕಾಗಿ) ಆಸೆಪಡುವರೋ ಅವಳು ಲಕ್ಷ್ಮೀ ಎಂಬುದಂತೂ ಇಂದಿಗೂ ಅನುಭವದಲ್ಲೇ ಇದೆ.

ಹಾಗೆಯೇ ಯಾವಳ ನೋಟದಿಂದಲೇ, ಅಥವಾ ಚಿಹ್ನೆಯ ಮಾತ್ರದಿಂದಲೇ ಪರಬ್ರಹ್ಮನೂ ಲಕ್ಷ್ಮೀಪತಿಯೆನಿಸಿ, ವಿಶ್ವಲೀಲಾವಿನೋದ ಸಮರ್ಥನಾದನೋ, ಅವಳು ಲಕ್ಷ್ಮೀ ಎಂಬುದು ಎರಡನೆಯ ನಿಷ್ಪತ್ತಿಯ ಅರ್ಥ. (ಲಕ್ಷ — ದರ್ಶನಾಂಕನಯೋಃ, ಲಕ್ಷ — ಅಲೋಚನೇ ಎಂಬ ಧಾತುಗಳಿಂದ,) ಜಗತ್ತಾಗಲೀ, ಶ್ರೀ ವಿಷ್ಣುವಾಗಲೀ ಲಕ್ಷ್ಮೀಕಟಾಕ್ಷದಿಂದಲೇ, ಸಂಕಲ್ಪದಿಂದಲೇ, ಶ್ರೇಯಸ್ಸನ್ನು ಹೊಂದುವುದು ಶಕ್ಯ ಎಂದು ಇದರ ಭಾವ.

ಎಲ್ಲರಿಂದಲೂ ಬಯಸಲ್ಪಡುವವಳು ಎಂಬರ್ಥದಲ್ಲಿ, ಮೂರನೆಯ ನಿಷ್ಪತ್ತಿಯು ಲೋಕವು 'ಶ್ರೀಮತ್' ಆಗುವ ಬಗೆಯನ್ನು ತಿಳಿಸಿ, ಲಕ್ಷ್ಮೀ ಸ್ವರೂಪವನ್ನು ಬೆಳಗುತ್ತದೆ.

ಭಗವಂತನನ್ನು ಶ್ರೀಪತಿ ಎಂದಾಗ, ಇವಳನ್ನು ಚಿಹ್ನೆಯನ್ನಾಗಿಟ್ಟೇ ಅವನನ್ನು ಸೂಚಿಸಬೇಕಾದ ಅವಶ್ಯಕತೆಯು ನಿಮಿತ್ತ ಲಕ್ಷ್ಮಿಯ ಮಹಿಮೆಯನ್ನು ನಾಲ್ಕನೆಯ ನಿಷ್ಪತ್ತಿ ತಿಳಿಸುತ್ತದೆ. ಲಕ್ಷ್ಮೀದೇವಿಯ ಪಾದಚಿಹ್ನೆಯಾದ ಶ್ರೀವತ್ಸ ಎಂಬುದು ವಿಷ್ಣುವಿನ ಬಲ ಎದೆಯಲ್ಲಿ ಗುರುತಾಗಿರುವುದೂ ಪ್ರಸಿದ್ಧ.

ಬೆಳಗು ಎಂಬರ್ಥದ 'ಲಷ್'ಧಾತುವಿನಿಂದ ಲೋಕಗಳನ್ನೆಲ್ಲ ಬೆಳಗುವ ದೇವದೇವಿ ಇವಳು ಎಂಬುದನ್ನು ಐದನೆಯ ನಿಷ್ಪತ್ತಿ ತಿಳಿಸುತ್ತದೆ.

ಶ್ರೀವಿಷ್ಣುವನ್ನು ಎಡೆಬಿಡದೆ, ಅವನೊಡನೆಯೇ ನಿತ್ಯಯೋಗವನ್ನು, ಸಹವಾಸವನ್ನು ಹೊಂದಿದವಳು; ಇವಳನ್ನು ಬಿಟ್ಟು ಅವನೂ ನಿರೂಪಣೀಯನಾಗಲಾರನೆಂಬುದಾಗಿ, ಇವಳ ನಿಮಿತ್ತ ಏರ್ಪಟ್ಟ ಅವನ ವೈಶಿಷ್ಟ್ಯವನ್ನು ಆರನೆಯ ನಿಷ್ಪತ್ತಿ ತಿಳಿಸುತ್ತದೆ.

ತನ್ನ ಭಕ್ತರಿಗೆ ತಾನೇನನ್ನು ಅನುಗ್ರಹಿಸಿದರೂ, ಇನ್ನೂ ಕೊಡತಕ್ಕದ್ದಿತ್ತೆಂದೂ, (ಅವರು ಕೇಳದೇ) ಕೊಡಲಾಗಲಿಲ್ಲವೆಂದೂ ಸಾಕಷ್ಟು ಕೊಟ್ಟರೂ ತನಗೇ ತೃಪ್ತಿಯಿಲ್ಲದೆ ನಾಚುವವಳು ಎಂದೂ, ತನ್ನನ್ನೆಂದೂ ತಾನು ಪ್ರಶಂಶಿಸುವವಳಲ್ಲವೆಂದೂ ಇವಳ ಔದಾರ್ಯವನ್ನು ಏಳನೆಯ ನಿಷ್ಪತ್ತಿ ತಿಳಿಸುತ್ತದೆ.

ಈ ಎಲ್ಲ ದಿವ್ಯಗುಣಗಳನ್ನೂ ಶ್ರೀಸೂಕ್ತವೂ, ಇತರ ಸೂಕ್ತಗಳೂ ಮನೋಹರವಾಗಿ ಕೊಂಡಾಡುವುದನ್ನೂ, ಇತಿಹಾಸ ಪುರಾಣಗಳಲ್ಲಿ ಲಕ್ಷ್ಮೀವಿಷಯಕವಾಗಿ ಬರುವ ಕಥೆಗಳು, ಆಖ್ಯಾನಗಳು, ಈ ಗುಣಗಳನ್ನು ಹೇಗೆ ವಿವರಿಸಲೆಂದೇ ಬಂದಿವೆ ಎಂಬುದನ್ನೂ ಮುಂದೆ ದೀರ್ಘವಾಗಿ ವಿವರಿಸಲಾಗುವುದು.

ಇದೆಲ್ಲ ನಿರುಕ್ತಕಾರರಿಗೆ ಪ್ರಕೃತ ಋಙ್ಮಂತ್ರದಲ್ಲಿ ಕೇವಲ ಲಕ್ಷ್ಮೀಶಬ್ದ ಪ್ರಯೋಗದಿಂದಲೇ ತಿಳಿದುಬಂದ ವಿಷಯ.

ನಮ್ಮಂಥ ಸಾಮಾನ್ಯರಿಗೆ ಇಲ್ಲಿ ಮೇಲ್ನೋಟಕ್ಕೆ ತಿಳಿಯುವುದೇನೆಂದರೆ, ವಾಕ್ತತ್ತ್ವವನ್ನು ಶೋಧಿಸುವ ಪ್ರಾಜ್ಞರಿಗೆ, ತಮ್ಮ ವಾಕ್ಕಿನಲ್ಲೇ ಅಡಗಿ ವ್ಯಾಪಿಸಿರುವ ಒಂದು ಶ್ರೇಯಸ್ಸಿನ ಅರಿವಾಗುವುದೆಂಬುದು. ಹಾಗೆಂದರೇನು ? ಎಂದು ಕೇಳಿದರೆ ಎಂಥ ನಿಶಿತಮತಿಯ ವಿದ್ವಾಂಸನೂ ಆಕಾಶವನ್ನು ನೋಡಬೇಕಾಗುತ್ತದೆ ! 'ವಾಕ್' ತತ್ತ್ವವನ್ನು ಶೋಧಿಸುವುದೆಂದರೇನು ? ಗೋಧಿಯ ಹಿಟ್ಟನ್ನು ಜರಡಿಯಿಂದ ಶೋಧಿಸುವಂತೆ— ಹೊಟ್ಟು, ಬೇರೆ, ಸಾರವತ್ತಾದ ಹಿಟ್ಟು ಬೇರೆ— ಎಂಬಂತೆ ವಾಕ್ ತತ್ತ್ವವನ್ನು ಶೋಧಿಸುವುದೆಂದರೇನು ? ವಾಕ್ಕಿನಲ್ಲಿ 'ಹೊಟ್ಟು'ವುದು ? 'ಹಿಟ್ಟು'ವುದು ? ಹೀಗೆ ಶೋಧಿಸುವುದು ಸಾಧ್ಯವಾದಮೇಲೆ ಮಿತ್ರರು ಅರಿಯುವ ಆ ಮಿತ್ರತ್ತ್ವ

ಯಾವುದು ? ಇಂಥವರ ವಾಕ್ಕಿನಲ್ಲಿ ಭದ್ರವಾಗಿರುವ ಲಕ್ಷ್ಮೀ ಯಾವಳು ? ಯಾಸ್ಕರ ವಿವರಿಸಿದ 'ಲಕ್ಷ್ಮೀ'ಯ ಅರ್ಥಗಳು ಇಲ್ಲಿ ಹೇಗೆ ಸಂಗತ ? ಸಂಗತ ವಲ್ಲವೆನ್ನುವುದಾದರೆ ಪ್ರಾಜ್ಞರಾದ ನಿರುಕ್ತಕಾರರು ಅದನ್ನೇಕೆ ಇಲ್ಲಿ ಹೇಳಿ ದರು ? ಈ ಎಲ್ಲ ಪ್ರಶ್ನೆಗಳಿಗೂ ಉತ್ತರಿಸಿಕೊಳ್ಳದೆ ಮಂತ್ರಾರ್ಥಕ್ಕೆ ಕೈಹಾಕಿ ದವರಿಗೆ ಈ ಮಂತ್ರವು ನಿಗೂಢವಾಗಿಯೇ ಉಳಿಯುವುದರಲ್ಲಿ ಸಂದೇಹವೇ ಇಲ್ಲ. ಈ ಇಡೀ ಮಂತ್ರವೇ ಒಂದು ಒಗಟಿನಂತಿದೆ. ಇದೊಂದೇ ಮಂತ್ರವಲ್ಲ ! ಈ ಇಡೀ ಸೂಕ್ತದ ಹನ್ನೊಂದು ಮಂತ್ರಗಳೂ ಹೀಗೆಯೇ ಇವೆ. ಈ ಸೂಕ್ತದ ದ್ರಷ್ಟಾ ಬೃಹಸ್ಪತಿಯೆಂಬುದನ್ನು ನೆನಪಿಡತಕ್ಕದ್ದು ! ಮಾತನ್ನಾಡಿ ದರೆ ಬೃಹಸ್ಪತಿಯಂತೆ ಮಾತನ್ನಾಡಬೇಕೆಂದು ಹೇಳುವುದುಂಟಷ್ಟೆ ! ಹಿಂದಿನ ಮಾತಿಗೆ ಮುಂದಿನದೂ, ಮುಂದಿನದಕ್ಕೆ ಹಿಂದಿನದೂ ಸೇರಿದಂತೆ, ವಿಲಕ್ಷ ಣಾರ್ಥ ಬರುವಂತೆ. ಚೆನ್ನಾಗಿ ಸಂಗತವಾಗಿ, ಅರ್ಥಪೂರ್ಣವಾಗಿ, ಉತ್ತ ರೋತ್ತರವಕ್ತಾಚ ವಾಚಸ್ಪತಿರ್ಯಥಾ ಎಂಬಂತೆ ಹೀಗೆ ಮಾತಾಡುವುದು ಬೃಹಸ್ಪತಿಯ ಲಕ್ಷಣವಾಗಿರುವಾಗ, ಈ ಮಂತ್ರದಲ್ಲಿ ಒಳಗೇನೂ ಇಲ್ಲವೆಂದು ತಳ್ಳಿಹಾಕುವಂತೆಯೂ ಇಲ್ಲ. ಅಂದಮೇಲೆ ಬೃಹಸ್ಪತಿಗೆ ಇಲ್ಲಿ ವಿಲಕ್ಷಣವಾದ ಲಕ್ಷ್ಮೀ ತತ್ತ್ವದ ಗುಟ್ಟೊಂದು ಎಟುಕಿರಬೇಕು ಎಂಬುದು ಅಲ್ಲಗಳೆಯಲಾಗದ ವಿಷಯ. ಬೃಹಸ್ಪತಿಗೆ ಎಟುಕಿದರೂ ವನಸ್ಪತಿಗಳಂತಿರುವ ನಮಗೆ ಅದು ಎಟುಕುವುದೆಂತು ?

ಈ ಮಂತ್ರಕ್ಕೆ ಜ್ಞಾನದೇವತೆಯನ್ನು ಅಧಿದೇವತೆಯನ್ನಾಗಿ ಹೇಳಿದೆ ಯೆಂಬುದೂ ನೆನಪಿರಲಿ. ಸಕಲವೇದಾರ್ಥಗಳನ್ನೂ ತಿಳಿದ ಬೃಹಸ್ಪತಿಯು ತನ್ನಂತೆಯೇ ಜ್ಞಾನಿಗಳಾದ ಋಷಿಬಾಲಕರನ್ನು ನೋಡಿ ನಕ್ಕು, ತನ್ನಲ್ಲಿಯೇ ತಾನು ಆಡಿಕೊಂಡ ಮಾತಿನ ಧಾಟಿಯಲ್ಲಿ, (ಸ್ವಗತರೂಪದಲ್ಲಿ), ಈ ಸೂಕ್ತವು ದೃಷ್ಟವಾಗಿದೆ ಎಂದು ಶ್ರೀಸಾಯಣಾಚಾರ್ಯರು ಈ ಹಿಂದಿನ ಮಂತ್ರದ ಭಾಷ್ಯದಲ್ಲಿ ಬರೆದಿದ್ದಾರೆ—

ಬೃಹಸ್ಪತಿಃ ಅನೇನ ಸೂಕ್ತೇನ ವಿದಿತವೇದಾರ್ಥಾನ್ ಬಾಲಾನ್ ದೃಷ್ಟ್ವಾ ಸ್ಮಯಮಾನಃ ಸ್ವಾತ್ಮಾನಂ ಸಂಬೋಧ್ಯಾಹ ।

ಋಷಿಬಾಲಕರೂ ವೇದಾರ್ಥ ತಿಳಿದವರಾದ್ದರಿಂದ ಬೃಹಸ್ಪತಿಯು

ಅಡಿದ್ದು ಅವರಿಗೆ ತಿಳಿದಿರುವುದು ಯುಕ್ತ. ಅಂದರೆ, ವೇದಾರ್ಥವನ್ನರಿಯು ದವರಿಗೆ ತಿಳಿಯಲಾರದ ಗುಟ್ಟೊಂದು ಇಲ್ಲಿರುವುದುಸ್ಪಷ್ಟ. ಈ ಹಿನ್ನೆಲೆ ಯಲ್ಲಿಯೇ ಪ್ರಕೃತಮಂತ್ರವೂ ಸಹ ವಾಗ್ರೂಪವಾದ ವೇದಪ್ರಪಂಚದಲ್ಲಿ ಆದ್ಯಂತವಾಗಿ, ಅಥವಾ ಅನಾದ್ಯನಂತವಾಗಿ, ವ್ಯಾಪ್ತವಾಗಿರುವ ಶ್ರೀವಿಷ್ಣು ವಿನೊಡನೆಯೇ ಸರ್ವವ್ಯಾಪಕಳಾಗಿರುವ ಶ್ರೀ ಲಕ್ಷ್ಮೀದೇವಿಯ ವೈಭವವನ್ನೂ ಸ್ತುತಿಸುತ್ತಿದೆ.

## ೨. ಮಂತ್ರಾರ್ಥ

ಲೋಕರೂಢಿಯಲ್ಲಿ ಪ್ರಾಪಂಚಿಕ ಬಯಕೆಗಳಿಗಾಗಿ ನಡೆಸುವ ವ್ಯಾಪಾ ರಕ್ಕೆ ಸಂಬಂಧಿಸಿದ ವಾಕ್ಕು ಒಂದು ಬಗೆಯದು. ಭೌತಾತೀತವಾದ ಪರ ತತ್ತ್ವವನ್ನು ಅರಸುವ ದೈವೀ ವಾಕ್ಕು ಬೇರೆ ಬಗೆಯದು. ಈ ವ್ಯತ್ಯಾಸವನ್ನು ತಿಳಿಯುವುದೇ ಜರಡಿಯಿಂದ ಧಾನ್ಯವನ್ನೋ, ಹಿಟ್ಟನ್ನೋ, ಶೋಧಿಸಿದಂತೆ. ಹೀಗೆ ಹೊಟ್ಟಿನಂತೆ ಸತ್ತ್ವಹೀನವಾದ ಜಳ್ಳು ಮಾತನ್ನು ಬಿಟ್ಟು, ಗಟ್ಟಿಯಾದ ಸತ್ತ್ವಶಾಲೀ ವಾಕ್ಕಿನಲ್ಲಿ ಮಾತ್ರ ಲಕ್ಷ್ಮೀನಾರಾಯಣ ತತ್ತ್ವವು ಅಡಗಿದೆ ಯೆಂದು ತಿಳಿದವರೇ ಪ್ರಾಜ್ಞರು. ಇವರೇ ಮಾನವಕೋಟಿಯ ಶಾಶ್ವತ ಮಿತ್ರರು; ಋಷಿಗಳು. ಇವರನ್ನರಿಯುವವರೇ ವೇದೋಪಾಸಕರಾದ ಇವರ ಮಿತ್ರರು. ಇಂಥವರ ವಾಕ್ಕಿನಲ್ಲಿ— ವೈದಿಕ ಋಷಿವಾಣಿಯಲ್ಲಿ ಏನೋ ದಿವ್ಯಾರ್ಥವಿದೆಯೆಂದು ಶ್ರದ್ಧೆಯಿಂದ ನಂಬಿ, ಅದನ್ನುಪಾಸಿಸಿ ಅರಿತ ಮಿತ್ರರ ವಾಕ್ಕಿನಲ್ಲಿ— ಸುಪ್ರತಿಷ್ಠಿತಳಾಗಿರುವವಳು ಲಕ್ಷ್ಮೀ ದೇವಿ, ಎಂಬುದು ಈ ಒಗಟಿಯ ಅರ್ಥ. ಇದನ್ನು ವಿವರಿಸಲೆಂದೇ ನಿರುಕ್ತಕಾರರು ಲಕ್ಷ್ಮೀಶಬ್ದಕ್ಕೆ ಇಷ್ಟು ವ್ಯಾಪಕ ಅರ್ಥವನ್ನು ವಿವರಿಸಿರುವರು. ಪ್ರಾಜ್ಞರೆಂದರೆ ವೇದಾರ್ಥವನ್ನು ಮಾತ್ರವಲ್ಲದೆ, ವೇದಾರ್ಥಸ್ವರೂಪನಾದ ಪರಬ್ರಹ್ಮನನ್ನು ಅರಿತವರು, ಮಂತ್ರದಲ್ಲಿ ಅವರನ್ನು 'ಧೀರ'ರೆಂದು ಕರೆದಿದೆ. ಬೇರೆ ಬೇರೆ ಮಂತ್ರಗಳಲ್ಲೂ ಈ ಶಬ್ದ ಪ್ರಯೋಗ ಈ ಅರ್ಥದಲ್ಲಿ ಬಂದಿರು ವುದು ಪ್ರಸಿದ್ಧ. ಸಂಹಿತೆಗಳಲ್ಲಿ ಮಾತ್ರವಲ್ಲದೆ, ಬ್ರಾಹ್ಮಣಗಳಲ್ಲೂ ಉಪ

ನಿಷತ್ತುಗಳಲ್ಲೂ ಇದು ಪ್ರಸಿದ್ಧ ಶಬ್ದ. "ಧೀಮಂತೋ ವಿದ್ವಾಂಸಃ" ಎಂದು ಸಾಯಣಭಾಷ್ಯ. ಇಂಥವರ ವಾಣಿಯಲ್ಲಿ ಉಚ್ಚರಿತವಾಗುವ ವೇದ ಮಂತ್ರಗಳಲ್ಲಿ ಮನಸ್ಸಿನಿಂದಲೂ ಸಂಸ್ಕೃತವಾದ ಒಂದು ವಿಶೇಷಾರ್ಥವು ಎದ್ದು ಕಾಣುವುದೆಂದರೆ ಅದು ಶ್ರೀ ಲಕ್ಷ್ಮೀನಾರಾಯಣರ ನಿತ್ಯಮಿತ್ರತ್ವದ ವಿಷಯವೇ ಮೇಲ್ನೋಟಕ್ಕೆ "ಲೋಕಜನರ ಪರಸ್ಪರ ಸ್ನೇಹ ಸೌಹಾರ್ದಭಾವ" ಎಂಬುದು ಇಲ್ಲಿ (ಸಾಯಣಭಾಷ್ಯದಂತೆ) ಕಂಡರೂ, ಇನ್ನೂ ಹೆಚ್ಚಿನ ವಿಶೇಷಾರ್ಥವು ಇಲ್ಲದಿದ್ದರೆ ಇಲ್ಲಿ ಸಾಮಂಜಸ್ಯವು ಏರ್ಪಡುವುದಿಲ್ಲ. ಸಖಾಯಃ ಎಂದರೆ ಸಮಾನ ಖ್ಯಾನಃ ಎಂಬಂತೆ, ಒಂದೇ ಬಗೆಯ ತಿಳುವಳಿಕೆ, ಅಭಿಪ್ರಾಯ, ವಿಶ್ವಾಸ ಇರುವವರು ಎಂದು ಅರ್ಥವಾಗುತ್ತದೆ. ಭಗವಂತನು ಭಕ್ತರನ್ನು ಪ್ರೀತಿಸುವುದೂ ಭಕ್ತರು ಅವನನ್ನು ಪ್ರೀತಿಸುವುದೂ ಮಾನವನು ಅರಿಯಬಹುದಾದ ಸಖಿತ್ವಗಳಲ್ಲಿ ಪರಮೋಚ್ಚವಾದುದು. ಭ್ರಾಂತ ಜನರು ದೇವರನ್ನು ಉಗ್ರನೆಂದೂ. ಜಗತ್ತಿಗೆ ಶತ್ರುವೆಂದೂ ತಿಳಿದು. ನಾನಾವಿಧವಾದ ಬಲಿಗಳನ್ನು ಕೊಡುವ ಅವೈದಿಕ ದುರಾಚಾರಗಳಲ್ಲಿ ತೊಡಗುವುದೇ ಈ ಮಿತ್ರತ್ವವನ್ನು ತಿಳಿಯದ ಅಜ್ಞಾನದಿಂದ. ಧೀರನೂ. ಜ್ಞಾನಿಯೂ ಆದ ಭಕ್ತನಾದರೋ ಸುಸಂಸ್ಕೃತವಾದ ಮನಸ್ಸಿನಿಂದ ಅರಿಯಲ್ಪಡುವ ವೇದವಾಕ್ಕಿನ ಮೂಲಕ ಈ ದಿವ್ಯ ದಂಪತಿಗಳ ಸಹಜಸ್ವಭಾವವಾದ ಲೋಕಮೈತ್ರಿಯನ್ನು ಅರಿಯುತ್ತಾರೆ. ಹೀಗೆ ಅರಿತವರ ವಾಕ್ಕಿನಲ್ಲಿ ಮಾತ್ರ ಲಕ್ಷ್ಮೀದೇವಿಯು ಸುಭದ್ರಳಾಗಿ, ಸುಪ್ರತಿಷ್ಠಿತಳಾಗಿ ಇರುತ್ತಾಳೆ ಎಂಬುದು ಮಂತ್ರದ ಆಶಯ. ಹೀಗೆ ಇಲ್ಲಿ ಲಕ್ಷ್ಮೀ ಶಬ್ದ ಬಂದಿದ್ದರೂ ಮೇಲ್ನೋಟಕ್ಕೆ ಇದು ಲಕ್ಷ್ಮೀದೇವಿಯ ವಿಷಯದ್ದೆಂದು ಸುಲಭವಾಗಿ ತಿಳಿಯಲು ತುಂಬಾ ಸಂಸ್ಕಾರ ಬೇಕು. ಈ ಮಂತ್ರದಲ್ಲಿ ಉಕ್ತವಾದ ವಾಕ್ ತತ್ತ್ವವು ಲಕ್ಷ್ಮೀತತ್ತ್ವವೇ ಎಂಬುದನ್ನೂ, ವಾಗ್ದೇವತೆಯೆಂದರೆ ರೂಢಿಯ ಸರಸ್ವತೀ ಅಲ್ಲವೆಂಬುದನ್ನು, ಲಕ್ಷ್ಮಿಯೇ ಹೇಗೆಂಬುದನ್ನೂ, ಮುಂದೆ ವಿವರವಾಗಿ ನೋಡೋಣ. ಪ್ರಕೃತ ಸೂಕ್ತದ ಇತರ ಮಂತ್ರಗಳೂ— ಅಲ್ಲಿ ಲಕ್ಷ್ಮೀ ಶಬ್ದವು ಬಾರದಿದ್ದರೂ— ಲಕ್ಷ್ಮೀ ಪ್ರಶಂಸಾ ಪರವೆಂಬುದನ್ನು ಅರಿಯಲು ಲಕ್ಷ್ಮೀ ಕೃಪೆಯಿದ್ದರೆ ಮಾತ್ರ ಸಾಧ್ಯ. ಇದು ಬೃಹಸ್ಪತಿಗೆ ಪ್ರತ್ಯಕ್ಷಳಾದ ಲಕ್ಷ್ಮೀದೇವಿಯ ಸ್ವರೂಪ.

## ೩. ವಾಗಾಂಭೃಣಿಯೂ ಲಕ್ಷ್ಮಿಯೇ

ಹೀಗೆ ನೇರವಾಗಿ ಶ್ರೀಸೂಕ್ತದಂತೆ ಅಲ್ಲದಿದ್ದರೂ, ಪರ್ಯಾಯವಾಗಿ ಈ ದೇವಿಯ ಮಹಿಮೆಯನ್ನು ವಿವರಿಸುವ ಪ್ರಸಂಗಗಳು ವೇದದಲ್ಲಿ ಅನೇಕ ಕಡೆ ಇರುವುದನ್ನೆಲ್ಲ ಪ್ರಕ್ಷೇಪವೆಂದು ಹೇಳಿಬಿಡುವುದು ಅತಿಸಾಹಸವಾದೀತು. ಇದಕ್ಕೆ ಮತ್ತೊಂದು ಉದಾಹರಣೆಯನ್ನಾಗಿ ಋಗ್ವೇದದ (X - 125) ಸುಪ್ರಸಿದ್ಧವಾದ ವಾಗಾಂಭೃಣೀ ಸೂಕ್ತವನ್ನು ಉದಾಹರಿಸಬಹುದು.

ಮೇಲ್ನೋಟಕ್ಕೆ, ಈ ಸೂಕ್ತಕ್ಕೆ ವಾಗಾಂಭೃಣೀ ಎಂಬುವಳೇ ಋಷಿಯಾಗಿಯೂ ಹೇಳಲ್ಪಟ್ಟಿರುವುದರಲ್ಲಿ ಇವಳೊಂದು ಸಾಮಾನ್ಯದೇವತೆಯುಂತೆಯೂ, ಒಬ್ಬ ಸಾಮಾನ್ಯ ಋಷಿಪುತ್ರಿಯು ಈ ಮಂತ್ರವನ್ನು ಪ್ರತ್ಯಕ್ಷ ಮಾಡಿಕೊಂಡಂತೆಯೂ ಕಾಣುವುದು ಸಹಜ.

ಆದರೆ ಈ ಹೆಸರಿನ ಒಂದು ವಿಶಿಷ್ಟ ದೇವತೆಯು ಬೇರೆಲ್ಲೂ ವೇದ ವಾಙ್ಮಯದಲ್ಲಿ ಸ್ತುತಿಸಲ್ಪಡದಿರುವುದು ಸೋಜಿಗವಾಗಿದೆ! ಅಂದ ಮೇಲೆ ಇದೊಂದು ಗೂಢನಾಮವಾಗಿದ್ದು, ಸರ್ವಮಾನ್ಯವಾದ ಒಂದು ದೇವತಾ ವಿಶೇಷವೇ ಇಲ್ಲಿ ಉದ್ದಿಷ್ಟವಾಗಿರುವುದು ಸಂಭವ ಎನಿಸುತ್ತದೆ. ಶ್ರೀ ಸಾಯಣಾಚಾರ್ಯರೂ ಸಹ ಇವಳನ್ನು ಅಂಭೃಣನೆಂಬ ಋಷಿ ಪುತ್ರಿಯೆಂದೂ ವಾಕ್ ಎಂಬ ಹೆಸರುಳ್ಳವಳೆಂದೂ ಕರೆದಿದ್ದರೂ, ಇವಳು "ಸಚ್ಚಿತ್ ಸುಖಾತ್ಮಕಃ ಪರಮಾತ್ಮಾ ದೇವತಾ" —ಎಂಬಂತೆ, ಸಚ್ಚಿದಾನಂದ ಸ್ವರೂಪನಾದ ಪರಮಾತ್ಮನೊಡನೆ ತಾದಾತ್ಮ್ಯ ಹೊಂದಿ, ಅನುಭವಿಸಿ, ಈ ಸೂಕ್ತವನ್ನು ಕಂಡದ್ದರಿಂದ, ಈ ಪರಮಾತ್ಮನೇ ವಸ್ತುತಃ ಮಂತ್ರಕ್ಕೆ ದೇವತೆಯೆಂದು ಬರೆದಿದ್ದಾರೆ. ಇದರಿಂದ ವಾಗಾಂಭೃಣಿಯ ಸ್ವರೂಪವು ಇನ್ನೂ ಅಷ್ಟು ನಿಗೂಢವಾದಂತಾಗಿದೆ. ಋಷಿಪುತ್ರಿಯು ತನ್ನನ್ನೇ ತಾನು ಸ್ತೋತ್ರ ಮಾಡಿಕೊಂಡಳೆಂದರೆ ಏನರ್ಥ? ಅವಳು ಬ್ರಹ್ಮವಿದುಷಿ ಎಂದರ ದೇವತೆಯಾಗಿಬಿಡುವಳೇ? ವೇದದಲ್ಲಿನ ಎಲ್ಲ ಋಷಿಗಳನ್ನೂ ದೇವತೆಗಳೆಂದೇಕೆ ಕರೆಯಬಾರದು? ಕರೆದಿಲ್ಲ? ಈ ಎಲ್ಲ ಪ್ರಶ್ನೆಗಳೂ ಈ ವಿವರಗಳನ್ನು ಒಟ್ಟಿಗೆ ತಿಳಿಯದಂತೆ ಮಾಡಿವೆ! ಅವಳು ಸರ್ವಗತನಾದ ಪರಮಾತ್ಮ

ನೊಡನೆ ಇಲ್ಲಿ ತಾದಾತ್ಮ್ಯವನ್ನು ಅನುಭವಿಸುತ್ತಿರುವುದಾಗಿಯೂ ಹೇಳಿರುವುದರ ಮರ್ಮವೇನೆಂದರೆ. ವಸ್ತುತಃ ತಾನೊಬ್ಬ ಋಷಿಪುತ್ರಿಯಾಗಿದ್ದರೂ. ಈ ಮಂತ್ರದಲ್ಲಿ ತಾನು ಮಾತಾಡದೆ. ತನ್ನಲ್ಲಿ ಭಗವಂತನೇ ಅನುಪ್ರವೇಶ ಮಾಡಿ ಮಾತಾಡಿದಂತೆ ಈ ಸೂಕ್ತ ಹೊರಬಂದಿದೆ. ಇದು ಸಾಯಣ ಭಾಷ್ಯದಿಂದಲೂ ಎದ್ದು ಕಾಣುವ ವಿಷಯ. ಇಂಥ ಮಂತ್ರಗಳು ವೇದದಲ್ಲಿ ಇನ್ನೂ ಅನೇಕವುಂಟು. ಅಥರ್ವಶಿರಸ್ಸಿನಲ್ಲಿ ಬರುವ ಸುಪ್ರಸಿದ್ಧವಾದ ರುದ್ರವಾಕ್ಯವೊಂದು, "ಅಹಮೇಕಃ ಪ್ರಥಮಮಾಸಂ..." ಇತ್ಯಾದಿ, ರುದ್ರನು ತನ್ನ ಅಂತರಾತ್ಮನಾದ ಶ್ರೀಮನ್ನಾರಾಯಣನು ಆಡಿದಂತೆ ಆಡಿದ ಸೂಕ್ತಿಯಾಗಿ (ಸೋऽಂತರಾದಂತರಂ ಪ್ರಾವಿಶತ್) ಹೊರಬಂದಿರುವುದು ವೈದಿಕರೆಲ್ಲರಿಗೂ ಗೊತ್ತು. (ವಿವರಣೆಗಳಿಗೆ ನಮ್ಮ ವೇದಸಂಸ್ಕೃತಿಯ ಪರಿಚಯ ಮಾಲೆಯ ೮ನೆಯ ಸಂಪುಟದ ಪುಟ ೨೧೧-೨೧೮ನ್ನು ನೋಡಿರಿ.) ಹಾಗೆಯೇ ವಾಮದೇವರೆಂಬ ಋಷಿಗಳೂ "ಅಹಂ ಮನುರಭವಂ..." ಇತ್ಯಾದಿ ಕಂಡ ಸೂಕ್ತವೂ, ತಾವಾಡಿದ ಮಾತುಗಳಲ್ಲದೆ. ತಮ್ಮ ಅಂತರಾತ್ಮನು ಆಡಿದುದಾಗಿ ಎಲ್ಲ ವೈದಿಕರಿಂದಲೂ ಪರಿಗ್ರಹಿಸಲ್ಪಟ್ಟಿದೆ. (ನಮ್ಮ ಮಾಲೆಯ ೧ನೇ ಸಂಪುಟದ ಪುಟ ೩೮ನ್ನು ನೋಡಿರಿ.) ವೇದವ್ಯಾಸರೂ ಬ್ರಹ್ಮಸೂತ್ರಗಳಲ್ಲಿ ಇದನ್ನು ಹೀಗೆಯೇ ನಿರ್ಣಯಿಸಿದ್ದು (ಸೂ I-1-31) ಭಾಷ್ಯಕಾರರೆಲ್ಲ ಇದನ್ನು ವಿವರಿಸಿದ್ದಾರೆ. (ನಮ್ಮ ಎಂಟನೆಯ ಸಂಪುಟದ ಪುಟ ೨೦೫ನ್ನು ನೋಡಿರಿ.) ಹಾಗೆಯೇ ಕೌಷೀತಕೀ ಬ್ರಾಹ್ಮಣದಲ್ಲಿ (III) ಬರುವ ಪ್ರತರ್ದನ ವಿದ್ಯೆಯಲ್ಲಿ, (ಬ್ರಹ್ಮಸೂತ್ರದ ಇಂದ್ರಪ್ರಾಣಾಧಿಕರಣಕ್ಕೆ ವಿಷಯ ವಾಕ್ಯದಲ್ಲಿ) ಇಂದ್ರನೂ ಸಹ ಹೀಗೇ ಅಂತರಾತ್ಮಭಾವದಲ್ಲಿ ಪ್ರವೇಶಿಸಿ ಆಡಿದ ಸೂಕ್ತಿಗಳಿವೆ. (ಪ್ರಾಣೋऽಸ್ಮಿ ಪ್ರಜ್ಞಾತಾ... ಇತ್ಯಾದಿ. ನಮ್ಮ ೮ನೆಯ ಸಂಪುಟದ ಪುಟ ೨೦೨-೨೦೫ನ್ನು ನೋಡಿರಿ.) ಈ ಹಿನ್ನೆಲೆಯಲ್ಲಿ ನೋಡಿದಾಗ ಪ್ರಕೃತ ವಾಗಾಂಭೃಣೀ ಸೂಕ್ತದಲ್ಲಿ ಮಾತಾಡುತ್ತಿರುವವರು ಆ ಋಷಿಕುಮಾರಿಯಲ್ಲದೆ ಬೇರೊಂದು ದೇವತಾ ವಿಶೇಷವೇ ಎಂಬುದು ಸಿದ್ಧಪಡುವುದು. ಹಾಗಾದರೆ ಇವಳಾರು ?

## ೪. 'ಹಂಸ' ಪಕ್ಷೀ

ಇಲ್ಲಿ ಶ್ರೀವೈಷ್ಣವ ಸಂಪ್ರದಾಯದಲ್ಲೂ ಮಾಧ್ವ ಸಂಪ್ರದಾಯದಲ್ಲೂ ವಿಶೇಷ ವಿವರಣೆ ಇರುವುದು ಗಮನೀಯ. ಪ್ರಕೃತಸೂಕ್ತದ ಹಿಂದಿನ (X—124) ದರಲ್ಲಿ ಬರುವ 'ಹಂಸ' ಶಬ್ದವಾಚ್ಯನಾದ ಶ್ರೀಹಯಗ್ರೀವಸ್ವಾಮಿಯು ಇಲ್ಲಿ ಪ್ರಸ್ತಾಪಿಸಲ್ಪಟ್ಟಿರುವುದನ್ನೂ ಮೊದಲು ಗಮನಿಸಿ, ಆಮೇಲೆ ಪ್ರಕೃತ ಮಂತ್ರವನ್ನು ನೋಡಿದರೆ ಇಲ್ಲಿ ಸ್ತುತಿಸಲ್ಪಟ್ಟಿರುವವಳು ಲಕ್ಷ್ಮೀದೇವಿಯೇ ಎಂಬುದು ಸ್ಪಷ್ಟವಾಗುವುದೆಂದು ಶ್ರೀವೈಷ್ಣವ ವಿವರಣಕಾರರ ಮತ :

ಬೀಭತ್ಸೂನಾಂ ಸಯುಜಂ ಹಂಸಮಾಹುಃ ಅಪಾಂ ದಿವ್ಯಾನಾಂ
ಸಖ್ಯೇ ಚರಂತಂ ।
ಅನುಷ್ಟುಭಮನುಚರ್ಚೂರ್ಯಮಾಣಮಿಂದ್ರಂ ನಿಚಿಕ್ಯುಃ
ಕವಯೋ ಮನೀಷಾ ॥

ಎಂಬುದೇ ಈ ಹಿಂದಿನ ಸೂಕ್ತದ ಕೊನೆಯಮಂತ್ರ. ಇಲ್ಲಿ ಹಂಸ ಶಬ್ದದಿಂದ ಪರಬ್ರಹ್ಮವಸ್ತುವನ್ನು ಕರೆದಿದೆ.

"ಭಯದಿಂದ ನಡುಗುತ್ತಿರುವವರಿಗೆ ಹಂಸ ಶಬ್ದ ವಾಚ್ಯನಾದ ದೇವರು ಕೈಬಿಡದ ಗೆಳೆಯನೆಂದು, ತಿಳಿದವರು, ಜ್ಞಾನಿಗಳು ಹೇಳುತ್ತಾರೆ. ಆಪ್ ಎಂಬ ದಿವ್ಯ ತತ್ವಕ್ಕೆ (ಅಂದರೆ ನಾರ ಶಬ್ದ ವಾಚ್ಯವಾದ ಜಗತ್ತಿಗೆ, ಆಪೋ ನಾರಾ ಇತಿ ಪ್ರೋಕ್ತಾಃ ಎಂಬಂತೆ, ಸೃಷ್ಟಿಗೆ ಮೂಲದ್ರವ್ಯರೂಪದಲ್ಲಿದ್ದ, ಉದಕಗಳಲ್ಲಿ ಅಡಗಿದ್ದ ಚೇತನಾಚೇತನ ಜಗತ್ತಿಗೆ), ಗೆಳೆಯನಾಗಿ (ನಾನಾ ಅವತಾರಗಳಲ್ಲಿ) ಸಂಚರಿಸುತ್ತಿರುವವನೂ, ಸರ್ವಶಬ್ದಗಳಿಂದ ಸ್ತುತ್ಯನಾಗಿರುವವನೂ, ಹಾಗೆ ಸ್ತುತಿಸಿದ ಕಡೆಗಳಲ್ಲೆಲ್ಲ ಇಳಿದು ಸಂಚರಿಸುವವನೂ ಆದ ಸರ್ವೇಶ್ವರನನ್ನು ಪ್ರಾಜ್ಞರಾದ ಋಷಿಗಳು ಭಕ್ತಿಯಿಂದ ಹುಡುಕಿ ಅರಿಯಬಲ್ಲರು," ಎಂದು ಈ ಮಂತ್ರದ ಅರ್ಥ.

ಈ 'ಹಂಸ' ನಾರು ? ಎಂಬುದನ್ನು ಈ ಮಂಡಲದ ೧೧೫ನೇ ಸೂಕ್ತವು

'ವಾಜಿಂ ತಮಾಯ:' ಎಂದು ಅವನನ್ನೇ ಸ್ತುತಿಸುವಲ್ಲಿ 'ಅಶ್ವರೂಪಿಗಳಲ್ಲಿ ಶ್ರೇಷ್ಠ'ನಾದವನೆಂದು ತಿಳಿಸಿ, ಹಯಗ್ರೀವನೆಂದೇ ನಿರ್ದೇಶಿಸಿದೆ! ಆದರೆ ಶ್ರೀಸಾಯಣರು ಈ ಹಂಸನೆಂದರೆ ಸೂರ್ಯನೆಂದು ವಿವರಿಸಿದ್ದಾರೆ. (ವಾಜಿಂತಮಾಯ ಎಂಬುದಕ್ಕೂ 'ಬಹು ಬಲಶಾಲಿ' ಎಂದು ಅರ್ಥ ಬರೆದಿದ್ದಾರೆ.)

ವೇದೋಪನಿಷತ್ತುಗಳಲ್ಲಿ ಹಂಸ ಶಬ್ದವು ಪರಮಾತ್ಮವಾಚಕವೆಂಬುದು ಪ್ರಸಿದ್ಧ. 'ಹಗ್‌ಂಸಃ ಶುಚಿಷತ್' ಎಂಬಲ್ಲಿ, ತೈ. ನಾರಾಯಣೀಯ ಮತ್ತು ಕಠೋಪನಿಷತ್ (V–2) ಪ್ರಕರಣಗಳಲ್ಲಿ ಶ್ರೀರಂಗರಾಮಾನುಜರೂ ಸೂರ್ಯನೆಂದೇ ಅರ್ಥಮಾಡಿದ್ದರೂ ಇವನು ಪ್ರಾಕೃತ ಸೂರ್ಯನಲ್ಲ. 'ಸುಷ್ಠು ಈರ್ಯತೇ'— 'ಸರ್ವರಿಗೂ ಸ್ವಾಮಿಯಾದವನು' ಎಂಬ ನಿರುಕ್ತದಂತೆ (ಸೂರ್ಯ ಆತ್ಮಾ ಜಗತಃ ತಸ್ಥುಷಶ್ಚ—ಎಂಬಂತೆ) ಸ್ಥಾವರ ಜಂಗಮಾತ್ಮಕವಾದ ಜಗತ್ತಿಗೆಲ್ಲ ಒಡೆಯನೆಂಬ ವಿಶಾಲಾರ್ಥದಲ್ಲಿ ಪರಮಾತ್ಮನನ್ನೇ ಈ ಮಂತ್ರಗಳು ಅತ್ಯಂತ ಶುಚಿಯಾದವನೆಂದು, ಪವಿತ್ರನೆಂದು, ವರ್ಣಿಸುತ್ತವೆ. ಸೂರ್ಯನು ಕುದುರೆಯ ರೂಪದಲ್ಲಿಯೇ (ಹಯಗ್ರೀವನಾಗಿ) ಯಾಜ್ಞವಲ್ಕ್ಯರಿಗೆ ವೇದವನ್ನುಪದೇಶಿಸಿ, ಅದು ವಾಜಸನೇಯಿ ಎಂದು ಎನಿಸಿದ್ದೂ ಪ್ರಸಿದ್ಧವಿದೆ! ಮಂತ್ರಿಕೋಪನಿಷತ್ತಿನಲ್ಲಿ "ಶುಚಿಂ ಹಂಸಂ" ಎಂದೂ, "ಧ್ರುವಂ ಹಂಸಂ" ಎಂದೂ, ಪರಮಾತ್ಮನನ್ನು ಕರೆದಿದೆ. ಶ್ವೇತಾಶ್ವತರವೆಂಬ ಉಪನಿಷತ್ತೂ "ಏಕೋ ಹಂಸಃ" ಎಂದು ಭಗವಂತನನ್ನು ಕರೆದಿದೆ, (VI–15). ಇವನನ್ನು ಅರಿಯುವುದರಿಂದ ಮಾತ್ರ ಮೋಕ್ಷವೆಂದೂ, ಬೇರೆ ದಾರಿಯಿಲ್ಲವೆಂದೂ ಹೇಳಿರುವುದರಿಂದ ಅರ್ಥ ಸ್ಪಷ್ಟವಾಗಿದೆ. ಹಯಗ್ರೀವನಿಗೆ ಪರಮಹಂಸರೂಪವೊಂದುಂಟೆಂಬುದು ಪ್ರಸಿದ್ಧ. ಶಾಟ್ಯಾಯನೀ ಶಾಖೆಯ ಉಪನಿಷತ್ತಿನಲ್ಲಿ ಪರಮಹಂಸರು (ಯತಿಗಳು) ಧರಿಸಬೇಕಾದ ತ್ರಿದಂಡ, ಕಮಂಡಲು, ಕೌಪೀನ ಇತ್ಯಾದಿಗಳನ್ನು ವಿಧಿಸಿರುವ ಕ್ರಮದಲ್ಲಿಯೇ ಭಗವಂತನು ಈ ರೂಪ ತಾಳಿದುದಾಗಿ ಶ್ರೀ ಮಹಾಭಾರತದ ಮೋಕ್ಷ ಧರ್ಮ ಭಾಗದಲ್ಲಿ (349–90) ಹೇಳಿದೆ. (ಹಯಶಿರೋಪಾಖ್ಯಾನದಲ್ಲಿ.)

ತಂ ದೇವೋ ದರ್ಶಯಾಮಾಸ ಕೃತ್ವಾ ಹಯಶಿರೋ ಮಹತ್
ಸಾಂಗಾ ಆವರ್ತಯನ್ ವೇದಾನ್ ಕಮಂಡಲು ತ್ರಿದಂಡಧೃಕ್ ॥

ಚತುರ್ಮುಖಬ್ರಹ್ಮನಿಗೂ ಇದೇ ರೂಪದಲ್ಲಿಯೇ ಭಗವಂತನು ವೇದಗಳನ್ನು ಪದೇಶಿಸಿದನೆಂದೂ ಪಾಂಚರಾತ್ರದಲ್ಲಿ ಪ್ರಸಿದ್ಧ. ಇದನ್ನೇ ಶ್ವೇತಾಶ್ವತರದಲ್ಲಿ "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ..." ಇತ್ಯಾದಿ ವಾಕ್ಯದಲ್ಲಿ ಹೇಳಿದೆ. ಇದನ್ನು ಸೂಚಿಸುವಂತೆಯೇ ಈ ಉಪನಿಷತ್ತಿನ ಹೆಸರಿರುವುದೂ ಗಮನೀಯ. 'ಅಶ್ವ' ಎಂದರೆ ಕುದುರೆ. 'ಶ್ವೇತಾಶ್ವ'ವೆಂದರೆ ಬಿಳೀಕುದುರೆ. ಇದರ ಸಹಾಯ ದಿಂದ ಸಂಸಾರ ಸಮುದ್ರವನ್ನು ಯೋಗಿಗಳು ತರಂತಿ ದಾಟುವರಾದ್ದರಿಂದ ದೇವರೇ ಶ್ವೇತಾಶ್ವತರನಾಗುತ್ತಾನೆ. ಈ ಉಪನಿಷತ್ತನ್ನು ಸಾಕ್ಷಾತ್ಕರಿಸಿದ ಋಷಿಯು ಹಯಗ್ರೀವೋಪಾಸಕರಾದುದರಿಂದ, ಉಪಾಸ್ಯರೂಪಭಗವ ದ್ವಾಚಕವನ್ನು 'ಹಂಸ' ರೂಪದಲ್ಲಿ ಶಬ್ದದಲ್ಲಿ ಇಲ್ಲಿ ತೋರಿಸಿರುವುದು ಮಾರ್ಮಿಕವಾಗಿದೆ, ವಾಗ್ದೇವತೆಯಾಗಿ, ಸಕಲ ವಿದ್ಯಾಧಿದೇವತೆಯಾಗಿ, ಅವತರಿಸಿದ ಭಗವಂತನ ಪತ್ನಿಯೇ ವಾಗ್ದೇವಿಯಾದ ಲಕ್ಷ್ಮೀ ಎಂದು ವೈದಿಕ ಪರಿಭಾಷೆಯಲ್ಲಿ ಪ್ರಸಿದ್ಧ. ಋಗ್ವೇದದಲ್ಲಿ (X-82-7) 'ವಾಚಸ್ಪತಿಂ' ಇತ್ಯಾದಿ ಕಡೆಗಳಲ್ಲಿ ಭಗವಂತನನ್ನು ವಾಕ್‌ತತ್ವಕ್ಕೆ (ವಾಗ್ದೇವತೆಗೆ) ಪತಿ ಎಂದು ಬಾಯಿಬಿಟ್ಟೇ ಹೇಳಿದೆ "ನಮೋ ವಾಚೇ, ನಮೋ ವಾಚಸ್ಪತಯೇ, ನಮೋ ವಿಷ್ಣವೇ ಬೃಹತೇ ಕರೋಮಿ" ಎಂಬ ತೈತ್ತಿರೀಯ ಆರಣ್ಯಕ ಮಂತ್ರ ವನ್ನು ದಿನವೂ ಶಾಂತಿಪಾಠವನ್ನಾಗಿ ಓದಿ ಆಮೇಲೆಯೇ ನಿತ್ಯಬ್ರಹ್ಮಯಜ್ಞ ಮಾಡುವವರೆಲ್ಲರೂ, ಈ ವಾಚಸ್ಪತಿ ವಿಷ್ಣುವೇ ಎಂಬುದನ್ನು ಬಲ್ಲರು. ವಾಗ್ದೇವಿಯಾದ ಲಕ್ಷ್ಮಿಗೂ, ವಾಕ್ಪತಿಯಾದ ಶ್ರೀನಿವಾಸನಿಗೂ ಕ್ರಮವಾಗಿ ನಮಸ್ಕಾರ ಹೇಳಿ ಮುಂದೆ ಅಧ್ಯಯನ ಮಾಡುವ ಪದ್ಧತಿ ಸಕಲ ವೈದಿಕರಿಗೂ ವಿಹಿತವಾದ್ದರಿಂದ ವಾಗ್ದೇವತೆಯು ಲಕ್ಷ್ಮಿಯೇ ಎಂಬುದರಲ್ಲಿ ಯಾರಿಗೂ ಸಂದೇಹವೇ ಬೇಡ. (ಪಾಂಚರಾತ್ರ ಸಂಹಿತೆಗಳಲ್ಲಿ ಈ ಎಲ್ಲ ಅರ್ಥಗಳೂ ಇನ್ನೂ ಹೆಚ್ಚು ಸ್ಪಷ್ಟವಾಗಿವೆ) ಹರಿವಂಶದಲ್ಲಿ (III-33-19 ರಿಂದ 34) ಹಂಸಶಬ್ದ ವಾಚ್ಯನನ್ನು ವಾಕ್‌ಪತಿಯೆಂದು ಕರೆದು, ಇದು ಹಯಗ್ರೀವ ರೂಪೀ ವಿಷ್ಣುವಿಗೆ ವಾಚಕವೆಂದು ಸ್ಪಷ್ಟಪಡಿಸಿದೆ.

ಈ ಎಲ್ಲ ವಿವರಣೆಗಳ ಹಿನ್ನೆಲೆಯಲ್ಲಿ ಪ್ರಕೃತಮಂತ್ರದಲ್ಲಿ ಸ್ತುತಿಸಲ್ಪಡುವ ವಾಗ್ದೇವಿ ವಾಗಾಂಭೃಣೀ— ಯಾರೆಂಬುದರಲ್ಲಿ ಸಂದೇಹವೇನು? (ಸಾಮಾನ್ಯರು ತಿಳಿಯುವಂತೆ ಚತುರ್ಮುಖಬ್ರಹ್ಮಪತ್ನಿಯಾದ ಸರಸ್ವತಿ ಇವಳಲ್ಲವೆಂಬುದನ್ನು ಮುಂದೆ ಒಂದು ಅಧ್ಯಾಯದಲ್ಲಿ ಈ ಸೂಕ್ತದ ದೀರ್ಘ ವಿವರಣೆಯಲ್ಲಿ ಕಾಣಬಹುದು.)

ಇಂಥ ಎಲ್ಲ ಸಂದರ್ಭಗಳನ್ನೂ ಪ್ರಕ್ಷೇಪವೆನ್ನುವವರು ಹುಚ್ಚರಾಗಬೇಕಾಗುತ್ತದೆ. ವೇದದಲ್ಲಿ ಈ ಮೇಲಿನ ವಿವರಣೆಗಳಲ್ಲದೆ, ಅಲ್ಲಲ್ಲೇ ಬರುವ ಭೂಸೂಕ್ತ, ಶ್ರದ್ಧಾಸೂಕ್ತ, ಮೇಧಾಸೂಕ್ತ, ಸ್ವಧಾಸೂಕ್ತ ಮೊದಲಾದುವೂ ಲಕ್ಷ್ಮೀಪರವಾದುದೆಂದು ಅನಾದಿಕಾಲದಿಂದಲೂ ವೈದಿಕರು ಹೇಳುತ್ತಾರೆ. ಇವೆಲ್ಲಕ್ಕೂ 'ಸಂಶೋಧಕರು' ಏನೆನ್ನುವರು?

## ೫ ಭಗವಂತನಂತೆ ಇವಳೂ ವ್ಯಾಪಕಳು

ಇನ್ನೂ ಮುಂದೆ ಹೋಗಿ ಹೇಳುವುದಾದರೆ, ಹೇಗೆ ಭಗವಂತನು ಸರ್ವಶಬ್ದವಾಚ್ಯನೋ, ಅವನ ಪತ್ನಿಯಾದ ಲಕ್ಷ್ಮಿಯೂ ಅವನನ್ನು ಎಡೆಬಿಡದೆ ತಾನೂ ಆ ಎಲ್ಲ ಶಬ್ದಗಳಿಂದಲೂ ಅದೇ ಕಾಲಕ್ಕೇ ವಾಚ್ಯಳೆಂದು ಶ್ರೀ ವಿಷ್ಣುಪುರಾಣಕಾರರು ಕಂಠೋಕ್ತವಾಗಿ ಸಾರಿದ್ದಾರೆ.

ನಿತ್ಯೈವೈಷಾ ಜಗನ್ಮಾತಾ ವಿಷ್ಣೋಃ ಶ್ರೀರನಪಾಯಿನೀ ।
ಯಥಾ ಸರ್ವಗತೋ ವಿಷ್ಣುಃ ತಥೈವೇಯಂ ದ್ವಿಜೋತ್ತಮ ॥
(I-8-17)

"ಶ್ರೀವಿಷ್ಣುವನ್ನು ಎಂದೂ ಬಿಟ್ಟಗಲಿರದ, ಜಗನ್ಮಾತೆಯಾದ ಈ ಮಹಾಲಕ್ಷ್ಮಿಯೂ, ಭಗವಂತನಂತೆಯೇ ನಿತ್ಯಳೂ, ಸರ್ವವ್ಯಾಪಕಳೂ ಆಗಿದ್ದಾಳೆ." ಇದನ್ನು ಅವರೇ ವಿವರಿಸುವ ಬಗೆ ಅದ್ಭುತವಾಗಿದೆ, ಹೇಗೆಂದರೆ ಅರ್ಥೋ ವಿಷ್ಣುಃ ಇಯಂ ವಾಣೀ — ಇತ್ಯಾದಿ ಕ್ರಮದಲ್ಲಿ, ಶಬ್ದದಲ್ಲಿ ವಾಣೀ ಸ್ವರೂಪದಲ್ಲಿರುವವಳು ಲಕ್ಷ್ಮಿಯಾದರೆ, ಅರ್ಥರೂಪದಲ್ಲಿರುವವನು

ವಿಷ್ಣು, ಎಂಬುದೊಂದು ಉದಾಹರಣೆ. ವಾಣಿಯೆಂಬುದು ( Sound ಅಥವಾ ನಾದದ ರೂಪದ ಶಬ್ದ ಶರೀರ, ) ಇಲ್ಲೂ ಸರಸ್ವತಿಯಲ್ಲವಷ್ಟೆ ! ಈ ಶಬ್ದಶರೀರದೊಳಗಿದ್ದು ಅದಕ್ಕೂ, ಇಡೀ ಶಬ್ದಪ್ರಪಂಚಕ್ಕೂ ಉಸಿರಾಗಿ ಅದನ್ನು ಸಾರ್ಥಕ ಮಾಡುವವನೇ ವಿಷ್ಣು ಎಂದು ಹೇಳಿದಂತಾಯಿತು. ಅವರ ಪರಸ್ಪರ ಅವಿನಾಭಾವವನ್ನೂ ಹೇಳಿದಂತಾಯಿತು. (ಕಾಳಿದಾಸನು ರಘುವಂಶ ಕಾವ್ಯದ ಆರಂಭದಲ್ಲಿ 'ವಾಗರ್ಥಾವಿವ ಸಂಪೃಕ್ತೌ' ಇತ್ಯಾದಿ ತನ್ನ ಇಷ್ಟದೇವತಾ ವರ್ಣನೆ ಮಾಡಿರುವಲ್ಲಿಯೂ ಈ ಪ್ರಾಚೀನ ವಿಷ್ಣುಪುರಾಣಸೂಕ್ತಿಯೂ, ಇಲ್ಲಿ ಹೇಳಲ್ಪಟ್ಟ ಲಕ್ಷ್ಮೀನಾರಾಯಣರ ಅನ್ಯೋನ್ಯ ಶರೀರಾತ್ಮಭಾವವೂ ಪ್ರಭಾವ ಬೀರಿರುವುದು ಸ್ಪಷ್ಟ.) ಹೀಗೆಯೇ ಅನೇಕ ಮನೋಹರ ಉದಾಹರಣೆಗಳನ್ನೂ, ವಿವರಣೆಗಳನ್ನೂ ಕೊಟ್ಟ ನಂತರ ಸಕಲ ದೇವತೆಗಳಲ್ಲೂ ಆ ಆ ಶಬ್ದಗಳಿಂದ ಮುಖ್ಯ ವೃತ್ತಿಯಲ್ಲಿ ವಾಚ್ಯನು ವಿಷ್ಣುವೇ ಎಂದೂ, ಆ ಆ ದೇವತಾಪತ್ನೀ ವಾಚಕಗಳೆಲ್ಲವೂ ಹಾಗೇ ಲಕ್ಷ್ಮೀವಾಚಕಗಳೇ ಮುಖ್ಯಾರ್ಥದಲ್ಲಿ ಆಗಿವೆಯೆಂದೂ ಈ ಪ್ರಕರಣ ನಿರ್ಣಯಿಸಿದೆ, ( ಉದಾಃ ಶಂಕರೋ ಭಗವಾನ್ ಶೌರಿಃ, ಗೌರೀ ಲಕ್ಷ್ಮೀಃ ದ್ವಿಜೋತ್ತಮ । )

ಇದು ಸೂರ್ಯ, ಚಂದ್ರ, ಇಂದ್ರ, ವರುಣ ಮೊದಲಾದ ಎಲ್ಲರಿಗೂ ಅನ್ವಯವೆಂದು ತೋರಿಸಿ, ಒಟ್ಟಿನಲ್ಲಿ ಎಲ್ಲ ಪುಲ್ಲಿಂಗ ಶಬ್ದಗಳೂ —ಅವು ಮೇಲ್ನೋಟಕ್ಕೆ ದೇವತೆಗಳನ್ನೋ, ಮನುಷ್ಯರನ್ನೋ, ಮೂಕ—ಜಂತುಗಳನ್ನೋ, ಯಾರನ್ನೋ ಕುರಿತು ಹೇಳಿದರೂ, —ಅವೆಲ್ಲಾ ಮೂಲತಃ ವಿಷ್ಣುವಾಚಕಗಳೇ ಎಂದೂ, ಹಾಗೇ ಸ್ತ್ರೀಲಿಂಗ ಶಬ್ದಗಳೆಲ್ಲಾ ಲಕ್ಷ್ಮೀವಾಚಕಗಳೆಂದೂ ಹೇಳಿದೆ : ಈ ಲಕ್ಷ್ಮೀನಾರಾಯಣ ತತ್ತ್ವಕ್ಕೆ ಮೇಲ್ಪಟ್ಟ ತತ್ತ್ವ ಇನ್ನೊಂದಿಲ್ಲವೆಂಬುದೇ ಇಲ್ಲಿನ ನಿರ್ಣಯ.

ದೇವತಿರ್ಯಙ್ಮನುಷ್ಯಾಣಾಂ ಪುನ್ನಾಮಾ ಭಗವಾನ್ ಹರಿಃ ।
ಸ್ತ್ರೀನಾಮ್ನೀ ಶ್ರೀಶ್ಚ ವಿಜ್ಞೇಯಾ ನಾನಯೋರ್ವಿದ್ಯತೇ ಪರಂ ॥

(I-8-35)

ಉದಾಹರಣೆಗೆ 'ನದ' ವಿಷ್ಣುವಾದರೆ 'ನದೀ' ಲಕ್ಷ್ಮೀ ಆಗುವಳು.

'ಧ್ವಜ' (ಬಾವುಟ) ವಿಷ್ಣುವಾದರೆ, 'ಪತಾಕಾ' ( ಅರ್ಥ ಅದೇ, ಆದರೆ ಸ್ತ್ರೀಲಿಂಗ ಶಬ್ದ ), ಲಕ್ಷ್ಮಿಯಾಗುವಳು. ಶ್ರೀ ವಿಷ್ಣುವಿಗೂ, ಲಕ್ಷ್ಮೀದೇವಿಗೂ ಆಕಾರದಲ್ಲಿ ಮಾತ್ರ ಭೇದವೆಂದೂ, ಅವನೇ ತಂದೆಯೆನಿಸಿದಾಗ ತಾನೂ, ತಾಯಿಯೆನಿಸಿದಾಗ ಲಕ್ಷ್ಮಿಯೂ ಆಗುವುದಾಗಿ, ಒಟ್ಟಿನಲ್ಲಿ ಲಕ್ಷ್ಮೀನಾರಾಯಣರು ಒಂದೇ ಪರತತ್ವದ ಎರಡು ಮುಖಗಳೆಂದು ಇಲ್ಲಿ ನಿರ್ಧರಿಸಿರುತ್ತಾರೆ. ಇದು ದಿಢೀರನೆ ಪುರಾಣದಲ್ಲಿ ಹುಟ್ಟಿಕೊಂಡ ಆಗಂತುಕ ನಿರ್ಣಯವಲ್ಲ ! ಅನಾದಿವೈದಿಕ ಪರಂಪರೆಯಿಂದ ಬಂದ ನಿರ್ಣಯ. ವೇದದಲ್ಲಿ 'ಇಂದ್ರ' ಶಬ್ದವು ವಿಷ್ಣುವನ್ನು ಕುರಿತು ಸರ್ವೇಶ್ವರನೆಂದು ಕೊಂಡಾಡುವಾಗ; 'ಇಂದ್ರಾಣೀ' ಶಬ್ದವು ಲಕ್ಷ್ಮೀವಾಚಕವಾಗುತ್ತದೆ. ಹಾಗೇ ವರುಣ–ವರುಣಾನೀ, ಅಗ್ನಿ–ಅಗ್ನಾಯೀ, ರುದ್ರ–ರುದ್ರಾಣೀ, ಮೊದಲಾದ ದ್ವಂದ್ವಗಳನ್ನೆಲ್ಲ ಅರಿಯಬೇಕೆಂದು ಹಿರಿಯರ ಮಾರ್ಗದರ್ಶನವುಂಟು. ತತ್ತ್ವ ಹೀಗಿರುವಾಗ, ಲಕ್ಷ್ಮೀತತ್ವವು ಅವೈದಿಕವೆಂನು ಹೇಳುವವರು ವೈದಿಕರಾಗಲಾರರಷ್ಟೆ ! ಇದೆಲ್ಲವೂ ಪ್ರಕ್ಷೇಪವೆನ್ನುವುದು ಮೂರ್ಖತನದ ಪರಮಾವಧಿಯಾಗುವುದು !!

## ೬. 'ನಾಸದೀಯ'ದಲ್ಲಿ ಲಕ್ಷ್ಮೀ

ಸುಪ್ರಸಿದ್ಧವಾದ 'ನಾಸದೀಯ' ಸೂಕ್ತದಲ್ಲಿ (X-129) ನೋಡಿದರೂ ಜಗತ್ತಿನ ಪ್ರಳಯಾವಸ್ಥೆಯಲ್ಲಿಯೂ ಪರಮಾತ್ಮ ತತ್ವವು ಲಕ್ಷ್ಮೀ ವಿಶಿಷ್ಟವಾಗಿಯೇ ಇದ್ದಿತೆಂಬುದನ್ನು ಹೇಳಿದೆ. "ಆನೀದವಾತಗ್‌ಂ ಸ್ವಧಯಾ ತದೇಕಂ" ಎಂಬಲ್ಲಿ, ಸೃಷ್ಟಿಯ ಪೂರ್ವದಲ್ಲೂ ಇದ್ದ ಪರಮಾತ್ಮನು ಜಡನಾಗಿರಲಿಲ್ಲವೆಂದೂ, ಚಾಲನೆ, ಉಸಿರಾಟ, ಚೈತನ್ಯಯುಕ್ತನಾಗಿಯೇ ಇದ್ದನೆಂದೂ, ಇದಕ್ಕೆ ಕಾರಣ, ಅವನು ಆಗಲೂ ಸ್ವಧಾ ಶಬ್ದವಾಚ್ಯಳಾದ ಲಕ್ಷ್ಮೀದೇವಿಯೊಡಗೂಡಿದ್ದನೆಂದೂ ಇದರಿಂದ ಅವನ ವೇದೋಕ್ತ ಅದ್ವಿತೀಯತ್ವಕ್ಕೆ ಬಾಧೆ ಬರಲಿಲ್ಲವೆಂದೂ— ತದೇಕಂ – ಹೇಳಿರುವುದು ಗಮನೀಯ (ಸಾಯಣರು ಸ್ವಧಾ ಎಂದರೆ ಭಗವಂತನ ಅಸಾಧಾರಣ ಮಾಯಾ

ಶಕ್ತಿ ಎಂದು ಅರ್ಥಮಾಡಿದ್ದಾರೆ. ಅವರ ಸಂಪ್ರದಾಯದಲ್ಲಿಯೂ ಮಾಯಾ ಶಬ್ದವು ಲಕ್ಷ್ಮೀವಾಚಕವಾಗಿದ್ದು, ಪರಮಾತ್ಮನ ಶಕ್ತಿಸ್ವರೂಪಿಣಿಯನ್ನು ನಿರ್ದೇಶಿಸುವುದು. ಮಾಯಾಂ ತು ಪ್ರಕೃತಿಂ ವಿದ್ಯಾತ್ ಎಂಬಂತೆ ಈ ಶಬ್ದವು ಪ್ರಕೃತ್ಯಭಿಮಾನೀ ದೇವತೆಯಾದ ಲಕ್ಷ್ಮಿಯನ್ನು ಕುರಿತು ಹೇಳುವುದೆಂದು ಮಾಧ್ವಮತದ ಪ್ರಕ್ರಿಯೆ. ಆದರೂ ಸ್ವಧಾ ಶಬ್ದವು ನೇರವಾಗಿ ಇಲ್ಲಿ ಮಾಯಾ ಶಬ್ದದ ಪರ್ಯಾಯವಲ್ಲ. ಹಾಗಿಟ್ಟುಕೊಂಡರೂ ಇದು ಲಕ್ಷ್ಮೀವಾಚಕವೆಂಬುದಷ್ಟೇ ಇಲ್ಲಿ ಹೇಳ ಹೊರಟ ವಿಷಯ.)

ಹೀಗೆಯೇ 'ಶ್ರದ್ಧಯಾ ದೇವೋ ದೇವತ್ವಮಶ್ನುತೇ' —ಎಂಬ ಶ್ರದ್ಧಾಸೂಕ್ತ (ತೈ. ಬ್ರಾ III–12–3) ಮಂತ್ರದಲ್ಲೂ, ದೇವನಾಗಿ ಲೋಕಗಳನ್ನೆಲ್ಲ ಬೆಳಗುವ ಪರಮಾತ್ಮನು ದೇವತ್ವವನ್ನು ಹೊಂದಿರುವುದೇ ಶ್ರದ್ಧಾ ಶಬ್ದ ನಿರ್ದಿಷ್ಟಳಾದ ಲಕ್ಷ್ಮಿಯೊಡನೆ ಸಹಯೋಗ ಹೊಂದಿರುವುದರಿಂದ ಎಂದು ಹೇಳಿದೆ. ಶ್ರೀ ಎಂಬುವಳೇ ಇಲ್ಲದಿದ್ದರೆ, ಭಗವಂತನ ಶ್ರೀ–ನಿವಾಸ ಎಂಬ ಆಕಾರಕ್ಕೆ, ಆಗ ಅರ್ಥವಿಲ್ಲ ಎಂಬುದನ್ನು ಶ್ರುತಿ ಹೇಳುವ ಬಗೆ ಇದು. ಇದೆಲ್ಲವನ್ನೂ ಅನಾದಿಪರಂಪರೆಯಿಂದ ಗ್ರಹಿಸಿದ ಶ್ರೀರಾಮಾನುಜಾಚಾರ್ಯರ ಶಿಷ್ಯರಾದ ಶ್ರೀ ಪರಾಶರಭಟ್ಟರು ತಮ್ಮ ಶ್ರೀಗುಣರತ್ನಕೋಶವೆಂಬ ಸ್ತೋತ್ರಗ್ರಂಥದಲ್ಲಿ ಹೀಗೆ ಸುಂದರವಾಗಿ ಸಂಗ್ರಹಿಸಿ, ನಿರೂಪಿಸಿದ್ದಾರೆ,

ಸ್ವರೂಪಂ ಸ್ವಾತಂತ್ರ್ಯಂ ಭಗವತ ಇದಂ ಚಂದ್ರವದನೇ
ತ್ವದಾಶ್ಲೇಷೋತ್ಕರ್ಷಾತ್ ಭವತಿ ಖಲು ನಿಷ್ಕರ್ಷ ಸಮಯೇ ।
ತ್ವಮಾಸೀರ್ಮಾತಶ್ಶ್ರೀಃ ಕಮಿತುರಿತ್ಥಂ ತ್ವವಿಭವಃ
ತದಂತರ್ಭಾವಾತ್ ತ್ವಾಂ ನ ಪೃಥಗಭಿಧತ್ತೇ ಶ್ರುತಿರಪಿ ॥

(ಶ್ಲೋ. ೨೮)

ಈ ಶ್ಲೋಕದ ಭಾವವನ್ನು ವಿವರಿಸುವುದಕ್ಕೆ ಮುಂಚೆ, ಇದರ ಸಂದರ್ಭವನ್ನು ಕೊಂಚ ಅರಿಯುವುದು ಅವಶ್ಯವಾದೀತು. ಕೆಲವು ಕುಚೋದ್ಯಗಾರರು ಆಗಾಗ ಹೀಗೆ ಕೇಳುವುದುಂಟು: ಉಪನಿಷತ್ತುಗಳಿಗೆ ಪರತತ್ತ್ವ

ವನ್ನು ಅಲ್ಲಲ್ಲಿ ಸುಮ್ಮನೆ ತತ್, ಸತ್, ಬ್ರಹ್ಮ, ಪುರುಷ, ಪ್ರಾಣ,
ಜ್ಯೋತಿ, ಆಕಾಶ ಮುಂತಾದ ಶಬ್ದಗಳಲ್ಲಿ ಕರೆದಿರುವುದುಂಟಷ್ಟೇ. ಇಲ್ಲಿ
ಈ ತತ್ತ್ವವು ಲಕ್ಷ್ಮೀವಿಶಿಷ್ಟವೆಂದು ಎಲ್ಲಿಯೂ, ಒಂದು ಕಡೆಯೂ
ಸ್ಪಷ್ಟವಾಗಿ ಹೇಳದಿರುವಾಗ, ಬೇರೆಲ್ಲೋ, ಅಪ್ರಸಿದ್ಧವಾದ, ಖಿಲವಾದ,
‘ಪ್ರಕ್ಷಿಪ್ತ’ವಾದ, ಅವೈದಿಕಮೂಲದ ಲಕ್ಷ್ಮೀತತ್ತ್ವವನ್ನು ತಂದು, ವೈದಿಕರ
ಪರತತ್ತ್ವದಲ್ಲಿ ಬೆರೆಸುವುದು ಅನ್ಯಾಯ, ಅಸಾಧು, ಅಪ್ರಾಮಾಣಿಕ ಎಂದು.

(ಇದಕ್ಕೆ ನಾವು ಒಂದು ದೃಷ್ಟಿಯಲ್ಲಿ ಉತ್ತರವನ್ನು ಈಗಾಗಲೇ
ನಮ್ಮ ಹಿಂದಿನ (೬ನೆಯ) ಸಂಪುಟದಲ್ಲಿ ಕೊಟ್ಟಾಗಿದೆ. ಬೋಧಾಯನ
ರಿಂದ ಹಿಡಿದು ಶ್ರೀ ಶಂಕರಾಚಾರ್ಯರನ್ನೊಳಗೊಂಡಂತೆ ಸುಮಾರು ಅಪ್ಪಯ್ಯ
ದೀಕ್ಷಿತರ ಕಾಲದ ತನಕ ಒಂದ ಸಹಸ್ರಾರು ವರ್ಷ ಪರಂಪರೆಯ ಬ್ರಹ್ಮ
ಸೂತ್ರ ಭಾಷ್ಯಕಾರರೆಲ್ಲರೂ ವಿಷ್ಣುಪಾರಮ್ಯವಿದರೇ. ಮತ್ತು ಒಂದಲ್ಲ ಒಂದು
ವಿಶಾಲ ದೃಷ್ಟಿಯಲ್ಲಿ ವೈಷ್ಣವರೇ ಎಂಬುದು ಇತಿಹಾಸದಿಂದ ತಿಳಿಯುವ
ವಿಷಯ. ಶೈವರಿಗೂ ಬ್ರಹ್ಮಸೂತ್ರಗಳಿಗೂ ಸಂಬಂಧ ಏರ್ಪಟ್ಟದ್ದು ಈಚೆಗೆ
—ಅಪ್ಪಯ್ಯದೀಕ್ಷಿತರೇ ಶ್ರೀಕಂಠರ ಹೆಸರಿನಲ್ಲಿ ಬರೆದ ಶ್ರೀಕಂಠಭಾಷ್ಯ
ದಿಂದೀಚೆಗೆ. ಆದಮೇಲೆ ಪರತತ್ತ್ವವು ಲಕ್ಷ್ಮೀವಿಶಿಷ್ಟವೆಂಬುದರಲ್ಲೂ,
ಲಕ್ಷ್ಮೀತತ್ತ್ವವು ವೇದೋಕ್ತವೆಂಬುದರಲ್ಲೂ ಇವರಾರಿಗೂ ಸಂದೇಹವಾಗಲಿ,
ಆಕ್ಷೇಪವಾಗಲೀ ಇರಲಿಲ್ಲ. ಆದರೂ ನಿರ್ಗುಣ ಬ್ರಹ್ಮವಾದದ ಅತಿರೇಕಿಗಳು
ಕೆಲವರೋ, ಅಥವಾ ಸಾಂಖ್ಯವಾದಿಗಳು ಕೆಲವರೋ ಅಥವಾ ಈ ವರ್ಗದ
ಬೇರೆ ಯಾರೋ ಕೆಲವರು ಈ ಬಗೆಯ ಕುಚೋದ್ಯಗಳನ್ನು ಎಬ್ಬಿಸಿರ
ಬೇಕು.)

ಇದಕ್ಕೆ ಆಚಾರ್ಯರು ಕೊಟ್ಟಿರುವ ಉತ್ತರ, ಮೇಲಿನ ಶ್ಲೋಕದಲ್ಲಿ,
ಹೀಗಿದೆ: ಭಗವಂತನಿಗೆ ಸ್ವರೂಪವೂ ಸ್ವಾತಂತ್ರ್ಯವೂ ಉಂಟೆಂಬುದನ್ನು
ಒಪ್ಪಿಕೊಂಡವರು ಹೀಗೆಂದೂ ದುರ್ವಾದ ಮಾಡಲು ಅವಕಾಶವೇ ಇಲ್ಲ!
ಭಗವಂತನು ಸರ್ವಗುಣಶೂನ್ಯನೆಂದೂ ಸ್ವರೂಪದರಿದ್ರನೆಂದೂ, ಸರ್ವಶಬ್ದ
ಗಳಿಗೂ ಅತೀತನೆಂಬ ಆತ್ಯಂತಿಕ ಅರ್ಥದಲ್ಲಿ ಅನಿರ್ವಚನೀಯನೆಂದೂ ಹೇಳಿ,
ಬೌದ್ಧರ ಶೂನ್ಯ ತತ್ತ್ವವನ್ನೇ ವೇದಗಳಲ್ಲಿಯೂ ಕಾಣಬಯಸುವ ಅಪ್ರಾ

ಮಾಣಿಕ ತಿಳಿಗೇಡಿಗಳಿಗೆ ಮಾತ್ರ ಈ ಕುಚೋದ್ಯವು ರುಚಿಸುವುದು. ಉಳಿದವರಿಗಲ್ಲ. ಹೇಗೆಂದರೆ, ಭಗವಂತನಿಗೆ ಸ್ವರೂಪ ಉಂಟೆಂದು ಒಪ್ಪಿಕೊಂಡುದಾದರೆ ಅವನನ್ನು 'ಇಂಥವನು' ಎಂದು ನಿರೂಪಿಸುವ ಒಂದೊಂದು ವೈದಿಕ ಶಬ್ದದಲ್ಲೂ ಆ ಭಗವಂತನ ಗುಣನಿರೂಪಕಳಾಗಿ, ಆ ಭಗವಂತನ ಸ್ವರೂಪ ನಿರೂಪವಾಚಕಳಾಗಿ, ಲಕ್ಷ್ಮೀದೇವಿಯು ಅಲ್ಲಲ್ಲಿ ಇದ್ದೇ ಇರುವಳೆಂಬುದನ್ನು ಶಬ್ದಗಳ ಮರ್ಯಾದೆ ತಿಳಿದವರು ಒಪ್ಪಿಕೊಳ್ಳಬೇಕಾಗುತ್ತದೆ.

ಉದಾಹರಣೆಗೆ ಸತ್ ಎಂಬ ಶಬ್ದವನ್ನು ತೆಗೆದುಕೊಳ್ಳೋಣ. 'ಸತ್' ಎಂದರೆ, ನಿರ್ವಿಕಾರನಾಗಿ, ಜಗತ್ತಿಗೆ ಆದಿಯಲ್ಲಿಯೂ, ಅಂತ್ಯದಲ್ಲಿಯೂ, ನಡುವಿನಲ್ಲಿಯೂ ಸುವ್ಯವಸ್ಥಿತನಾಗಿ ಇರುವವನು ಎಂದು ಅರ್ಥವಾಗುತ್ತದೆ. ಇಲ್ಲಿ ಈ ಶಬ್ದದಲ್ಲಿ ಲಕ್ಷ್ಮೀದೇವಿಯು ಹೇಗೆ, ಎಲ್ಲಿ ಅಂತರ್ಗತಳಾಗಿರುವಳು ? ಎಂದು ಕೇಳುವುದಾದರೆ, ಅವನು ನಿರ್ವಿಕಾರನಾಗಿರುವುದೇ ಇವಳ ನಿತ್ಯ ಸಂಯೋಗದಿಂದ, ಎಂದ ಮೇಲೆ, ಅವಳನ್ನು ಪ್ರತ್ಯೇಕವಾಗಿ ಕುರಿತು ವರ್ಣಿಸುವ ಅವಶ್ಯಕತೆಯೇನು ? ಅವಳಿಲ್ಲದಿದ್ದರೆ, ಭಗವಂತನು ನಿಃಸತ್ತ್ವನಾಗುತ್ತಿದ್ದನು ಎಂದು ಶ್ರೀವಿಷ್ಣು ಪುರಾಣವು ಮತ್ತೊಂದು ಕಡೆ ಹೇಳಿದೆ. (ಯಾವ ವಿಷ್ಣುಪುರಾಣದಲ್ಲಿ ? ಎಂದು ಕುಚೋದ್ಯ ಮಾಡುವವರಿಗೆ, "ಯಾವ ವಿಷ್ಣುಪುರಾಣವನ್ನು ಕುರಿತು ಶ್ರೀ ಶಂಕರಭಗವತ್ಪಾದರು. ತತ್ತ್ವನಿಷ್ಕರ್ಷಶ್ಚ ವಿಷ್ಣುಪುರಾಣಾದೇವ ಭವತಿ, ಎಂದು ಬರೆದರೋ, ಯಾವುದರ ನೆರವಿಲ್ಲದ ತತ್ತ್ವ ನಿಷ್ಕರ್ಷೆಯಾಗಲಾರದೆಂದು ಹೇಳಿದರೋ, ಆ ವಿಷ್ಣುಪುರಾಣದಿಂದ" ಎಂದು ಉತ್ತರ ಕೊಡಬೇಕಾಗುತ್ತದೆಯಷ್ಟೆ !)

ಪುರಾಣಗಳಲ್ಲಿ ಇದನ್ನು ಉಪನಿಷತ್ತುಗಳಷ್ಟೇ ಪ್ರಾಚೀನವೆಂದು ಇತ್ತೀಚಿನ ಪಶ್ಚಿಮದ ವಿದ್ವಾಂಸರೂ ಪರಿಗಣಿಸಿರುವುದರಿಂದ, ಈ ಪ್ರಮಾಣದಲ್ಲಿ ಸಂದೇಹ ಬೇಡ.

# ೭ ಶ್ರೀ ವಿಷ್ಣುಪುರಾಣದ ನಿರೂಪಣೆ

ಯತಃ ಸತ್ತ್ವಂ ತತೋ ಲಕ್ಷ್ಮೀಃ ಸತ್ವಂ ಭೂತ್ಯನುಸಾರಿ ಚ।
ನಿಶ್ರೀಕಾಣಾಂ ಕುತಸ್ಸತ್ತ್ವಂ ವಿನಾ ತೇನ ಗುಣಾಃ ಕುತಃ ॥
(I–9–19)

"ಎಲ್ಲೆಲ್ಲಿ ಸತ್ತ್ವವುಂಟೋ ಅಲ್ಲೆಲ್ಲಾ ಲಕ್ಷ್ಮೀದೇವಿಯ ಅಂಶವು ಇದ್ದೇ ಇರುವುದು. ಸತ್ತ್ವವೆಂದರೆ ಧೈರ್ಯವೂ ಸತ್ತ್ವಗುಣವೂ ಆಗ ಬಹುದು. ಭೂತಿ ಎಂದರೆ ಇದು ಲಕ್ಷ್ಮೀವಾಚಕ. ಇಂಥ ಲಕ್ಷ್ಮೀ ಸಂಬಂಧವಿಲ್ಲದ ದೇವತೆಗೆ ಸತ್ತ್ವವು ಎಲ್ಲಿಂದ ಬರಬೇಕು? ಆ ಸತ್ತ್ವವಿಲ್ಲದೆ ಭಗವಂತನಿಗೆ ಅಸಾಧಾರಣವಾದ ಗುಣಗಳಾದರೂ— ಸತ್ಯ, ಜ್ಞಾನ, ಆನಂದ, ವೀರ್ಯ, ಶಕ್ತಿ ಮೊದಲಾದವು— ಎಲ್ಲಿಂದ ಬರಬೇಕು ?" ಎಂದು ಹೇಳಿ, ಶ್ರೀಯಃ ಪತಿತ್ವವು ಪರಾತ್ಪರವಾದ ಪರತತ್ತ್ವಕ್ಕೆ ಮಾತ್ರ ಅಸಾಧಾರಣಲಕ್ಷಣವೆಂದು ಪುರಾಣಕಾರರೇ ನಿರೂಪಿಸಿದಂತಾಯಿತು.

ಬ್ರಹ್ಮರುದ್ರವರುಣೇಂದ್ರಾದಿ ಇತರ ಸಮಸ್ತ ದೇವತೆಗಳಿಗೂ ಈ ಶ್ರೀಯಃ ಪತಿತ್ವವು ವ್ಯಾವೃತ್ತವಾದದರಿಂದ ( ಇಲ್ಲವಾದ ದರಿಂದ ) ಅವರು ಯಾರೊಬ್ಬರೂ 'ಸತ್' ಶಬ್ದಕ್ಕೆ ಅನರ್ಹರಾಗಿ, ಅಂದರೆ ವಿಕಾರಾಸ್ಪದ ರಾಗಿ, ಪ್ರಳಯದಲ್ಲಿ ಇತರ ಜೀವರಾಶಿಗಳಂತೆಯೇ ಕೊಚ್ಚಿ ಹೋಗು ವವರು ಎಂಬುದು ಇಲ್ಲಿಯ ಮರ್ಮ. ಶ್ರೀಶಂಕರಾಚಾರ್ಯರು ಶ್ರೀವಿಷ್ಣು ಪುರಾಣದ ಸಹಾಯದಿಂದ ಮಾಡಿಕೊಂಡ ಪರತತ್ತ್ವ ನಿಷ್ಕರ್ಷೆ ಇದೇ.

ಇದನ್ನು ಮತ್ತಷ್ಟು ವಿವರಿಸುವ ಶ್ರುತಿವಾಕ್ಯಗಳೂ ಇವೆ : "ಭೀಷಾಸ್ಮಾತ್ ವಾತಃ ಪವತೇ", "ಭಯಾದಗ್ನಿಸ್ತಪತಿ", "ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಂ... ಮೃತ್ಯುಃ ಯಸ್ಯ ಉಪಸೇಚನಂ" ಇತ್ಯಾದಿ ಪ್ರಮಾಣಗಳನ್ನು ಇಲ್ಲಿ ನೆನೆಯಬೇಕು ( "ಇವನ ಭಯದಿಂದಲೇ ವಾಯುವು ಭೂಮ್ಯಾಕಾಶಗಳನ್ನು ಶುದ್ಧಿ ಮಾಡುತ್ತಾನೆ"... ಇ.ಊ.,

"ಇವನ ಭಯದಿಂದಲೇ ಅಗ್ನಿಯೂ ತಪಿಸುತ್ತಾನೆ", "ಯಾವನಿಗೆ ಬ್ರಹ್ಮ ಕ್ಷತ್ರಾದಿ ವರ್ಣಗಳೂ ಅನ್ನವೋ, ಯಾವನಿಗೆ ಮೃತ್ಯುದೇವತೆಯಾದ ಯಮನೂ ಉಪ್ಪಿನಕಾಯಿಯಾಗುವನೋ"... (ಕಠ. ಉಪ.) ಇತರ ದೇವತೆಗಳಿಗೂ ಪರಮಾತ್ಮನಿಗೂ ಭೇದ ಉಂಟೆಂಬುದನ್ನು ಇಂಥ ಸಹಸ್ರ ಸಂಖ್ಯೆಯ ಪ್ರಸಂಗಗಳಲ್ಲಿ ಪ್ರಾಸಂಗಿಕವಾಗಿ ಹೇಳಿರುವುದಲ್ಲದೆ, ಕೇನೋಪನಿಷತ್ತಿನಲ್ಲಿ ಸಮಗ್ರವಾಗಿಯೇ ನಿರೂಪಿಸಿದೆ. ಅಗ್ನಿ, ಇಂದ್ರ, ವಾಯು ಮುಂತಾದ ದೇವತೆಗಳಿಗೂ ಯಕ್ಷರೂಪಿಯಾದ ಆ ಪರಮಾತ್ಮನ ನಿಜತತ್ತ್ವ ಸ್ವರೂಪಗಳು ತಿಳಿಯದೆ, ಅಹಂಕಾರ ಉಂಟಾದುದಾಗಿಯೂ, ಅವರು ಅದರಿಂದ ಭಿನ್ನರೆಂದೂ ಹೇಳಿರುವುದನ್ನು ಗಮನಿಸತಕ್ಕದ್ದು.

ಹೀಗೆ ಇಷ್ಟು ಆತ್ಯಂತಿಕ ವ್ಯತ್ಯಾಸವು ಪರತತ್ತ್ವಕ್ಕೆ ಇರುವುದೇ ಲಕ್ಷ್ಮೀವಿಶಿಷ್ಟತ್ವ ಪ್ರಯುಕ್ತವಾದುದರಿಂದ, ಆ ತತ್ತ್ವವನ್ನು ವರ್ಣಿಸುವ ಒಂದೊಂದು ಸಂದರ್ಭದಲ್ಲಿಯೂ ಇದನ್ನು ಶ್ರುತಿಯು ಬಾಯಿಬಿಟ್ಟು ಹೇಳುವ ಅವಶ್ಯಕತೆಯಿಲ್ಲ ಎಂಬುದು ಮೇಲಿನ (ಶ್ರೀ ಪರಾಶರಭಟ್ಟರ) ಶ್ಲೋಕದ ಭಾವ, ಸತ್ ಶಬ್ದಕ್ಕೆ ಹೀಗೆ ವಿವರಣೆಯನ್ನು ನೋಡಿದ ಮೇಲೆ ಉಳಿದ ಬ್ರಹ್ಮವಾಚಕಗಳ ಬಗಗೂ ಹೀಗೇ ವಿಶೇಷ ಕಾಣಬೇಕಾದುದು ಅವಶ್ಯ.

ಉದಾಹರಣೆಗೆ, ಭಗವಂತನನ್ನು ಜ್ಞಾನವಾನ್, ವೀರ್ಯವಾನ್, ಬಲವಾನ್ ಮುಂತಾಗಿ ಶ್ರುತಿ ಕೊಂಡಾಡುತ್ತದಷ್ಟೆ!

ಪರಾಸ್ಯ ಶಕ್ತಿಃ ವಿವಿಧೈವ ಶ್ರೂಯತೇ
ಸ್ವಾಭಾವಿಕೀ ಜ್ಞಾನ ಬಲಕ್ರಿಯಾ ಚ। ಇತ್ಯಾದಿ (ಶ್ವೇತಾಶ್ವತರ.)

ಇಲ್ಲೆಲ್ಲ ಕ್ರಮವಾಗಿ ಲಕ್ಷ್ಮೀದೇವಿಯು ಈ ಜ್ಞಾನ, ವೀರ್ಯ, ಬಲಾದಿ ಗುಣಗಳಲ್ಲಿ ಅಂತರ್ಗತಳಾಗಿರುವಳು. ಇಲ್ಲವಾದರೆ, ಈ ಗುಣಗಳೇ ದೇವರಿಗಿಲ್ಲವಾಗುವುವು. ಲಕ್ಷ್ಮೀ ಶಬ್ದವನ್ನು ಇಲ್ಲೆಲ್ಲಾ ಬಾಯ್ಬಿಟ್ಟು ಹೇಳದಿದ್ದರೂ ಪರ್ಯಾಯದಿಂದ ಹೇಳಿದಂತೆಯೇ ಆಗಿದೆ. ಹಾಗೆಯೇ ದಯಾ

ವಾನ್, ಶೀಲವಾನ್, ಸರ್ವಗಂಧಃ. ಮುಂತಾಗಿ ಸೌಶೀಲ್ಯಗುಣಪೂರ್ಣ ನನ್ನಾಗಿ ಅವನನ್ನು ವರ್ಣಿಸುವಾಗ ಇಲ್ಲೂ ಈ ಗುಣಗಳಲ್ಲಿ ದೇವಿಯು ಅಂತ ರ್ಗತಳಾಗಿರುತ್ತಾ, ಈ ಗುಣಗಳ ನಿಮಿತ್ತ ಬರುವ ವಿಶೇಷ ಕಾಂತಿ ಅವನಿಗೆ ನಷ್ಟವಾಗದಂತೆ ಸ್ವರೂಪರಕ್ಷಕಳಾಗಿರುತ್ತಾಳೆ. ಆದುದರಿಂದ ಈಬಗೆಯ ಸ್ವರೂಪವಾಚಕ, ಗುಣವಾಚಕ ಶಬ್ದಗಳು ಎಲ್ಲೆಲ್ಲಿ ಶ್ರುತಿಯಲ್ಲಿ ಬಂದರೂ, ಅವೆಲ್ಲ ಶ್ರೀಯಃ ಪತಿತ್ವದ ವ್ಯಾಖ್ಯಾನಗಳೇ ಎಂಬುದು ಮೇಲೆ ಉದಾಹೃತ ವಾದ ಶ್ಲೋಕಗಳ ಅಭಿಪ್ರಾಯ.

ಭಗವಂತನಿಗೆ ಸ್ವಾತಂತ್ರ್ಯವೆಂಬ ಸ್ವರೂಪ ವಿಶೇಷವು ಇದೆಯೆಂಬುದೂ ಸಹ ಶ್ರೀಯಃಪತಿತ್ವದಿಂದಲೇ ಎಂದ ಮೇಲೆ ಇನ್ನೂ ಹೆಚ್ಚು ಹೇಳುವು ದೇನಿದೆ ? "ಸ್ವತ್ವ" ಇದ್ದರಲ್ಲವೇ 'ಸ್ವ-ತಂತ್ರ ?' 'ಶ್ರೀ' ಇಲ್ಲದೆ 'ಸ್ವತ್ವ'ಕ್ಕೆ ಅರ್ಥವೇನು ? "ಯಸ್ಯಾ ವೀಕ್ಷ ಮುಖಂ ತದಿಂಗಿತ ಪರಾಧೀನೋ ವಿಧತ್ತೇsಖಿಲಂ" ಎಂದು ಶ್ರೀವತ್ಸಚಿಹ್ನಮಿಶ್ರರು (ಶ್ರೀಸ್ತವದಲ್ಲಿ) ಹೇಳಿರು ವಂತೆ. ಜಗಲ್ಲೀಲೆಯನ್ನು ದೇವರು ನಡೆಸುವುದಾದರೂ ಲಕ್ಷ್ಮೀದೇವಿಯ ವಿಹಾರಕ್ಕಾಗಿ, ವಿನೋದಕ್ಕಾಗಿ, ಅವಳ ಇಂಗಿತಪರಾಧೀನನಾಗಿ ಎಂದಮೇಲೆ ಇವನ ಸ್ವಾತಂತ್ರ್ಯವೂ ಲಕ್ಷ್ಮೀಸಾಪೇಕ್ಷವೇ.

ಸೃಷ್ಟಿಕಾಲದಲ್ಲಿ ಈ ಲಕ್ಷ್ಮೀ ಇಂಗಿತ ಪರಾಧೀನತ್ವವು ಶ್ರುತ್ಯುಕ್ತವೇ ? ಎಂದು ಮತ್ತೆ ಕೆಲವರು ಕೇಳಿ, ಇದನ್ನು ಅತಿವಾದವೆನ್ನಬಹುದು. ಅವರಿಗೆ ಪ್ರಾಸಂಗಿಕವಾಗಿ ಕೊಂಚ ಉತ್ತರವನ್ನು ಇಲ್ಲಿ ಹೇಳುವ :

## ೮. ಮತ್ತೊಂದು ವೈದಿಕ ನಿದರ್ಶನ

ಸೃಷ್ಟಿವ್ಯಾಪಾರವು ಜಗತ್ಕಾರಣ ವಸ್ತುವಾದ ಬ್ರಹ್ಮವಸ್ತುವಿನಿಂದ, ಎಂದಮೇಲೆ, 'ಬ್ರಹ್ಮ'ಶಬ್ದದಲ್ಲಿ ಲಕ್ಷ್ಮಿ ಇರುವಳೋ ಇಲ್ಲವೋ ಎಂದು ನೋಡಿದರೆ. ಭಗವಂತನಿಗೆ ಲಕ್ಷ್ಮೀ ಸಂಬಂಧದಿಂದಲೇ ಸೃಷ್ಟ್ಯಾದಿವ್ಯಾಪಾರ ಗಳಲ್ಲಿ ಪ್ರವೃತ್ತಿಯೂ, ಸಾಮರ್ಥ್ಯವೂ ಉಂಟೆಂಬುದಕ್ಕೆ ಬ್ರಹ್ಮ ಶಬ್ದವೇ

ಸಾಕ್ಷಿಯಾಗಬಲ್ಲದು ! ಹೇಗೆಂದರೆ, 'ಬೃಹ್' ಧಾತುವಿನಿಂದ, 'ಎಲ್ಲಕಡೆಯಲ್ಲಿಯೂ, ಎಲ್ಲರೀತಿಯಿಂದಲೂ ದೊಡ್ಡವನು' ಎಂಬುದು ಈ ಶಬ್ದದ ಅರ್ಥ ! ಸರ್ವತ್ರ ಬೃಹತ್ವಗುಣ ಯೋಗೇನ ಹಿ ಬ್ರಹ್ಮಶಬ್ದಃ ! ಬೃಹತ್ತ್ವಂ ಸ್ವರೂಪೇಣ, ಗುಣೈಶ್ಚ ಯತ್ರ ಅನವಧಿಕಾತಿಶಯಂ, ಸೋಽಸ್ಯ ಮುಖ್ಯೋಽರ್ಥಃ ॥ (ಶ್ರೀಭಾಷ್ಯ, 1-1-1.) "ಭಗವಂತನು ಸ್ವರೂಪದಿಂದಲೂ ಗುಣಗಳಿಂದಲೂ ನಿರತಿಶಯವಾಗಿ ದೊಡ್ಡವನಾಗಿರುವವನು, ಎಂದು ಈ ಶಬ್ದದ ಮುಖ್ಯಾರ್ಥ." ಈ ಸ್ವರೂಪ ಗುಣಗಳಲ್ಲಿ ಲಕ್ಷ್ಮಿಯು ಅಂತರ್ಗತವಾಗಿರುವುದನ್ನು ಈಗಾಗಲೇ ವಿವರಿಸಿ ಆಗಿದೆ.

ಭಗವಂತನ ಈ 'ದೊಡ್ಡತನ'ದಲ್ಲಿ ಹೀಗೆ ಲಕ್ಷ್ಮೀದೇವಿಯೂ ಸೇರಿರುವಳೆಂಬುದು ವೈದಿಕರ ಗ್ರಹಿಕೆ. ಸೂರ್ಯನಿದ್ದಾನೆಂದರೆ, ಕಾಂತಿಯೊಡಗೂಡಿಯೇ ಸೂರ್ಯನಿರುವನೆಂದಂತೆಯೂ, ಚಂದ್ರನಿದ್ದಾನೆಂದರೆ. ಕಾಂತಿಯೊಡಗೂಡಿಯೇ ಚಂದ್ರನಿರುವಂತೆಯೂ, ಬ್ರಹ್ಮವಸ್ತುವನ್ನೂ ಶ್ರೀಯುಕ್ತವಾಗಿಯೇ ತಿಳಿಯಬೇಕು. "ಅಹಂ ನಾರಾಯಣೀ ನಾಮ ಭಾವೋಽಹಂ ತಾದೃಶೋ ಹರೇಃ". "ನನಗೆ ನಾರಾಯಣಿಯೆಂದು ಹೆಸರಾಗಿರುವುದೂ ನಾನು ಭಗವಂತನಿಗೆ ಈ ಅವಿನಾಭಾವದಿಂದಿರುವುದರಿಂದಲೇ" ಎಂದು ಲಕ್ಷ್ಮೀದೇವಿಯೇ ಲಕ್ಷ್ಮೀತಂತ್ರವೆಂಬ ಪಂಚರಾತ್ರಗ್ರಂಥದಲ್ಲಿ ಹೇಳಿಕೊಂಡಿದ್ದಾಳೆ.

"ಇದೆಲ್ಲ ಸರಿ, ಸೃಷ್ಟಿಕಾಲದಲ್ಲಿ ಲಕ್ಷ್ಮಿಯು ಈ ವ್ಯಾಪಾರದಲ್ಲಿ ಭಾಗವಹಿಸುವಳೆಂಬುದಕ್ಕೆ ಶ್ರುತಿ ಪ್ರಮಾಣವನ್ನೇ ತೋರಿಸಲಿಲ್ಲ !" ಎಂಬುವವರಿಗೆ, ಇಗೋ ಈಗ ಪ್ರಮಾಣವನ್ನೇ ತೋರಿಸೋಣ.

ಪ್ರಳಯಕಾಲದಲ್ಲಿ ಜಗತ್ತು ಭಗವಂತನಲ್ಲಿ ಲಯವಾದನಂತರ, ಎಷ್ಟೋ ಕಾಲವಾದಮೇಲೆ, ಪುನಃ ಸರ್ವೇಶ್ವರನು ಜಗತ್ ಸೃಷ್ಟಿಯನ್ನು ಸಂಕಲ್ಪಿಸಿಕೊಂಡು, ತನ್ನೊಳಗೆ, ಸಕಲ ವ್ಯವಹಾರ ಶೂನ್ಯಾವಸ್ಥೆಯಲ್ಲಿ ಅಚಿತ್ ಪದಾರ್ಥಗಳೊಡನೆ ಸಂಮಿಶ್ರವಾಗಿ ಬಿದ್ದಿದ್ದ ಜೀವರಾಶಿಯನ್ನು ಕಂಡು : "ಅಯ್ಯೋ ! ಇವುಗಳಿಗೆ ಈ ಸ್ಥಿತಿಯಾಯಿತೇ !!" ಎಂದು ಕನಿಕರಿಸಿ, "ನಾನು ಬಹು

ವಾಗುವೆನು; ಸೃಷ್ಟಿಯನ್ನು ಉಪಕ್ರಮಿಸುವೆನು" ಎಂಬುದಾಗಿ ತನ್ನ ಕರುಣಾಕಟಾಕ್ಷವನ್ನು ಸೃಷ್ಟಿಸಂಕಲ್ಪರೂಪದಲ್ಲಿ ಬೀರಿದನು ಎಂದು ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿದೆ :

ತದೈಕ್ಷತ ಬಹು ಸ್ಯಾಂ ಪ್ರಜಾಯೇಯೇತಿ, ತತ್ತೇಜೋಽಸೃಜತ (VI-2-1)

ಎಂಬುದಾಗಿ ಆ ಸತ್ ಶಬ್ದವಾಚ್ಯನಾದ ಪರಮಾತ್ಮನು, ತಾನು ಬಹುವಾಗುವೆನೆಂದು 'ನೋಡಿ', ಮೊದಲು ತೇಜಸ್ಸು ಎಂಬ ತತ್ತ್ವವನ್ನೂ, ಆಮೇಲೆ ಆಪವೆಂಬ ತತ್ತ್ವವನೂ. ಕೊನೆಗೆ ಅನ್ನವೆಂಬ ತತ್ತ್ವವನ್ನೂ (ಒಂದರಿಂದೊಂದನ್ನು ಕ್ರಮವಾಗಿ) ಸೃಷ್ಟಿಸಿ, ಈ ಪೂರ್ವಸಿದ್ಧತೆಯಾದ ಮೇಲೆ,

ಸೇಯಂ ದೇವತಾ ಐಕ್ಷತ, ಹಂತ ! ಅಹಮಿಮಾಃ ತಿಸ್ರೋ ದೇವತಾ
ಅನೇನ ಜೀವೇನ ಆತ್ಮನಾನು ಪ್ರವಿಶ್ಯ ನಾಮರೂಪೇ ವ್ಯಾಕರವಾಣಿ। (VI-3-2)

ಎಂದು ಕರುಣಾಪೂರ್ವಕವಾಗಿ, ಈ ತೇಜೋಮಯವಾದ ಮೂರು ತತ್ತ್ವಗಳಲ್ಲಿಯೂ ಅಂತರಾತ್ಮನಾಗಿ ನಿಂತು, ಜೀವಾತ್ಮನಲ್ಲೂ ಅನುಪ್ರವೇಶಮಾಡಿ, ಆವರೆಗೆ ನಾಮರೂಪಗಳಿಲ್ಲದ ( ಹೇಳಲೂ ಹೆಸರಿಲ್ಲದಂತೆ ಇದ್ದ ) ಜೀವಾತ್ಮನಿಗೆ ಆಕಾರ, ರೂಪಗಳನ್ನು ಆ ತತ್ತ್ವಗಳ ಮೂಲಕ ಶರೀರಾದಿಗಳನ್ನು ಅನುಗ್ರಹಿಸುವ ಮೂಲಕ, ಕರುಣಿಸಿದನೆಂದು ಶ್ರುತಿಯೇ ಹೇಳಿದೆ.

## ೯. ಸೃಷ್ಟಿಯೂ ದಯಾಮೂಲವೆಂಬಲ್ಲಿ ಲಕ್ಷ್ಮೀತತ್ತ್ವ

ಇಲ್ಲಿ ಕರುಣೆಯನ್ನು ಎಲ್ಲಿ ಹೇಳಿದೆಯೆಂದರೆ "ಹನ್ತ!"—"ಅಯ್ಯೋ ಎಂದು ಉದ್ಗರಿಸುವುದರ ಮೂಲಕ ಭಗವಂತನು ಅಂದಿನ ಜೀವಾತ್ಮನ

ಸ್ಥಿತಿಗೆ ಮರುಕತೋರಿದನೆಂದು ಸ್ಪಷ್ಟವಾಗಿ ಹೇಳಿದೆ! ಈ 'ಹನ್ತ' ಎಂದು ಹೇಳುತ್ತಾ 'ಐಕ್ಷತ'— ನೋಡಿದನಾದ್ದರಿಂದ, ಅಪನ ಕಂಗಳ ವೀಕ್ಷಣದಲ್ಲೇ ಈ ಕರುಣೆ ಸೂಸಿ, ಉಕ್ತಿರೂಪ ಉದ್ಗಾರವೂ ಬಂದಿತೆಂದು ಶ್ರುತಿ ಹೇಳಿರುವುದರಿಂದ, ಸೃಷ್ಟ್ಯಾದಿವ್ಯಾಪಾರಗಳೆಲ್ಲ ಕರುಣಾಪೂರ್ಣ ವಾದುದುವೆಂಬುದು ಇಲ್ಲಿ ಕಂಠೋಕ್ತವಾಗಿದೆ. ಇಲ್ಲಿ ಲಕ್ಷ್ಮೀದೇವಿಯು ಕರುಣಾ ಎಂಬ ಭಾವದಲ್ಲಿ ಭಗವಂತನ ದಿವ್ಯ ಕಟಾಕ್ಷದಲ್ಲಿ ಸೇರಿದ್ದರಿಂದಲೇ ಸೃಷ್ಟಿಯು ಮಂಗಳಮಯವಾಗಿ, ಮಂಗಳೋದ್ದೇಶ್ಯದಿಂದ ಕೂಡಿದೆ ಎಂಬುದು ತಿಳಿಯ ಬೇಕಾದ ವಿಷಯ. ಅದರಿಂದಲೇ ಈ 'ಈಕ್ಷಣ'ಕ್ಕೆ (ಕರುಣಾ ಪೂರ್ಣ ದೃಷ್ಟಿಯಿಂದ ನೋಡುವ ಬಗೆಗೆ) ಬಹಳ ಪ್ರಾಶಸ್ತ್ಯವುಂಟು.

ಈ ಒಂದು ಕಡೆಯಲ್ಲಿ ಮಾತ್ರವಲ್ಲದೆ ಬೇರೆಷ್ಟು ಕಡೆಗಳಲ್ಲಿ ಇದನ್ನು ಶ್ರುತಿಯಲ್ಲಿ ಕೊಂಡಾಡಿದೆಯೆಂಬುದೂ ಗಮನೀಯ :

೧) ಆತ್ಮಾ ವಾ ಇದಮೇಕ ಏವಾಗ್ರ ಆಸೀತ್ । ನಾನ್ಯತ್ ಕಿಂಚನ ಮಿಷತ್ । ಸ ಈಕ್ಷತ ಲೋಕಾನ್ನು ಸೃಜಾ ಇತಿ । (ಸೃಷ್ಟಿಗೆ ಮೊದಲು ಪರಮಾತ್ಮನೊಬ್ಬನೇ ಇದ್ದನು. ಉಳಿದ ಯಾವುದೊಂದೂ ಕಣ್ಣೂಸಹ ತೆರೆದಿರಲಿಲ್ಲವಾಗಿ (ಸತ್ತಂತೆ) ಇದ್ದಿತು. ಆಗ ಅವನು ನೋಡಿದನು, 'ಇದನ್ನು ಸೃಷ್ಟಿಸುವೆನು' ಎಂದು)

(ಐತರೇಯ ಉಪನಿಷತ್ತು, I-1)

೨) ಸ ಈಕ್ಷತ ಕಥಂ ನ್ವಿದಂ ಮದೃತೇ ಸ್ಯಾದಿತಿ ।
ಸ ಈಕ್ಷತ ಕತರೇಣ ಪ್ರಪದ್ಯಾ ಇತಿ ।

(ಅವನು ಆಲೋಚಿಸಿದನು— 'ನಾನಿಲ್ಲದೆ ಇದು ಹೇಗೆ ಇದ್ದೀತು?' ಎಂದು. ಆಮೇಲೆ ಚಿಂತಿಸಿದನು : 'ಇದನ್ನು ಹೇಗೆ ಪ್ರವೇಶಿಸಲಿ?' ಎಂದು.) (ಐತರೇಯ I-12)

ಇಲ್ಲಿ ತಾನು ಅನುಪ್ರವೇಶಿಸಿದಲ್ಲದೆ ಜಗತ್ತು ಉಳಿಯಲಾರದೆಂದು ಚಿಂತಿಸಿ, ಕರುಣೆಯಿಂದ ತಾನೇ ಅದರಲ್ಲಿ ಅನುಪ್ರವೇಶಿಸಿದನೆಂಬ ಧ್ವನಿ ಇದೆ.

೩. ಸ ಈಕ್ಷಾಂ ಚಕ್ರೇ ... (ಪ್ರಶ್ನೋಪನಿಷತ್ (IV-3-4) ಇತ್ಯಾದಿ.

ಇಂಥ ಕಡೆಗಳಲ್ಲೆಲ್ಲ ಈ 'ನೋಡುವು'ದೆಂಬುದು (ಈಕ್ಷಣ) ವಿಶೇಷ ಕಾರುಣ್ಯದಿಂದಾದುದರಿಂದಲೇ ಶ್ರೀ ವೇದವ್ಯಾಸರೂ ಇದನ್ನೇ ಬ್ರಹ್ಮಲಕ್ಷಣ ಗಳಲ್ಲಿ ಪ್ರಧಾನವನ್ನಾಗಿ ಪರಿಗಣಿಸಿ, ಇದನ್ನೇ ಮುಂದಿಟ್ಟು ಸಾಂಖ್ಯರು ಹೇಳುವ ಬಗೆಯ ಜಡ ಸೃಷ್ಟಿಕ್ರಮವನ್ನು ನಿರಾಕರಿಸಿದ್ದಾರೆ. ಅವರು ಹೇಳುವಂತೆ ಜಡಪ್ರಕೃತಿಯೇ ಜಗತ್ಕಾರಣವಾದರೆ, ಅದಕ್ಕೆ ಈ ವಿಲಕ್ಷಣ ಕಾರುಣ್ಯ ದೃಷ್ಟಿ ಎಲ್ಲಿಂದ ಬರಬೇಕು? ನಿಃಶ್ರೀಕವಾದ ಒಂದು ವಸ್ತು ಶ್ರೇಯೋಮಯ ಜಗದ್ವ್ಯಾಪಾರಕ್ಕೆ ಇಳಿಯುವುದೆಂಬುದು ಹಾಸ್ಯಾಸ್ಪದ ವಾಗಲಾರದೇ? ಎಂದು ಕೇಳುವಂತೆ,

ಈಕ್ಷತೇರ್ನಾಶಬ್ದಂ (ವೇದಾಂತಸೂತ್ರ I-1-5)

ಎಂದು ವೈದಿಕಸಿದ್ಧಾಂತ ಬಾಹ್ಯವಾದ ಸಾಂಖ್ಯವನ್ನು ತಳ್ಳಿಹಾಕಿ ಈ ಸೂತ್ರ ವನ್ನು ಬರೆದರಷ್ಟೆ. ಜಗದ್ವ್ಯಾಪಾರವು ಪರಮಾತ್ಮನಿಗೆ ಅಸಾಧಾರಣವಾದು ದಾದರೆ, ಈ ವ್ಯಾಪಾರಕ್ಕೆ ಲಕ್ಷ್ಮೀಕಟಾಕ್ಷವು ಅಸಾಧಾರಣ ಆಶ್ರಯವೆಂಬ ಗ್ರಹಿಕೆಗೆ ಇಂಥ ಶ್ರುತಿಗಳೇ ಆಧಾರ.

ದೇವರಿಗೆ ಕರುಣೆಯಿರುವುದು ಸರಿಯಾದರೂ, ಕರುಣೆಯಿಂದ ಸೃಷ್ಟಿ ಮಾಡಿದನೆಂದು ಮೇಲಿನ ಶ್ರುತಿಯ ಅರ್ಥವನ್ನೊಪ್ಪಿದರೂ, ಕರುಣೆಯೇ ಲಕ್ಷ್ಮೀ ಎಂಬುದು ಸರಿಯೇ? ಎಂದು ಮತ್ತೆ ಹಲವರು ಕೇಳಿಯಾರು. ಇವರಿಗೆ ಪೂರ್ವಾಚಾರ್ಯರ ಸೂಕ್ತಿಗಳಿಂದ ಉತ್ತರಿಸಿ, ಈ ಶ್ರುತಿವಾಕ್ಯಗಳನ್ನು ಅವರು ತಿಳಿದುಕೊಂಡ ಬಗೆಯನ್ನು ತಿಳಿಸುವುದೊಂದೇ ನಮಗೆ ದಾರಿ. ("ಪೂರ್ವಿಕರು ಹೇಗಾದರೂ ಅರ್ಥಮಾಡಿರಲಿ, ನಾವೇಕೆ ಅದನ್ನೊಪ್ಪಬೇಕು?" ಎಂದು ಕೇಳುವರಿಗೆ ನಾವು ಕೇಳುವುದಿಷ್ಟೇ: "ನಿಮಗೆ ಶ್ರುತಿಯಿಂದಾ ಗಲೀ, ದೇವರಿಂದಾಗಲಿ, ಲಕ್ಷ್ಮೀಕಟಾಕ್ಷದಿಂದಾಗಲೀ ಆಗಬೇಕಾದುದೇನು?" ಎಂದು!)

(೧) ಅಚಿದವಿಶಿಷ್ಟಾನ್ ಪ್ರಳಯೇ ಜಂತೂನವಲೋಕ್ಯ
ಜಾತನಿರ್ವೇದಾ

ಕರಣಕಳೇವರ ಯೋಗಂ ವಿತರಸಿ ವೃಷಶೈಲನಾಥ
ಕರುಣೇ ! ತ್ವಂ ॥
(ದಯಾಶತಕ, ಶ್ಲೋ, ೧೭. ವೇದಾಂತದೇಶಿಕರು)

"ಅಮ್ಮಾ, ಶ್ರೀನಿವಾಸನನ್ನೆಡೆಬಿಡದ ದಯಾದೇವಿಯೆ ! ಪ್ರಳಯ ಜಲಧಿಯಲ್ಲಿ ಪ್ರಕೃತಿಯೆಂಬ ಜಡತತ್ತ್ವಕ್ಕಿಂತ ಬೇರೆಯಾಗಿ ಕಾಣದಂತೆ ಆವು ಗಳೊಡನೆಯೇ ಮಿಶ್ರಿತವಾಗಿ ಬಿದ್ದಿದ್ದ, (ಚಿನ್ನದ ಪುಡಿಯು ಕಲ್ಲುಮಣ್ಣು ಗಳೊಡನೆ ಸೇರಿ, ಬೆಲೆ ತಿಳಿಯದಂತೆ ಬಿದ್ದಿದ್ದ ) ಶೋಚನೀಯ ಸ್ಥಿತಿ ಯನ್ನು ಕಂಡು, ಕರುಣೆಯುಂಟಾಗಿ, ಅವಕ್ಕೆ ಕರಣಕಳೇವರಗಳನ್ನು ವಿತರಣೆ ಮಾಡಿದೆಯಲ್ಲವೇ !"

ಪರಮಾತ್ಮನನ್ನು ಕೊಂಚವೂ ಅಗಲಿರದ ಪತ್ನೀಭಾವದಲ್ಲಿಯೇ ಈ ದಯಾದೇವಿಯು ಈ ಸ್ತೋತ್ರದ ನೂರು ಶ್ಲೋಕಗಳಲ್ಲೂ ಸ್ತುತಿಸಲ್ಪಟ್ಟು ಇಲ್ಲಿ ಅವಳು ಲಕ್ಷ್ಮೀದೇವಿಯ ರೂಪಾಂತರವೆಂದು ಪ್ರಸಿದ್ಧಳಾಗಿದ್ದಾಳೆ.

(೨) ಸಹಧರ್ಮಚರೀಂ ಶೌರೇಃ ಸಂಮಂತ್ರಿತಜಗದ್ಧಿತಾಂ ।
ಅನುಗ್ರಹಮಯೀಂ ವಂದೇ ನಿತ್ಯಮಜ್ಞಾತನಿಗ್ರಹಾಂ ॥

ಎಂಬ ನಿತ್ಯಾನುಸಂಧೇಯ ಶ್ಲೋಕದಲ್ಲಿ ಬಂದಿರುವ ಲಕ್ಷ್ಮೀಸ್ವರೂ ಪಕ್ಕೆ ಈ ನೂರು ಶ್ಲೋಕಗಳೂ ವಿಸ್ತಾರ ವ್ಯಾಖ್ಯಾನದಂತಿವೆ. ("ಶ್ರೀ ವಿಷ್ಣುವಿಗೆ ಸಹಧರ್ಮಚಾರಿಣಿಯೂ, ಯಾವಳೊಡನೆ ಕೂಡಿ ಆಲೋಚಿಸಿಯೇ ಆ ವಿಷ್ಣುವೂ ಜಗತ್ತಿಗೆ ಹಿತವನ್ನೇ ಆಚರಿಸುವನೋ, ಯಾವಳು ಅನು ಗ್ರಹ ಮಾಡುವುದೊಂದನ್ನೇ ಬಲ್ಲಳೋ, ನಿಗ್ರಹವೆಂಬುದೇ ಯಾವಳಿಗೆ ತಿಳಿಯದೋ ಆ ಲಕ್ಷ್ಮೀದೇವಿಯನ್ನು ನಮಿಸುತ್ತೇನೆ." ಯತಿರಾಜಸಪ್ತತಿ. ಶ್ಲೋ, ೨)

ಭಗವಂತನು ಮಾಡುವ ಸ್ಥಾವರ ಜಂಗಮಾತ್ಮಕ ಸೃಷ್ಟಿವ್ಯಾಪಾರ ದಲ್ಲಿಯೂ ಸ್ಥಾವರಗಳಾಗಲಿ, ಜಂಗಮ ಪದಾರ್ಥಗಳಾಗಲಿ, ಇವುಗಳಲ್ಲೂ ತಾರತಮ್ಯವು ಉಂಟಾಗುವುದಕ್ಕೆ ಲಕ್ಷ್ಮೀದೇವಿಯ ಕಟಾಕ್ಷದ ವೈಷಮ್ಯವೇ

( ಭ್ರೂಕ್ಷೇಪವೇ ) ಕಾರಣವೆಂದು ಶ್ರೀ ಪರಾಶರಭಟ್ಟರು ವರ್ಣಿಸಿದ್ದಾರೆ. (ಶ್ರೀ ಗುಣರತ್ನಕೋಶ. ೪)

(೩) ಯದ್ಭ್ರೂಭಂಗಾಃ ಪ್ರಮಾಣಂ ಸ್ಥಿರಚರ ರಚನಾ
ತಾರತಮ್ಯೇ ಮುರಾರೇಃ ।...

ಇವಳ ಕಟಾಕ್ಷಬೀಳದೆ ವಿವಿಧ ವಿಚಿತ್ರ ಸೃಷ್ಟಿ ಸಾಧ್ಯವಿಲ್ಲ ಎಂದು ಭಾವ.

(೪) ಪ್ರಳಯಸಮಯಸುಪ್ತಂ ಸ್ವಂ ಶರೀರೈಕದೇಶಂ
ವರದ ! ಚಿದಚಿದಾಖ್ಯಂ ಸ್ವೇಚ್ಛಯಾ ವಿಸ್ತೃಣಾನಃ ।
ಖಚಿತಮಿವ ಕಲಾಪಂ ಚಿತ್ರಮಾತತ್ಯ ಧೂನ್ವನ್
ಅನುಶಿಖಿನಿ ಶಿಖೀವ ಕ್ರೀಡಸಿ ಶ್ರೀಸಮಕ್ಷಂ ॥

(ಶ್ರೀರಂಗರಾಜಸ್ತವಃ, II-44)

"ಪ್ರಳಯ ಕಾಲದಲ್ಲಿ ನಿನ್ನ ಶರೀರದ ಯಾವುದೋ ಸಣ್ಣಮೂಲೆಯಲ್ಲಿ ಅಡಗಿಹೋಗಿದ್ದ ಚಿದಚಿದ್ವಸ್ತುಗಳನ್ನು, ನಿನ್ನ ಸಂಕಲ್ಪದಿಂದ, ವಿವಿಧ ವಿಚಿತ್ರ ಜಗದ್ರೂಪದಲ್ಲಿ ಹರಡಲು ಹೊರಟು, ಎಲೈ ವರದನೇ !, ಹೆಂಡತಿಯಾದ ಹೆಣ್ಣುನವಿಲು ಪಕ್ಕದಲ್ಲಿರುತ್ತಾ ಅದಕ್ಕೆ ಸಂತೋಷಪಡಿಸಲೆಂದು, ಗಂಡು ನವಿಲು ತನ್ನ ಬಣ್ಣ ಬಣ್ಣದ ಗರಿಗಳನ್ನು ಕೆದರಿ ಆಕಾಶದಷ್ಟು ಹರಡುವಂತೆ, ನೀನೂ ಶ್ರೀದೇವಿಯು ನೋಡುತ್ತಿರಲಾಗಿ (ಅವಳಿಗೆ ಸಂತೋಷಕೊಡಲು) ಸೃಷ್ಟಿಯೆಂಬ ಕ್ರೀಡೆಯನ್ನು ಆರಂಭಿಸುವೆ."

ಈ ಬಗೆಯ ಪೂರ್ವಾಚಾರ್ಯ ಸೂಕ್ತಿಗಳೆಲ್ಲ 'ಈಕ್ಷತೇರ್ನಾಶಬ್ದಂ' ಎಂಬ ಮೇಲೆ ಉದಾಹೃತವಾದ ಬ್ರಹ್ಮಸೂತ್ರಕ್ಕೂ, ಅದಕ್ಕೆ ವಿಷಯ ವಾಕ್ಯಗಳಾದ 'ಈಕ್ಷಣ' ವನ್ನು ವರ್ಣಿಸುವ ಶ್ರುತಿಗಳಿಗೂ ವ್ಯಾಖ್ಯಾನಗಳಂತಿರುವುದರಿಂದ ಸೃಷ್ಟಿಯು ಲಕ್ಷ್ಮೀಕಟಾಕ್ಷದಿಂದಲೇ ಆಗುವುದೆಂಬ ವೈದಿಕ ಸಿದ್ಧಾಂತದಲ್ಲಿ ಯಾರೂ ಅಪನಂಬಿಕೆ ಇಡುವುದು ಬೇಡ. ಇಂಥ ಶ್ರುತಿಗಳಲ್ಲೆಲ್ಲ ಲಕ್ಷ್ಮೀಶಬ್ದವನ್ನೂ ಅವಳ ವ್ಯಾಪಾರವನ್ನೂ ಬಾಯಿಬಿಟ್ಟು ಕೊಂಡಾಡ

ದಿದ್ದರೂ, ಅವಳು ಅಲ್ಲಿ ಇದ್ದೇ ಇದ್ದಾಳೆಂಬುದನ್ನು ಈವರೆಗೆ ವಿವರಿಸಿದಂತೆ ಇಂಥ ಎಲ್ಲ ಕಡೆಗಳಲ್ಲೂ ಕಾಣತಕ್ಕದ್ದು ವೈದಿಕ ಮರ್ಯಾ. ಭಗವಂತನ ದೃಷ್ಟಿಯಲ್ಲೇ, ಈಕ್ಷಣದಲ್ಲೇ ಅವಳು ಅಡಗಿರುವುದರಿಂದಲೇ ಇವನ ಕಟಾಕ್ಷಕ್ಕಿರುವ ಯೋಗ್ಯತೆ ಬೇರಾವ ದೇವತೆಯ ದೃಷ್ಟಿಗೂ ಇಲ್ಲವೆಂದು ವೇದ ಶಾಸ್ತ್ರಗಳೆಲ್ಲ ವರ್ಣಿಸುತ್ತವೆ. ಪುಂಡರೀಕಾಕ್ಷನೆಂದು ಅವನನ್ನು ವರ್ಣಿಸುವುದೇ ಇದಕ್ಕಾಗಿ.

## ೧೦. ಭಗವಂತನ 'ಈಕ್ಷಣ'ದಲ್ಲಿ ಲಕ್ಷ್ಮೀ

ಭಗವಂತನ ದೃಷ್ಟಿಯಲ್ಲಿ ಲಕ್ಷ್ಮಿಯು ( ಕರುಣೆಯು ) ಇದ್ದಿರಲಿಲ್ಲವಾದರೆ, ಆಗ ಸೃಷ್ಟಿಯೇ ಆಗುತ್ತಿತ್ತೋ ಇಲ್ಲವೋ ? ಆಗಿದ್ದರೂ ಚೇತನೋದ್ಧಾರದ ರೂಪದಲ್ಲಿ ಆಗಿರುತ್ತಿತ್ತೋ ಇಲ್ಲವೋ ? ಎಂಬುದನ್ನು ಆ ಭಗವಂತನೇ ಹೇಳಬೇಕಷ್ಟೆ !

ಇದರಿಂದಲೇ, ಭಗವಂತನ ದಿವ್ಯಕಟಾಕ್ಷವನ್ನು ವರ್ಣಿಸುವ ಶ್ರುತಿ ಸ್ಮೃತೀತಿಹಾಸ ಪುರಾಣ ವಾಕ್ಯಗಳಿಗೆ ಸಕಲ ವೈಷ್ಣವ ಸಂಪ್ರದಾಯಗಳಲ್ಲಿ ವಿಶೇಷ ಅರ್ಥವಿದೆ. "ತಸ್ಯ ಯಥಾ ಕಪ್ಯಾಸಂ ಪುಂಡರೀಕಂ ಏವಮಕ್ಷಿಣೀ" (ಛಾಂದೋಗ್ಯ, I–6–7) ಎಂಬ ಶ್ರುತಿಯು ಈ ವಿಷಯದಲ್ಲಿ ಅಗ್ರಮಾನ್ಯ ಪ್ರಮಾಣವಾಗುವುದು. "ಅವನ ಕಂಗಳು ಆಗತಾನೇ ಸೂರ್ಯನ ಕಿರಣಗಳಿಂದ ವಿಕಸಿತವಾದ ತಾವರೆಯ ಎಸಳಿನಂತೆ ಸುಂದರವಾಗಿರುವುವು" ಎಂಬುದಷ್ಟೇ ಇಲ್ಲಿನ ಅರ್ಥವಲ್ಲ. ( ಆದರೆ ಇಷ್ಟನ್ನೂ ಸಹ ಹೇಳಲು ತಯಾರಿಲ್ಲದೆ, 'ದೇವರ ಕಂಗಳು ಕಪಿಯ (ಕೋತಿಯ) ಪೃಷ್ಠದಂತೆ ಕೆಂಪಾಗಿವೆ ಎಂದು ಅಪಾರ್ಥಮಾಡಿ. ಸಗುಣ ಬ್ರಹ್ಮತತ್ವವನ್ನೇ ಒಮ್ಮೆ ಶ್ರೀ ರಾಮಾನುಜರ ಎದುರಿಗೆ ಅಪಹಾಸ್ಯ ಮಾಡಿದ ಯಾದವ ಪ್ರಕಾಶರೆಂಬ ಅವರ ಆಗಿನ ಗುರುಗಳು ಮುಂದೇ ತಾವೇ ಶ್ರೀರಾಮಾನುಜರ ಶಿಷ್ಯರಾಗಿ ಸೋತು ಶರಣಾಗತರಾಗಿದ್ದು ಅವರ ಚರಿತ್ರೆಯಲ್ಲಿ ಪ್ರಸಿದ್ಧವಿದೆ ! ಹೀಗೆ

ಅಪಾರ್ಥಮಾಡಿದವರಲ್ಲಿ ಯಾದವ ಪ್ರಕಾಶರು ಮೊದಲಿಗರೂ ಅಲ್ಲ. ಈ ಕುಚೋದ್ಯಕ್ಕೂ ಒಂದು ಇತಿಹಾಸವುಂಟೆಂದು ಕಾಣುತ್ತದೆ!!

ಇಲ್ಲಿ ಶ್ರೀರಾಮಾನುಜರಿಗಿಂತಲೂ, ಶ್ರೀ ಶಂಕರರಿಗಿಂತಲೂ, ಇವರಿಬ್ಬರಿಗೂ ಪೂರ್ವದವರಾದ ದ್ರಮಿಡ ಭಾಷ್ಯಕಾರರಿಗಿಂತಲೂ, ಬಹು ಪ್ರಾಚೀನರಾದ ಆತ್ರೇಯ ಗೋತ್ರದ ಬ್ರಹ್ಮನಂದಿಗಳೆಂಬ ಶ್ರೀಟಂಕಾಚಾರ್ಯರು ಈ ಶ್ರುತಿವಾಕ್ಯಕ್ಕೆ ತಮ್ಮ ವಾಕ್ಯಗ್ರಂಥದಲ್ಲಿ ಅರ್ಥಬರೆಯುತ್ತಾ: "ಆದಿತ್ಯ ಕ್ಷಿಪ್ತಂ ವಾ ಶ್ರೀಮತ್ವಾತ್" ಎಂದು ವಿವರಿಸಿರುವುದೂ ಇದನ್ನು ಶ್ರೀ ರಾಮಾನುಜಾದಿಗಳು ಪರಿಗ್ರಹಿಸಿರುವುದೂ ಪ್ರಮಾಣವಾಗಬೇಕು. ಮೂಲದಲ್ಲಿ 'ಯಥಾ ಕಪ್ಯಾಸಂ ಪುಂಡರೀಕಂ ಏವಂ ಅಕ್ಷಿಣೀ' ಎಂದಿರುವುದಕ್ಕೆ ಆರು ಬಗೆಯ ಅರ್ಥಗಳನ್ನು ಮಾಡಬರುವುದಾದರೂ, ಅವುಗಳಲ್ಲಿ 'ಕೋತಿಯ ಪೃಷ್ಠದಂತೆ' ಎಂಬುದನ್ನು ಒಳಗೊಂಡು ಮೂರನ್ನು ಹೀನೋಪಮೆಯೆಂದು ತ್ಯಜಿಸಿ, ಉಳಿದ ಮೂರನ್ನು ಮಾತ್ರ ಎತ್ತಿ ಹಿಡಿದ ಈ ಪೂರ್ವಾಚಾರ್ಯರು ಸೂರ್ಯಕಿರಣಗಳಿಂದ ಆಗತಾನೇ ಅರಳಿದ ಕಮಲದಲ್ಲಿ ಸೌಂದರ್ಯವಿರುವಂತೆ, (ಲಕ್ಷ್ಮೀಸಂನ್ನಿಧಾನ ಇರುವಂತೆ)—ಶ್ರೀಮತ್ವಾತ್—ಭಗವಂತನ ಕಂಗಳಲ್ಲೂ ಲಕ್ಷ್ಮೀನಿವಾಸಕಾರಣದಿಂದ ಒಂದು ವಿಲಕ್ಷಣ ಸೌಂದರ್ಯವು ಕಾಣಬರುವುದೆಂದು ಸ್ಪಷ್ಟವಾಗಿ ಬರೆದಿದ್ದಾರೆ. ಇದನ್ನು ಮನದಟ್ಟುಮಾಡಿ ಕೊಡಲೆಂದೇ ಭಗಂತನ ಒಂದೊಂದು ಅವತಾರದಲ್ಲೂ ಲಕ್ಷ್ಮೀ ವಿಶಿಷ್ಟ ನೇತ್ರಶ್ರೀಯನ್ನು ತೋರಿಸಲು, ಮತ್ಸ್ಯಃ ಕಮಲಲೋಚನಃ, ಮಹಾ ವರಾಹಃ ಸ್ಫುಟಪದ್ಮಲೋಚನಃ, ರಾಮೋರಾಜೀವ ಲೋಚನಃ, ಕೃಷ್ಣಂ ಕಮಲ ಪತ್ರಾಕ್ಷಂ, ಜಿತಂತೇ ಪುಂಡರೀಕಾಕ್ಷ, ಅಮೋಘಃ ಪುಂಡರೀಕಾಕ್ಷಃ, ಪುಷ್ಕರಾಕ್ಷಃ, ಮುಂತಾದ ಇತಿಹಾಸಪುರಾಣ ವಾಕ್ಯಗಳೂ ಉದಿಸಿ ಬಂದಿವೆ. (೧) ಕಂ = ನೀರನ್ನು, ಪಿಬತಿ = ಕುಡಿಯುತ್ತಾನೆ, ಆದ್ದರಿಂದ ಕಪಿ ಎಂದರೆ ಸೂರ್ಯ ಆಗುತ್ತಾನೆ. ಈ 'ಕಪಿ'ಯಿಂದ ಅಸ್ಯತೇ = ವಿಕಸಿತವಾಗುತ್ತದೆಯಾಗಿ, ಆಗತಾನೆ ಸೂರ್ಯಕಿರಣಗಳಿಂದ ಅರಳಿದ ತಾವರೆಯು ಕಪ್ಯಾಸವೆನಿಸುವುದು. ಪುಂಡರೀಕವೆಂಬುದು ತಾವರೆಯಲ್ಲೊಂದು ಜಾತಿ. ಕೆಂಬಣ್ಣದ ಕಾಂತಿಯುಳ್ಳದ್ದು. (೨) ಅಥವಾ ನೀರನ್ನು ಕುಡಿಯುವುದು

ತಾವರೆ ಹೂವಿನ ಕೆಳಗಿರುವ ದಂಟು, ನಾಳವೆಂದಾದರೆ, ಅದರ ಮೇಲೆ ಕುಳಿತಿರುವುದಾದ್ದರಿಂದಲೂ, ಇನ್ನೂ ನೀರಲ್ಲೇ ದಂಟಿನಮೇಲಿದ್ದು, ಸೂರ್ಯ ನಿಗರಳುವ ತಾವರೆ ಕಪ್ಯಾಸವಾಗುವುದು. (೩) ಕೇ ಜಲೇಪ್ಯಾಸ್ತೇ ಇನ್ನೂ ನೀರಲ್ಲೇ ಇದ್ದು ಕಾಂತಿಸಮೃದ್ಧವಾದ ತಾವರೆಯೇ ಕಪ್ಯಾಸ. ಈ ಮೂರು ಅರ್ಥಗಳೂ ವಾಕ್ಯಕಾರ ಟಂಕರಿಗೆ ಅಭಿಮತವಾದುವೆಂಬುದು ಸಂಪ್ರದಾಯ. ಕಪಿಯುಪೃಷ್ಠದಂತೆ ಕೆಂಪಾದ್ದು ತಾವರೆ; ಆ ತಾವರೆಯಂತೆ ಕೆಂಪಾದ ಕಣ್ಣುಳ್ಳವನು ದೇವರು ಎಂದು ಉಪಮಿತ ಉಪಮೆಯನ್ನಾಗಿ ಹೇಳಿದರೆ ಇಲ್ಲಿ ಅಶ್ಲೀಲವೇನೂ ಇಲ್ಲವೆಂದು ಹೇಳುವವರುಂಟಾದರೂ, ಇಷ್ಟು ಮಾತ್ರಕ್ಕೂ ಇಲ್ಲಿ ಕಪಿಪೃಷ್ಠವನ್ನು ಶ್ರುತಿಯು ಉದ್ದೇಶಿಸಿರುವುದು ಅಸಂಭವ ವೆಂದು ಸಗುಣ ಬ್ರಹ್ಮಪ್ರೇಮಿಗಳ ಅಂತರಂಗ. ಈ ಮುಂಚೆ ಹೇಳಿದ ಪ್ರಸಿದ್ಧ ಸಮಂಜಸಾರ್ಥ ಎದ್ದು ಕಾಣುವಾಗ ಈ ಕುಚೋದ್ಯಾರ್ಥವನ್ನು ಇಲ್ಲಿ ಮಾಡುವ ಅವಶ್ಯಕತೆ ಏನು ?

ಲಕ್ಷ್ಮೀದೇವಿಯನ್ನು ಕಮಲೋದ್ಭವೆಯೆಂದೂ, ಕಮಲಪ್ರಿಯೆಯೆಂದೂ, ಕಮಲಹಸ್ತೆಯೆಂದೂ, ಕಮಲಲೋಚನೆಯೆಂದೂ ಮುಂತಾಗಿ (ಶ್ರೀಸೂಕ್ತ ದಲ್ಲೂ, ಬೇರೆಡೆಗಳಲ್ಲೂ) ಪದೇಪದೇ ವರ್ಣಿಸುವ ಆಶಯವೇನೆಂದರೆ, ಸದ್ಯೋ ವಿಕಸಿತವಾದ ಕಮಲದಲ್ಲಿ ಕಾಣಬರುವ ಚೆಲುವು, ಮೋಹಕತೆ, ಏನುಂಟೋ, ಅದೆಲ್ಲ ಅವಳಲ್ಲಿ ಮೂರ್ತಿವೆತ್ತಿದೆ ಎಂದು ತೋರಿಸಲು. ಚೆಲುವಿಗೇ ಇನ್ನೊಂದು ಹೆಸರು ಲಕ್ಷ್ಮೀ. ಈ ಚೆಲುವಿನ ರೂಪದಲ್ಲಿ ಅವಳೇ ಭಗ ವಂತನ ಕಂಗಳ ಕಾಂತಿಯಲ್ಲಿ ಹೊಕ್ಕಿರುವುದರಿಂದಲೇ ಲೋಕಾನುಗ್ರಾಹಕ ಶಕ್ತಿ ದೇವರಿಗುಂಟೆಂಬುದು ಈ ಎಲ್ಲ ವಿವರಣೆಯಿಂದ ತಿಳಿಯಬೇಕಾದ ವಿಷಯ. 'ಶುಭೇಕ್ಷಣ'ನೆಂದು ಭಗವಂತನನ್ನೂ ವಿಷ್ಣುಸಹಸ್ರನಾಮವು ವರ್ಣಿಸಿರುವುದರ ಆಶಯವೂ ಇದೇ. ಶ್ರೀಮಹಾಭಾರತವನ್ನೂ ಬ್ರಹ್ಮ ಸೂತ್ರಗಳನ್ನೂ ರಚಿಸಿದ ವೇದವ್ಯಾಸರು ಈ ಅರ್ಥವನ್ನು ಮನಸ್ಸಿನಲ್ಲಿಟ್ಟೇ "ಈಕ್ಷತೇಃ ನಾಶಬ್ದಂ" ಎಂಬ ಸೂತ್ರವನ್ನು ಬರೆದು, ಇಷ್ಟು ವಿಲಕ್ಷಣ ಲಕ್ಷ್ಮೀವಿಶಿಷ್ಟನೇತ್ರ ಶ್ರೀಯುಳ್ಳವನಿಂದ ಮಾತ್ರ ಆಗುವ ಸೃಷ್ಟಿಕಾರ್ಯವು, ಕೇವಲ ಜಡಪ್ರಕೃತಿಯಿಂದ ಹೇಗೆ ತಾನೇ ಸಂಭವ ? ಎಂದು ಕೇಳುವಂತೆ ಕಾಣುತ್ತದೆ ಎಂದು ಅರ್ಥೈಸುವುದು ಯುಕ್ತವಾಗುವುದು.

ಆದುದರಿಂದಲೇ ಶ್ರುತಿ, ಸೂತ್ರ, ಸ್ಮೃತಿ, ಇತಿಹಾಸಾದಿಗಳಲ್ಲೆಲ್ಲ ಈ ಅರ್ಥವು ಪ್ರಸಿದ್ಧವಾಗಿರುವುದು. ಆಗಮ ಹೇಳುವುದೂ ಇದನ್ನೇ. ಭಗವಂತನ ಪುಂಡರೀಕಾಕ್ಷತ್ವದ ಮಹಿಮೆಯನ್ನು ಕುರಿತೇ ಒಂದು ದೊಡ್ಡ ಸಂಪುಟ ಬರೆಯುವಷ್ಟು ಅದ್ಭುತ ವಿಷಯ ಇದು. ಶ್ರುತಿಯು ಒಂದೊಂದೂ ಕಡೆಯಲ್ಲಿ ಈ ಲಕ್ಷ್ಮೀವಿಶಿಷ್ಟತ್ವವನ್ನು ಬಾಯಿ ಬಿಟ್ಟು ಹೇಳಲಿಲ್ಲವೆಂಬ ಆಕ್ಷೇಪವೇ ವೈದಿಕರಿಗೆ ಸಲ್ಲದು. ಗಂಭೀರವಾದ ಶ್ರುತಿಯ ಹೃದಯುವನ್ನರಿತ ಮೇಧಾವಿಗಳಿಗೆ ಈ ಬಗೆಯ ಆಳದ ಅರ್ಥಗಳು ಎಟುಕಿಯೇ ಇರುವುವು. ಅದನ್ನು ನೆನಪಿಸುವುದೇ ಇತಿಹಾಸ ಪುರಾಣಗಳ ಕಾರ್ಯವಾದ್ದರಿಂದ, ಇದನ್ನು ಮರೆತಾಗ ಅದನ್ನು ನೆನಪಿಸುವುದು 'ಪ್ರಕ್ಷೇಪ'ವಲ್ಲ. ಒಂದೆರಡು ಮೂರು ಕಡೆಗಳಲ್ಲಿ "ಹ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ", "ಅಸ್ಯೇಶಾನಾ ಜಗತೋ ವಿಷ್ಣುಪತ್ನೀ", "ವಿಷ್ಣುಪತ್ನೀಮಚ್ಯುತಾಂ ಕೂರ್ಮ್ಯಾಂ" ಎಂದು ಹೇಳಿರುವುದೇ ಸಾಕು. ಉಳಿದೆಡೆಯೂ ಇದೇ ವಿವಕ್ಷೆ ಶ್ರುತಿಗುಂಟೆಂಬುದು ವೈದಿಕರ ಅನಾದಿ ಗ್ರಹಿಕೆ.

## ೧೧. ವೇದವೆಲ್ಲ ಲಕ್ಷ್ಮೀಗುಣ ಭಂಡಾರವೇ!

ಹೀಗೆ ನೋಡಿದರೆ ಸಮಸ್ತ ವೇದರಾಶಿಯೂ ಲಕ್ಷ್ಮೀದೇವಿಯ ಗುಣಗಣಗಳ ಒಂದು ಕೋಶವಾಗಿದೆ ಎಂದೂ, ಆದರೆ ಅದಕ್ಕೆ ಹಾಕಿರುವ ಬೀಗವನ್ನು ತೆಗೆಯಲು ಇತಿಹಾಸ, ಸತ್ತರ್ಕ, ಪುರಾಣ ಮುಂತಾದವು ಬೀಗದ ಕೈಗಳೆಂದೂ ಇದೇ ಶ್ರೀಪರಾಶರಭಟ್ಟರು ವರ್ಣಿಸಿರುವುದರಲ್ಲಿ ಬಹು ಗಂಭೀರ ಭಾವವಿದೆ. ಇದಕ್ಕೆ ಈ ವರೆಗೆ ನಾವು ವಿವರಿಸಿರುವ ಉದಾಹರಣೆಗಳು ಪ್ರಮಾಣವಾಗಿವೆ.

ದೇವಿ ಶ್ರುತಿಂ ಭಗವತೀಂ ಪ್ರಥಮೇ ಪುಮಾಂಸಃ
ತ್ವತ್ ಸದ್ಗುಣೌಘಮಣಿಕೋಶ ಗೃಹಂ ಗೃಣಂತಿ ।

ತದ್ದ್ವಾರಪಾಟನ ಪಟೂನಿ ಚ ಸೇತಿಹಾಸ
ಸಂತರ್ಕಣಸ್ಮೃತಿಪುರಾಣ ಪುರಸ್ಸರಾಣಿ ॥
(ಶ್ರೀಗುಣರತ್ನಕೋಶ, ೧೦.)

ಹಾಗೆ ನೋಡಿದರೆ ಲಕ್ಷ್ಮೀದೇವಿಯ ಮಹಿಮೆಯು ಉಪನಿಷತ್ತುಗಳಿಗೂ ಸಹ ಎಟುಕಲಾರದಷ್ಟು ಎತ್ತರಕ್ಕೆ, ವಿಪುಲವಾಗಿ ಹರಡಿಕೊಂಡಿರುವುದರಿಂದ, ಶ್ರುತಿವಾಕ್ಯಗಳೂ ಸಹ. ಕುಳ್ಳಹುಡುಗನಂತೆ ನೆಗೆದು, ಈ ಮಹಾ ಗುಣಗಳನ್ನು ಪಡೆದುಕೊಳ್ಳಬೇಕಾಗಿವೆ ಎಂದೂ, ಆದರೆ ಶ್ರೀರಾಮಾಯಣವು ಮಾತ್ರ ಲಕ್ಷ್ಮೀದೇವಿಯ ಗುಣಗಳಲ್ಲಿಯೇ ತನ್ನ ಪ್ರಾಣವನ್ನು ಉಳಿಸಿ, ಹಿಡಿದುಕೊಂಡಿದೆ ಎಂದೂ, ಇದೇ ಆಚಾರ್ಯರು ಹೇಳಿರುವುದರಲ್ಲಿಯೂ ಮರ್ಮವಿದೆ :

ಉದ್ಬಾಹುಸ್ತ್ವಾಂ ಉಪನಿಷದಸೌ ಆಹ ನೈಕಾಂ ನಿಯಂತ್ರೀಂ
ಶ್ರೀಮದ್ರಾಮಾಯಣಮಪಿ ಪರಂ ಪ್ರಾಣಿತಿ ತ್ವಚ್ಚರಿತ್ರೇ ।
ಸ್ಮರ್ತಾರೋಽಸ್ಮಜ್ಜನನಿ ಯತಮೇ ಸೇತಿಹಾಸೈಃ ಪುರಾಣೈಃ
ನಿನ್ಯುರ್ವೇದಾನಪಿ ಚ ತತಮೇ ತ್ವನ್ಮಹಿಮ್ನಿ ಪ್ರಮಾಣಂ ॥
(ಅದೇ ಶ್ಲೋ ೧೪)

ಶ್ರೀರಾಮಾಯಣವನ್ನು ವೇದದ ಅಪರಾವತಾರವೆಂದು— ವೇದಃ ಪ್ರಾಚೇತಸಾದಾಸೀತ್ ಸಾಕ್ಷಾತ್ ರಾಮಾಯಣಾತ್ಮನಾ ॥ ಹಿರಿಯರು ಎಲ್ಲ ಸಂಪ್ರದಾಯಗಳಲ್ಲೂ ದಿನದಿನವೂ ಪಠಿಸುವರಷ್ಟೆ. ಶ್ರೀ ರಾಮಾಯಣವನ್ನು ವಾಲ್ಮೀಕಿಮಹರ್ಷಿಗಳೇ ಸೀತಾಯಾಶ್ಚರಿತಂ ಮಹತ್ ಎಂಬುದಾಗಿ ಸೀತಾದೇವಿಯ ಮಹಾಚರಿತ್ರೆ ಎಂದು ಬಣ್ಣಿಸಿದರು. ಸೀತೆಯೇ ಲಕ್ಷ್ಮೀ ಎಂಬುದಾಗಿ (ಸೀತಾಲಕ್ಷ್ಮೀಃ ಭವಾನ್ ವಿಷ್ಣುಃ). ಅಲ್ಲೇ ಕೊನೆಯಲ್ಲೂ ಹೇಳಿದರು. ಅಂದರೆ ಶ್ರೀರಾಮಾಯಣವೆಲ್ಲ ಲಕ್ಷ್ಮೀಚರಿತ್ರೆಯೆಂಬುದನ್ನು ಅಲ್ಲಿನ ಪ್ರಸಂಗಗಳಲ್ಲೂ ವಿಸ್ತಾರವಾಗಿ ಕಾಣುತ್ತೇವೆ. ಶ್ರೀರಾಮಾಯಣವನ್ನು ಪ್ರವಚನ ರೂಪದಲ್ಲಿ ಕೇಳುವಾಗ ಇದು ಸ್ವಾನುಭವಕ್ಕೆ ರಸವತ್ತಾಗಿ

ಬರುತ್ತದೆ. ಆದರೆ ವೇದದ ಸಾರತಮಭಾಗವಾದ ಉಪನಿಷತ್ತುಗಳಲ್ಲಿ ಶ್ರೀಸೂಕ್ತ, ಪುರುಷಸೂಕ್ತ, ನಾರಾಯಣೋಪನಿಷತ್ತು ಮೊದಲಾದ ಒಂದು ಭಾಗವಷ್ಟೇ ತೋಳೆತ್ತಿ, ಬಾಯಿಬಿಟ್ಟು, ಕಂಠೋಕ್ತವಾಗಿ ಲಕ್ಷ್ಮೀದೇವಿಯ ವೈಭವವನ್ನು ಹೇಳುವಂತಾಯಿತು! ಉಳಿದ ಭಾಗಗಳು ಇಷ್ಟು ಸ್ಪಷ್ಟವಾಗಿ ಏಕೆ ಹೇಳಲಿಲ್ಲವೆಂಬುದಕ್ಕೆ ಹಿಂದೆಯೇ ಕಾರಣತೋರಿಸಿ ಆಗಿದೆ. ಪ್ರತ್ಯೇಕ ವಾಗಿ ಹೇಳುವ ಅವಶ್ಯಕತೆ ಆ ಉಳಿದ ಭಾಗಗಳಿಗೆ ಬೀಳಲಿಲ್ಲ. ಭಗವಂತನ ವಾಚಕಗಳಲ್ಲೇ ಇವಳನ್ನು ಕೂಡಿಸಿ ಹೇಳಿಬಿಟ್ಟವು. ಆದರೆ ಮೇಲೆ ತೋರಿ ಸಿದ ಒಂದು ಭಾಗವಂತೂ ಅನುಮಾನಕ್ಕೆ ಅವಕಾಶವನ್ನೇ ಕೊಡದೆ ಇವಳೊ ಬ್ಬಳೇ ಜಗತ್ತಿಗೆ ಅಧೀಶ್ವರಿ—ಎಂದು (ಅಸ್ಯೇಶಾನಾ ಜಗತೋ ವಿಷ್ಣುಪತ್ನೀ) ಸಾರಿಬಿಟ್ಟಿತು! ಅದರಿಂದಲೇ ಸ್ಮೃತಿಕರ್ತರಿಗೂ, ಇತಿಹಾಸ ಪುರಾಣಕರ್ತ ರಾದ ಋಷಿಗಳಿಗೂ ವೇದೋಕ್ತವಾದ ಲಕ್ಷ್ಮೀವೈಭವದಲ್ಲಿ, ವೇದವೆಲ್ಲ ಇವಳ ಗುಣಭಂಡಾರವೆಂಬುದರಲ್ಲಿ ಅನುಮಾನವುಳಿಯಲಿಲ್ಲ. ಆದ್ದರಿಂದ ಇಲ್ಲೆಲ್ಲ ವಿಶೇಷ ಕೊಂಡಾಡಿದ ಮಾತ್ರದಿಂದ, ಲಕ್ಷ್ಮಿಯು 'ಅನಾರ್ಯರ' ಉಪಾಸ್ಯ ದೇವತೆಯೆಂದೋ, ವೇದದಲ್ಲಿ ಆಮೇಲೆ ಸೇರಿಸಲ್ಪಟ್ಟಳೆಂದೋ ಹೇಳುವವರು ವೇದಾರ್ಥದಿಂದ ವಂಚಿತರಾಗಿದ್ದಾರೆಂದೇ ತಿಳಿಯತಕ್ಕದ್ದು!

## ೧೨ ಲಕ್ಷ್ಮೀನಾರಾಯಣರು ಕೂಡಿ ಎಷ್ಟು ತತ್ತ್ವ?

ಹಾಗಾದರೆ ಲಕ್ಷ್ಮೀನಾರಾಯಣರು ಇಬ್ಬರೂ ಕೂಡಿ, "ಶ್ರಿಯಃ ಪತಿತ್ವ" ಎಂಬ ಪ್ರಯೋಗಾದಿಗಳಲ್ಲಿ ತತ್ತ್ವವು ಒಂದೇ ಆಗಿದ್ದು, ಇದನ್ನೇ ಶ್ರುತಿಯು ಎಲ್ಲೆಡೆಯೂ ಭಗವದ್ವರ್ಣನೆಗಳಲ್ಲಿ ಉದ್ದೇಶಿಸಿದ್ದರೆ, ಶ್ರೀದೇವಿಗೆ ಪ್ರತ್ಯೇಕ ಗುಣಗಳೇ ಇಲ್ಲವೇ? ಅವಳಿಗೆ ತನ್ನದೇ ಆದ ಸ್ವರೂಪವಿಲ್ಲವೇ? ಎಂಬ ಪ್ರಶ್ನೆಗಳಿಗೂ ಈ ಆಚಾರ್ಯರು ಮನೋಹರ ವಾದ ಉತ್ತರವನ್ನು ಕೊಟ್ಟಿದ್ದಾರೆ: (ಶ್ಲೋ. ೩೪)

ಯುವತ್ವಾದೌ ತುಲ್ಯೇಽಪ್ಯಪರವಶತಾ ಶತ್ರುಶಮನ
–ಸ್ಥಿರತ್ವಾದೀನ್ ಕೃತ್ವಾ ಭಗವತಿ ಗುಣಾನ್ ಪುಂಸ್ತ್ವ
ಸುಲಭಾನ್ ।

ತ್ವಯಿ ಸ್ತ್ರೀತ್ವೈಕಾಂತಾನ್ ಮೃದಿಮ ಪತಿ ಪಾರಾರ್ಥ್ಯ
ಕರುಣಾಕ್ಷಮಾದೀನ್ವಾ ಭೋಕ್ತುಂ ಭವತಿ ಯುವಯೋಃ
ಆತ್ಮಸಿ ಭಿದಾ ॥

ಇದರ ಭಾವವನ್ನು ಹೀಗೆ ವಿವರಿಸಬಹುದು. ಭಗವಂತನಿಗೂ ಅವನ ಪತ್ನಿಗೂ ಯೌವ್ವನವೇ ಮೊದಲಾದ ಹಲವೊಂದು ಗುಣಗಳು ಸಮಾನವಾಗಿ, ಸಾಧಾರಣವಾಗಿದ್ದರೂ, ಈ ದಂಪತಿಗಳ ಗುಣಾನುಸಂಧಾನವನ್ನು ವಿವರವಾಗಿ ಮಾಡಬಯಸುವ ಭಕ್ತರು ಅವುಗಳನ್ನು ವಿಂಗಡಿಸುವ ಬಗೆ ಹೀಗಿದೆ. ಭಗವಂತನು ಮಹಾಪುರುಷನಾದ್ದರಿಂದ ಪುಂಸ್ತ್ವಕ್ಕೆ (ಗಂಡಿಗೆ) ಅನುಗುಣವಾದ ಶತ್ರುಭಯಂಕರತೆ, ಸ್ಥಿರತ್ವ, ಇನ್ನೊಬ್ಬರಿಗೆ ವಶವಾಗದಿರುವಿಕೆ ಮೊದಲಾದುವು ಅವನಲ್ಲಿ ಮೂರ್ತೀಭವಿಸಿವೆ. ಆದರೆ ಲಕ್ಷ್ಮೀದೇವಿಯಲ್ಲಿ ಸ್ತ್ರೀಸಹಜವಾದ ಮಾರ್ದವಗುಣ, ಪಾತಿವ್ರತ್ಯ, ಕ್ಷಮೆ, ಮೊದಲಾದ ಗುಣಗಳು ಮೂರ್ತೀಭವಿಸಿವೆ. ಭಕ್ತರು ಹೀಗೆ ವಿಂಗಡಿಸಿಕೊಂಡರೂ ಇವರಿಬ್ಬರ ಗುಣಗಳೂ ಪರಸ್ಪರ ಹೊಕ್ಕು ಗುಣೋಪಗೂಢಾನಿ ಎಂಬಂತೆ ಬಿಡಿಸಲು ಬಾರದೇ ಇರುವುದರಿಂದ ಇವುಗಳಲ್ಲಿ ಆತ್ಯಂತಿಕವಾದ ಗಡೀರೇಖೆಯನ್ನು ಹಾಕುವುದು ಕಷ್ಟ. ಅಂದರೆ ಲಕ್ಷ್ಮೀನಾರಾಯಣತತ್ತ್ವದಲ್ಲಿ ಲಕ್ಷ್ಮೀಸ್ವರೂಪ ಎಲ್ಲಿಗೆ ಮುಗಿಯಿತು, ನಾರಾಯಣ ಸ್ವರೂಪ ಎಲ್ಲಿ ಆರಂಭವಾಯಿತು ಎಂದು ಬೇರ್ಪಡಿಸಿ ಅರಿಯುವುದೂ, ಹೇಳುವುದೂ ಅಸಾಧ್ಯ ಎಂದು ಭಾವ. ಮೇಲೆ ಹೇಳಿದ ವ್ಯತ್ಯಾಸ ಬಹು ಸ್ಥೂಲವಾಗಿ ಮಾತ್ರ. ಶುದ್ಧಮನಸ್ಕನಾದ ಭಕ್ತನು ದೇವರನ್ನು 'ತಂದೆ' ಎಂದು ಧ್ಯಾನಿಸಿದರೆ ಒಂದು ರೂಪದಲ್ಲೂ, 'ತಾಯಿ' ಎಂದು ಧ್ಯಾನಿಸಿದರೆ ಇನ್ನೊಂದು ರೂಪದಲ್ಲೂ ಬಂದು ಸಂತೈಸಿ ಹರಸುವುದು ಈ ತತ್ತ್ವದ ವೈಶಿಷ್ಟ್ಯ. ಬಹುಜನರು ತಂದೆಯ ಬಳಿ ಸೇರಲು ಹೆದರುವುದೂ, ತಾಯಿಯಲ್ಲಿ ಸ್ವಾತಂತ್ರ್ಯದಿಂದ, ಸಲುಗೆಯಿಂದ

ನಡೆದುಕೊಳ್ಳುವುದೂ ಅನುಭವದಲ್ಲಿದೆಯಷ್ಟೆ! ಇಂಥವರಿಗೆ ಲಕ್ಷ್ಮೀ ದೇವಿಯು ಹತ್ತಿರದವಳು. ರಕ್ಷಕಿಯ ಎಲ್ಲಾ ಲಕ್ಷಣಗಳೂ ಅವಳಲ್ಲಿ ಕೇಂದ್ರೀಕೃತವಾಗಿವೆ. ತಾಯಂದಿರಿಗೂ ತಾಯಿಯಾದವಳು ಅವಳು, ಮಾತೃತಮಾ, ಎಂದು ಋಗ್ವೇದದ ಒಂದು ಮಂತ್ರವು ಅವಳನ್ನು ಅದಿತಿ ಎಂದು ಕೊಂಡಾಡಿದೆ. ಮಹಿಮೆಗೆ ಮಿತಿಯಿಲ್ಲದವಳೆಂಬುದು ಈ ಶಬ್ದದ ವ್ಯಾಖ್ಯಾರ್ಥ. (ವೇದದಲ್ಲಿ ಬರುವ ಲಕ್ಷ್ಮೀವಿಷಯಕ ಸೂಕ್ತಗಳಲ್ಲಿ ಅದಿತಿ ಸೂಕ್ತಗಳೂ ಸೇರಿವೆಯೆಂದು ತಿಳಿಯಬೇಕು. ಈ ಸೂಕ್ತಾರ್ಥಗಳನ್ನು ಬೇರೊಂದು ಅಧ್ಯಾಯದಲ್ಲಿ ಮುಂದೆ ವಿವರಿಸಲಾಗುವುದು.) ಮನುಷ್ಯರಿಗೂ ದೇವರಿಗೂ ಇರುವ ಸಂಬಂಧಗಳ ರೂಪಗಳಲ್ಲಿ ಈ ತಾಯಿ–ಮಗುವಿನ ಭಾವಕ್ಕಿಂತ ಹೆಚ್ಚು ಪವಿತ್ರವಾದುದೂ, ಹೃದಯಕ್ಕೆ ಸಮೀಪವಾದುದೂ ಬೇರೊಂದುಂಟೋ? ಎಲ್ಲ ಅಡಚಣೆಗಳೂ, ಸಣ್ಣತನಗಳೂ ಈ ಸಂಬಂಧದ ಹಿರಿಮೆಯ ಪ್ರಕಾರದಲ್ಲಿ, ಕರಗಿ ಮಾಯವಾಗುವುವಲ್ಲವೇ? ಪರಮಾತ್ಮನು ಪ್ರೇಮಮಯನೆಂದೂ, ಸಕಲವಿಧ ಬಂಧುವೆಂದೂ ಋಗ್ವೇದದ ಎಷ್ಟೊಂದು ಮಂತ್ರಗಳಲ್ಲಿ ಹೇಳಿಲ್ಲ! ಈ ಪ್ರೇಮಸ್ವರೂಪನನ್ನು ಅತಿ ನಿಕಟವಾಗಿ. ಮಾತೃಭಾವನೆಯಲ್ಲಿ ಕಾಣಬಯಸುವವರಿಗೆ ಅವನು ಲಕ್ಷ್ಮೀ ಎಂಬ ಮಹಾ ತಾಯಿಯಾಗಿಯೇ ಕಾಣುವನು. ಪಿತೃಭಾವನೆಯಲ್ಲಿ ಕಾಣಬಯಸುವವರಿಗೆ ಅವನು ಶ್ರೀಮನ್ನಾರಾಯಣನಾಗಿಯೇ ದರ್ಶನ ಕೊಡುವನು ಎಂಬ ವೇದದ ಹೃದಯವನ್ನೇ ಇಲ್ಲಿ ಆಚಾರ್ಯರು ಬಿಚ್ಚಿಟ್ಟಿದ್ದಾರೆ. ಆದ್ದರಿಂದ ಬಿಡಿಸಿದರೆ ಇವರು ಎರಡು ತತ್ತ್ವ, ಕೂಡಿಸಿದರೆ ಒಂದೇ ತತ್ತ್ವ ಎಂದು ಹೇಳಬೇಕಾಗುತ್ತದೆ. ವೇದವನ್ನು ಅರಿಯುವಲ್ಲಿ ಈ ಬಗೆಯ ಸಂಖ್ಯೆಯ ತಿಳಿವಳಿಕೆಗಿಂತ ಹೃದಯವನ್ನು ಹೊಗುವ ಭಾವನಾತ್ಮಕ (Intuitional) ಅನುಭವ ಮುಖ್ಯವೆಂಬುದನ್ನು ತಿಳಿಯಬೇಕು. ಇಲ್ಲವಾದಲ್ಲಿ ಶುಷ್ಕವಾದ ವಾದವಿವಾದಗಳೂ, ಮತಿಭೇದಮೂಲವಾದ ಮತಭೇದಗಳೂ ಏರ್ಪಟ್ಟು ವೇದಾರ್ಣವದ ಅಮೃತವು ದೊರೆಯದೇ ಹೋಗುವುದು. (ಅಸುರರಿಗೆ ಅಮೃತವು ದೊರೆಯದೇ, ದೇವತೆಗಳಿಗೆ ದೊರೆತದ್ದೇ ಹೀಗೆ. ಮಥನವು ಮಥನಕ್ಕಾಗಿ ಆಗಬಾರದು. ಅನುಭವಕ್ಕೆ ಬೆಳಕು ಬೀರುವಂತಾಗಬೇಕು.) ತ್ವಮೇವ

ಮಾತಾ ಚ ಪಿತಾ ತ್ವಮೇವ... ಇತ್ಯಾದಿ ಪ್ರಾಚೀನ ಸ್ತುತಿಯ ಹೃದಯವೇ ಇದು.

## ೧೩ ಪರತತ್ತ್ವವು ದಿವ್ಯದಂಪತಿ ರೂಪದ್ದು

ಈ ವಿವಾದಕ್ಕೆ ಮುಕ್ತಾಯ ಹಾಡಲೆಂದೇ ಶ್ರೀ ವೇದಾಂತ ದೇಶಿಕರು ನ್ಯಾಯಸಿದ್ಧಾಂಜನವೆಂಬ ಗ್ರಂಥದಲ್ಲಿ ಹೀಗೆ ನಿರ್ಣಯ ಮಾಡಿಕೊಟ್ಟಿದ್ದಾರೆ.

ಶ್ರಿಯಾ ಸಹ ತು ದಾಂಪತ್ಯಂ ಶಾಶ್ವತಂ ತತ ಏವ ತು ।
ತಯೋಃ ಸಾಮ್ಯೈಕ್ಯ ಶಕ್ತಿತ್ವ ತದ್ವತ್ತಾದಿ ಗಿರಾಂ ಗತಿಃ ॥

ಈಶ್ವರ ಪರಿಚ್ಛೇದಃ

ಇದರ ಭಾವ ಹೀಗಿದೆ. ಶ್ರುತಿ ಸ್ಮೃತಿ ಇತಿಹಾಸ ಪುರಾಣಗಳಲ್ಲಿ ಮತ್ತು ಶ್ರೀಪಾಂಚರಾತ್ರದಲ್ಲಿ, ಒಮ್ಮೊಮ್ಮೆ, ಭಗವಂತನಿಗೆ ಲಕ್ಷ್ಮೀದೇವಿಯು ಸಮಳೆಂದೂ, ಅವನೊಡನೆ ಒಂದೇ ಆದಿರುವಳೆಂದೂ, ಅವಳು ಅವನ ಶಕ್ತಿ ಸ್ವರೂಪಿಣಿ ಎಂದೂ, ಅವನೊಡನೆಯೇ ಸದಾ ಇರುವಳೆಂದೂ, ಮುಂತಾಗಿ, ಮೇಲ್ನೋಟಕ್ಕೆ ವಿವಿಧ (ವಿಭಿನ್ನ) ರೀತಿಯಲ್ಲಿ ವರ್ಣಿಸಲ್ಪಟ್ಟಿದ್ದರೂ, ಇವೆಲ್ಲದರ ತಾತ್ಪರ್ಯ ಒಂದೇ ಆಗಿರುತ್ತದೆ. ಅದೇನೆಂದರೆ, ಇವರಿಬ್ಬರ ದಾಂಪತ್ಯವು ಶಾಶ್ವತವೆಂದೇ.

ಇದನ್ನು ಕೊಂಚ ವಿವರಿಸೋಣ. ಶ್ರುತಿಯಲ್ಲಿ ಒಂದು ಕಡೆ ಭಗವಂತನನ್ನು ಈಶಾನೋ ಭೂತಭವ್ಯಸ್ಯ ಎಂಬುದಾಗಿ ಚರಾಚರ ಜಗತ್ತಿಗೆ ಹಿಂದೂ, ಮುಂದೂ, ಅವನೇ ಒಡೆಯನೆಂದು ಹೇಳಿರುವುದು ಕಂಡುಬಂದರೆ, ಮತ್ತೊಂದುಕಡೆಯಲ್ಲಿ ಲಕ್ಷ್ಮಿಯನ್ನೇ ಆ ಒಡೆಯಳ ಸ್ಥಾನದಲ್ಲಿ ಅಸ್ಯೇಶಾನಾ ಜಗತೋ ವಿಷ್ಣುಪತ್ನೀ ಎಂದು ಹೇಳಿರುವುದರಲ್ಲಿ ಯಾವ ವಿರೋಧವೂ ಇಲ್ಲ. ಅಲ್ಲೇ ವಿಷ್ಣುಪತ್ನೀ ಎಂದು ಹೇಳಿರುವುದನ್ನು ಗಮನಿಸಿದರೆ,

ಪತಿಪ್ರಯುಕ್ತವಾದ ಜಗದೀಶ್ವರತ್ವದಲ್ಲಿ ಪತ್ನಿಯಾದ ಅವಳಿಗೂ ಭಾಗ ಉಂಟೆಂದು ಮಾತ್ರ ಹೇಳಿ, ಇದು ಈ ದಂಪತಿಗಳ ವೈಭವ ಪ್ರಕಾಶಕವಾದಿರುವುದರಿಂದ, ಜಗತ್ತಿಗೆ ಇಬ್ಬರು ಒಡೆಯರೆಂಬ ಕುಚೋದ್ಯಕ್ಕೆ ಅವಕಾಶವೇ ಇಲ್ಲ. ಅವಳನ್ನು ವಿಷ್ಣುಪತ್ನೀ ಎಂದು ಕರೆಯಬೇಕಾದ ನಿರ್ಬಂಧವಿರುವುದು ಅವನನ್ನು ಶ್ರಿಯಃಪತಿ ಎಂದು ಕರೆಯಬೇಕಾದ ನಿರ್ಬಂಧವಿರುವುದರಿಂದಲೇ. ಹಾಗೆಯೇ ನರನಾರೀಮಯೋ ಹರಿಃ ಎಂದು ಒಂದು ಕಡೆಯೂ ನಾರಾಯಣಾತ್ಮಿಕಾಂ ದೇವೀಂ ಎಂದು ಮತ್ತೊಂದು ಕಡೆಯೂ ಪುರಾಣಗಳಲ್ಲಿ ಹೇಳಿರುವುದೂ ಈ ದಿವ್ಯದಂಪತಿಗಳ ತತ್ವ ಒಂದೆಂಬುದನ್ನು ತೋರಿಸಲೆಂದೇ (ಅವಿನಾಭಾವದಲ್ಲಿ.)

ತ್ವಂ ಯಾದೃಶೋsಸಿ ಕಮಲಾಮಪಿ ತಾದೃಶೀಂ ತೇ
ದಾರಾನ್ ವದಂತಿ ಯುವಯೋಃ, ನ ತು ಭೇದಗಂಧಃ ।
ಮಾಯಾ ವಿಭಕ್ತಯುವತೀ ತನುಮೇಕಮೇವ
ತ್ವಾಂ ಮಾತರಂ ಚ ಪಿತರಂ ಚ ಯುವಾನಮಾಹುಃ ॥

ಎಂಬ ಮತ್ತೊಂದು ಪುರಾಣ ವಚನದಲ್ಲಿಯೂ ಭಗವಂತನನ್ನೇ ಶ್ರೀದೇವಿಯೆಂದೂ, ಸ್ತ್ರೀರೂಪ ನಿತ್ಯವಿಗ್ರಹಾಂತರ ವಿಶಿಷ್ಟನೆಂದೂ, ಆಗಾಗ ದೈತ್ಯಮೋಹನಾರ್ಥವಾಗಿ ಮೋಹಿನೀ ರೂಪಧರಿಸುವಂತೆ, ಸ್ವಯಂ ಭೋಗಾರ್ಥವಾಗಿಯೂ ಪತ್ನೀವಿಗ್ರಹ, ರೂಪವನ್ನು ಧರಿಸುವನೆಂದೂ ಐಕ್ಯವಾದಿಗಳು ಹೇಳುವುದು ತಪ್ಪಿಲ್ಲ.

ಲಕ್ಷ್ಮಿಯು ವಿಷ್ಣುಶಕ್ತಿ ಎಂಬುದು ಹೇಗೆಂದರೆ, ಜಗತ್ತನ್ನು ಉತ್ಪಾದಿಸುವ ಭಗವಂತನ ಶಕ್ತಿಯೂ ಇವಳಾಗಿ ಒಮ್ಮೊಮ್ಮೆ ಅವನ ಪ್ರಕೃತಿಯೆಂದೂ ಕರೆಯಲ್ಪಡುವಳು. ಲಕ್ಷ್ಮೀಸಹಸ್ರನಾಮದಲ್ಲಿ ಮೊತ್ತಮೊದಲನೆಯದಾಗಿ "ಓಂ ಪ್ರಕೃತ್ಯೈ ನಮಃ" ಎಂದು ಹೇಳಿದೆಯಲ್ಲವೇ ? ಈ ಭಾವದಲ್ಲಿ ಅವಳು ವಿಷ್ಣುಶಕ್ತಿಯೇ :

ಜಗದುತ್ಪಾದಿಕಾ ಶಕ್ತಿಃ ತವಪ್ರಕೃತಿರಿಷ್ಯತೇ ।
ಸೈವ ನಾಮಸಹಸ್ರೇಷು ಲಕ್ಷ್ಮೀಃ ಶ್ರೀರಿತಿ ಕೀರ್ತ್ಯತೇ ॥

ಅವನೊಡನೆಯೇ ಇವಳು ಸದಾ ಇರುವಳೆಂಬುದೂ, ವಿಷ್ಣೋಃ ಶ್ರೀರನಪಾಯಿನೀ, ನಾನಯೋರ್ವಿದ್ಯತೇ ಪರಂ, ಯಥಾ ಸರ್ವಗತೋ ವಿಷ್ಣುಃ ತಥೈವೇಯಂ ಮುಂತಾದ ವಚನಗಳಿಂದ ಸಿದ್ಧವಾಗುತ್ತದೆ.

ಹೀಗೆಯೇ ಕೆಲವೆಡೆಗಳಲ್ಲಿ ಸ್ವಯಂ ಲಕ್ಷ್ಮೀದೇವಿಯನ್ನೇ ಮುಕ್ತಿಕೊಡುವವಳೆಂದೂ, ಸಂಸಾರಾರ್ಣವ ತಾರಿಣೀಂ, ವಿಮುಕ್ತಿಫಲದಾಯಿನೀಂ, ಎಂದು ಹೇಳಿರುವುದರಲ್ಲೂ ಪತಿಪ್ರಯುಕ್ತವಾದ ಮೋಕ್ಷಪ್ರದತ್ವದಲ್ಲಿ ಇವಳ ಪಾತ್ರವೂ ಇದೆಯೆಂಬುದನ್ನು ತೋರಿಸುವುದಕ್ಕಾಗಿಯೇ ಮಾತ್ರ. ಮತ್ತೊಂದೆಡೆ ಇದನ್ನು ಬಾಯಿಬಿಟ್ಟೇ ಹೇಳಿದೆ.

ಲಕ್ಷ್ಮ್ಯಾ ಸಹ ಹೃಷೀಕೇಶಃ ದೇವ್ಯಾ ಕಾರುಣ್ಯರೂಪಯಾ ।
ರಕ್ಷಕಃ ಸರ್ವಸಿದ್ಧಾಂತೇ ವೇದಾಂತೇಽಪಿ ಚ ಗೀಯತೇ ॥

(ಅಹಿರ್ಬುಧ್ನ್ಯ ಸಂಹಿತೆ)

ಲಕ್ಷ್ಮೀದೇವಿಯು ಕರುಣಾರೂಪಿಣಿ, ಇವಳೊಡಗೂಡಿಯೇ ಶ್ರೀಮನ್ನಾರಾಯಣನು ಸರ್ವರಕ್ಷಕನೆಂಬುದನ್ನು ವೇದಾಂತ ಮೊದಲಾದ ಎಲ್ಲ ಶಾಸ್ತ್ರಗಳೂ ಕೊಂಡಾಡುವುವು ಎಂದು ಹೇಳಿದೆ.

ಆದುದರಿಂದ ಪರಮಾತ್ಮನ ಯಾವುದೇ ವ್ಯಾಪಾರದಲ್ಲಿ ಲಕ್ಷ್ಮಿಯನ್ನು ಬಿಟ್ಟು ಅವನು ಪ್ರವರ್ತಿಸುವಂತೆಯೂ, ಅಥವಾ ಅವನನ್ನು ಬಿಟ್ಟು ಇವಳೇ ಪ್ರವರ್ತಿಸುವಂತೆಯೂ ಎಲ್ಲೂ ಹೇಳಿಲ್ಲ. ಲಕ್ಷ್ಮೀದೇವಿಯ ಹೆಸರನ್ನಾಗಲೀ, ನಾರಾಯಣನ ಹೆಸರನ್ನಾಗಲೀ ಬಿಟ್ಟು, ಅವನೇ ಅಥವಾ ಅವಳೇ ಸೃಷ್ಟಿ ಸ್ಥಿತಿಲಯಗಳಿಗೆ ಕಾರಣಕರ್ತರೆಂದು ಮೇಲ್ನೋಟಕ್ಕೆ ಕಾಣುವಂತೆ ಎಲ್ಲಿಯಾದರೂ ಒಂದು ವಚನವಿದ್ದರೂ, ಅಲ್ಲಿ ಆ ಇನ್ನೊಬ್ಬರನ್ನು ಹೇಳಿರುವುದಾಗಿಯೇ ಅಧ್ಯಾಹೃತ ಮಾಡಿಕೊಂಡು ವಿವರಿಸುವುದೇ ಶಾಸ್ತ್ರಮರ್ಯಾದೆಯಾಗುವುದೆಂಬುದೇ ಇಲ್ಲಿನ ಮರ್ಮ. ಇದೇ ಸಕಲವೇದಾಂತಿಗಳ ಮತವೂ ಆಗಿದೆ. ಶ್ರೀಮನ್ನಾರಾಯಣನನ್ನು ಬಿಟ್ಟು, ಅವನನ್ನು ತಗ್ಗಿಸಿ, ಲಕ್ಷ್ಮಿಗೆ ಮಾತ್ರ ಪರತ್ವವನ್ನು ಹೇಳುವ ಪ್ರಯತ್ನವು ಕೇವಲ ಶಾಕ್ತಮತವಾಗಿ ಪರಿಣಮಿಸಿ, ವೇದದ ಮೂಲಸಿದ್ಧಾಂತಕ್ಕೆ ವಿರೋಧವಾಗುವುದು ಇಂದ್ರಾಗ್ನಿ ಈ

ಮೊದಲಾದ ಎಲ್ಲ ದೇವತೆಗಳೂ, ಬ್ರಹ್ಮವಿಷ್ಣು ರುದ್ರರನ್ನೊಳಗೊಂಡಂತೆ, ಶಕ್ತಿಯ ಪುತ್ರರೇ ಎಂದೋ ಅಂಶವೇ ಎಂದೋ ಕಲ್ಪಿಸುವ ಲಕ್ಷ್ಮೀಸ್ವರೂಪವು ಅತಿವಾದವಾಗಿ, ವೇದಬಾಹ್ಯವಾಗುವುದು; ಶ್ರೀ ಸೂಕ್ತಾದಿಗಳಿಗೆ ಸ್ಪಷ್ಟವಾಗಿಯೇ ವಿರುದ್ಧವಾಗಿ ಅಪ್ರಾಮಾಣ್ಯವೂ ಆಗುವುದು. ಹೆಸರು ಒಂದೇ ಆದರೂ ಶಾಕ್ತಸಿದ್ಧಾಂತದ ಲಕ್ಷ್ಮಿಯೂ, ವೈದಿಕಸಿದ್ಧಾಂತದ ಲಕ್ಷ್ಮಿಯೂ ಸ್ವರೂಪದಲ್ಲಿ ಬೇರೆ ಬೇರೆ ಎಂಬುದನ್ನು ಚೆನ್ನಾಗಿ ತಿಳಿಯತಕ್ಕದ್ದು. ಸಾಂಖ್ಯಮತದಲ್ಲಿ ಅಸತ್ ಎನ್ನುವುದೂ, ವೇದದ ಅಸತ್‌ಗಿಂತ ಭಿನ್ನವಾಗಿರುವುದು ಶಾಸ್ತ್ರಜ್ಞರಿಗೆ ವ್ಯಕ್ತವಾಗಿ ಪ್ರಸಿದ್ಧವಾಗಿರುವಂತೆ ಇಲ್ಲೂ ತಿಳಿಯಬೇಕು. ವೇದದ ಋಷಿಗಳಾದ ಗೌತಮ, ಕಾಶ್ಯಪರುಗಳಿಗೂ ಬೌದ್ಧಮತದಲ್ಲಿ ಬರುವ ಇದೇ ಹೆಸರಿನ ವ್ಯಕ್ತಿಗಳಿಗೂ ಯಾವ ಸಂಬಂಧವೂ ಇಲ್ಲದಿರುವಂತೆ, ಶ್ರೀಮದ್ಭಾಗವತದ ಕಪಿಲ ಮಹರ್ಷಿಗಳಿಗೂ, ನಿರೀಶ್ವರವಾದ ಮಾಡಿದ ಸಾಂಖ್ಯಮತಪ್ರವರ್ತಕ ಕಪಿಲರಿಗೂ ಏನೇನೂ ಸಂಬಂಧವಿಲ್ಲದಿರುವಂತೆ ಇಲ್ಲೂ ತಿಳಿಯತಕ್ಕದ್ದು. (ವೇದವಿರೋಧಿಗಳು ವೈದಿಕಮತವನ್ನಳಿಸಲು ಅನುಸರಿಸಿದ ತಂತ್ರಗಳಲ್ಲಿ ಇದೂ ಒಂದು— ಇದೇ ಹೆಸರಿನಲ್ಲಿ ತಮ್ಮ ತತ್ತ್ವಗಳನ್ನು ಪ್ರತಿಪಾದಿಸಲು ಯತ್ನಿಸಿದ್ದು !) ಬಹುಜನರಿಗೆ ಇನ್ನೂ ಸ್ಪಷ್ಟವಲ್ಲದ ಈ ಮುಖ್ಯ ಭೇದವನ್ನು ಮುಂದೆ ಸುದೀರ್ಘವಾಗಿ ವಿವರಿಸಲಾಗುವುದು.

## ೧೪ ಪರತತ್ತ್ವವು ಲಕ್ಷ್ಮೀರಹಿತವೇ ಆದರೆ ಗತಿ ಏನು !

ಇದರಂತೆಯೇ ಲಕ್ಷ್ಮೀರಹಿತನಾದ ವಿಷ್ಣುವೂ ಭಯಂಕರನಾಗಿ, 'ರುದ್ರ'ನಾಗಿ, ಕೇವಲ ಲಯಕರ್ತನಾಗಿ, ಈ ವಾದವು ಕೊನೆಯಲ್ಲಿ ಮಾಯಾವಾದವಲ್ಲಿಯೋ, ಶೈವಾದಿಮತಗಳಲ್ಲಿಯೋ ಪರ್ಯವಸಾನ ಹೊಂದುವುದು. ಇದೇ ಬ್ರಹ್ಮಸೂತ್ರಕಾರರ ಮತವಾಗಿದ್ದಲ್ಲಿ, ಮತ್ತು ಬ್ರಹ್ಮ ಸೂತ್ರಕಾರರ ಮತವೇ ಸಕಲವೇದದರ್ಶನದ ಸಾರಭೂತವಾಗಿದ್ದಲ್ಲಿ, ಆಗ ಈ ಸೂತ್ರಗಳು

ಶೈವಸಿದ್ಧಾಂತವನ್ನೋ, ಇಲ್ಲ ಶಾಕ್ತವನ್ನೋ ಒಪ್ಪಿಕೊಳ್ಳಬೇಕಾಗುತ್ತಿತ್ತು! ಸೂತ್ರಕಾರರು ಹಾಗೆ ಮಾಡದೆ ಕಪಿಲರ ಸಾಂಖ್ಯಮತವನ್ನು ಖಂಡಿಸಿರುವಂತೆ ಪಾಶುಪತಮತವನ್ನೂ ಖಂಡಿಸಿರುವುದರಿಂದ ಮತ್ತು ಶಾಕ್ತಸಿದ್ಧಾಂತವನ್ನು (ಶ್ರೀ ಶಂಕರರಾಮಾನುಜಾದಿಗಳ ಪ್ರಕಾರ) ಉಪೇಕ್ಷಿಸಿರುವುದರಿಂದ, ಅಥವಾ ಮಧ್ವಾಚಾರ್ಯರ ಪ್ರಕಾರ ಅದನ್ನೂ ಖಂಡಿಸಿರುವುದರಿಂದ, ಆದರೆ ಕೊನೆಯಲ್ಲಿ (ನಮ್ಮ ಈ ಹಿಂದಿನ ಸಂಪುಟದಲ್ಲಿ ಸುದೀರ್ಘವಾಗಿ ನಿರೂಪಿಸಿರುವಂತೆ,) ಪಂಚರಾತ್ರವೊಂದನ್ನೇ ವೈದಿಕವೆಂದು ಅಂಗೀಕರಿಸಿರುವುದರಿಂದ (ಪುಟ ೧೧೭– ೧೨೦ ನೋಡಿ), ಶ್ರೀ ಬಾದರಾಯಣರ ದೃಷ್ಟಿಯು ಎತ್ತ ಸಾಗಿದೆ ಎನ್ನುವುದು ಸ್ಪಷ್ಟವಾಗುತ್ತದೆ. ಇದೇ ಪಂಚರಾತ್ರವನ್ನು ಶ್ರೀವೇದವ್ಯಾಸರು ಶ್ರೀ ಮಹಾಭಾರತದಲ್ಲಿ ವಿವರಿಸಿ, ಪ್ರಶಂಶಿಸಿಸಿ ವೈದಿಕವೆಂದೇ ಘೋಷಿಸಿರುವುದೂ ಗಮನೀಯ. ಆದುದರಿಂದ ಪಂಚರಾತ್ರದಲ್ಲಿ ಬರುವ ಲಕ್ಷ್ಮೀತತ್ವವು ಮಾತ್ರ ವೈದಿಕಸಮ್ಮತವಾಗಿರುವುದೇ ಹೊರತು ಶಾಕ್ತಸಿದ್ಧಾಂತದ್ದಲ್ಲ. ವೇದ ಪಂಚರಾತ್ರಗಳನ್ನು ಒಂದಕ್ಕೊಂದಕ್ಕೆ ವಿರೋಧಬಾರದಂತೆ ಅರ್ಥೈಸುವುದು, ಇದೇ ಕಾರಣದಿಂದ, ವಿವೇಕಿಗಳ ಕರ್ತವ್ಯವೂ ಆಗುವುದು. ಇತಿಹಾಸ ಪುರಾಣಗಳಂತೆ ಪಂಚರಾತ್ರವನ್ನೂ ವೇದದ ಉಪಬೃಂಹಣವನ್ನಾಗಿ ಪೂರ್ವಿಕರು ಅನಾದಿಕಾಲದಿಂದಲೂ ಅಂಗೀಕರಿಸಿ ಬಂದಿರುವುದು ಸುವಿದಿತ. ಹಾಗೆ ನೋಡಿದರೆ ಪಂಚರಾತ್ರವೂ ವೇದದಿಂದಲೇ ಉದಿಸಿಬಂದ ಶಾಖೆಯೊಂದರ ವಿಸ್ತೃತ ರೂಪವೇ ಹೊರತು ಬೇರೆಯಲ್ಲವಾದುದರಿಂದ ಇಲ್ಲಿ ಉಕ್ತವಾದ ಲಕ್ಷ್ಮೀತತ್ವವು ವೇದಮೂಲದ್ದೇ ಎಂಬುದನ್ನು ಈಗ ಕೊಂಚ ವಿವರವಾಗಿಯೇ ಪರಿಶೀಲಿಸೋಣ.

## ೧೫ ವೇದ ಮತ್ತು ಪಂಚರಾತ್ರಗಳಲ್ಲಿ ವಿರೋಧವೇ?

ಪಾಶ್ಚಾತ್ಯರೂ ಮತ್ತು ಅವರು ಮಾಡಿರುವ ಅಪಸಿದ್ಧಾಂತಗಳೂ ವೇದಬಾಹ್ಯವೆಂದು ಮನಗಾಣದೇ, ನಮ್ಮಲ್ಲಿಯೇ ಪ್ರಾಚೀನ ಕಾಲದಿಂದ

ವೈದಿಕವೆಂದು ಸರ್ವಮಾನ್ಯವಾಗಿರುವ ವೈಷ್ಣವಾಗಮಗಳೇ ವೇದಬಾಹ್ಯಗಳೆಂದು ನಂಬುವ 'ನಮ್ಮವರ' ಮತಿಗೇಡಿತನಕ್ಕೆ ಏನೆನ್ನಬೇಕು ?

ಈಚೆಗಂತೂ ಬಿಳಿಯರು ಹೇಳಿದ್ದೆಲ್ಲಾ ಬರೆದದ್ದೆಲ್ಲಾ ಪ್ರಮಾಣವೆನ್ನುವ ಬೌದ್ಧಿಕ ದಾಸ್ಯರೂಪ ರೋಗಕ್ಕೆ ಒಂದು ಪುಸ್ತಕದಲ್ಲಿಯೋ, ಉಪನ್ಯಾಸದಲ್ಲಿಯೋ ಚಿಕಿತ್ಸೆಮಾಡಲಳೆಸುವುದೂ ಕಠಿಣ. ವೈಷ್ಣವ ಮತವೆಂಬುದೇ ಒಂದಲ್ಲವೆಂದೂ, ಇದರಲ್ಲಿ Vishnuism, Rama-ism, Krishna-ism ಎಂಬ 'ವಿಷ್ಣುಮತ'ವೂ, 'ರಾಮಮತ'ವೂ, 'ಕೃಷ್ಣಮತ'ವೂ ಕೂಡಿ, ಈಚೆಗೆ ಹೀಗೊಂದು ಮತ ಏರ್ಪಟ್ಟಿತೆಂದು ಹಲವು 'ಸಂಶೋಧ'ಕ ಮಹನೀಯರು ಬರೆಯುತ್ತಿರುವುದರ ಹಿನ್ನೆಲೆ ಎಂಥದು ? ಭಾರತದ ಪರಂಪರೆಯ ಯಾವ ಆಚಾರ್ಯರೂ ಈರೀತಿ ಚಿಂತಿಸಿರುವುದುಂಟೇ ? ಶಂಕರ, ರಾಮಾನುಜ, ಮಧ್ವಾದಿ ಮತಾಚಾರ್ಯರ ಅನುಯಾಯಿಗಳಾದ ಪೀಠಸ್ಥಯತಿಗಳಾರಿಗೂ ಇಂದಿಗೂ 'ಹೊಳೆ'ಯದ ರೀತಿಯ ಈ ಮಾದರಿ ಕಲ್ಪನೆಗಳೇಳುವುದಕ್ಕೇನು ಕಾರಣ ? ವೇದಗಳು 'ಆರ್ಯ'ರಾದ 'ಹೊರಗಿನ' ವಲಸೆಗಾರರ ಧರ್ಮ ಗ್ರಂಥಗಳೆಂದೂ, ಆಗಮಗಳು ದ್ರಾವಿಡರಾದ 'ದೇಶೀಯರ' ಧರ್ಮಗ್ರಂಥಗಳೆಂದೂ, 'ಅವರೂ' 'ಇವರೂ' ಬೆರೆತಮೇಲೆ ಒಂದರ ಮೂಲಗ್ರಹಿಕೆಗಳು ಮತ್ತೊಂದರಲ್ಲಿ ಕಲಸುಮೇಲೋಗರವಾಗಿ ಈಗ ಕಾಣಬರುವ 'ಹಿಂದೂ' ಧರ್ಮವು 'ಪ್ರವಾಹ ಪತಿತರ ಧರ್ಮ'ವೆಂಬುದಾಗಿ ಬರೆಯುತ್ತಿರುವ ಸಂಶೋಧನೆಯ ಸೋಗಿನ ಧೃತರಾಷ್ಟ್ರರು ತಾವೇ ಮೂಲಧರ್ಮದಿಂದ ಪತಿತರಾಗಿರುವುದನ್ನು ಕಾಣದೇ ಶೋಚನೀಯರಾಗಿರುವುದು ಪರಮಾಶ್ಚರ್ಯವಾಗಿದೆ! ಗುಡಿಗೋಪುರಗಳು 'ವೇದಕಾಲ'ದಲ್ಲಿ ಇರಲಿಲ್ಲವೆಂದು ಒಂದುವಾದ; ಈ ಮಾದರಿ ಪೂಜಾಕ್ರಮವು ದ್ರಾವಿಡರದ್ದೆಂದೂ, 'ನಿರಾಕಾರ, ನಿರಾವರಣ' ಸತ್ಯವೂ, ಅನ್ವೇಷಣವೂ ಆರ್ಯರ ಪೂಜಾಕ್ರಮವೆಂದೂ ಈ ವಾದದ ಹಿನ್ನೆಲೆಯ ಗ್ರಹಿಕೆಯು ಬೂಡ. ವೇದದಲ್ಲೇ ದೇವರ ಅನೇಕ ಆಕಾರಗಳನ್ನು ಕೊಂಡಾಡಿರುವುದಕ್ಕೆ ಏನು ಗತಿ ? ಎಂದರೆ, 'ಇದೆಲ್ಲಾ ಆಮೇಲೆ ಬರೆದು ಸೇರಿಸಿದ್ದು' ಎಂಬ ಅವಿಚಾರಿತ ಉತ್ತರ ಸಿದ್ಧವಾಗಿಯೇ ಇದೆ! ವೇದದಲ್ಲಿ ಗುಡಿಗೋಪುರಗಳ ವರ್ಣನೆ ಇಲ್ಲದ ಮಾತ್ರಕ್ಕೇ ಅವು 'ಆಗ' ಇರಲೇ ಇಲ್ಲ

ವೆನ್ನುವುದು ಸರಿಯೇ ? ಹೀಗೇ ಉಳಿದವುಗಳನ್ನು ಕುರಿತು ಹೇಳಬಹುದೇ ? ದೇವರ 'ಚಿತ್ರ' 'ಪ್ರತಿಮೆ'ಯ ವರ್ಣನೆ ವೇದ ಉಪನಿಷತ್ತುಗಳಲ್ಲಿರುವುದು ಸಾಲದೇ ? ವಿಚಾರಿಸುವರಿಲ್ಲ ! ಕಾಲಕಾಲಕ್ಕೆ ಜನರ ರೀತಿ, ನೀತಿ, ಆಚಾರ, ಜೀವನಕ್ರಮ, ಬಾಹ್ಯ ಪರಿಸರ, ಜನಜೀವನದ ಸಮಸ್ಯೆಗಳ ಸಮ್ಮರ್ದಗಳನ್ನನೂ ಲಕ್ಷಿಸಿ, ಒಂದೇ ತತ್ವವನ್ನು ಬೇರೆ ಬೇರೆ ರೀತಿಯಲ್ಲಿ ಉಪಾಸಿಸಿದರೂ ಸಹ ತಪ್ಪೇನು ? ಒಂದು ರೀತಿಯು 'ಆರ್ಯ'ರದ್ದೆಂದೂ ಮತ್ತೊಂದು 'ದ್ರಾವಿಡ' ರದೆಂದೂ ಇದರಿಂದ ಸಿದ್ಧವಾಗಿಬಿಡುವುದೇ ? ನಲವತ್ತು ವರ್ಷ ಒಂದೇ ಕಾಲೇಜಿನಲ್ಲಿ ಒಂದೇ ವಿಷಯವನ್ನು ಬೋಧಿಸುವ ಅಧ್ಯಾಪಕನಿಗೆ, ತನ್ನ ಸೇವೆಯ ಆರಂಭದ ದಶಕದ ವಿಧ್ಯಾರ್ಥಿಗಳ ಹಿನ್ನೆಲೆ, ಮೇಧಾಶಕ್ತಿ, ತನ್ನ ಉತ್ಸಾಹ, ಸಿದ್ಧತೆ. ಅಂದಿನ ಅವನ ಅವಶ್ಯಕತೆ, ಪರಿಸರಗಳನ್ನು ಅನುಲಕ್ಷಿಸಿ ಒಂದು ರೀತಿಯಲ್ಲಿ ಬೋಧನೆ ಮಾಡಿದರೆ, ಅವನೇ ತನ್ನ ಸೇವಾವಧಿಯ ಕೊನೆಗಾಲದಲ್ಲಿ, ಕಾಲವೂ ಬದಲಾಗಿ, ಪರಿಸರವೂ ಬದಲಾಗಿ, ವಿಧ್ಯಾರ್ಥಿಗಳ ಅವಶ್ಯಕತೆಗಳೂ ಬದಲಾಗಿ, ಅವರ ಮೇಧಾವಿಲಾಸವೂ ವ್ಯತ್ಯಾಸವಾಗಿ ( ಹೆಚ್ಚು ಬುದ್ಧಿವಂತರೋ, ದಡ್ಡರೋ, ಹೇಗಾದರಾಗಲಿ ), ತಾನೂ ಬೋಧನೆಯ ರೀತಿಯನ್ನೂ. ಅದೇ ಶಾಸ್ತ್ರದ ಬೋಧ್ಯಾಂಶಗಳಲ್ಲಿ ಒತ್ತಿ ಹೇಳ ಬೇಕಾದ ವಿಷಯಗಳಲ್ಲಿ ಭಿನ್ನತೆಯನ್ನೂ ಬಳಸುವಂತೆ, ಅದೇ ವೈದಿಕ ಋಷಿ ಗಳೋ, ಅದೇ ಪರಂಪರೆಯವರೋ, ಮೂಲವೈದಿಕ ಮಂತ್ರಗಳ ಗುಟ್ಟನ್ನು ತಿಳಿದವರು, ಮರ್ಮವು ಬಿಡದಂತೆ, ಯುಗಧರ್ಮಾನುಸಾರವಾಗಿ ಉಪಾ ಸನಾ ಮಾರ್ಗಗಳನ್ನು ಬದಲಿಸಿ, ವೇದದ ಹೃದಯ ಉಳಿಸಿ, ಮಾರ್ಗವನ್ನು ಬೆಳೆಸಿ, ಅಳವಡಿಸಿ ಹೊಂದಿಸಿ ಕೊಟ್ಟು, ಭಿನ್ನತೆಯನ್ನೂ ಏಕತೆಯನ್ನೂ ಉಳಿಸಿ ದರೆ, 'ಸಂಶೋಧನೆ'ಯ ಸೋಗಿನ ಧೃತರಾಷ್ಟ್ರರ ಗಂಟೇನು ಹೋಯಿತು ?

ಧ್ಯಾಯನ್ ಕೃತೇ ಯಜನ್ ಯಜ್ಞೈಃ ತ್ರೇತಾಯಾಂ
ದ್ವಾಪರೇಽರ್ಚಯನ್ ।
ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಂ ॥

ಎಂಬ ಶ್ರೀ ಭಾಗವತದ ಸೂಕ್ತಿ. ಈ ವಿಷಯದಲ್ಲಿ ಕುರುಡರಿಗೂ

ಕಣ್ಣಿನಂತಿದೆ. ಕೃತಯುಗದಲ್ಲಿ ಧ್ಯಾನದಿಂದಲೂ, ತ್ರೇತಾಯುಗದಲ್ಲಿ ಯಜ್ಞದಿಂದಲೂ, ದ್ವಾಪರದಲ್ಲಿ ಅರ್ಚೆಯಿಂದಲೂ, ಯಾವ ಫಲವನ್ನು ಹೊಂದಬಹುದೋ ಅದನ್ನೇ ಕಲಿಯುಗದಲ್ಲಿ ಭಗವಂತನ ನಾಮಗುಣ ಸಂಕೀರ್ತನದಿಂದಲೇ ಪಡೆಯಬಹುದು ಎಂದು ಹೇಳಿದ್ದರಿಂದ, ಯುಗಭೇದದಿಂದ, ಜನರ ಜೀವನ ಪರಿಸರ, ಬುದ್ಧಿಶಕ್ತಿ, ಶರೀರದಾರ್ಢ್ಯ, ಮನಸ್ಸಿನ ಸ್ಥಿರತೆಗಳನ್ನನುಲಕ್ಷಿಸಿ ಈ ನಾಲ್ಕು ಮಾರ್ಗಗಳನ್ನು — ಅನುಭವದ ಹಿನ್ನೆಲೆಯಲ್ಲಿ — ಹೇಳಿದರೇ ಹೊರತು, ಧ್ಯಾನಮಾಡುವರು 'ಆರ್ಯ'ರೆಂದೂ, 'ಅರ್ಚಿ'ಸುವವರು ದ್ರಾವಿಡರೆಂದೂ, ಉಳಿದೆರಡು ಮಾರ್ಗದಲ್ಲಿ ಹೋಗುವವರು 'ಆರ್ಯ'ರೂ' 'ದ್ರಾವಿಡ'ರೂ ಅಲ್ಲದ ಮಿಶ್ರವೋ, ಭಿನ್ನವೋ ಆದ ಬೇರೆರಡು ಜನಾಂಗಗಳೆಂದು ವಾದಿಸಿದರೆ ಯಾರಿಗೆ ನಷ್ಟ ? ಹೀಗೆ ನಾಲ್ಕು ಗತಿಗಳನ್ನು ಹೇಳಿದ್ದರೂ, ಈಗಲೂ ಧ್ಯಾನಪ್ರಿಯರೂ, ಯಜ್ಞಪ್ರಿಯರೂ ಅರ್ಚಾಪ್ರಿಯರೂ, ಕೀರ್ತನ ಪ್ರಿಯರೂ ಇರುವಂತೆ, (ಇವರ ಸಂಖ್ಯೆ ಎಷ್ಟಾದರಾಗಲಿ) ಎಂದೆಂದೂ ಇದ್ದೇ ಇದ್ದರೆಂಬುದರಲ್ಲೇನು ಸಂದೇಹ ? ಈ ಮಾರ್ಗಗಳಲ್ಲಿ ಯಾವುದು ಯಾವಾಗ ಬಹುಜನರಿಗೆ ಸುಲಭ, ಪ್ರಿಯ ರುಚಿಕರ ಎಂಬುದರಲ್ಲಿ ಮಾತ್ರ ಭೇದವೇ ಹೊರತು, ಕೃತದಲ್ಲಿ ಯಜ್ಞ, ಅರ್ಚನೆ, ಕೀರ್ತನೆಗಳು ಇರಲೇ ಇಲ್ಲವೆಂದೂ, ತ್ರೇತೆಯಲ್ಲಿ ಧ್ಯಾನವೇ ಇರಲಿಲ್ಲವೆಂದೂ ಮುಂತಾಗಿ ವಾದಿಸುವುದೂ, ಇದಕ್ಕೆಲ್ಲ ಜನಾಂಗಗಳನ್ನೂ, ಅವರಲ್ಲಿ ಅಂತರ್ದ್ವೇಷ— ವೈಷಮ್ಯಗಳನ್ನೂ ಸೃಷ್ಟಿಸುವುದೂ ಮಾನವ ಜನಾಂಗಕ್ಕೇ ಎಸಗಿದ ಘೋರ, ಅಕ್ಷಮ್ಯ ಅಪರಾಧವಾಗುವುದು. ಐರೋಪ್ಯರು ಹೀಗೆ ಬರೆದುದಕ್ಕೆ ಕಾರಣ ಸ್ಪಷ್ಟವಿದೆ! ಭಾರತೀಯರು ಇದಕ್ಕೆ ಮೋಸಹೋದುದಕ್ಕೆ ಮಾತ್ರ ಕ್ಷಮೆ ಇರಲಾರದು !! ಈ ಭಿನ್ನ ಕ್ರಮ ಉಪಾಸನೆಗೆ ಇಲ್ಲೇ ಕಾಲಕ್ರಮದ ವ್ಯತ್ಯಾಸ ಮೂಲದ ಸ್ವಾಭಾವಿಕ ಕಾರಣಗಳನ್ನು ಕಾಣ ಹೊರಡದೆ, ಹೊರಗಿನ ಪ್ರಭಾವಗಳನ್ನು ಹುಡುಕುವ ಬುದ್ಧಿ ಇನ್ನಷ್ಟು ವಿಚಿತ್ರ ! ಆಲಯ ಪೂಜಾ ಕ್ರಮವು ಈಜಿಪ್ತದಿಂದಲೋ, ರೋಂಸಾಮ್ರಾಜ್ಯದಿಂದಲೋ, — ಕೊನೆಗೆ ಬೇರೆಲ್ಲಿಂದಲಾದರೂ ಸರಿ, — ಹೊರಗಿಂದ ಬಾಧಿತ್ತೇ ವಿನಾ ಈ ದೇಶದಲ್ಲೇ ಇಲ್ಲಿನ ಸ್ಥಿತಿಗತಿಗಳಿಗನುಗುಣವಾಗಿ ಬೆಳೆದು ಬಂದಿತ್ತೆಂಬುದನ್ನು ಅಲ್ಲಗಳೆದು [illegible] ಚರಿತ್ರೆಕೋರ

ರಿಗೆ, ಈ ಮತಿಮಾಂದ್ಯದ ಕಾಲದಲ್ಲೇನು ಕೊರತೆ ? ಇಂಥವರಿಗೆ ವೇದಾಗಮಗಳಲ್ಲಿ ವೈರಸ್ಯ ಕಂಡಲ್ಲಿ ಆಶ್ಚರ್ಯವಿಲ್ಲ. ವೈರಸ್ಯ ಇರುವುದು ಇವರ ಬುದ್ಧಿಯಲ್ಲೇ ಹೊರತು ತಾವು ಕಾಣ ಹೊರಟಿದ್ದರಲ್ಲಲ್ಲವೆಂದು ಮನದಟ್ಟು ಮಾಡಿಕೊಡುವುದು, ಪೂರ್ವಗ್ರಹಪೀಡೆಗೆ ಮದ್ದುಕೊಡುವುದು ಸುಲಭವಲ್ಲ. ಇರಲಿ.

ಬೌದ್ಧಿಕ ದಾಸ್ಯರೂಪದ ಈ ಮಂಕಿಗೆ ಇನ್ನೊಂದು ಪ್ರಾಚೀನ ಉದಾಹರಣೆಯೂ ಉಂಟು. ಈ ಉದಾಹರಣೆಯನ್ನು ತೋರಿಸಿಯೇ ಇಂದಿನ ಮೂಢರೂ ತಮ್ಮ ಅವಿವೇಕಕ್ಕೂ ಒಂದು ಪರಂಪರೆಯುಂಟೆಂಬುದನ್ನು ಹೆಮ್ಮೆಯಿಂದ ಹೇಳಿಕೊಳ್ಳುವುದು' ಭಾರತೀಯತ್ವದ ವಿಡಂಬನೆಯೇ ಸರಿ !

ಇದು ವೇದದ ಹೆಸರಿನಲ್ಲೇ, ವೈದಿಕರೆಂಬುವರೇ, ಕರ್ಮಮೀಮಾಂಸಕರ ಸೋಗಿನಲ್ಲಿ ನಡೆಸಿದ ಬ್ರಹ್ಮನಿರಾಕರಣೆಯ ಇತಿಹಾಸ ! ವೇದವನ್ನೊಪ್ಪಿದ ವೈದಿಕರೇ, ಋಕ್‌ಸಂಹಿತೆಯು ಕಣ್ಣು ಕುಕ್ಕಿಸುವ ದೇವತಾ ಮಂಡಲದ ವೈಭವೋಪೇತ ವರ್ಣನೆಯನ್ನು, ಉಪನಿಷತ್ತುಗಳ ಪರಮಸತ್ಯವಾದ, ಸಿದ್ಧಾಂತವಾದ, ಪರಮಾತ್ಮ ತತ್ತ್ವವನ್ನು ಕಣ್ಣುಬಿಟ್ಟು ನೋಡದೇ, ಮೆಚ್ಚದೇ, ಒಪ್ಪಿಕೊಳ್ಳದೇ, ಈ ಬ್ರಹ್ಮವಾದವನ್ನೇ 'ಅವೈದಿಕ'ವೆಂದು ಅಪಪ್ರಚಾರ ಮಾಡುತ್ತಾ, ಅಂದಿನ ಮಹಾಮಹಾ ವೈದಿಕರೆಲ್ಲಾ ಈ ದುರ್ವಾದವನ್ನು ಒಪ್ಪಿಕೊಂಡ ದುಷ್ಕಾಲವು ಒಂದಿತ್ತೆಂದರೆ, ಇಂದು ಯಾರಿಗಾದರೂ ನಂಬಿಕೆ ಬರುವುದೇ ? ವೇದಾಂತವೇ ವೇದಬಾಹ್ಯವೆಂದು ಅಂದು ನಂಬಿದ್ದ ವೈದಿಕರ ಮನೆತನದಲ್ಲಿ ಹುಟ್ಟಿಬಂದ ಶ್ರದ್ಧಾಳುಗಳು ಇನ್ನು ಪಂಚರಾತ್ರವನ್ನು ಅವೈದಿಕವೆಂದು ನಂಬಿದ್ದರೆ ಆಶ್ಚರ್ಯವೇನು ? ಗೀತಾಚಾರ್ಯನು ಈ ವಿಪರ್ಯಾಸವನ್ನು ಸರಿಪಡಿಸಲು ಅತಿರೇಕೀ ಕರ್ಮಮೀಮಾಂಸಕರನ್ನು ಗೀತೆಯಲ್ಲಿ ಖಂಡಿಸಿರುವುದರಿಂದ ಗೀತೆಯೇ ಅವೈದಿಕವೆನ್ನುವ ಬೃಹಸ್ಪತಿಗಳು ಇಂದೂ ಇಲ್ಲವೆ ? ವೈದಿಕವೆಂದರೆ ಯಾವುದು ? ವೇದದ ತಿರುಳೋ, ಅದರಲ್ಲಿ ಉಕ್ತವಾದ ತತ್ತ್ವಸಾಕ್ಷಾತ್ಕಾರ ಸಾಧಕವಾದ ಒಂದಾನೊಂದು ಸಾಂಕೇತಿಕ ಕ್ರಿಯಾಚರಣೆಯೋ ? ತತ್ತ್ವವನ್ನು ಬಿಟ್ಟ ಕ್ರಿಯಾಚರಣೆ ಎಷ್ಟುಮಟ್ಟಿಗೆ ವೈದಿಕವಾದೀತು ? ಅಂದಿನವರಿಗೇ ತಿಳಿಯಲಿಲ್ಲ ! ಇಂದಿನ ಅಶ್ರದ್ಧೆಯ, ಸಂಶಯಸ್ವಭಾವದವರಿಗೆ ತಿಳಿಯುವುದೆಂತು ?

ವೇದ— ವೇದಾಂತಗಳನ್ನೇ ಒಂದರ ಮೇಲೊಂದು ಎತ್ತಿ ಕಟ್ಟಿದರು, ಕೆಲ ಪಾಶ್ಚಾತ್ಯ ಬೃಹಸ್ಪತಿಗಳು— Vedism, Vedantism —ಎಂಬ ಶಬ್ದ ಜಾಲದಲ್ಲಿ ! Ism ಅನ್ನು ಯಾವುದಕ್ಕೆ ಕೂಡಿಸಿದರೆ ಅದೇ ವಾದವಾಗುವ ಈ ಕಾಲದಲ್ಲಿ ಯಾವುದೂ ವಿಚಿತ್ರವಲ್ಲ ! ಎಲ್ಲಾ ಸಚಿತ್ರವೇ ! ಸುಚಿತ್ರವೇ. ಬಹು ಪ್ರಾಚೀನರಾದ ಪುರಾಣ ಕರ್ತರಿಗೂ, ಸ್ಮೃತಿಕಾರರಿಗೂ, ಧರ್ಮ ಶಾಸ್ತ್ರಕಾರರಿಗೂ, ನೈರುಕ್ತರಿಗೂ, ವೈಯ್ಯಾಕರಣೆಗಳಿಗೂ ಕಾಣದ ಈ ಭೇದ —ವೇದಾಗಮಗಳಲ್ಲಿ ಕಲ್ಪಿತ ಭೇದ, ಮತ್ತು ವಿರೋಧ— ಅಂದು ಇವರಿಗೆ ಕಂಡದ್ದು ಭ್ರಾಂತಿಯಿಂದ, ಮತ್ತು ದುಷ್ಟಾಚಾರ ವಿಚಾರದಿಂದ ಎಂಬುದನ್ನು ತೋರಿಸಿಕೊಟ್ಟವರು, ಪ್ರಾಯಃ, ಮೊದಲಿಗೆ ಶ್ರೀರಾಮಾನುಜಾಚಾರ್ಯರ ಪರಮಾಚಾರ್ಯರಾದ ಶ್ರೀ ಯಾಮುನಾಚಾರ್ಯರೆಂದು ಕಾಣುತ್ತದೆ. (ಶ್ರೀ ಶಂಕ ರರು ಪಂಚರಾತ್ರದಲ್ಲಿ ಹೇಳಿದ ಎನ್ನಲಾದ ಯಾವುದೋ ಒಂದು ಪ್ರಮೇಯ ವನ್ನು ಮಾತ್ರ ಒಪ್ಪಲಿಲ್ಲವೇ ಹೊರತು ಸಮಗ್ರ ಪಂಚರಾತ್ರವನ್ನೇ ಅಲ್ಲ. ವೇದವೇದಾಂತಗಳಲ್ಲಿಯೂ ಒಬ್ಬರಿಗೆ ಒಂದು ರೀತಿಯಿಂದ ಒಪ್ಪಿಗೆಯಾದದ್ದು ಇನ್ನೊಬ್ಬರಿಗೆ ಮತ್ತೊಂದು ರೀತಿಯಿಂದ ಒಪ್ಪಿಗೆಯಾಗದಿದ್ದರೂ, ಮತ ತ್ರಯಾಚಾರ್ಯರನ್ನೂ ಪರಸ್ಪರರ ದೃಷ್ಟಿಯಿಂದ ಅವೈದಿಕರೆನ್ನಲು ಬಾರದಂತೆ ಈ ವಿಷಯದಲ್ಲೂ ತಿಳಿಯಬೇಕು.)

ಶ್ರೀ ಯಾಮುನಾಚಾರ್ಯರ ಆಗಮಪ್ರಾಮಾಣ್ಯ ಎಂಬ ಗ್ರಂಥ ಈಗಲೂ ಉಪಲಬ್ಧವಿದೆ. (ಅವರ ಈ ವಿಷಯದ ಇನ್ನೊಂದು ಗ್ರಂಥವೆನ್ನಲಾದ ಕಾಶ್ಮೀರಾಗಮಪ್ರಾಮಾಣ್ಯ ಈಗ ದೊರೆಯುವುದಿಲ್ಲ.) ಆಚಾರ್ಯರ ಈ ಗ್ರಂಥದ ಸಾರಸಂಗ್ರಹವನ್ನು ನೋಡಿ ಓದ ಬಯಸುವವರು, ಇದೇ ಲೇಖಕನ "ಶ್ರೀ ವಿಶಿಷ್ಟಾದ್ವೈತಕ್ಕೆ ಯಾಮುನಾಚಾರ್ಯರ ಕೊಡುಗೆ" ಎಂಬ ಮುದ್ರಿತ ಲೇಖನವನ್ನು ನೋಡಬಹುದು. (ಶ್ರೀ ಪರಕಾಲ ಮಠದ ದತ್ತಿ ಉಪ ನ್ಯಾಸ, ಕನ್ನಡ ಸಾಹಿತ್ಯ ಪರಿಷತ್ತು, ೧೯೭೪. ಶ್ರೀ ವೈಷ್ಣವದರ್ಶನ ಎಂಬ ಸಂಕಲನದಲ್ಲಿ ಪರಿಷತ್ತಿನಿಂದಲೇ ೧೯೭೮ರಲ್ಲಿ ಪ್ರಕಟಿತವಾಗಿದೆ.)

ಶ್ರೀ ಪಂಚರಾತ್ರವು ಶ್ರೀ ಮಹಾಭಾರತ, ರಾಮಾಯಣ, ಪುರಾಣಾ ದಿಗಳಂತೆ ವೇದಾರ್ಥವಿವರಣೆಗಾಗಿ ಅವತರಿಸಿರುವುದರಿಂದಲೇ ವ್ಯಾಸಮಹರ್ಷಿ

ಗಳಿಂದ ಹಿಡಿದು ಇಂದಿನವರೆಗೂ ಪ್ರಚುರವಾಗಿರುತ್ತಾ ಸರ್ವಮಾನ್ಯವೂ ಆಗಿದೆ. ವೈದಿಕಸಿದ್ಧಾಂತ ವಿವರಣೆಗೆ ಈ ಬಗೆಯ ಗ್ರಂಥಗಳು ಉಪಯುಕ್ತವಲ್ಲವೆಂದೂ, ಇವು ವೇದಬಾಹ್ಯವೆಂದೂ, ಆದರೆ, ನಮ್ಮವರಲ್ಲದ ಮತ್ತು, ದುರುದ್ದೇಶ್ಯ ಪ್ರೇರಿತರಾದ ಪರಕೀಯರು ಮಾಡಿರುವ ಆರೋಪಗಳು, ಎಬ್ಬಿಸಿರುವ ವಿವಾದಗಳು ಮಾತ್ರ ಉಪಯುಕ್ತವೆಂದೂ, ನಿರ್ಧಾರಕವೆಂದೂ ನಂಬುವ, ಇಲ್ಲಿ ವಿಪರ್ಯಾಯವನ್ನು ಕಾಣದ ಮತಿಗೇಡಿಗಳಿಗಾಗಿ ಇಲ್ಲಿ ದಿಙ್ಮಾತ್ರದಿಂದ ಆಗಮಗಳ ವೈದಿಕ ಮೂಲತ್ವವನ್ನು ಕೊಂಚ ಮಟ್ಟಿಗೆ ವಿವರಿಸೋಣ.

## ೧೬. ನಿಗಮ ಆಗಮಗಳ ಸಂಬಂಧ ವಿವೇಚನೆ

ವೇದಗಳಿಗೆ ನಿಗಮಗಳೆಂದು ಹೆಸರಾದರೆ, ಅನಾದಿ ಸಂಪ್ರದಾಯದಿಂದ ಅವಿಚ್ಛಿನ್ನವಾದಿ ವೇದಗಳ ತತ್ತ್ವವನ್ನು ವಿವರಿಸಿಕೊಂಡು ಬಂದಿರುವ, ಮತ್ತು ಭಗವತ್ ಪೂಜಾ (ಉಪಾಸನಾ) ವಿಧಾನವನ್ನು ಸುವ್ಯವಸ್ಥೆಗೊಳಿಸಿರುವ ಗ್ರಂಥಗಳಿಗೆ ಆಗಮಗಳೆಂದು ಹೆಸರು. ಇವುಗಳನ್ನು ಶ್ರೀಮನ್ನಾರಾಯಣನೇ ಪ್ರವರ್ತಿಸಿದನೆಂದು ಆಗಮಗಳೇ ಹೇಳುತ್ತವೆ. "ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಃ ಸ್ವಯಂ" ಎಂಬ ವಚನ ಪ್ರಸಿದ್ಧವಿದೆ. ಅದರಿಂದಲೇ ಇವಕ್ಕೆ ಭಗವಚ್ಛಾಸ್ತ್ರವೆಂಬ ಹೆಸರೂ ಇದೆ.

ವೇದಗಳಲ್ಲೇ ಈ ಬಗೆಯ ಉಪಾಸನೆಗಳು ಬಂದಿರುವುದೂ, ವೇದವ್ಯಾಸರು ಬ್ರಹ್ಮಸೂತ್ರದ ಸಾಧನಾಧ್ಯಾಯದಲ್ಲಿ ಇವನ್ನು ವಿಪುಲವಾಗಿ ಚರ್ಚಿಸಿರುವುದೂ ಪ್ರಸಿದ್ಧವಿದೆ. ಸಮಗ್ರವಾದ ವೇದರಾಶಿಯಲ್ಲಿ ಕೆಲವೊಂದು ಭಾಗಗಳಲ್ಲಿ ಯಜ್ಞ-ಯಾಗಾದಿ ಕರ್ಮ ವಿವರಣೆ, ವಿಚಾರಗಳನ್ನೂ, ಬೇರೆ ಕೆಲವೆಡೆಗಳಲ್ಲಿ ಜ್ಞಾನದ ಪ್ರಕಾರ, ಪ್ರಶಂಸೆಗಳನ್ನೂ, ಇನ್ನೂ ಇತರೆಡೆ ಉಪಾಸನೆಗಳನ್ನೂ ಹೇಳಿರುವುದರಿಂದ, ಪೂರ್ವಿಕರು ಸ್ಥೂಲ

ವಾಗಿ ಇವನ್ನು ಕರ್ಮಕಾಂಡ, ಜ್ಞಾನಕಾಂಡ, ಉಪಾಸನಾಕಾಂಡ ವೆಂದು ಕರೆದರೇ ಹೊರತು, ಈ "ಕಾಂಡಕಾಂಡ"ಗಳ ಜಗಳದ, ವೇದದ "ಹತ್ಯಾಕಾಂಡ"ದಲ್ಲಿ ವೈದಿಕರನ್ನು ಸಿಲುಕಿಸಲು ಅಲ್ಲ! ಒಂದೇ ಹೂವಿನಲ್ಲಿ ಪರಿಮಳವೂ, ಮಾರ್ದವವೂ, ಸೌಂದರ್ಯವೂ ಇವೆ ಯೆಂದರೆ ಇಲ್ಲಿ ವಿರೋಧವೆಲ್ಲಿದೆ ? ಹಾಗೆಯೇ ವೇದದಲ್ಲಿ ಕರ್ಮಜ್ಞಾನೋ ಪಾಸನೆಗಳೂ ಇವೆಯೆಂದ ಮಾತ್ರಕ್ಕೇ ಕೆಲವೊಂದು ವೇದದ ಇಡೀ ಭಾಗ ಗಳನ್ನೇ ಈ ಕಾಂಡಗಳೆಂದು ಹರಿದು ಚೂರುಮಾಡಿ, ವೇದದ ಒಂದು ಭಾಗ ವನ್ನು ಇನ್ನೊಂದಕ್ಕೆ ವಿರುದ್ಧವಾಗಿ ಎತ್ತಿಕಟ್ಟುವ ಅವೈದಿಕ ಪ್ರಯತ್ನವನ್ನು ಮೊದಮೊದಲಿಗೆ ಮಾಡಿದವರು ಕರ್ಮಮೀಮಾಂಸಕರು. ಬೌದ್ಧರ ಶೂನ್ಯೋಪಾಸನೆಯೇ ಜ್ಞಾನಮಾರ್ಗವೆಂಬ ಭ್ರಾಂತಿಯ ಕಾಲದಲ್ಲಿ ಕರ್ಮ ನಿಷ್ಠೆಯ ಅವಶ್ಯಕತೆಯನ್ನು ಸ್ಥಾಪಿಸುವ ಯತ್ನ ಈ ವೈರೂಪ್ಯಕ್ಕೆ ಕಾರಣ ವಾಗಿರಬೇಕು! ಮುಂದೆ ಬಂದ ವೇದಾಂತಿಗಳೂ ಕೆಲವರು, ಪರೋಕ್ಷ ವಾಗಿ, ಕರ್ಮಮೀಮಾಂಸಕರು ತೋಡಿದ್ದ ಈ ಹಳ್ಳದಲ್ಲಿ ಬಿದ್ದು, ಕರ್ಮ ಮಾರ್ಗವನ್ನು ನಿಂದಿಸಿ, ಮತ್ತೆ 'ಕಾಂಡ'ಗಳ ಜಗಳದಲ್ಲಿ ಸಿಕ್ಕಿಹಾಕಿ ಕೊಂಡರು. ಒಂದೇ ಆದ ವೇದಮೀಮಾಂಸಾ ಶಾಸ್ತ್ರದಲ್ಲಿ ಕೆಲವರು 'ತಲೆ'ಯನ್ನೂ, ಕೆಲವರು 'ಮುಂಡ'ವನ್ನೂ ಹೀಗೆ ಅರ್ಥಶೂನ್ಯವಾಗಿ ಹಿಡಿ ದೆಳೆದಾಡುತ್ತಾ, ತಲೆ-ಶರೀರಗಳನ್ನು ಬೇರ್ಪಡಿಸಿ (ವೇದವನ್ನು ಕೊಂದು!) ಕಬಂಧಮೀಮಾಂಸಕರೆಂದೂ, ರಾಹುಮೀಮಾಂಸಕರೆಂದೂ ವಿಡಂಬನೆಗೆ ಪಾತ್ರರಾದರು. (ಶ್ರೀ ವೇದಾಂತ ದೇಶಿಕರ ಅಧಿಕರಣಸಾರಾವಳಿ, ಶ್ಲೋ. ೧೧ನ್ನು ನೋಡಿ.)

ಹತಂ ಜ್ಞಾನಂ ಕ್ರಿಯಾಹೀನಂ ಹತಾ ಚ ಅಜ್ಞಾನಿನಾಂ
ಕ್ರಿಯಾ ।
ದಾವಾಗ್ನಿನಾಂಧಕೋ ದಗ್ಧಃ ಪಶ್ಯನ್ನಪಿ ಚ ಪಂಗುಕಃ ॥

ಎಂಬ ಪ್ರಸಿದ್ಧ ವೈದಿಕೋಕ್ತಿಯಂತೆ, ಕ್ರಿಯಾ ಹೀನವಾದ ಜ್ಞಾನವೂ, ಜ್ಞಾನಶೂನ್ಯವಾದ ಕ್ರಿಯೆಯೂ ಸತ್ತ ಹೆಣದಂತೆ ಮಾತ್ರ; ಒಂದು ಕುಂಟು;

ಮತ್ತೊಂದು ಕುರುಡು; ವೈದಿಕರಲ್ಲೇ ಹೀಗೆ ಜಗಳವಾಗಿ ಕುರುಡ ಕುಂಟರು ತುಂಬಿದರೆ, ವೇದ ವಿದ್ವೇಷಿಗಳಾದ ಪರಮತಸ್ಥರು ಹಬ್ಬುವ ಕಾಳ್ಗಿಚ್ಚಿನಲ್ಲಿ ಕುರುಡನಾದ ಕರ್ಮಮೀಮಾಂಸಕನಿಗೆ ತಾನು ಸುಟ್ಟುಸಾಯುವುದೇ ತಿಳಿಯು ಲಾರದು! ಕುಂಟನಾದ ವೇದಾಂತಿಗೆ ಸಾಯುವುದು ಮುಂಚೆಯೇ ಕಣ್ಣಿನಿಂದ ತಿಳಿದರೂ ಓಡಿ ತಪ್ಪಿಸಿಕೊಳ್ಳಲಾರ! ಹೀಗೆ ಉಭಯರೂ ಸಾಯುವುದೇ ಖಂಡಿತ ಎನ್ನುತ್ತದೆ ಈ ಸೂಕ್ತಿ. ಆದ್ದರಿಂದ ವೇದದಲ್ಲಿ ಜ್ಞಾನ, ಕ್ರಿಯೋ ಪಾಸನೆಗಳು ಉಕ್ತವಾಗಿರುವಂತೆಯೇ ಆಗಮಗಳಲ್ಲೂ ಜ್ಞಾನಪಾದ, ಚರ್ಯಾ ಪಾದ ಮೊದಲಾದ ವೈವಿಧ್ಯಮಯ ವಿಷಯಗಳೂ ಇವೆಯಾಗಿ ಆಗಮ ಹೇಳುವುದೆಲ್ಲ Dry rituals —ಶುಷ್ಕಕ್ರಿಯಾಚರಣೆ —ಅಲ್ಲ! ಆಗಮ ಗಳನ್ನೇ ಓದದ ಮೂಢರಿಗೆ, ಓದಿದರೂ ಪೂರ್ವಗ್ರಹಪೀಡಿತರಾದ ಕುರುಡ ರಿಗೆ ಶ್ರೀ ಯಾಮುನರ ಆಗಮಪ್ರಾಮಾಣ್ಯವು ಪ್ರಬಲ ಚಿಕಿತ್ಸೆಯಾಗಿದೆ. ಆಚಾರ್ಯರ ಭಾಷೆಯ ತೀವ್ರತೆಯನ್ನು, ಹೃದಯನಿರ್ವೇದವನ್ನು ಈ ಗ್ರಂಥ ವನ್ನೋದಿಯೇ ತಿಳಿಯಬೇಕಷ್ಟೆ.

ವೇದವನ್ನೇ ತಮ್ಮದಾಗಿಸಿಕೊಳ್ಳಲು ವೇದಸಿದ್ಧಾಂತ ಬಾಹಿರರಾದ ಸಾಂಖ್ಯರು (ನಿರೀಶ್ವರರು) ಯತ್ನಿಸಿದಂತೆ, ಆಗಮವೆಂದೊಡನೆಯೇ, ಇದೇ ಹೆಸರಿನಿಂದಲೇ ತಮ್ಮ ಗ್ರಂಥಗಳನ್ನೂ ಕರೆಯ ಹೊರಟ ಬೌದ್ಧಜೈನರ ಪರಂಪರೆಯಲ್ಲೂ ಆಗಮಗಳು ಹುಟ್ಟಿಕೊಂಡವು! ವೈದಿಕರಲ್ಲಿ ಪುರಾಣ ಗಳಿರುವಂತೆಯೇ ಅವರಲ್ಲೂ ಪುರಾಣಗಳೂ ಸೃಷ್ಟವಾದವು. ಈಚೆಗೆ ಪುರಾಣಗಳನ್ನೂ ಆಗಮಗಳನ್ನೂ ಸಹ ಶೈವ, ವೈಷ್ಣವಾದಿ ವಿಂಗಡಿಸುವ ಯತ್ನ ನಡೆದಿದೆ. ಮದ್ರಾಸಿನ ಅಡ್ಯೈಯಾರ್ ಗ್ರಂಥಾಲಯದವರು ಉಪ ನಿಷತ್ತುಗಳಲ್ಲೇ ಕೆಲವನ್ನು ಶೈವ, ವೈಷ್ಣವಾದಿಗಳಾಗಿ ವಿಂಗಡಿಸಿ ಮುದ್ರಿಸಿ ರುವುದೂ ಉಂಟು. ವೇದದಲ್ಲಿ ವಿಷ್ಣು, ರುದ್ರ, ಬ್ರಹ್ಮ, ಇಂದ್ರಾಗ್ನಿಗಳಾದ ಎಲ್ಲ ದೇವತೆಗಳಿದ್ದರೂ ಇವರಲ್ಲಿ ಒಂದು ವ್ಯವಸ್ಥೆಯಂತೆ ಏಕತೆಯನ್ನು, ಸಮರಸತೆಯಲ್ಲಿ ಕಂಡುಕೊಂಡ ದರ್ಶನವೇ ನಿಜವಾದ ವೇದಸಿದ್ಧಾಂತ. ಇದು ಮಹಚ್ಛಬ್ದವಾಚ್ಯನಾದ ವ್ಯಾಪಕನನ್ನು ಅಂಗಿಯೆಂದೂ, ಉಳಿದವರನ್ನು ಅಂಗಗಳೆಂದೂ, ಅವನ ಶರೀರವೆಂದೂ ತೋರಿಸಿದ ದರ್ಶನ. ಮಹ ಇತಿ

ತದ್ಬ್ರಹ್ಮ, ಸ ಆತ್ಮಾ, ಅಂಗಾನ್ಯನ್ಯಾ ದೇವತಾಃ —ಎಂಬ ತೈತ್ತಿರೀಯೋಪನಿಷತ್ತಿನ ಸೂಕ್ತಿಯೇ ಇಲ್ಲಿ ಕೈದೀವಿಗೆ. ಈ ಮಹಚ್ಛಬ್ದವಾಚ್ಯನೇ ಅಲ್ಲಲ್ಲಿ ಸತ್, ಬ್ರಹ್ಮ, ಆತ್ಮ, ನಾರಾಯಣ, ಪ್ರಾಣ, ಜ್ಯೋತಿಃ, ಆಕಾಶಾದಿ ಶಬ್ದಗಳಿಂದಲೂ ಗುರುತಿಸಲ್ಪಡುವವನೆಂಬುದರಲ್ಲಿ ಶ್ರೀ ಶಂಕರರಾಮಾನುಜ ಮಧ್ವರಾದಿ ಎಲ್ಲ ಆಚಾರ್ಯರ ಏಕಾಭಿಪ್ರಾಯವುಂಟೆಂಬುದನ್ನು ನಮ್ಮ ಈ ಹಿಂದಿನ ಸಂಪುಟದಲ್ಲಿ ತೋರಿಸಿಯಾಗಿದೆ. ವಿಷ್ಣುನಿಂದಾರೂಪದ ಶೈವವೂ, ಶಿವನಿಂದಾ ಪರವಾದ ವೈಷ್ಣವವೂ 'ವೀರ'ವೆನಿಸಿ ವೇದದ ಸಮತೋಲವನ್ನು ಹದಗೆಡಿಸುವ ವಿಕೃತ ವೈದಿಕ ರೂಪಗಳೇ ಮಾತ್ರ. ಆದಮಾತ್ರಕ್ಕೆ ಶಿವ ಬ್ರಹ್ಮ ಇಂದ್ರಾದಿಗಳ ಕಾರ್ಯಕ್ಷೇತ್ರಗಳು ಒಂದೇ ಎಂದೋ, ಸಮವೆಂದೋ ಗ್ರಹಿಸಬೇಕಾದ ಇನ್ನೊಂದು ಅತಿರೇಕವೂ ಅನವಶ್ಯಕ. ಸಮ–ವಿಷಮ ಪ್ರಶ್ನೆಗೆ ಅತೀತವಾಗಿಯೇ ತಿಳಿಯಬೇಕಾದ ಈ ವಿಷಯದಲ್ಲಿ ಮನಸ್ಸಿನ ವಿಕಾರವನ್ನು ಗೆದ್ದು ವೇದದರ್ಶನವನ್ನು ಆಮೇಲೆ ಅರಿಯುವ ಯತ್ನ ಮಾಡುವುದೊಳ್ಳೆಯದು.

ಆದ್ದರಿಂದ ಆಗಮ ಎಂಬ ಹೆಸರಿದ್ದ ಮಾತ್ರದಿಂದ ಪಂಚರಾತ್ರವನ್ನು ಬೌದ್ಧ ಜೈನಾದಿಗಳ ಆಗಮಗಳ ಗುಂಪಿಗೆ ಸೇರಿಸಿ ಇವೆಲ್ಲವೂ 'ಆರ್ಯಪೂರ್ವದ' ಭಾರತೀಯರ ಧರ್ಮಗ್ರಂಥಗಳೆಂದು ಪಾಶ್ಚಾತ್ಯರು ಗ್ರಹಿಸಿರುವಂತೆ ನಾವೂ ಒಪ್ಪಿಕೊಳ್ಳಬೇಕಾದ ನಿರ್ಬಂಧವೇನೂ ಇಲ್ಲ. ಶೈವ, ಶಾಕ್ತ ಆಗಮಗಳು ಜೈನಬೌದ್ಧಾಗಮಗಳಂತೆ ನಾಸ್ತಿಕವಾದ ಮಾಡದಿದ್ದರೂ ಪರಬ್ರಹ್ಮಸ್ವರೂಪದ ಗ್ರಹಿಕೆಯಲ್ಲಿ ಭಿನ್ನವಾಗಿರುವುದರಿಂದ, ವೇದ ಸಿದ್ಧಾಂತಕ್ಕೆ ಸರಿಹೊಂದದೆ, ಅತಿರೇಕವಾದಗಳಲ್ಲಿ ತೊಡಗಿ, ಅಲ್ಲಲ್ಲಿ ವೈದಿಕರಿಗೆ ಅಗ್ರಾಹ್ಯವಾದ ಆಚಾರ ವಿಚಾರಗಳನ್ನೂ, ವಾಮಾಚಾರಗಳನ್ನೂ, ರಾಜಸತಾಮಸ ರೀತಿಯ ಉಗ್ರಉಪಾಸನೆಗಳನ್ನೂ, (ಬಲಿಗಳನ್ನೂ) ಬೋಧಿಸುತ್ತಾ, ವೈದಿಕರಿಗೆ ಅಗ್ರಾಹ್ಯವಾಗಿರುತ್ತದೆ. ಶ್ರೀ ಶಂಕರರು ಪಾಶುಪತಮತವನ್ನು ಖಂಡಿಸಿರುವುದು ಈ ಕಾರಣಕ್ಕಾಗಿಯೇ. (ಶಂಕರರ ಬ್ರಹ್ಮಸೂತ್ರ ಭಾಷ್ಯದಲ್ಲಿನ ಈ ಸಂಗತಿಯನ್ನು ಅನೇಕರು ಗಮನಿಸದಿರುವುದು ದುರದೃಷ್ಟವೇ.) ನಮ್ಮ ಹಿಂದಿನ ಸಂಪುಟದಲ್ಲಿ ಇದೆಲ್ಲವನ್ನೂ ಚರ್ಚಿಸಿಯಾಗಿದೆ. ಇಂದು ಶೈವ–ಶಾಕ್ತ

ಗಳಲ್ಲಿ ಬಹಳ ವ್ಯತ್ಯಾಸವೂ ಉಳಿದಿಲ್ಲ. ಒಂದರ ಪ್ರಭೇದವೇ ಮತ್ತೊಂದೆಂಬಂತೆ ಗ್ರಹಿಸಲ್ಪಡುವುದೂ ಗಮನೀಯ. ಆದಿಕಾಲದಿಂದಲೂ ವೈದಿಕ ಪರಂಪರೆಗೇ ಪೋಷಕವಾಗಿರುತ್ತಾ, ವೇದ ದರ್ಶನಕ್ಕೆ ಕನ್ನಡಿಯಂತಿರುತ್ತಾ, ವೈದಿಕಾಚಾರ್ಯರ ಮನ್ನಣೆಗೆ ಪಾತ್ರವಾದ ವೈಷ್ಣವಾಗಮಗಳಲ್ಲಿ ಮುಖ್ಯವಾಗಿ ಪಾಂಚರಾತ್ರ, ವೈಖಾನಸಗಳೆಂಬ ಎರಡು ಬಗೆಯುಂಟು.

## ೧೭ ವೈಖಾನಸ ಪರಂಪರೆಯ ವೈಶಿಷ್ಟ್ಯ

ಈ ಪೈಕಿ ವೈಖಾನಸ ಆಗಮಗಳ ಬಗೆಗೆ, ಇದು ವೈದಿಕವೇ ಎಂಬ ಪ್ರಶ್ನೆಯೇ ಈ ವರೆಗೆ ಎದ್ದಿಲ್ಲ; ಮುಂದೆ ಏಳುವಂತೆಯೂ ಇಲ್ಲ. ಏಕೆಂದರೆ ಆಪಸ್ತಂಬ, ಆಶ್ವಲಾಯನ, ಬೋಧಾಯನ ಇತ್ಯಾದಿ ಸೂತ್ರಗಳಂತೆ ಆಚಾರಗಳನ್ನು ಅನುಶಾಸನಮಾಡುವ (ಬ್ರಾಹ್ಮಣರ) ವೈದಿಕಶಾಖೆಯಂತೆಯೇ ಈ ವೈಖಾನಸಾಗಮಗಳ ಪರಂಪರೆಯವರೂ ವೈಖಾನಸ ಸೂತ್ರವನ್ನು (ಗೃಹ್ಯ, ಶ್ರೌತ) ಹೊಂದಿ, ಅದರಂತೆ ಅನುಷ್ಠಾನ ಪ್ರಕಾರವನ್ನು ಅನಾದಿಕಾಲದಿಂದಲೂ ಪರಂಪರೆಯಿಂದ ಹೊಂದಿರುತ್ತಾರೆ. 'ವೈಖಾನಸ' ಶಬ್ದವು ಪ್ರಾಚೀನವೂ ಆಗಿದ್ದು, ವಾನಪ್ರಸ್ಥರನ್ನು ಕುರಿತು ಹೇಳುವಂತೆ ಸಂಸ್ಕೃತ ಸಾಹಿತ್ಯದಲ್ಲಿ ಪ್ರಸಿದ್ಧವಾಗಿದೆ. ಈ ವಾನಪ್ರಸ್ಥರು ಅನಾದಿಕಾಲದಿಂದ ದೇವರನ್ನು ಉಪಾಸನೆ ಮಾಡುತ್ತಿದ್ದ ಪ್ರಕಾರವನ್ನೇ ಈ ಆಗಮವು ಬೋಧಿಸುವುದರಿಂದ ಇದು ವೈದಿಕವೆಂಬುದರಲ್ಲಿ ಯಾರಿಗೂ ಸಂದೇಹವಿರಲಾರದು. ಮೂಲದಲ್ಲಿ ವಿಖನಸರೆಂಬ ಋಷಿಗಳು ತಮ್ಮಲ್ಲಿ ತಾವೇ ಶೋಧನೆ ನಡೆಸಿ, "ಗಣಿಯಲ್ಲಿ ಅಗೆಯುವವರು ಚಿನ್ನವನ್ನು ಹುಡುಕುವಂತೆ," ದೇವರನ್ನು ಅರಸಿ, ಕಂಡುಕೊಂಡು, ಉಪಾಸಿಸಿದುದರಿಂದ ಇವರ ಮಾರ್ಗವು ವೈಖಾನಸವಾಯಿತೆಂದು ಹೇಳುತ್ತಾರೆ :

ಖನಿತ್ವಾ ಚಾತ್ಮನಾತ್ಮಾನಂ ಧರ್ಮಾದಿಗುಣ ಸಂಯುತಂ ।
ಯಾನವಾವಿಶ್ಯ ಯೋಗೇನ ಹ್ಯಾಸೀತ್ ವಿಖನಸೋ ವಿಭುಃ ॥

'ಖನ್' ಧಾತುವಿಗೆ 'ಅಗೆಯುವುದು' (to dig) ಎಂಬ ಅರ್ಥವಿದೆ. ಸಂಕೇತಾರ್ಥದಲ್ಲಿ 'ಶೋಧಿಸು' 'ಹುಡುಕು' ಎಂದು ಗ್ರಹಿಸಿದರೆ, ಇದು 'ಬ್ರಹ್ಮಾನ್ವೇಷಣೆ ನಡೆಸುವುದೆಂ'ಬ ಅರ್ಥ ಕೊಡುತ್ತದೆ. ಇದನ್ನು 'ವಿ' 'ವಿಶೇಷೇಣ', ಮಾಡಿದವರು 'ವಿಖನಸ್' ಆಗುತ್ತಾರೆ. ಬ್ರಹ್ಮದೇವನಿಗೂ ಮೂಲದಲ್ಲಿ ಈ ಹೆಸರುಂಟು. (ಶ್ರೀಭಾಗವತದ ಗೋಪಿಕಾಗೀತೆಯಲ್ಲಿ ಈ ಶಬ್ದವನ್ನು ಹೀಗೆಯೇ ಬಳಸಿದೆ : ದಶಮಸ್ಕಂಧ, ೩೧-೪.)

ವೇದಮಂತ್ರಗಳಲ್ಲೇ. ಋಕ್‌ಸಂಹಿತೆಯಲ್ಲಿ ವಾಲಖಿಲ್ಯ-ವೈಖಾನಸ ಸೂಕ್ತಗಳೂ ಉಂಟು. ಭಗವಂತನ ರೋಮಗಳಿಂದ ಹುಟ್ಟಿದ ಋಷಿಗಳು ವಾಲಖಿಲ್ಯರೆಂದೂ, ನಖ—ಉಗುರುಗಳಿಂದ ಹುಟ್ಟಿದವರು ವೈಖಾನಸರೆಂದೂ ತೈತ್ತಿರೀಯ ಆರಣ್ಯಕ (I-23-2) ಹೇಳುತ್ತದೆ. (ಯೇ ವಾಲಾಃ ತೇ ವಾಲಖಿಲ್ಯಾಃ, ಯೇ ನಖಾಃ ತೇ ವೈಖಾನಸಾಃ ।) ಈ ಪೈಕಿ ನೂರ್ವರು ವೈಖಾನಸ ಮಹರ್ಷಿಗಳು ಪ್ರತ್ಯಕ್ಷ ಮಾಡಿಕೊಂಡ ಮೂವ್ವತ್ತು ಗಂಭೀರ ಸ್ವರೂಪದ ಮಂತ್ರಗಳು ಋಕ್ಸಂಹಿತೆಯಲ್ಲಿವೆ. (IX-66.) ಇವು ಸೋಮ ದೇವತಾವಿಷಯವಾದುವಾದರೆ, "ಅಗ್ನಿ"ಗೂ ಸಹ ಪವಮಾನನೆಂದು (ಶುದ್ಧಿ ಮಾಡುವವನೆಂದು) ಹೆಸರಿಟ್ಟವರೇ ಈ ವೈಖಾನಸರೆಂದು ಬೃಹದ್ದೇವತಾಕಾರರಾದ ಶೌನಕರು ಹೇಳುತ್ತಾರೆ. (II-29.) ಈ ಋಷಿಗಳು ವಿಷ್ಣು ಪೂಜಾನಿರತರೆಂದೂ, ಈ ಪೂಜಾಪದ್ಧತಿಯನ್ನು ಪ್ರಚುರಕ್ಕೆ ತಂದವರೆಂದೂ, ಇಂದಿಗೂ ವೈಖಾನಸ ಶಾಖೆಯವರು ಋಗ್ವೇದದ ಮಂತ್ರಗಳನ್ನೇ ಉದಾಹರಿಸುತ್ತಾರೆ. (ಉದಾ. ಋ. ಸಂ I-155-1) "ಮಹೇಶೂರಾಯ ವಿಷ್ಣವೇ ಚಾರ್ಚತ", "ಮಹಾಶೂರನಾದ (ರಕ್ಷಣೆಯಲ್ಲಿ ಸಮರ್ಥನಾದ) ವಿಷ್ಣುವನ್ನು ಅರ್ಚಿಸಿರಿ" ಎಂಬ ಘೋಷಣೆಯಲ್ಲಿ ಈ ಆಗಮದ ಮೂಲವಿದೆಯೆಂದು ಈ ಶಾಖೆಯವರ ಗ್ರಹಿಕೆ. "ಪವಸ್ವಂತಂ ವೈಖಾನಸಾ ಪವಸ್ವತೇ" ಎಂಬುದು ಇನ್ನೊಂದು ಋಙ್ಮಂತ್ರ. "ಲೋಕಗಳನ್ನೆಲ್ಲ ದೇವತೆಗಳನ್ನೆಲ್ಲ, ಶುದ್ಧಮಾಡಬಲ್ಲ ಶ್ರೀ ವಿಷ್ಣುವನ್ನೂ ಶುದ್ಧಿಮಾಡ

ಬಲ್ಲವರು— ಆರಾಧನಾದಿಗಳಿಂದ ಸಂತೃಪ್ತಿಗೊಳಿಸಿ, ಮಂಗಳಾಶಾಸನ ಮಾಡಬಲ್ಲವರು— ಈ ವೈಖಾನಸರು" ಎಂದು ಅರ್ಥ. (ಬೃಹದ್ದೇವತಾ ಕಾರರು 'ಅಗ್ನಿ' ಶಬ್ದದಿಂದ ಗ್ರಹಿಸಿದ ಈ ವಿಷ್ಣುವಿಗೇ 'ಪವಮಾನ'ನೆಂದು ಹೆಸರಿಟ್ಟವರು ವೈಖಾನಸರೆಂದು ಸಂಪ್ರದಾಯ.) ಈಗ ಉಪಲಬ್ಧವಿರುವ ಋಕ್ಸಂಹಿತೆಯಲ್ಲಿ ಈ ಮಂತ್ರವು ಕಂಡುಬರದಿದ್ದರೂ ವೈಖಾನಸಾಗಮ, ಗ್ರಂಥಗಳಲ್ಲಿ ಇದನ್ನು ಉದಾಹರಿಸಲಾಗಿದೆ. ಋಕ್ಸಂಹಿತೆಯ ಇನ್ನೂ ಬೇರೆ ಮಂತ್ರಗಳಿಗೂ ಈ ಋಷಿಗಳಿಗೂ ಸಂಬಂಧವನ್ನು ಅಲ್ಲಲ್ಲೇ ಹೇಳಲಾಗಿದೆ. ಭಾಷ್ಯಕಾರರೂ ಇದನ್ನು ಉಲ್ಲೇಖಿಸಿದ್ದಾರಾದ್ದರಿಂದ ಯಾರೂ ಸಂಶಯ ಪಡುವಂತಿಲ್ಲ.

ಈಗಿನ ವೈಖಾನಸರು ಯಜುಶ್ಶಾಖೆಯನ್ನವಲಂಬಿಸುವವರಾಗಿದ್ದು, ಅವರು ಅನುಸರಿಸುವ ಸೂತ್ರಗಳೂ ಇದಕ್ಕೇ ಸೇರಿವೆ.

ಆದಿಕಾಲೇ ತು ಭಗವಾನ್ ಬ್ರಹ್ಮಾ ತು ವಿಖನಾ ಮುನಿಃ ।
ಯಜುಃಶಾಖಾನುಸಾರೇಣ ಚಕ್ರೇ ಸೂತ್ರಂ ಮಹತ್ತರಂ ॥
ವರ್ಣಾಶ್ರಮಾಚಾರಯುತಂ ಶ್ರೌತಸ್ಮಾರ್ತ ಸಮನ್ವಿತಂ ॥

ಎಂಬ ವಚನಗಳು ಇದಕ್ಕೆ ಪ್ರಮಾಣ. ಬ್ರಹ್ಮಮಾನಸ ಪುತ್ರರಾದ, ಶಿಷ್ಯರಾದ ಕಾಶ್ಯಪ, ಅತ್ರಿ, ಮರೀಚಿ, ಮುಂತಾದವರೇ ಈ ವೈಖಾನಸರ ಮೂಲ ಪುರುಷರು. ಇವರಿಂದ ರಚಿತವೆನ್ನಲಾದ ಸಂಹಿತೆಗಳೇ ವೈಖಾನಸಾಗಮ ಗ್ರಂಥಗಳೆನಿಸಿವೆ. ಈ ಋಷಿಗಳು ವೇದಮಂತ್ರಗಳ ದ್ರಷ್ಟಾರರೂ ಹೌದು. ಶ್ರೀ ಮಹಾಭಾರತವು (ಅಶ್ವ 114–87) ಪಾಂಚರಾತ್ರದೊಡನೆ ವೈಖಾನಸಾಗಮವನ್ನೂ ಗೌರವಾನ್ವಿತವಾಗಿ ಕಂಡು, ಈ ಪೂಜಾ ವಿಧಾನವನ್ನು ಅಂಗೀಕರಿಸಿದೆ. ಇವುಗಳಲ್ಲಿ ವೈಖಾನಸವೇ ಪ್ರಾಚೀನ. ಮತ್ತು ಇದು ಶ್ರೀಶಾಸ್ತ್ರವೆಂದೂ ಪ್ರಸಿದ್ಧವಾಗಿದೆ. ಇದಕ್ಕೇ ಏಕಾಯನವೆಂಬ ಇನ್ನೊಂದು ಹೆಸರೆಂದೂ ಅಲ್ಲಲ್ಲಿ ತಿಳಿದುಬರುತ್ತದೆ. ಸ್ವರ್ಗನರಕಗಳಿಲ್ಲದಿದ್ದಾಗ, ಜನನ-ಮರಣಗಳಿಲ್ಲದಿದ್ದಾಗ —ಸಮಸ್ತಜೀವಕೋಟಿಯೂ ಶ್ರೀಮಹಾವಿಷ್ಣುವನ್ನು ಈ ಏಕಾಯನ ಅಥವಾ ವೈಖಾನಸ ಪದ್ಧತಿಯಲ್ಲೇ ಆರಾಧಿಸುತ್ತಿದ್ದಿತೆಂದೂ

ಈ ಆಗಮಗಳಲ್ಲಿಯೇ ಹೇಳಿದೆ. ಶ್ರೀಶಾಸ್ತ್ರವೆಂದರೆ ಶ್ರೀವಿಷಯಕ ಶಾಸ್ತ್ರವೆಂದೂ ಅರ್ಥವಾಗುವುದು ಗಮನೀಯ. (ಸಂಪದ್ಯುಕ್ತವೆಂಬುದು ಇನ್ನೊಂದರ್ಥ.) ಏಕಾಯನವೆಂದರೆ— ಒಬ್ಬನನ್ನೇ ನಂಬಿ ನಡೆಯುವ ಮಾರ್ಗ; ಶ್ರೀವಿಷ್ಣುವೇ ಸರ್ವದೇವಾತ್ಮಕನೆಂದೂ, ಉಳಿದವರೆಲ್ಲ ಅವನ ಅನುಚರರೆಂದೂ ಭಾವಿಸಿ ನಡೆಯುವ ಮಾರ್ಗ. ಇದೇ ವೈದಿಕ ಮತಾಚಾರ್ಯರ ಗ್ರಹಿಕೆಯೆಂದು ಈಗಾಗಲೇ ಪದೇಪದೇ ತೋರಿಸಿಯಾಗಿದೆ. ನಾರದರು ಸನತ್ಕುಮಾರರಿಗೆ ತಾವು ಕಲಿತವಿದ್ಯೆಗಳ ಹೆಸರುಗಳನ್ನು ಹೇಳುವಾಗ (ಛಾಂದೋಗ್ಯ VII-1-2-4; VII-2-1) ಈ ಏಕಾಯನವನ್ನೂ ಹೇಳುವುದರಿಂದ ಇದರ ಪ್ರಾಚೀನತೆಯಲ್ಲಿ ಸಂದೇಹವೇ ಇಲ್ಲ. ಈ ಹೆಸರಿನ ಒಂದು ಇಡೀ ವೇದಶಾಖೆಯೇ ಇದ್ದುದಾಗಿಯೂ, ಅದು ಈಗ ನಷ್ಟವಾಗಿರುವುದಾಗಿಯೂ ತಿಳಿದುಬರುತ್ತದೆ. ಪುರುಷಸೂಕ್ತದಲ್ಲಿ :

> ತಮೇವಂ ವಿದ್ವಾನ್ ಅಮೃತ ಇಹ ಭವತಿ ।
> ನಾನ್ಯಃ ಪಂಥಾ ಅಯನಾಯ ವಿದ್ಯತೇ ॥

("ಅವನನ್ನು —ಮಹಾಪುರುಷನೆಂದು ಖ್ಯಾತನಾದ ಶ್ರೀ ವಿಷ್ಣುವನ್ನು— ಯಾವನು ತಿಳಿಯುವನೋ, ಅವನು ಇಲ್ಲೇ ಅಮೃತನಾಗುವನು; ಮೋಕ್ಷಕ್ಕೆ ಬೇರೆ ದಾರಿಯೇ ಇಲ್ಲ") —ಎಂದು ಹೇಳಿರುವುದೂ ಈ ಏಕಾಯನದ ಮೂಲಗ್ರಹಿಕೆಯೇ ಆಗಿದೆ ಎಂದು ಹಿರಿಯರ ಮತ. ಇದನ್ನು ನಂಬಿದ ಶ್ರೀವೈಷ್ಣವರನ್ನು ಇಂದಿಗೂ ಏಕಾಂತಿಗಳೆಂದೂ, ಪರಮೈಕಾಂತಿಗಳೆಂದೂ ಕರೆಯುವ ರೂಢಿ ಈ ಅಭಿಪ್ರಾಯವನ್ನು ಪೋಷಿಸುತ್ತದೆ.

ಇಂದಿಗೂ ವಿಶ್ವಪ್ರಸಿದ್ಧವಾದ ತಿರುಮಲೈ (ತಿರುಪತಿ)ಯಲ್ಲೂ, ಪುರೀ ಜಗನ್ನಾಥ ಕ್ಷೇತ್ರದಲ್ಲೂ ಈ ವೈಖಾನಸ ಪದ್ಧತಿಯೇ ಪೂಜಾಕ್ರಮವಾಗಿರುವುದೂ ಗಮನೀಯ. (ಇನ್ನೂ ಸಹಸ್ರಾರು ಇತರ ಕ್ಷೇತ್ರಗಳೂ ಸಹ.)

ಈ ಪರಂಪರೆಯವರೇ ಇಂಥಕಡೆ ಪೂಜೆಗೆ ನಿಯಮಿಸಲ್ಪಡಬೇಕೆಂಬುದು ಈ ಆಗಮದ ಇನ್ನೊಂದು ವೈಶಿಷ್ಟ್ಯ. ಪಾಂಚರಾತ್ರದಲ್ಲಿ ಯಾವ ಶ್ರೀವೈಷ್ಣವ (ಬ್ರಾಹ್ಮಣ)ನಾದರೂ — ಪಂಚರಾತ್ರಿಗಳ ವಂಶದಲ್ಲಿ ಹುಟ್ಟಿ

ಬಾರದವರೂ ಸಹ— ಈ ಆಗಮದ ದೀಕ್ಷೆಯನ್ನು ಹೊಂದಬಹುದಾಗಿದೆ. ವೈಖಾನಸ ಕ್ರಮದಲ್ಲಿ ಇದು ಸಾಧ್ಯವಿಲ್ಲ.

(ಈ ಆಗಮಗಳಲ್ಲಿ ಕೇವಲ ಪೂಜಾ ವಿಧಾನ, ಆಲಯ ನಿರ್ಮಾಣ, ಸಂರಕ್ಷಣೆ, ಪೋಷಣೆಗಳ ವಿಷಯವಲ್ಲದೆ ತಾತ್ತ್ವಿಕವಿಚಾರಗಳೂ, ಜ್ಞಾನ, ಯೋಗ ಪಾದಗಳಲ್ಲಿ (ವೇದಾರ್ಥ ವಿವರಣರೂಪವಾಗಿ) ಹೇಳಲ್ಪಟ್ಟಿದ್ದರೂ, ಆಗಮವೆಂದೊಡನೆಯೇ ಜನಸಾಮಾನ್ಯರಲ್ಲಿ ಸಂಕುಚಿತಾರ್ಥವೇ ಮೂಡುವುದಕ್ಕೆ ನಮ್ಮ ಮೌಢ್ಯವೇ ಕಾರಣ. ('ಭಟ್ಟ'ರೆಂದರೆ 'ಅಡಿಗೆ'ಯವರೆಂದೂ, 'ಮಹಾರಾಜ'ನೆಂದರೆ 'ಸೇವಕ'ನೆಂದೂ, 'ಆಚಾರಿ' ಎಂದರೆ, 'ಬಡಗಿ' ಎಂದೂ ಮುಂತಾಗಿ ಕೇವಲ ಕುತ್ಸಿತಾರ್ಥಗಳೇ ತೋರುವ, ವ್ಯವಹಾರದಲ್ಲಿ ಬಂದಿರುವ ಈ ದುರ್ದೈವೀ ದೇಶಕ್ಕೆ, ಯಾವ ವೇದಗಳಿಂದ, ಯಾವ ಅಗಮಗಳಿಂದ, ಯಾವ ಬ್ರಾಹ್ಮಣರಿಂದ ಎಂದಿಗೆ ಮೋಕ್ಷವೆಂಬುದನ್ನು ದೇವರೇ ಹೇಳಬೇಕಷ್ಟೆ ?)

ಅಂದರೆ ಯಾರೊಬ್ಬರು ಬೇಕಾದರೂ ಗೋತ್ರ, ಸೂತ್ರಗಳ ನಿರ್ಬಂಧವಿಲ್ಲದೆ ವೈಖಾನಸಾಗಮ ದೀಕ್ಷೆಯನ್ನು ಹೊಂದುವಂತಿಲ್ಲ. ಹೀಗಾಗಿ ಉಳಿದ ಬ್ರಾಹ್ಮಣರು ಹೇಗೆ ಗೋತ್ರ ಸೂತ್ರಗಳನ್ನು ಬದಲಿಸುವಂತಿಲ್ಲವೋ ಹಾಗೆಯೇ ವೈಖಾನಸರಿಗೂ ನಿರ್ಬಂಧವಿರುವುದರಿಂದ, ಕಾಲಕ್ರಮದಲ್ಲಿ ವೈಖಾನಸಾಗಮ ಕ್ಷೇತ್ರಗಳನೇಕಗಳಲ್ಲಿ ಅರ್ಚಕರೇ ಇಲ್ಲದಂತಾಗಿ, ಕ್ರಮೇಣ ಅಲ್ಲಿ ಪಾಂಚರಾತ್ರವೇ ಬರಬೇಕಾಯಿತು. ಈ ರೀತಿ ಖಿಲವಾದ ಕ್ಷೇತ್ರಗಳನ್ನೆಲ್ಲ ಶ್ರೀರಾಮಾನುಜರು ಪಾಂಚರಾತ್ರಕ್ರಮದಿಂದ ಉದ್ಧರಿಸಿದರೆಂದು ಗುರುಪರಂಪರೆಯಲ್ಲಿ ಉದಾಹರಿಸಲಾಗಿದೆ. ಹಾಗಾದುದರಿಂದ ವೈಖಾನಸಾಲಯಗಳ ಸಂಖ್ಯೆ ಇಂದು ಕಮ್ಮಿಯಾಗಿದೆ. ಕೆಲವು ಗೋತ್ರಗಳಲ್ಲಿ ಬ್ರಾಹ್ಮಣರ ಸಂಖ್ಯೆ ಇಂದು ಕಮ್ಮಿಯಾಗಿರುವ. ಕಾರಣದಿಂದಲೇ ವೈಖಾನಸರೂ ಅಲ್ಪಸಂಖ್ಯಾಕರಾದರೆಂದ ಮೇಲೆ, ಇವರ ವೇದಮೂಲತ್ವಕ್ಕೆ ಬಾಧೆಯೇನಿಲ್ಲ.

## ಶ್ರೀಪಾಂಚರಾತ್ರದ ವೈಶಿಷ್ಟ್ಯ ಮತ್ತು ಇತಿಹಾಸ

ಪಾಂಚರಾತ್ರಾಗಮವು ಸರ್ವವರ್ಣೀಯರಿಗೂ ಗ್ರಾಹ್ಯವೆಂಬ ವಿಷಯದಲ್ಲಿ ಮಾತ್ರ ವೈಖಾನಸಕ್ಕಿಂತ ಭಿನ್ನವಾಗಿರುತ್ತದೆ. ತಮ್ಮ ತಮ್ಮ ಮನೆಯಲ್ಲಿ ವಿಷ್ಣುದೇವತಾಮೂರ್ತಿಗಳನ್ನು ಪೂಜಿಸಿಕೊಳ್ಳಲು ಪಾಂಚರಾತ್ರವು ಎಲ್ಲ ವರ್ಣದವರಿಗೂ ಅಧಿಕಾರ ನೀಡಿದೆ. ಪರಾರ್ಥಪೂಜಾರೂಪದ ದೇವಾಲಯಾರ್ಚನ ಪದ್ಧತಿಯಲ್ಲಿ ಮಾತ್ರ ದೀಕ್ಷಾವಿಶೇಷವನ್ನು ಹೊಂದಿದ, ಮತ್ತು ಪರಂಪರೆಯಿಂದ ಬಂದ, ಬ್ರಾಹ್ಮಣರಿಗೆ ಮಾತ್ರ ಅಧಿಕಾರ ಉಂಟೆಂಬುದು ಈ ಆಗಮದ ಮರ್ಯಾದೆ. ಬ್ರಾಹ್ಮಣರಲ್ಲಿಯೂ ಯಾವ ಗೋತ್ರಸೂತ್ರದವರಾದರೂ ಪಾಂಚರಾತ್ರ ದೀಕ್ಷೆಯನ್ನು ಹೊಂದಿದರೆ ಅಂಥವರಿಗೂ ಪೂಜಾಧಿಕಾರ ಉಂಟು ಎಂಬುದು ಗಮನೀಯ. ಈ ವಿಷಯಗಳನ್ನೆಲ್ಲ ಪಾಂಚರಾತ್ರಾಗಮಗಳೇ ಸ್ಪಷ್ಟಪಡಿಸಿವೆ.

ಆದರೆ ಈ ಪಾಂಚರಾತ್ರಾಗಮವು ಯಾರಿಂದ ಯಾವಾಗ ಪ್ರಚಾರದಲ್ಲಿ ಬಂದಿತು ಎಂಬುದೇ ಸದ್ಯದ ನಮ್ಮ ಪ್ರಶ್ನೆ. ಮಾರ್ಕಂಡೇಯ ಸಂಹಿತೆಯಲ್ಲಿ :

ಶ್ರುತಿಮೂಲಮಿದಂ ಶಾಸ್ತ್ರಂ ಪ್ರಮಾಣಂ ಕಲ್ಪಸೂತ್ರವತ್ ।

ಎಂದೂ

ವಿಷ್ಣುತಂತ್ರದಲ್ಲಿ : ಶ್ರುತಿಮೂಲಾನಿ ತಾನ್ಯೇವ ಪಾಂಚರಾತ್ರಾಣಿ...... । ಎಂದೂ

ಮುಂತಾಗಿ, ಅನೇಕ ಕಡೆಗಳಲ್ಲಿ ಈ ಆಗಮವು ವೇದ ಮೂಲದ್ದೆಂದೇ ಪ್ರತಿಪಾದಿತವಾಗಿದೆ. ಯಾವ ವೇದದ ಯಾವ ಶಾಖೆಯಿಂದ ಈ ಆಗಮವು ಉದಿಸಿತೆಂಬುದು ಮುಂದಿನ ಪ್ರಶ್ನೆ. ಇದಕ್ಕೆ ಈಶ್ವರ ಸಂಹಿತೆಯ ಈ ಕೆಳಗಿನ ವಾಕ್ಯವು ಉತ್ತರ ಕೊಟ್ಟಿದೆ.

ಕಾಣ್ವೀಂ ಶಾಖಾಂ ಅಧೀಯಾನಾನ್ ವೇದವೇದಾಂತ
ಪಾರಗಾನ್ ।

ಸಂಸ್ಕೃತ್ಯ ದೀಕ್ಷಯಾ ಸಮ್ಯಕ್ ಸಾತ್ವತಾದ್ಯುಕ್ತ
ಮಾರ್ಗತಃ ॥ ( 1-5-54)

ಅಂದರೆ, ಶುಕ್ಲಯಜುರ್ವೇದದ ಮೂಲಶಾಖೆಯನ್ನೇ ಕಣ್ವಶಾಖೆಯೆಂದೂ, ಏಕಾಯನ ಶಾಖೆಯೆಂದೂ ಕರೆಯುವ ಪರಿಪಾಠವಿದ್ದಿತೆಂದು ಕಣ್ವಶಾಖಾ ಮಹಿಮ ಸಂಗ್ರಹ ಎಂಬ ಗ್ರಂಥವನ್ನು ರಚಿಸಿರುವ ನಾಗೇಶ ಪಂಡಿತನು ಹೀಗೆ ವಿವರಿಸಿದ್ದಾನೆ

ಇಯಂ ಶುಕ್ಲಯಜುಶ್ಶಾಖಾ ಪ್ರಥಮೇತ್ಯಭಿ ಧೀಯತೇ ।
ಮೂಲಶಾಖೇತಿ ಚಾಪ್ಯುಕ್ತಾ ತಥಾ ಏಕಾಯನೀತಿ ಚ ॥

## ೧೯ 'ಏಕಾಯನ' ಶಾಖೆಯಲ್ಲಿ ಪಂಚರಾತ್ರದ ಮೂಲ

ಈಗ ಶುಕ್ಲಯಜುಶ್ಶಾಖೆಯ ಏಕಾಯನ ಭಾಗವು ನಮಗೆ ದೊರಕದಿರುವುದು ನಮ್ಮ ದೌರ್ಭಾಗ್ಯ, ಎಂದು ಹೇಳಬೇಕಷ್ಟೆ ! ಈ ವೇದಭಾಗಕ್ಕೆ ಏಕಾಯನವೆಂದು ಹೆಸರು ಬರಲು ಕಾರಣವೇನೆಂದರೆ :

ಯಸ್ಮಿನ್ನೇಕೋ ಮೋಕ್ಷಮಾರ್ಗೋ ವೇದೇ ಪ್ರೋಕ್ತಃ
ಸನಾತನಃ ।
ಮಹಾರಾಧನ ರೂಪೇಣ ತಸ್ಮಾತ್ ಏಕಾಯನಂ ಭವೇತ್ ॥
(ಪ್ರಶ್ನಸಂಹಿತೆ |-38-39)

ಎಂಬಂತೆ, ಈ ವೇದಭಾಗದಲ್ಲಿ— ಉಳಿದ ಭಾಗಗಳಲ್ಲಿ ತ್ರಿವರ್ಗವನ್ನೂ (ಧರ್ಮಕಾಮಾರ್ಥಗಳನ್ನೂ), ಅಪವರ್ಗವನ್ನೂ (ಮೋಕ್ಷವನ್ನು) ಕೂಡಿಸಿ ಹೇಳಿದಂತಲ್ಲದೆ— ಕೇವಲ ಮೋಕ್ಷಮಾರ್ಗವೊಂದನ್ನೇ ಪ್ರತಿಪಾದಿಸಿರುವುದ

ರಿಂದ, ಮತ್ತು ಭಗವಂತನ ಮಹಾರಾಧನ ಪ್ರಕಾರವನ್ನು ವರ್ಣಿಸಿರುವುದ ರಿಂದ ಇದು ಏಕಾಯನವೆನಿಸಿದೆ.

ಆದ್ಯಂ ಏಕಾಯನಂ ವೇದಂ ರಹಸ್ಯಾಮ್ನಾಯ ಸಂಜ್ಞಿತಂ ।
(ಈಶ್ವರಸಂಹಿತೆ, 21-531)

ಎಂಬಂತೆ ಇದಕ್ಕೇ ರಹಸ್ಯಾಮ್ನಾಯವೆಂಬ ಇನ್ನೊಂದು ಹೆಸರಿರುವಂತೆಯೂ ತಿಳಿದುಬರುತ್ತದೆ. ಈ ಏಕಾಯನವನ್ನು ನಂಬಿದ ಮಹಾಭಾಗವತರಿಗೆ ಏಕಾಂತಿಗಳೆಂದೂ, ಪರಮೈಕಾಂತಿಗಳೆಂದೂ ಏಕೆ ಕರೆಯುವರೆಂಬುದಕ್ಕೆ ಶ್ರೀವೇದಾಂತ ದೇಶಿಕರು ಹೀಗೆ ವಿವರಣೆ ನೀಡಿದ್ದಾರೆ. ಅಂತ ವೆಂದರೆ ನಿಶ್ಚಯ: ಪ್ರಾಪ್ಯನೂ (ಹೊಂದಲ್ಪಡಬೇಕಾದವನೂ) ಪ್ರಾಪಕನೂ (ಹೊಂದಿ ಸುವವನೂ) ಶ್ರೀ ಮಹಾವಿಷ್ಣುವೇ ಎಂಬ ಪರಮ ನಿಶ್ಚಯವು ಯಾರಿ ಗುಂಟೋ ಅವರು ಪರಮೈಕಾಂತಿಗಳು; ಅಂದರೆ ವಿಷ್ಣುಪಾರಮ್ಯದಲ್ಲಿ ನಂಬಿಕೆ ಯುಳ್ಳವರು.

ಪರಮಶ್ಚ ಅಸೌ ಏಕಾಂತಶ್ಚ ಇತಿ ಪರಮೈಕಾಂತಃ। ಸಃ ಅಸ್ಯ ಅಸ್ತೀತಿ ಪರಮೈಕಾಂತೀ। ಏಕತ ಅಂತಃ ನಿಶ್ಚಯಃ ಪ್ರಾಪ್ಯತಯಾ ಪ್ರಾಪಕತಯಾ ಚ ತದುಭಯಂ ಸಂಭೂಯ ಪರ ಮೈಕಾಂತಃ। ಪರಮಶ್ಚ ಅಸೌ ಏಕಾಂತೀ ಚ ಇತಿ ವಾ ಸಮಾಸಃ ॥

(ಶ್ರೀಪಾಂಚರಾತ್ರರಕ್ಷಾಯಾಂ)

ಇದೇ ವಿಷಯವನ್ನು ಶ್ರೀಮಹಾಭಾರತದ ಶಾಂತಿಪರ್ವದ ಮೋಕ್ಷ ಧರ್ಮದಲ್ಲಿಯೂ ಹೀಗೆ ಹೇಳಿದೆ :

ಚತುರ್ವಿಧಾ ಮಮ ಜನಾಃ ಭಕ್ತಾ ಏವ ಹಿ ತೇ ಮತಃ ।
ತೇಷಾಂ ಏಕಾಂತಿನಃ ಶ್ರೇಷ್ಠಾಃ ಯೇ ಚೈವಾನನ್ಯ ದೇವತಾಃ ॥

"ಭಗವಂತನ ಭಕ್ತರಲ್ಲಿ ಐಶ್ವರ್ಯಾರ್ಥಿಯೂ, ಕೈವಲ್ಯಾರ್ಥಿಯೂ, ನಷ್ಟೈಶ್ವ ರ್ಯಾರ್ಥಿಯೂ ಮತ್ತು ಮುಮುಕ್ಷುವೂ ಎಂಬ ನಾಲ್ಕು ಬಗೆಯ ಭಕ್ತ

ರಿದ್ದಾಗ್ಯೂ ಈ ಪೈಕಿ ಬೇರೊಂದು ದೇವತೆಯನ್ನೂ ಚಿಂತಿಸಿದ ಏಕಾಂತಿಗಳು ಮಾತ್ರವೇ ಶ್ರೇಷ್ಠರು"

ಭಗವದ್ಗೀತೆಯು ಈ ಏಕಾಂತೀ (ಏಕಾಯನೀ) ಮಾರ್ಗದ ಉತ್ತಮೋತ್ತಮ ಕೈದೀವಿಗೆಯಾಗಿ ಇಂದಿಗೂ ಬೆಳಗುತ್ತಿದ್ದು ಅಲ್ಲಿ ಭಗವಂತನ "ಜ್ಞಾನೀ ತು ಆತ್ಮೈವ ಮೇ ಮತಂ" (ಅಧ್ಯಾಯ 7) ಇತ್ಯಾದಿ ಸೂಕ್ತಿಗಳೂ ಈ ದೃಢಗ್ರಹಿಕೆಯನ್ನೇ ಸಾರುತ್ತಿವೆ, ಮತ್ತು ಎಲ್ಲ ಆಚಾರ್ಯರುಗಳಿಂದಲೂ, ಶಿಷ್ಟರಿಂದಲೂ ಪರಿಗೃಹೀತವಾಗಿದೆ. ಗೀತೆಯನ್ನೊಪ್ಪಿದವರು ಏಕಾಂತಿಗಳಾಗಿಲ್ಲದೇ ಇರಲು ಶಕ್ಯವೇ ಇಲ್ಲ !

ಯಾನ್ತಿ ದೇವವ್ರತಾ ದೇವಾನ್ ಪಿತೄನ್ ಯಾನ್ತಿ ಪಿತೃವ್ರತಾಃ ।
ಭೂತಾನಿ ಯಾನ್ತಿ ಭೂತೇಜ್ಯಾಃ ಯಾನ್ತಿ ಮದ್ಯಾಜಿನೋಽಪಿ
ಮಾಂ ॥ (IX-25)

ಎಂಬಲ್ಲಿಯೂ,

ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಂ ।
ದೇವಾನ್ ದೇವಯಜೋ ಯಾನ್ತಿ ಮದ್ಭಕ್ತಾ ಯಾನ್ತಿ
ಮಾಮಪಿ ॥ (VII-23)

ಎಂಬಲ್ಲಿಯೂ,

ಯಜನ್ತೇ ಸಾತ್ವಿಕಾ ದೇವಾನ್ ಯಕ್ಷರಕ್ಷಾಂಸಿ ರಾಜಸಾಃ ।
ಪ್ರೇತಾನ್ ಭೂತಗಣಾಂಶ್ಚಾನ್ಯೇ ಯಜನ್ತೇ ತಾಮಸಾ ಜನಾಃ ॥
(XVII-4)

ಎಂಬಲ್ಲಿಯೂ

ಯೋಗಿನಾಂ ಅಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ ।
ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ
ಮತಃ ॥ (VI-47)

ಎಂಬಲ್ಲಿಯೂ

ಈ ಏಕಾಂತೀ ಭಕ್ತಿನಿಷ್ಠೆಯನ್ನೇ ಹೇಳಿದೆಯೆಂದು ಶ್ರೀ ಶಂಕರ ಭಗವತ್ಪಾದರೂ ಹೃದಯಂಗಮವಾಗಿ ವ್ಯಾಖ್ಯಾನ ಮಾಡಿರುವಾಗ, ಉಳಿದ ಆಚಾರ್ಯರ ಬಗೆಗೆ ಹೇಳತಕ್ಕದ್ದೇನೂ ಇಲ್ಲ. ಅನೇಕರು ಶಾಂಕರಭಾಷ್ಯಗಳನ್ನೇ ಓದದೆ ಆಚಾರ್ಯರು 'ಷಣ್ಮತ'ಸ್ಥಾಪಕರೆಂದೂ. ಅವರಿಗೆ ಈ ಏಕಾಂತೀನಿಷ್ಠೆಯಿರಲಿಲ್ಲವೆಂದೂ ಹೇಳುತ್ತಿರುವುದು ದುರದೃಷ್ಟಕರ, ಮತ್ತು ಅಪಪ್ರಚಾರ ಮಾತ್ರ. ಹೀಗೆ ಏಕಾಯನೀ ಮಾರ್ಗವು ಇಂದಿಗೂ ಶಿಷ್ಟಮಾನ್ಯವೇ ಆಗಿದೆ.

## ೨೦ 'ಏಕಾಂತೀ' ಮಾರ್ಗ ಎಂದರೇನು ?

ಗೀತೆಯಲ್ಲಿ, ಮೇಲೆ ಉದಾಹರಿಸಿದ ವಾಕ್ಯಗಳಲ್ಲಿ, ಕ್ಷುದ್ರಪುರುಷಾರ್ಥಗಳಿಗಾಗಿ, ಫಲಗಳಿಗಾಗಿ ನಾನಾ ದೇವತೆಗಳನ್ನೂ, ಭೂತ ಪ್ರೇತ ಪಿಶಾಚ ಯಕ್ಷಾದಿಗಳನ್ನೂ ಉಪಾಸಿಸುವುದನ್ನು ರಾಜಸ, ತಾಮಸವೆಂದು ಕರೆದು, ಸರ್ವ ದೇವತಾತ್ಮಕನೂ, ಸರ್ವವೇದಾಂತವೇದ್ಯನೂ, ಏಕವೇವಾದ್ವಿತೀಯನೂ ಆದ ಶ್ರೀಕೃಷ್ಣ (ಶ್ರೀಮನ್ನಾರಾಯಣ)ನೊಬ್ಬನನ್ನೇ ಉಪಾಸಿಸುವಂತೆ ಹೇಳಿದ ಮಾರ್ಗಕ್ಕೇ ಏಕಾಂತೀ ಮಾರ್ಗವೆನ್ನುತ್ತಾರೆ. ಆ ಭಗವಂತನನ್ನೇ ಉಪಾಸಿಸಿದರೂ, ಅರ್ಥಕಾಮಪ್ರಾಪ್ತಿಗಾಗಿಯೋ, ದೇಹಾತಿರಿಕ್ತ ಆತ್ಮಾನುಭೂತಿಯೆಂಬ ಕೈವಲ್ಯ ಸುಖಕ್ಕಾಗಿಯೋ ಅಲ್ಲದೆ "ವಾಸುದೇವಸ್ಸರ್ವ ಮಿತಿ", "ನನಗೆ ಎಲ್ಲವೂ ವಾಸುದೇವನೇ— ಫಲವೂ ಅವನೇ, ಪ್ರಾಪ್ತಿಯೂ ಅವನೇ, ಉಪಾಯವೂ ಅವನೇ" ಎಂಬ ನಿಶ್ಚಯದ ರೀತಿಯ ಭಕ್ತಿಯನ್ನು ಜ್ಞಾನರೂಪವನ್ನು, ಉಳ್ಳವನನ್ನು "ಏಕಭಕ್ತಿ"ಯವನೆಂದು ಕರೆದಿರುವುದರಲ್ಲಿ ಮರ್ಮವಿದೆ.

ತೇಷಾಂ ಜ್ಞಾನೀ ನಿತ್ಯಯುಕ್ತಃ ಏಕಭಕ್ತಿಃ ವಿಶಿಷ್ಯತೇ ॥

(ಅಧ್ಯಾಯ VII)

ಯಾವನು ಮೋಕ್ಷಫಲದ ಜೊತೆಗೆ ಇತರ ಪುರುಷಾರ್ಥಗಳನ್ನೂ

ಭಗವಂತನಿಂದ ಮಾತ್ರವೇ ಅಪೇಕ್ಷಿಸುವನೋ ಅವನು ಏಕಾಂತೀ ಎಂದೂ, ಯಾವನು ಆ ಭಗವಂತನಲ್ಲೂ ಭಕ್ತಿ, ಜ್ಞಾನಗಳಲ್ಲದೆ, ಬೇರಾವುದನ್ನೂ ಯಾಚಿಸುವುದಿಲ್ಲವೋ ಅವನು ಪರಮೈಕಾಂತೀ ಎಂದೂ ಈ ಶಬ್ದಗಳ ಮರ್ಯಾದೆಯುಂಟು :

ಯೋ ಮೋಕ್ಷಫಲೇನ ಸಾಕಂ ಫಲಾಂತರಾಣ್ಯಪಿ ಭಗವತ ಏವೇಚ್ಛತಿ ಸ ಏಕಾಂತೀ, ದೇವತಾಂತರ ಶೂನ್ಯ ಇತ್ಯರ್ಥಃ ।

ಭಕ್ತಿಜ್ಞಾನಾಭ್ಯಾಂ ಅನ್ಯತ್ ಫಲಂ ಭಗವತೋಽಪಿ ಯೋ ನೇಚ್ಛತಿ, ಸ ಪರಮೈಕಾಂತೀ ॥

(ಶ್ರೀನಿವಾಸಾಚಾರ್ಯರ ಯತೀಂದ್ರಮತದೀಪಿಕೆಯಲ್ಲಿ)

ಇಬ್ಬರಿಗೂ ಶ್ರೀವಾಸುದೇವನಲ್ಲದೆ ಬೇರೆ ದೇವತಾಂತರಗಳ ಸಂಬಂಧವಿಲ್ಲದಿರುವುದು ಮುಖ್ಯ; ಗಮನೀಯ. ಈ ಏಕಾಂತೀ ಮಾರ್ಗದ ಬಹು ಪ್ರಾಚೀನ ಕೈದೀವಿಗೆಯೇ ಈಗ ನಷ್ಟವಾಗಿರುವ ಏಕಾಯನ ಶಾಖೆಯ ವೇದ. "ಮೋಕ್ಷೈಕ ಫಲಲಕ್ಷಣಂ" ಎಂದು ಪಾರಮೇಶ್ವರ ಸಂಹಿತೆಯಲ್ಲಿ ಇದನ್ನು ವರ್ಣಿಸಿದೆ. ಈ ವೇದಭಾಗವನ್ನು ಭಗವಂತನೇ ಮೊದಲು ಲಕ್ಷ್ಮೀದೇವಿಗೆ ಉಪದೇಶಿಸಿದನೆಂದೂ, ಆಮೇಲೆ ಇತರರು, ಸನಕ, ಶಾಂಡಿಲ್ಯ, ಏಕತ, ನಾರದ ಮೊದಲಾದವರು ಅದನ್ನು ಉಪದೇಶ ಕ್ರಮದಲ್ಲಿ ಪಡೆದುಕೊಂಡರೆಂದೂ ಹೇಳಿದೆ. ಈ ಏಕಾಯನವೇ ಮುಂದೆ ಪೌಷ್ಕರ, ಸಾತ್ವತ, ಜಯಾಖ್ಯ, ಅಹಿರ್ಬುಧ್ನ್ಯ ಮೊದಲಾದ ಸಂಹಿತೆಗಳ ರೂಪದಲ್ಲಿ ಪ್ರಚುರವಾದುದರಿಂದ ಇವೆಲ್ಲ ಏಕಾಂತೀ ಮಾರ್ಗದ ಧರ್ಮಗ್ರಂಥಗಳೇ ಆಗಿವೆ. ಇದನ್ನು ಪಾಂಚರಾತ್ರಶ್ರುತಿಯೆಂದೂ, ಪಾಂಚರಾತ್ರೋಪನಿಷತ್ತೆಂದೂ, ಏಕಾಯನವೇದವೆಂದೂ, ಶ್ರೀವೈಷ್ಣವರಲ್ಲದೆ ಬೇರೆಯವರೂ ಹೀಗೆ ವ್ಯವಹರಿಸುವುದರಿಂದ ಇವುಗಳಿಗೂ ವೇದಕ್ಕೂ ಇರುವ ಸಂಬಂಧ ಸ್ಪಷ್ಟವಾಗುತ್ತದೆ.

## ೨೧ ಪಾಂಚರಾತ್ರ ಎಂಬ ಹೆಸರೇಕೆ ?

ಹಾಗಾದರೆ ಪಂಚರಾತ್ರ (ಪಾಂಚರಾತ್ರ)ವೆಂಬ ಹೊಸ ಹೆಸರು ಈ ಆಗಮಕ್ಕೆ ಏಕೆ, ಹೇಗೆ ಬಂದಿತೆಂದರೆ, ಈ ಪ್ರಶ್ನೆಗೆ ವಿಧವಿಧವಾದ ಉತ್ತರ ವಿದೆ.

1) ಭಗವಂತನಾದ ಶ್ರೀಮನ್ನಾರಾಯಣನು ತನ್ನನ್ನೇ ತಾನು ಯಜ್ಞದಲ್ಲಿ ಅರ್ಪಿಸಿಕೊಂಡು ಹೊಸಸೃಷ್ಟಿಯಲ್ಲಿ ನಿತ್ಯನೂತನತೆಯನ್ನು ಒಯಸಿ ಮಾಡಿದ ಈ ಪುರುಷಯಜ್ಞವು ಐದು ರಾತ್ರಿವರೆಗೆ ನಡೆದದ್ದರಿಂದ ಈ ಹೆಸರು ಬಂದಿತೆಂದು ಶತಪಥ ಬ್ರಾಹ್ಮಣದಲ್ಲಿ ಹೇಳಿದೆ. ಇದಕ್ಕೆ ಪುರುಷ ಸೂಕ್ತವೂ ಪ್ರಮಾಣ. ಅಂದರೆ ಯಜ್ಞತತ್ತ್ವವು ವೇದದ ಹೃದಯವಾಗಿರುವಂತೆ, ಆಗಮದ ಹೃದಯವೂ ಆಗಿದೆ ಎಂಬುದು ಈ ಪ್ರಯೋಗದಲ್ಲಿ ಹೇಳ ಹೊರಟ ವಿಷಯ. ಅದರಿಂದಲೇ ಪಾಂಚರಾತ್ರಯಜ್ಞ ಎಂಬ ನಿರ್ದೇಶವೂ ಬಂದಿದೆ. "ದೇವರೇ ಇದೆಲ್ಲ"— "ಪುರುಷ ಏವೇದಂ ಸರ್ವಂ" ಎಂಬ ಪಾಂಚರಾತ್ರದ (ಪುರುಷ ಸೂಕ್ತದ) ಮೂಲ ಗ್ರಹಿಕೆಯೇ, ಮುಂದೆ ಶಾಂಡಿಲ್ಯರಿಂದಲೂ "ಸರ್ವಂಖಲ್ವಿದಂ ಬ್ರಹ್ಮ" ಎಂಬ ಶಾಂಡಿಲ್ಯವಿದ್ಯೆಯಲ್ಲಿ ಕಂಡುಕೊಳ್ಳಲ್ಪಟ್ಟು, ಛಾಂದೋಗ್ಯ ಉಪನಿಷತ್ತಿನ ಬ್ರಹ್ಮವಿದ್ಯೆಗಳಲ್ಲಿ ಉಕ್ತವಾಯಿತು. ಪಂಚ ರಾತ್ರಪ್ರವರ್ತಕರಲ್ಲೊಬ್ಬರಾದ ಇವರು ವೇದಗಳ ಇತರ ಭಾಗಗಳಲ್ಲಿ ಕಾಣದ ಶಾಂತಿಯನ್ನು ಈ ವಿದ್ಯೆಯಲ್ಲಿ ಪಾಂಚರಾತ್ರದಲ್ಲಿ ಕಂಡುಕೊಂಡರೆಂದು ಹೇಳಿರುವುದು ಹೀಗೆ ಸಮಂಜಸವಾಗಿದೆ.

2) ಇತರ ಐದು ಶಾಸ್ತ್ರಗಳು— ಸಾಂಖ್ಯ, ಯೋಗ, ಪಾಶುಪತ, ಮೊದಲಾದವು— ಯಾವ ಪಾಂಚರಾತ್ರದ ತೇಜಸ್ಸಿನಲ್ಲಿ ಮುಳುಗಿ ಹೋಗು ವುವೋ— ಆದುದರಿಂದ ಇದು ಪಾಂಚರಾತ್ರ ಎಂಬುದು ಇನ್ನೊಂದು ವಿವರಣೆ.

ಪಂಚೇತರಾಣಿ ಶಾಸ್ತ್ರಾಣಿ ರಾತ್ರೀಯಂತೇ ಮಹಾನ್ತ್ಯಪಿ ।
ತತ್ಸನ್ನಿಧೌ ಸಮಾಖ್ಯಾಸೌ ತೇನ ಲೋಕೇ ಪ್ರವರ್ತತೇ ॥

3) ಪರಮಾತ್ಮನನ್ನು ಪರ, ವ್ಯೂಹ, ಅರ್ಚೆ, ವಿಭವ, ಅಂತರ್ಯಾಮಿ ರೂಪಗಳಲ್ಲಿ ಸಾಕ್ಷಾತ್ಕರಿಸುವ ಶಾಸ್ತ್ರವಾಗಿ ಸಮಗ್ರವಾದುದರಿಂದ ಪಂಚರಾತ್ರ ಎಂದು ಇನ್ನೊಂದು ವಿವರಣೆ. ತನ್ನ ಈ ಐದು ಉಪಾಸ್ಯರೂಪಗಳನ್ನು ತಾನೇ ಉದ್ಧರಿಸಿ ಈ ಶಾಸ್ತ್ರದಲ್ಲಿ ಭಗವಂತನೇ ಲೀನಗೊಳಿಸಿ, ಸೃಷ್ಟಿಸಿದ ಶಾಸ್ತ್ರವಾದುದರಿಂದ ಈ ಹೆಸರೆಂದು ಇಲ್ಲಿ ವಿವರಣೆ.

4) ಅತ್ರಿ, ಭೃಗು, ಮರೀಚಿ ಮೊದಲಾದ ಐವರು ಶಿಷ್ಯರಿಗೆ ಐದು ರಾತ್ರಿಗಳಲ್ಲಿ ಉಪದಿಷ್ಟವಾದ ಶಾಸ್ತ್ರವಾದ್ದರಿಂದ ಈ ಹೆಸರು ಬಂದಿತೆಂದು ಮತ್ತೊಂದು ವಿವರಣೆ. (ರಾತ್ರಿ ಎಂದದ್ದು ಹಗಲನ್ನೂ ಕೂಡಿಸಿ 'ದಿನ' ಎಂಬರ್ಥದಲ್ಲಿ ಹೇಳಿದ್ದು; ಇದನ್ನು ಗಮನಿಸದೇ ಇಲ್ಲಿ ಕತ್ತಲೆಯ ಉಪಾಸನೆ ಇದೆಯೆಂದು ಕುತರ್ಕಮಾಡಲು ಅವಕಾಶವಿಲ್ಲ. ದೇವರಿಗೆ ಸಾವಿರ ಮುಖಗಳೆಂದಂತೆ, ಇಲ್ಲೂ ಗಣಿತ ರೀತಿಯ ವಾಚ್ಯಾರ್ಥವನ್ನು ಗಣಿಸಬಾರದು.)

5) ದಿವಸಮಾನವನ್ನು (ಹಗಲೂ ರಾತ್ರಿಗಳನ್ನು ಕೂಡಿಸಿ) ಅಭಿಗಮನ, ಉಪಾದಾನ, ಇಜ್ಯಾ, ಸ್ವಾಧ್ಯಾಯ, ಯೋಗ ಎಂಬ ಐದು ಪವಿತ್ರ ಕಾರ್ಯಗಳಿಗಾಗಿ ವಿಭಾಗಿಸಿ, ಜೀವನವನ್ನು ಇಡೀ ಯಜ್ಞವನ್ನಾಗಿ ಬೋಧಿಸಿದ ಶಾಸ್ತ್ರವಾದ್ದರಿಂದ ಪಾಂಚರಾತ್ರ ಎಂದು ಮತ್ತೂ ಒಂದು ವಿವರಣೆ.

ಹೀಗೆ ಇನ್ನೂ ವಿವರಣೆಗಳನೇಕ ಉಂಟು. ಇವು ಅಷ್ಟು ಮುಖ್ಯವಲ್ಲ. ವೇದದ ಹೃದಯವೇ ಸಾಮಾನ್ಯರಿಗೂ ಎಟುಕುವಂತೆ, ದಿನ ಜೀವನಕ್ಕೆ ಯುಗಭೇದದಿಂದ ಅಳವಡಿಸಲ್ಪಟ್ಟು, ನಿತ್ಯೋಪಯುಕ್ತವಾಗಿ ನಿರೂಪಗೊಂಡುದರಿಂದ ವೇದದಷ್ಟೇ ಪ್ರಾಶಸ್ತ್ಯ ಇದಕ್ಕೂ ಇರುವುದು ಪ್ರಸಿದ್ಧ. ಹಾಗೆ ನೋಡಿದರೆ ಇಂದಿಗೂ ವೇದಧರ್ಮವೂ ದರ್ಶನವೂ ಪಾಂಚರಾತ್ರ ರೂಪದಲ್ಲಿ ಉಳಿದಿರುವಂತೆ ಬೇರಾವ ರೂಪದಲ್ಲೂ ಉಜ್ಜ್ವಲವಾಗಿ ಉಳಿದಿಲ್ಲದುದೂ ಕಣ್ಣಿಗೇ ಕಾಣುತ್ತಿದೆ.

## ೨೨ ಏಕತ, ದ್ವಿತ, ತ್ರಿತರು ಯಾರು ?

### (ವೇದಾಗವುಗಳ ಇನ್ನೊಂದು ಸಂಬಂಧ)

ಅನಾದಿಕಾಲದಲ್ಲಿ ಪರಮಾತ್ಮನು ಈ ಏಕಾಯನವೇದವನ್ನು ತನ್ನ ಪತ್ನಿಯಾದ ಲಕ್ಷ್ಮೀದೇವಿಗೆ ಉಪದೇಶ ಮಾಡಿದುದಾಗಿಯೂ, ಆದನ್ನವಳು ಏಕತನೆಂಬ ಮಹರ್ಷಿಗೆ ಉಪದೇಶ ಮಾಡಿದುದಾಗಿಯೂ ಹೀಗೆ ಏರ್ಪಟ್ಟ ಪರಂಪರೆಯನ್ನು ಪ್ರಶ್ನಸಂಹಿತೆಯು ಈ ರೀತಿ ವರ್ಣಿಸುತ್ತದೆ,

ನಮಃ ಶ್ರೀವಾಸುದೇವಾಯ ಸಚ್ಚಿದಾನಂದ ಮೂರ್ತಯೇ ।
ಏಕಾಯನತ್ರಯೀಂ ಯಸ್ತಾಂ ಉಪಾದಿಕ್ಷತ್ ಶ್ರಿಯೈ ಪ್ರಭುಃ ॥
ನಮಃ ಶ್ರೀವತ್ಸವಾಸಿನ್ಯೈ ಯೂ ಜಗತ್ ಕ್ಷೇಮಹೇತವೇ ।
ಏಕಾಯನಂ ಉಪಾದಿಕ್ಷತ್ ಏಕತಾಯ ಮಹಾತ್ಮನೇ ॥

ಈ ಏಕತರೆಂಬ ಋಷಿಗಳು ಯಾರು ? ಎಂದು ಹುಡುಕಿ ನೋಡಿದಾಗ, ಶ್ರೀಮಹಾಭಾರತದ ಶಾಂತಿಪರ್ವದಲ್ಲಿ ಬರುವ ನಾರಾಯಣೀಯವೆಂದು ಖ್ಯಾತವಾದ ಭಾಗದಲ್ಲಿ, ಈ ವಿವರ ಸಿಗುತ್ತದೆ.

ಈ ಏಕಾಯನವನ್ನು ಶ್ವೇತದ್ವೀಪವಾಸಿಗಳಿಂದ ನಾರದರು ಹಿಂದೆ ಅಧ್ಯಯನ ಮಾಡಿದುದಾಗಿಯೂ, ಅವರಿಂದ ಮುಂದೆ ಇದು ವಿಶೇಷವಾಗಿ ಈ ಲೋಕದಲ್ಲಿ ಪ್ರಚಾರಕ್ಕೆ ಬಂದಿತೆಂದೂ ಹೇಳುವ ಸಂದರ್ಭದಲ್ಲಿ, ಈ ಏಕತರಲ್ಲದೆ, ದ್ವಿತ ಮತ್ತು ತ್ರಿತರೆಂಬ ಇನ್ನಿಬ್ಬರು ಋಷಿಗಳ ಹೆಸರುಗಳೂ ಉಲ್ಲಿಖಿತವಾಗಿದೆ. ಇವರು ಪ್ರಜಾಪತಿಯ ಮೂವರು ಪುತ್ರರೆಂದೂ, ಉಪರಿಚರವಸುವಿನ ಯಜ್ಞದಲ್ಲಿ ಭಗವಂತನು ಪ್ರತ್ಯಕ್ಷನಾಗಿ ಕಾಣದೇ, ಪರೋಕ್ಷವಾಗಿಯೇ ಹವಿಃಸ್ವೀಕಾರ ಮಾಡಿದುದರಿಂದ ಕೋಪಗೊಂಡ ಬೃಹಸ್ಪತಿಯನ್ನು ಸಮಾಧಾನಪಡಿಸಲು ಆ ಬೃಹಸ್ಪತಿಗೆ ಅಲ್ಲಿ ಸದಸ್ಯರಾಗಿದ್ದ ಈ ಮೂವರೂ ಋಷಿಗಳು ಯತ್ನಿಸಿದರೆಂದೂ ಅಲ್ಲಿ ಹೇಳಿದೆ.

ಈ ಉಪರಿಚರವಸುವು ಚಿತ್ರಶಿಖಂಡಿಗಳೆಂಬ ಸಪ್ತರ್ಷಿಗಳಿಂದ ತಂತ್ರ

ಶಾಸ್ತ್ರವನ್ನು (ಪಂಚರಾತ್ರವನ್ನು) ಚೆನ್ನಾಗಿ ಅರಿತಿದ್ದು, ಮಹಾಭಾಗವತೋತ್ತಮನಾಗಿದ್ದು, ಪಶುವಧೆಯಿಲ್ಲದೆಯೇ ಮಾಡಲೆಳಸಿದ ಅಶ್ವಮೇಧ ಯಾಗವದು. ಮಹಾಮಹಾ ಜ್ಞಾನಿಗಳಾದ ರೈಭ್ಯ, ಅರ್ವಾವಸು. ಮೇಧಾತಿಥಿ, ತಾಂಡ್ಯ, ಆದ್ಯಕಠ, ತೈತ್ತಿರಿ, ಕಣ್ವಾದಿಗಳೆಲ್ಲ ಅಲ್ಲಿ ಋತ್ವಿಜರಾಗಿದ್ದರು. ಪಶುವಧೆಯಾಗಬಾರದೆಂಬ ನಿಶ್ಚಯದಿಂದಲೇ ರಾಜನು ಯಾಗವನ್ನು ಕೈಗೊಂಡನು. ವನ್ಯ ಕಂದ ಮೂಲಫಲಗಳೇ ಹವಿಸ್ಸುಗಳಾಗಿ ಏರ್ಪಟ್ಟಿದ್ದವು. ಶ್ರೀಮನ್ನಾರಾಯಣನು ಸುಪ್ರೀತನಾದನು. ಉಪರಿಚರನೊಬ್ಬನಿಗೆ ಮಾತ್ರ ದರ್ಶನವನ್ನಿತ್ತು ಉಳಿದವರಿಗೆ, ಬೃಹಸ್ಪತಿಗೂ ಸಹ ಅವನು ಅದೃಶ್ಯನಾಗಿದ್ದನು ! ಹಯಗ್ರೀವಮೂರ್ತಿಯ ರೂಪದಲ್ಲೇ ಬಂದು ಹವಿಃಸ್ವೀಕಾರ ಮಾಡಿದ್ದನ್ನು ಉಪರಿಚರನು ಕಂಡರೂ, ಬೃಹಸ್ಪತಿಗೆ ಕಾಣದ್ದರಿಂದ (ಹವಿಸ್ಸನ್ನು ಬೇರಾರೋ ಅಪಹರಿಸಿದರೆಂದು ತಿಳಿದು) ಕ್ರುದ್ಧನಾದನು. ದೇವರೇ ತನಗೂ ಕಾಣಿಸಿಕೊಂಡು ಸ್ವೀಕರಿಸಬೇಕೆಂದು ಹಠಮಾಡಿದನು. "ಉಳಿದ ದೇವತೆಗಳೆಲ್ಲ ಪ್ರತ್ಯಕ್ಷವಾಗಿ ಬರುವಾಗ, ಈ ವಿಷ್ಣುವಿನದೇನು ವಿಶೇಷ ?" ಎಂದು ಅವನ ಕೋಪ.

ಆಗ ಈ ಏಕತ, ದ್ವಿತ, ತ್ರಿತರು, ಅಲ್ಲಿದ್ದವರು, ತಮ್ಮದೊಂದು ಅನುಭವವನ್ನು ಹೇಳುತ್ತಾರೆ. ತಾವು ಹಿಂದೆ ಶ್ರೀಮನ್ನಾರಾಯಣನನ್ನು ಸಂದರ್ಶಿಸಲು ದೀರ್ಘತಪಸ್ಸನ್ನು ಮೇರುವಿಗೆ ಉತ್ತರದಲ್ಲಿ, ಕ್ಷೀರಾಬ್ಧಿಯ ಬಳಿ ಮಾಡಿದರಂತೆ. ಹಾಗೆ ಸಾವಿರ ವರ್ಷಗಳು ಕಳೆದಮೇಲೆ ಅಶರೀರವಾಣಿಯೊಂದು ಅವರು ಕ್ಷೀರಾಬ್ಧಿಯ ಉತ್ತರಕ್ಕಿರುವ ಶ್ವೇತದ್ವೀಪಕ್ಕೆ ಹೋಗಿ, ಅಲ್ಲಿನ ನಿವಾಸಿಗಳಾದ ಮಹಪುರುಷರಂತೆ, ವ್ಯಾಪಕನಾದ ಭಗವಂತನಲ್ಲಿ ಪ್ರವೇಶಿಸಿ ದರ್ಶನ ಪಡೆಯಬಹುವುದೆಂದು ಹೇಳಿದಂತೆ, ಅಲ್ಲೇ ಹೋಗಿ ತಪಸ್ಸು ಮಾಡಿ ಪ್ರತ್ಯಕ್ಷ ಮಾಡಿಕೊಳ್ಳಲು ಯತ್ನಿಸಿದರಂತೆ. ಆ ತಪಸ್ಸಿನ ಪ್ರಕಾರವನ್ನೂ, ಶ್ವೇತದ್ವೀಪದ ವೈಭವವನ್ನೂ, ಅಲ್ಲಿನ ನಿವಾಸಿಗಳ ಭಕ್ತಿಯನ್ನೂ, ಸ್ತೋತ್ರ ವೈಖರಿಯನ್ನೂ, ಭಗವಂತನು ಅಲ್ಲಿನ ನಿವಾಸಿಗಳಿಗೆ ಮಾತ್ರ ಕರುಣಿಸಿದ್ದ ತನ್ನ ದಿವ್ಯಸ್ವರೂಪವನ್ನೂ, ಆ ಸ್ವರೂಪದ ಅದೃಶ್ಯ ಅದ್ಭುತ ರೀತಿಯನ್ನೂ ಅಲ್ಲಿ ಬೃಹಸ್ಪತಿಗೆ ವಿವರಿಸಿ, ಕೋಪತಾಪಗಳಿದ್ದವನಿಗೆ ದೇವರು

ಪ್ರತ್ಯಕ್ಷನಾಗುವುದಿಲ್ಲವೆನ್ನುತ್ತಾರೆ. ತಮಗೇ ಅಷ್ಟು ಸಾಹಸ ಪಟ್ಟವರಿಗೇ ಕಾಣ ದವನು ಕೋಪಿಷ್ಠರಿಗೆ ಹೇಗೆ ಕಾಣುವನು ? ಎಂದು ಹೇಳಿ ಇಂದ್ರಿಯನಿಗ್ರ ಹಾವಶ್ಯಕತೆಯನ್ನು ಬೃಹಸ್ಪತಿಗೆ ಮನದಟ್ಟು ಮಾಡಿಕೊಡುತ್ತಾರೆ.

ಈ ಏಕತ, ದ್ವಿತ, ತ್ರಿತರ ಪ್ರಸ್ತಾಪವು ತೈತ್ತಿರೀಯ ಯಜುಸ್ಸಂಹಿತೆ ಯಲ್ಲಿಯೂ ಬರುವುದರಿಂದ ಮತ್ತು ಅವರ ಉತ್ಪತ್ತಿ ವೃತ್ತಾಂತವು ಮಾರ್ಮಿ ಕವಾಗಿರುವುದರಿಂದ ವೇದ ಮತ್ತು ಆಗಮಗಳಲ್ಲಿ ಯಾವ ವ್ಯತ್ಯಾಸವನ್ನೂ ಕಾಣುವಂತಿಲ್ಲ. ಈಗ ಈ ವೇದಸಂದರ್ಭದ ಏಕತ, ದ್ವಿತ, ತ್ರಿತರ ಮರ್ಮ ವನ್ನು ಅರಿಯೋಣ.

## ೨೩ ಈ ಬಗೆಗೆ ಒಂದು ವೈದಿಕ ಐತಿಹ್ಯ

ತೈತ್ತಿರೀಯ ಸಂಹಿತೆಯಲ್ಲಿ (I–1–8) ಇವರ ಪ್ರಸ್ತಾಪ ದರ್ಶಪೂರ್ಣ ಮಾಸಯಾಗದ ಸಂಬಂಧದಲ್ಲಿ ಬರುವುದಾದುದರಿಂದ ಈ ಯಾಗಕ್ಕೂ, ಶ್ವೇತದ್ವೀಪವೃತ್ತಾಂತಕ್ಕೂ ಏನು ಸಂಬಂಧವೆಂಬುದು ಸುಲಭವಾಗಿ ತಿಳಿಯು ವಂತಿಲ್ಲವಾದರೂ, ವೇದಪುರುಷನಿಗೆ ಇಲ್ಲಿ ಒಂದು ಸಂಬಂಧವು ಕಂಡೇ ಇರ ಬೇಕಲ್ಲವೇ ? ತೈತ್ತಿರೀಯ ಬ್ರಾಹ್ಮಣದಲ್ಲೂ ಇವರ ಪ್ರಸ್ತಾಪ ಬರುತ್ತದೆ. ಋಕ್ಸಂಹಿತೆಯಲ್ಲಿ ತ್ರಿತರೆಂಬುವರಿಂದ ದೃಷ್ಟವಾದ ಹಲವಾರು ಮಂತ್ರಗಳೂ ಇವೆಯಾಗಿ, ಈ ಹೆಸರುಗಳು ಕಲ್ಪಿತವಂತೂ ಅಲ್ಲ ! ಈ ಋಷಿಗಳ ಬಗೆಗಿನ ಇತಿಹಾಸವನ್ನು ಅರಿತರೆ ಇಲ್ಲಿನ ಮರ್ಮವು ಬಗೆಹರಿಯುತ್ತದೆ.

ತೈತ್ತಿರೀಯ ಸಂಹಿತೆಯ ಸಂದರ್ಭದ ಮಂತ್ರಗಳು ಹೀಗಿವೆ :

“ಸಂವಪಾಮಿ ಸಮಾಪೋ ಅದ್ಭಿರಗ್ಮತ ಸಮೋಷಧಯೋ ರಸೇನ... ಏಕತಾಯಸ್ವಾಹಾ, ದ್ವಿತಾಯ ಸ್ವಾಹಾ, ತ್ರಿತಾಯ ಸ್ವಾಹಾ ॥”

ಹವಿಸ್ಸನ್ನು (ಪುರೋಡಾಶವೆಂಬ ಬೇಯಿಸಿದ ಹಿಟ್ಟನ್ನು) ಪಾತ್ರೆಯಲ್ಲಿ ಹಾಕುವಾಗ ಪಂದರಿಯಲ್ಲಿ ಶೋಧಿಸುತ್ತಾ, ಹವಿಸ್ಸನ್ನು ನೀರಿನೊಡನೆ ಕೂಡಿ ಸುವಾಗ ಪಠಿಸುವ ಮಂತ್ರಗಳಿವು. ಈ ಯಜ್ಞಾಂಗಗಳಿಗೆಲ್ಲ ಸಾಂಕೇತಿಕಾರ್ಥ ಗಳಿದ್ದರೂ ಅವು ಬಹುಸೂಕ್ಷ್ಮಾತ್ ಸೂಕ್ಷ್ಮತರಗಳೂ ಆಗಿದ್ದು ಕೆಲವೇ ಮಾತುಗಳಲ್ಲಿ ಯಜ್ಞದ ಹಿನ್ನೆಲೆಯೇ ಇಲ್ಲದವರಿಗಾಗಿ ವಿವರಿಸುವುದು ಬಹು ಕಠಿಣ. "ಪುರೋಽಡಾಶವೆಂಬುದು ಪಶುವಿನ ಪ್ರತಿಮೆಯಾಗಿದ್ದು ಬಲಿ ಸಂಕೇತವಾಗಿರುತ್ತದೆ." ಎಂದು ಬ್ರಾಹ್ಮಣ ಭಾಗದಲ್ಲಿ ಹೇಳಿದೆ. (ಈ ಬ್ರಾಹ್ಮಣ ಭಾಗದಲ್ಲೇ ನಮಗೆ ಮುಖ್ಯವಾದ ಇತಿಹಾಸವೂ ಇದೆಯಾಗಿ ಮುಂದ ನೋಡೋಣ.) ಪಶುವೆಂದರೆ (ಯಜಮಾನನ) ಪ್ರಾಣವೇ ಎಂದೂ ಅಲ್ಲಿ ಹೇಳಿದೆ. ಶ್ರೀಸಾಯಣರು ಈ ಸಂಹಿತಾಭಾಗಕ್ಕೆ ಭಾಷ್ಯ ಬರೆಯು ವಾಗ, ಇದರ ಬ್ರಾಹ್ಮಣ ಭಾಗವನ್ನು (III–2–8) ಉದ್ಧರಿಸಿ, ಸೇರಿಸಿಯೇ ವ್ಯಾಖ್ಯಾನ ಮಾಡಿದ್ದಾರೆ. ಆ ಬ್ರಾಹ್ಮಣಭಾಗ ಹೀಗೆ ಆರಂಭವಾಗು ತ್ತದೆ : "ಪೇದೇನಾಭಿವಾಸಯತಿ।... ಪಶವೋ ವೈ ಪ್ರತಿಮಾ ಪುರೋ ಡಾಽಶಃ।... ಪ್ರಾಣಾಃ ಪಶವಃ..."

ಇಲ್ಲಿನ ಐತಿಹ್ಯ ಹೀಗಿದೆ :

"ದೇವಾ ವೈ ಹವಿರ್ಭೂತ್ವಾಽಬ್ರುವನ್। ಕಸ್ಮಿನ್ ಇದಂ ಮ್ರಕ್ಷ್ಯಾಮ ಇತಿ। ಸೋಽಗ್ನಿರಬ್ರವೀತ್। ಮಯಿ ತನೂಃ ಸಂನಿ ದಧ್ವಂ। ಅಹಂ ವಃ ತಂ ಜನಯಿಷ್ಯಾಮಿ। ಯಸ್ಮಿನ್ ಮ್ರಕ್ಷ್ಯಧ್ವ ಇತಿ। ತೇ ದೇವಾ ಅಗ್ನೌ ತನೂಃ ಸಂನ್ಯದಧತ। ತಸ್ಮಾದಾಹುಃ। ಅಗ್ನಿಃ ಸರ್ವಾ ದೇವತಾ ಇತಿ। ಸೋಽಂಗಾರೇಣಾಪಃ। ಅಭ್ಯಪಾತ ಯತ್। ತತ ಏಕತೋಽಜಾಯತ। ಸ ದ್ವಿತೀಯಮಭ್ಯಪಾತ ಯತ್। ತತೋ ದ್ವಿತೋಽಜಾಯತ। ಸ ತೃತೀಯಮಭ್ಯಪಾತ ಯತ್। ತತಸ್ತ್ರಿತೋಽ ಜಾಯತ। ಯದದ್ಭ್ಯೋಽ ಜಾಯಂತ। ತದಾಪಾನಾಂ ಆಪ್ತ್ಯತ್ವಂ। ಯದಾತ್ಮಭ್ಯೋಽ ಜಾಯನ್ತ। ತದಾ ತ್ಮ್ಯಾನಾಂ ಆತ್ಮ್ಯತ್ವಂ। ತೇ ದೇವಾ ಆಪ್ತ್ಯೇಷ್ವಮೃಜತ। ಆಪ್ತ್ಯಾ

ಅಮ್ಯೃಜತ ಸೂರ್ಯಾಭ್ಯುದಿತೇ । ಸೂರ್ಯಾಭ್ಯುದಿತಃ । ಸೂರ್ಯಾಭಿನಿಮ್ರುಕ್ತೇ।... ಇತ್ಯಾದಿ.

ಇದರರ್ಥ: ಪೂರ್ವದಲ್ಲಿ ದೇವತೆಗಳು ಯಾಗಮಾಡಲೆಳಸಿ ಭತ್ತ ಮೊದಲಾದ ಧಾನ್ಯಗಳನ್ನು ಸಂಪಾದಿಸಿ, ಕುಟ್ಟಿ ಹವಿಸ್ಸನ್ನು ಸಿದ್ಧಪಡಿಸಿಕೊಂಡರು. ಆದರೆ ಭತ್ತವನ್ನು ಕುಟ್ಟಿದ್ದರಿಂದ ಬೀಜವಧೆಯ ಪಾಪ ಅಂಟಿಕೊಂಡಿತು. (ಪಶುವಧೆ ಬೇಡವೆಂದು ಹಿಂಸಾರಹಿತಯಾಗವನ್ನು, ಉಪರಿಚರವಸುವು ಮಾಡಿದಂತೆ, ತೊಡಗಿದರೂ, ಬೀಜಗಳನ್ನಾದರೂ ಅಲ್ಲಿ ಉಪಯೋಗಿಸಬೇಕಾಗುವುದರಿಂದ, ಇಷ್ಟುಮಾತ್ರವಾದರೂ ಹಿಂಸೆಯ ಪಾಪವನ್ನು ತೊಳೆದುಕೊಳ್ಳುವುದು ಹೇಗೆಂದು ಯೋಚಿಸಿದರು.) ಈ ಪಾಪವನ್ನು ಹೇಗೆ ಕಳೆದುಕೊಳ್ಳುವುದೆಂದು ಯೋಚಿಸುತ್ತಿದ್ದಾಗ, ಅಗ್ನಿ ದೇವನು ಅವರನ್ನು ಕುರಿತು ಹೇಳಿದನು: "ನನ್ನಲ್ಲಿ ನಿಮ್ಮ ಶರೀರಗಳನ್ನು— ಸತ್ತ್ವ, ವೀರ್ಯ, ಬಲ, ಪ್ರಾಣಗಳನ್ನು– ನನ್ನಲ್ಲಿಡಿರಿ. ನಾನು ನಿಮ್ಮನ್ನು (ಈ ಪಾಪ ಕಳೆದು) ಪುನಃ (ಶುದ್ಧರಾಗಿ) ಹುಟ್ಟಬರುವಂತೆ ಮಾಡುತ್ತೇನೆ"ಎಂದು. (ಅಂದರೆ ದೇವತೆಗಳಿಗೂ 'ಅಗ್ನಿಪ್ರವೇಶ'ದಿಂದ ಪುನರ್ಜನ್ಮವುಂಟೆಂದು ಹೇಳಿದಂತಾಗಿದೆ!) ದೇವತೆಗಳು ಹಾಗೇ ಮಾಡಿದರು. ಅದರಿಂದಲೇ ಹೇಳುತ್ತಾರೆ, ಅಗ್ನಿಯಲ್ಲಿ ಎಲ್ಲಾ ದೇವತೆಗಳೂ ಇರುತ್ತಾರೆಂದು. ಆಗ ಅಗ್ನಿಯು ಆ ದೇವತೆಗಳೆಲ್ಲರ ಪಾಪವನ್ನೂ ತೊಳೆಯಲು, ಆ ದೇವತೆಗಳೆಲ್ಲರ ವೀರ್ಯರೂಪವಾದ ಕೆಂಡದಿಂದೊಡಗೂಡಿರುತ್ತಾ ಅಬ್ದೇವತೆಯನ್ನು (ಅಪ್=ನೀರು, ಈ ತತ್ತ್ವಾಭಿಮಾನೀ ದೇವತೆಯನ್ನು) ನೋಡಿ, ಈ ದೇವತೆಗಳ ವೀರ್ಯವನ್ನು ಆ ನೀರಿನಲ್ಲಿ ಹಾಕಿದನು. (ಅಥವಾ ದೇವತೆಗಳ ಪಾಪವನ್ನು ತಾನು ಸ್ವೀಕರಿಸಿದ್ದರಿಂದ, ತಾನು ಪಾಪಮುಕ್ತನಾಗಲು, ನೀರಿನಲ್ಲಿ ಹೊಕ್ಕನು) ಅವನೊಡನೆ ಆ ದೇವ ವೀರ್ಯಾಂಶಗಳೂ ಹೀಗೆ ನೀರಿನಲ್ಲಿ ಹೊಕ್ಕವು! ಹೀಗೆ ಮೂರುಸಲನಡೆಯಿತು.

## ೨೪ ನೀರಿನಲ್ಲಿ ಉದಿಸಿದವರು !

ಮೂರಾವರ್ತಿ ಮುಳುಗಿದಾಗಲೂ ಒಡನೆಯೇ ಆ ಉದಕದಿಂದ ದೇವತೆಗಳು ಮೂರಾವರ್ತಿ, ಶುದ್ಧರಾಗಿ, ಹುಟ್ಟಿಬಂದರು. ಮೊದಲು ಹುಟ್ಟಿದವನು ಏಕತ ಎನಿಸಿದನು, ಎರಡನೇ ಬಾರಿ ಹುಟ್ಟಿದವನು ದ್ವಿತ ನಾದನು; ಮೂರನೇ ಸಲ ಹುಟ್ಟಿದವನು ತ್ರಿತನನೆಸಿದನು. (ಈ ವರ್ಗದ ವರೂ ದೇವತೆಗಳೇ ಆದರು.) ಹೀಗೆ ನೀರು ಇವರಿಗೆ ತಾಯಿಯಾಯಿತು ! (ನೀರೆಂದರೆ ವೈದಿಕಶಬ್ದದ ಉದಕತತ್ತ್ವ, ನಮ್ಮ ಆರನೇ ಸಂಪುಟ ನೋಡಿರಿ.) ನೀರಿನಲ್ಲಿ ಹುಟ್ಟಿದವರಾದ್ದರಿಂದ ಇವರಿಗೆ 'ಆಪ್ತ್ಯ'ರೆಂದೂ ಹೆಸರಾಯಿತು. ಏಕತ ಆಪ್ತ್ಯ, ದ್ವಿತ ಆಪ್ತ್ಯ, ತ್ರಿತ ಆಪ್ತ್ಯರೆಂದು ಹೆಸರೇ ಪ್ರಸಿದ್ಧವಾಯಿತು. ತಾವೇ ತಮ್ಮ ಆತ್ಮದೊಡನೆಯೇ ಮತ್ತೆ ಜನಿಸಿದ್ದರಿಂದ ಆತ್ಮ್ಯರೆಂದೂ ಹೆಸರಾಯ್ತು. (ಏಕತ ಆತ್ಮ್ಯ, ದ್ವಿತ ಆತ್ಮ್ಯ, ತ್ರಿತ ಆತ್ಮ್ಯ ಮೊದಲಾದ ವ್ಯವಹಾರವೂ ಹೀಗೇ ಆಯಿತು.) ದೇವತೆಗಳು ಅಗ್ನಿದ್ವಾರಾ ನೀರಿನಲ್ಲಿ ತೊಳೆದುಕೊಂಡ ಪಾಪವನ್ನು ನೀರು ಹೇಗೆ ಕಳೆದುಕೊಂಡಿತೆಂದರೆ, ಉದಯಾಸ್ತಮಾನ ಕಾಲದಲ್ಲಿ ಮಲಗಿರುವವನಲ್ಲೂ, ಇಂಥವರಲ್ಲಿ ಕೆಟ್ಟ ಉಗುರುಗಳಿಂದ ಹುಟ್ಟುವ ಮಕ್ಕಳಲ್ಲೂ, ಕೆಟ್ಟ ಹಲ್ಲುಗಳೊಡನೆ ಹುಟ್ಟುವ ಮಕ್ಕಳಲ್ಲೂ ಮುಂತಾಗಿ, ಎಂದು ವೇದ ಮುಂದುವರೆಸಿದೆ.

ಅಂದರೆ ಏಕತ, ದ್ವಿತ, ತ್ರಿತರಲ್ಲಿ ಅಗ್ನಿಯ ಅಂಶವೂ, ಸಕಲ ದೇವತೆಗಳ ಅಂಶವೂ, ಉದಕ ತತ್ತ್ವವೂ, (ತನ್ಮೂಲಕ ನಾರಾಯಣ ತತ್ತ್ವವೂ) ಕೂಡಿಕೊಂಡು ದಿವ್ಯ ಜನ್ಮ ದೊರೆತುದರಿಂದ ಇವರು ಸರ್ವಜ್ಞರೂ, ಭಗವತ್ ತತ್ತ್ವವನ್ನು ಚೆನ್ನಾಗಿ ಅರಿತವರೂ, ದೇವತೆಗಳ ಆತ್ಮ್ಯರೂ, ಆಪ್ತ್ಯರೂ ಆಗಿ ಪರಮಪೂಜ್ಯರಾಗಿರುವರೆಂಬುದು ಇಲ್ಲಿನ ಮರ್ಮ. ದೇವತೆಗಳಿಗಾದರೂ ಬೀಜವಧಾ ದೋಷಲೇಪವುಂಟು; ಇವರಲ್ಲಿ ಅದೂ ಸಹ ಇಲ್ಲವೆಂದುದರಿಂದ, ನಿರ್ದೋಷ ಯಜ್ಞತತ್ತ್ವವನ್ನು (ಪಾಂಚರಾತ್ರಿಗಳು ಹೇಳುವ ಬಗೆಯ ಭಗವಂತನ ಆರಾಧನಾ ರೂಪ ಉಪಾಸನಾ ಯಜ್ಞವನ್ನು) ಬಲ್ಲವರೆಂಬ ಮರ್ಮವನ್ನು ವೇದವೇ ಹೇಳುವ ಬಗೆ ಇದು.

ದರ್ಶಪೂರ್ಣಮಾಸ ಯಾಗದಲ್ಲಿ ಯಜಮಾನನಿಗೆ ಈ ಬಗೆಯ ಬೀಜವಧಾ ಪಾಪ ತಟ್ಟದಿರಲೆಂದು, ಏಕತಾದಿಗಳ ಜನನದ ಐತಿಹ್ಯವನ್ನು, ಪುರೋಡಾಶ ದಲ್ಲಿ ಅಳವಡಿಸಿ, ಅದರ ಶುದ್ಧೀಕಾರದಲ್ಲಿ ಈ ಹೊಸದೇವತೆಗಳು ಜನಿಸಿದ ರೆಂಬುದನ್ನು ವೈದಿಕ ಕಣ್ಣಿನಿಂದ ಕಂಡುಕೊಂಡು, ಪಾಪರಹಿತಯಾಗವನ್ನು ಯಜಮಾನನು ಆಚರಿಸಿದ ಧನ್ಯಭಾವವನ್ನು ಪಡೆಯಲೆಂಬುದು ಸಂಹಿತಾ ಭಾಗದ (ಮೇಲೆ ಉದಾಹೃತವಾದ) ಹೃದಯ. ಹವಿಸ್ಸು ಅಸುರರಿಂದ ಮುಟ್ಟಲ್ಪಡಬಾರದೆಂಬುದು ಯಾಗದ ಬಹುಮುಖ್ಯ ಎಚ್ಚರಿಕೆ. ಬೀಜ ವಧೆಯು ಪಾಪವೆಂಬುದೇ ಆಸುರೀ ಶಕ್ತಿ. ಇದು ಹೋಗಲೆಂದು "ಅಗ್ನೇ ತನುವಂ... ಹವ್ಯಂ ರಕ್ಷಸ್ವ", "ಅಗ್ನಿಯೇ ! ನನ್ನ ಶರೀರದ ಅಪರಾವ ತಾರರೂಪವಾದ ಈ ಹವ್ಯವನ್ನು ರಕ್ಷಸು !", ಎಂದು ಯಜಮಾನನಾಡ ಬೇಕಾದ ಈ ಮಂತ್ರಗಳಲ್ಲಿ ಏಕತ, ದ್ವಿತ, ತ್ರಿತರನ್ನು ಸ್ಮರಿಸಿರುವುದು ಅವರ ನಿಷ್ಪಾಪ ಜನ್ಮದ ಪ್ರಯುಕ್ತ, ಮತ್ತು ಈ ಐತಿಹ್ಯದ ಹಿನ್ನೆಲೆಯಲ್ಲಿ, ಎಂಬುದು ಈಗ ಸ್ಪಷ್ಟವಾಗುತ್ತದೆ. ಅದಕ್ಕಾಗಿಯೇ ಅವರಿಗೆ ಇಲ್ಲಿ ಸ್ವಾಹಾ ಕಾರವಿದೆ.

ಈ ಪೈಕಿ ತ್ರಿತಅಪ್ಯ (ಆಪ್ತ್ಯ ?)ರೆಂಬ ಋಷಿಗಳ ಪ್ರಸ್ತಾಪ ಋಕ್ಸಂಹಿತೆ ಯಲ್ಲಿ ವಿಪುಲವಾಗಿ ಬರುತ್ತದೆ. ಇವರಿಂದ ದೃಷ್ಟವಾದ ಮಂತ್ರಗಳೂ ಇವೆ. (I–105), (VIII–47), (XI–33), (IX–102), (X–1). ದ್ವಿತರ ಪ್ರಸ್ತಾಪವೂ ಅಲ್ಲಲ್ಲಿದ್ದು ಅವರಿಂದ ದೃಷ್ಟವಾದ ಮಂತ್ರಗಳೂ ಇವೆ. (V–18), ಅದುದರಿಂದ ಇವರು ವೇದದ ಋಷಿಗಳೆಂಬುದರಲ್ಲೂ, ದೇವ ಸದೃಶರೆಂಬುದರಲ್ಲೂ ಹಿಂಸಾರಹಿತ ಯಾಗಯಜ್ಞಗಳ ಪ್ರವರ್ತಕರಾದಿ ಉಪಾಸನಾರೂಪ ಯಾಗಗಳನ್ನು ತೊಡದಿದರೆಂಬುದರಲ್ಲೂ ಯಾರಿಗೂ ಸಂದೇಹ ಬೇಡ. ತ್ರಿತ್ರನಪುಗ ತ್ರೈತನ ಇತ್ಯಾದಿಗಳ ಪ್ರಸ್ತಾಪವೂ ವೇದ ಪ್ರಸಿದ್ಧ.

ಈ ಇಡೀ ಹಿನ್ನೆಲೆಯಲ್ಲಿ ಗಮನೀಯ ಅಂಶವೆಂದರೆ ತೈತ್ತಿರೀಯ ಸಂಹಿತಾ, ಬ್ರಾಹ್ಮಣಾದಿ ಭಾಗಗಳಲ್ಲೇ ಯಜುಸ್‌ತತ್ತ್ವಪ್ರತಿಪಾದಕ ಗಳಾದ ಭಾಗಗಳಲ್ಲೇ ಹಿಂಸಾರಹಿತ ಯಜ್ಞಯಾಗಾದಿಗಳ ಆಚರಣೆಯ

ಮಹತಿಯನ್ನು ಎತ್ತಿ ಹಿಡಿದಿರುವುದು. ಶ್ರೀಮಹಾಭಾರತದ ಉಪರಿಚರ ವಸುವಿನ ಕಥೆಯಲ್ಲಿಯೂ ಇದೇ ಪ್ರಸ್ತಾಪ ಬಂದಿರುವುದೂ ಗಮನೀಯ! ಈ ಬಗೆಯ ಪಶುವಧರಹಿತ ಯಾಗಗಳನ್ನು ಮಾತ್ರವೇ ವಿಧಿಸುವ ವೇದದ ಭಾಗ ಏಕಾಯನವಾಗಿದ್ದು, ಈಗ ಲಬ್ಧವಾಗಿರುವ ಪಾಂಚರಾತ್ರ ಸಂಹಿತೆಗಳು ಈ ವೇದಭಾಗದ ವಿಸ್ತಾರವಾಗಿರುವುದರಿಂದ, ವೇದಾಂತಗಳ ಹೃದಯ ಒಂದೇ ಎಂಬುದು ಈ ದೀರ್ಘ ವಿವೇಚನೆಯಿಂದ ಇನ್ನಾದರೂ ತಿಳಿಯ ತಕ್ಕದ್ದಿದೆ.

'ನೀರಿ'ನಲ್ಲಿ ಹುಟ್ಟಿ ಬಂದ ಈ ಏಕತಾದಿಗಳು 'ಉದಕಶಯನ'ನಾದ ಶ್ರೀಮನ್ನಾರಾಯಣನನ್ನು ತತ್ತ್ವತಃ ಅರಿತದ್ದರಿಂದಲೇ, (ಮಹಾಭಾರತದ ಕಥೆಯಂತೆ) ಬೃಹಸ್ಪತಿಗೂ, ಪರಮಾತ್ಮನ ಅಗೋಚರಮಹಿಮೆಯನ್ನು ವಿವರಿಸಲು ಸಮರ್ಥರಾದರೆಂದು ತೋರುತ್ತದೆ. ವೇದದಲ್ಲಿ (ಋಕ್ಸಂಹಿತೆಯಲ್ಲಿ) ಇವರನ್ನು ದೇವತಾವಿಶೇಷಗಳೆಂದೂ, ಋಷಿಗಳೆಂದೂ, ಎರಡೂ ಬಗೆಯಲ್ಲಿ ಕೊಂಡಾಡಿದೆ. ಮಹಾಭಾರತದಲ್ಲಿ ಋಷಿಗಳೆಂದೇ ಕೊಂಡಾಡಿದೆ. ಭಗವಂತನೇ ಪುರುಷ ಸೂಕ್ತ ಪ್ರತಿಪಾದ್ಯ ದೇವತೆಯೂ, ಸೂಕ್ತದ್ರಷ್ಟಾ ಆದ ಋಷಿಯೂ ಏಕಕಾಲಕ್ಕೇ ಆಗಿರುವಲ್ಲಿ ವಿಸಂಗತವೇನೂ ಇಲ್ಲದಿರುವಂತೆ ಇಲ್ಲೂ ತಿಳಿಯಬೇಕು. ಬೃಹಸ್ಪತಿಯೂ ದೇವತೆಯೂ ಋಷಿಯೂ ಏಕಕಾಲಕ್ಕೇ ಆಗಿಲ್ಲವೇ, ಹಾಗೆ. (ಈ ಋಷಿಗಳಿಂದ ದೃಷ್ಟವಾದ ಋಕ್ಸೂಕ್ತಗಳು ಅಮೋಘವಾಗಿದ್ದು, ವಿವರಿಸಹೊರಟರೆ, ಇದೇ ಒಂದು ಅದ್ಭುತ ಗ್ರಂಥವಾಗುವಂತಿವೆ.)

ಇದೇ ತ್ರಿತನು ತನ್ನ ಅಣ್ಣಂದಿರೊಡನೆ ಯಾಗಾರ್ಥವಾಗಿ ಧನಸಂಚಯ ಮಾಡಿಕೊಂಡು ಬರುತ್ತಾ ಸರಸ್ವತೀ ನದಿಯ ತೀರದಲ್ಲಿ ಒಮ್ಮೆ ತೋಳವೊಂದರ ಬಾಧೆಗಂಜಿ ಓಡುತ್ತಾ ಹಳ್ಳವೊಂದರಲ್ಲಿ (ಭಾವಿಯಲ್ಲಿ) ಬಿದ್ದು, ತಾನು ಉದ್ದೇಶಿಸಿದ ಸೋಮಯಾಗವು ನೆರವೇರದೆಯೇ ಸಾಯುವಂತಾದುದಕ್ಕೆ ವ್ಯಥಿಸಿ, ದೇವತೆಗಳಿಗೆ ಮಾಡಿದ ಪ್ರಾರ್ಥನೆಯು ಬಹು ಮಾರ್ಮಿಕವಾಗಿದ್ದು ಋಗ್ವೇದದಲ್ಲಿ ಮೂಡಿ ಬಂದಿದೆ, (I–105.) ಆ ಸಂದರ್ಭದಲ್ಲೂ ಪ್ರಜ್ಞೆ ಕಳೆದುಕೊಳ್ಳದೆ ಆ ಭಾವಿಯಲ್ಲಿ ಜೋತಾಡುತ್ತಿದ್ದ

ಯಾವುದೋ ಒಂದು ಬಳ್ಳಿಯನ್ನೇ ಸೋಮಲತೆಯನ್ನಾಗಿ ಕಲ್ಪಿಸಿ, ಯೋಗ ಬಲದಿಂದಲೇ ಹೃದಯದಲ್ಲಿ ಅಗ್ನಿಯನ್ನು ಸ್ಥಾಪಿಸಿ, ಆ ಲತೆಯನ್ನೇ ಹಿಂಡಿ, ಹೀಗೆ ಯಾವ ಪಶುಹಿಂಸೆಯೂ ಇಲ್ಲದೆಯೇ ವಾಚಿಕ, ಮಾನಸಿಕವಾದ ಯಾಗವನ್ನು ಮಾಡಿ, ಸೋಮಪಾನಕ್ಕಾಗಿ ದೇವತೆಗಳೊಬ್ಬೊಬ್ಬರನ್ನೂ ಹೆಸರು ಹಿಡಿದು ಕರೆಯುವ ರೀತಿ ಹೃದಯ ಕರಗಿಸುವಂತಿದೆ. ಇದೇ ನಿಜವಾದ ಯಜ್ಞವೆಂದೂ, ಯಜ್ಞಕ್ಕೆ ಅಂಗವಾಗಿ ಹೇಳಿದ ಸಾಧನ, ಸಂಪತ್ತು, ಕಾರ್ಯ, ಕರಣಗಳೆಲ್ಲವೂ ಕೇವಲ ಸಾಂಕೇತಿಕವಾಗಿದ್ದು, ಗೌಣವೆಂದೂ, ಇವೆಲ್ಲ ಇದ್ದೂ, ಯಜ್ಞಮಾಡುವ ಯಜಮಾನನಿಗಿರಬೇಕಾದ ನಿಜವಾದ ಮನಸ್ಸಿನ ನಿಶ್ಚಯ, ತಿಳುವಳಿಕೆ, ಪಕ್ವತೆ ಇವಿಲ್ಲವಾದರೆ ಅದು ಕೇವಲ ಡಂಭಾತ್ಮಕವೆಂದೂ ಇಲ್ಲಿ ಧ್ವನಿತವಾಗುತ್ತದೆ. ಅಪಾಲೆಯೆಂಬ ಅತ್ರಿಪುತ್ರಿಯೂ ಇಂಥದೇ ಒಂದು ಯಾಗ ಮಾಡಿದ್ದನ್ನು ನಮ್ಮ ಗ್ರಂಥಮಾಲೆಯ ಆರನೆಯ ಸಂಪುಟದಲ್ಲಿ (ಪುಟ 159-176) ವಿವರಿಸಲಾಗಿರುವುದೂ ಸ್ಮರಣೀಯ. ಜೀವನವೇ ಸಮಗ್ರವಾಗಿ ಯಜ್ಞವಾಗಬೇಕೆನ್ನುವ ಯಜುಸ್ಸಿನ ತತ್ತ್ವವನ್ನರಿಯದೆ ಕೇವಲ ಬಾಹ್ಯರೂಪದ ಎಷ್ಟುಯಜ್ಞಗಳನ್ನಾಚರಿಸಿದರೇನು ? ಎಂಬ ಧ್ವನಿ ಇಂಥ ಪ್ರಕರಣಗಳಲ್ಲಿರುವುದನ್ನು ವೇದಾಭಿಮಾನಿಗಳು ಇಂದಾದರೂ ಮನಗಾಣಬೇಕು.

ಮನುಷ್ಯನಿರುವ ಸಂಸಾರದ ಮನೆಗೆ ನೆಲವೇ (ಪೃಥ್ವಿಯೇ) ಆಸರೆ. ಆಕಾಶವೇ ಛಾವಣಿ. (ಇವೆರಡೂ ದ್ಯಾವಾ ಪೃಥ್ವಿಗಳೆಂಬ ದೇವತೆಗಳೆನಿಸಿವೆ.) ಸಂಸಾರವೆಂಬುದೇ ಭಾವಿಯಂತೆ, ಅಜ್ಞಾನರೂಪವಾದಾಗ, ಮಾನವನಿಗೆ ಇದರ ನೆಲೆಯೇ, ಕೆಳಗುಮೇಲುಗಳು, ತಿಳಿಯದೇ, ಇದರಲ್ಲಿ ಬಿದ್ದ ಜ್ಞಾನಿಯೊಬ್ಬನು ಸಕಲ ದೇವತೆಗಳಿಗೂ ಭೂಮ್ಯಾಕಾಶಗಳಿಗೂ ಮಾಡುವ ಮೊರೆಯಂತೆ ಈ ತ್ರಿತ ಆಪ್ತ್ಯ ದೃಷ್ಟವಾದ ಸೂಕ್ತವು ಬಹು ಮಾರ್ಮಿಕವಾಗಿದೆ.

"ಮನುಷ್ಯನಾಗಿ ಹುಟ್ಟಿದವನು ಕೊನೆಗೆ ಸಂತಾನರೂಪ ಯಜ್ಞವನ್ನಾದರೂ ಸಾಧಿಸದಿದ್ದರೆ ಇನ್ನೇನು ಸಾರ್ಥಕ ? ಜೀವನದಲ್ಲಿ ಕೊನೆಯ ಯಜ್ಞ ಯಾವುದು ? ಅನಾದಿಯಾದ ಋತವೆಂಬುದು ಎಲ್ಲಿ ಹೋಯಿತು ?

ಈಗ ಅದರ ರಕ್ಷಕ ಯಾರು ? (ಯಜ್ಞಂ ಪೃಚ್ಛಾಮಿ ಅವಮಂ... ಕ್ವ ಋತಂ ಪೂರ್ವ್ಯಂ ಗತಂ ? ಕಃ ತದ್ಬಿಭರ್ತಿ ನೂತನೋ ?) ಋತವೆಂದ ರೇನು ? ಅನೃತವಾದರೂ ಯಾವುದು ? (ಕದ್ವಋತಂ ಕದನೃತಂ ?) ವರುಣನ ಸೂಕ್ಷ್ಮ ಕಣ್ನೋಟ ಎಲ್ಲಿ ಹೋಯಿತು ? (ಕದರುಣಸ್ಯ ಚಕ್ಷಣಂ ?)...

ಇತ್ಯಾದಿ ದಿಟ್ಟಪ್ರಶ್ನೆಗಳಿಂದ ತುಂಬಿರುವ ಈ ಋಷಿಯ ಸೂಕ್ತವನ್ನು ಪಠಿಸಿದಾಗ, ಯಜ್ಞ-ಧರ್ಮ-ಸತ್ಯ-ಋತಗಳ ಬಗೆಗೆ ಘೋರವಾದ ವಿವಾದ ಗಳೆದ್ದ ಸಂಕಟಕಾಲವೊಂದರ ಅರಿವಾಗುತ್ತದೆ. ಯಜ್ಞತತ್ವದ ಬೀಡವನ್ನೇ ಶೋಧಿಸಿದ ಈ ಮಹಾತ್ಮನು ಬಹುಶ್ರಮಸಾಧ್ಯವೂ, ಹಿಂಸಾಚರಣೆಯಿಂದ ಕೂಡಿದುದೂ ಆದ ಬಾಹ್ಯಯಜ್ಞಕ್ಕಿಂತ, ಅರ್ಥತಿಳಿದು ಅಂತರಂಗದಲ್ಲಿ ಆಚರಿಸುವ ಜ್ಞಾನರೂಪ ಯಜ್ಞವು ಶ್ರೇಷ್ಠವೆಂದು ನಿಷ್ಕರ್ಷಿಸಿಕೊಂಡುದರ ಹಿನ್ನೆಲೆಯಲ್ಲಿಯೇ ಪಾಂಚರಾತ್ರ ಶಾಸ್ತ್ರಗಳೂ ರೂಪುಗೊಂಡುದರಿಂದ, ಇಂಥ ಕ್ರಾಂತದರ್ಶಿಗಳ ಮಾರ್ಗದರ್ಶನದಲ್ಲೇ ವೇದ— ಪಂಚರಾತ್ರಗಳ ಏಕಾರ್ಥತೆಯ ಬಗೆಗೆ ಮನಗಾಣುವುದು ಸುಲಭವೂ, ಶಕ್ಯವೂ ಆದೀತು. ಋಕ್ಸಂಹಿತೆಯ ಮೊದಲನೆಯ ಮಂಡಲದಿಂದ ಹಿಡಿದು ಹತ್ತನೆಯ ಮಂಡ ಲದವರೆಗೂ ವ್ಯಾಪ್ತವಾದ ಈ ಋಷಿಯ ಸೂಕ್ತಗಳು 'ಯಜ್ಞ'ಕ್ಕೆ ಬಹು ಮಾರ್ಮಿಕವೂ, ವ್ಯಾಪಕವೂ, ಸೂಕ್ಷ್ಮವೂ, ಸಮರ್ಥವೂ, ಸ್ಪಷ್ಟವೂ ಅದ ಅರ್ಥವನ್ನು ಕೊಟ್ಟಿವೆ. ಈ ಋಷಿಗಳ ಪ್ರಸ್ತಾಪ ಕೃಷ್ಣಯಜುಸ್ಸಂಹಿತೆಯ ಮೊದಲನೇ ಪ್ರಶ್ನದಲ್ಲೇ ಬರುವುದೂ ಸೂಚಕವಾಗಿದ್ದು, ಯಜುಸ್ತತ್ವವನ್ನು ಪ್ರತಿಪಾದಿಸಹೊರಟ ಈ ವೇದವು ಯಾವ ಋಷಿಗಳಿಗೆ ಸರಿಯಾಗಿ ಆತತ್ತ್ವ ತಿಳಿದಿದೆಯೆಂದು ಬಿಚ್ಚಿ ಹೇಳಿದಂತಾಗಿದೆ, ಆದ್ದರಿಂದ ಆಕಸ್ಮಿಕವಲ್ಲದ ಈ ಸೂಚನೆಗಳಂತೆ ಪಾಂಚರಾತ್ರ ತತ್ವಗಳು ವೇದ ಮೂಲದವೇ ಎಂದು ನಿಸ್ಸಂಶ ಯವಾಗಿ ಹೇಳಬರುವುದು.

## ೨೪ ಲಕ್ಷ್ಮೀತಂತ್ರವೆಂಬ ಪಂಚರಾತ್ರ ಸಂಹಿತೆ

ಇಂಥ ಆಗಮ ಗ್ರಂಥಗಳಲ್ಲಿ ಲಕ್ಷ್ಮೀತಂತ್ರವೆಂಬ ಸುಪ್ರಸಿದ್ಧ ಸಂಹಿತೆಯು ನಮಗೆ ಈಗ ಬಹುಮುಖ್ಯವಾಗಿದೆ. ಈಗ ನಮಗೆ ದೊರಕುವ ಲಕ್ಷ್ಮೀತಂತ್ರವೆಂಬ ಗ್ರಂಥವು, ಇದಕ್ಕಿಂತ ಪೂರ್ವದ, ಶತಕೋಟಿ ವಿಸ್ತಾರವಾದ ಮತ್ತೊಂದು ಮಹಾಸಮುದ್ರ ರೂಪಗ್ರಂಥದಿಂದ ಉದ್ಧೃತವಾಗಿರುವಂತೆಯೂ, ಅನೇಕ ವೈದಿಕ ರಹಸ್ಯಗಳು ಇಲ್ಲಿ ಹೇಳಲ್ಪಟ್ಟು ವಿವರಿಸಲ್ಪಟ್ಟಿರುವುದಾಗಿಯೂ ಇದರಲ್ಲೇ ಹೇಳಿದೆ.

ಶತಕೋಟಿ ಪ್ರವಿಸ್ತಾರಾತ್ ಲಕ್ಷ್ಮೀತಂತ್ರ ಮಹಾರ್ಣವಾತ್ ।
ಅಯಂ ಸಾರಃ ಸಮುದ್ಧೃತ್ಯ ಸ್ನಿಗ್ಧಯಾ ದರ್ಶಿತೋಮಯಾ ॥
(ಮಯಾ = ಲಕ್ಷ್ಮ್ಯಾ) (44–52)

ರಹಸ್ಯಾನೇಕಸಂಭೇದಂ ನಾನಾ ವಾಕ್ಯೋಪಶೋಭಿತಂ ।
ಲಕ್ಷ್ಮೀ ತಂತ್ರಾಹ್ವಯಂ ಸಮ್ಯಕ್ ಸದ್ಯಃ ಪ್ರತ್ಯಾಯಕಂ
ನೃಣಾಂ ॥ (51–4)

ಈಗಾಗಲೇ ಹಿಂದೆ ಹೆಸರಿಸಲ್ಪಟ್ಟ ವೇದಖಿಲಭಾಗವಾದ ಶ್ರೀಸೂಕ್ತಕ್ಕೆ ಪರೋಕ್ಷ ವ್ಯಾಖ್ಯಾನದಂತಿರುವ ಅನೇಕಭಾಗಗಳು ಈ ಲಕ್ಷ್ಮೀತಂತ್ರದಲ್ಲಿ ಇರುವುದರಿಂದ, ಇಲ್ಲೂ ವೇದಕ್ಕೂ ಆಗಮಕ್ಕೂ ಸಂಬಂಧವೂ ಹೊಂದಾಣಿಕೆಯೂ, ಕಂಡುಬರುತ್ತವೆ. (ಇದೇ ಹೆಸರಿನಲ್ಲಿ ಬೇರೆ ಗ್ರಂಥಗಳು ಇರುವುದನ್ನುಲಕ್ಷಿಸಿ, ಅವು ಬೇರೆಯೆಂದು ತೋರಿಸಲು, ಶ್ರೀ ಅಪ್ಪಯ ದೀಕ್ಷಿತರೂ, ಲಲಿತಾಸಹಸ್ರನಾಮದ ಭಾಷ್ಯಕಾರರಾದ ಭಾಸ್ಕರರಾಯ ದೀಕ್ಷಿತರೂ, ದುರ್ಗಾಸಪ್ತಶತೀ ವ್ಯಾಖ್ಯಾನಕಾರರಾದ ನಾಗೇಶಭಟ್ಟರೂ ಅಲ್ಲಲ್ಲಿ ಪಾಂಚರಾತ್ರಲಕ್ಷ್ಮೀತಂತ್ರವೆಂದೇ ಇದನ್ನು ನಿರ್ದೇಶಿಸಿ, ಮಾನ್ಯಮಾಡಿ, ಇದರಿಂದ ತಮಗೂ ಪೋಷಕವಾದ ವಿಷಯಗಳನ್ನು ಸಂಗ್ರಹಿಸಿರುವುದರಿಂದ, ಈ ಗ್ರಂಥವು ಸರ್ವಮತಸ್ಥರಿಗೂ, ಸಂಪ್ರದಾಯಸ್ಥರಿಗೂ ಆದರಣೀಯವೆಂಬುದರಲ್ಲಿ ಯಾರೂ ಸಂದೇಹಪಡುವಂತಿಲ್ಲ.) ಸಾತ್ವತ ಸಂಹಿತೆ, ಅಹಿ

ಬ್ರುಘ್ನ್ಯ ಸಂಹಿತೆಗಳಂತೆಯೇ ವೇದವೇದಾಂತಗಳ ಪರಮಪ್ರಮೇಯಗಳ ನ್ನೆಲ್ಲ ಸುಲಭವಾಗಿ, ಮಾರ್ಮಿಕವಾಗಿ ವಿವರಿಸಿರುವ ಈ ಗ್ರಂಥಕ್ಕೆ ಸಂಪ್ರದಾಯದಲ್ಲಿ ಬಹುದೊಡ್ಡ ಸ್ಥಾನವಿದೆ.

ಮೂಲ ವೇದದಲ್ಲಿ ಶ್ರೀಸೂಕ್ತವು ಈಗ ನಮಗೆ ದೊರಕದ ಯಾವುದೋ ಒಂದು ವೇದಶಾಖೆಯಲ್ಲಿ, ಬಹುಶಃ ಏಕಾಯನದಲ್ಲಿ, ಇದ್ದು, ಕ್ರಮಶಃ ಇದರ ಮಹತಿಯೂ, ಉಪಯೋಗವೂ ಸಮಸ್ತ ವೈದಿಕರಿಗೂ ಮನದಟ್ಟಾಗಿ, ಈಗ ಋಕ್ ಸಂಹಿತೆಯ ೫ನೇ ಮಂಡಲದಲ್ಲಿ ಪರಿಶಿಷ್ಟವಾಗಿ ಸೇರಿಸಲ್ಪಟ್ಟಿರಬೇಕೆಂದು ತೋರುತ್ತದೆ. ಇದರಲ್ಲಿ ಬಾಧಕವೇನಿಲ್ಲ. ಒಂದು ಶಾಖೆಯಲ್ಲಿ ಇಂಥ ರತ್ನವು ದೊರೆತರೆ, ಆ ಶಾಖೆಯವರಲ್ಲದವರೂ ಅದರ ಉಪಯೋಗ ಪಡೆಯುವುದನ್ನು ವೈದಿಕ ಪರಂಪರೆ ಒಪ್ಪುತ್ತದೆ. ಪುರುಷ ಸೂಕ್ತವು ಋಗ್ವೇದೋಕ್ತವಾಗಿದ್ದರೂ, ಈಗ ಉಳಿದ ಮೂರು ವೇದಗಳಲ್ಲೂ ಬಂದಿರುವುದು ಹೀಗೆಯೇ. ನಾಸದೀಯ, ಕಸ್ಮೈದೇವಾಯ ಮುಂತಾದವುಗಳೂ ಹೀಗೇ. ಒಂದು ಕಡೆ ಮೂಲವೇ ನಷ್ಟವಾದರೆ, ಬೇರೊಂದು ಶಾಖಾಂತರ್ಗತವಾಗಿಯೂ ಮಂತ್ರಗಳು ಉಳಿದು ಬರುವುದುಂಟು. ಕಠಬ್ರಾಹ್ಮಣವು ನಷ್ಟವಾಗಿ, ಉಳಿದ ಕಾಠಕವು ಈಗ ತೈತ್ತಿರೀಯ ಬ್ರಾಹ್ಮಣಕ್ಕೆ ಸೇರ್ಪಡೆಯಾಗಿರುವುದೂ ಹೀಗೆ ಸರ್ವವಿದಿತ. ಹೀಗೆಯೇ ಋಕ್‌ಸಂಹಿತೆಯ ವೈದಿಕರು ಮಾತ್ರವಲ್ಲದೆ, ಯಜುಸ್ಸಾಮಾಥರ್ವ ವೇದಗಳ ಎಲ್ಲ ಶಾಖೆಗಳ ಅನುಯಾಯಿಗಳೂ, ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೂ, ಭಾರತದ ಉದ್ದಗಲಗಳಲ್ಲಿ, ಮನೆಮನೆಗಳಲ್ಲಿ ಇಂದಿಗೂ ಇದನ್ನು ಪಠಿಸುತ್ತಿರುವುದರಿಂದ ಇದೊಂದು ಅನರ್ಘ್ಯರತ್ನವಾದ ವೇದಭಾಗವಾಗಿದೆಯೆಂದು ತಿಳಿಯುವುದು. ಇದು ಶಾಕ್ತಮೂಲದ್ದೋ ಅಥವಾ ಅವೈದಿಕ ಅನ್ಯಮೂಲದ್ದೋ ಆಗಿದ್ದರೆ, ಅದೇ ಶಾಕ್ತರ, ಅವೈದಿಕರ ಇನ್ನಿತರ ಗ್ರಂಥಗಳನ್ನೂ ಇದರಂತೆಯೇ ಸರ್ವಮಾನ್ಯವನ್ನಾಗಿ ಎಲ್ಲ ವೈದಿಕರೂ ಏಕೆ ಒಪ್ಪಿಕೊಳ್ಳಲಿಲ್ಲ ? ಎಂಬ ಪ್ರಶ್ನೆಗೆ ಉತ್ತರ ಹೇಳಬೇಕಾಗಿ ಬರುವುದು ! ಆದರೆ ಉತ್ತರವಿಲ್ಲದ್ದರಿಂದ ಶ್ರೀಸೂಕ್ತದ ವಿಷಯದಲ್ಲಿ ಸಂಶಯಬೇಡ. ಈ ಶ್ರೀಸೂಕ್ತವನ್ನರಿಯ ಹೊರಟವರಿಗೆ ಲಕ್ಷ್ಮೀತಂತ್ರವು ಎಷ್ಟೊಂದು ಉಪಯುಕ್ತವೆಂಬುದನ್ನು ಈಗ ವಿಶದವಾಗಿ ನಿರೂಪಿಸೋಣ.

ಅಧ್ಯಾಯ ಎರಡು

# ಶ್ರೀಸೂಕ್ತ - ವಿವರಣೆ

## ೧ ಪ್ರವೇಶ— "ಮಾತೃದೇವೋಭವ"

ಲೋಕನೀತಿಯನ್ನು ಉಪದೇಶಿಸುವುದಕ್ಕೆ ಹೊರಟ ವೇದವು ಆರಂಭದಲ್ಲೇ ಮಾತೃದೇವೋಭವ ಎಂದು ಕರೆಕೊಟ್ಟಿರುವುದು, ದೇವತಾಮಂಡಲದಲ್ಲಿ ಯಾರು ಮೊದಲು ವಂದ್ಯರು ಎಂಬ ವಿಷಯಕ್ಕೂ ಅನ್ವಯವಾಗತಕ್ಕದ್ದು. ಸರ್ವಲೋಕಕ್ಕೂ ತಾಯಿಯಾದವಳು ಶ್ರೀ ಲಕ್ಷ್ಮೀದೇವಿಯೆಂದೂ, ತಂದೆಯಾದವನು ಶ್ರೀ ವಿಷ್ಣುವೆಂದೂ ಶ್ರುತಿ, ಸ್ಮೃತಿ, ಇತಿಹಾಸ ಪುರಾಣಗಳೆಲ್ಲವೂ ಘೋಷಿಸುತ್ತವೆ. ಪ್ರಮಾಣಗಳು ಪರ್ವತದಷ್ಟಿವೆ! ಈ ಮರ್ಯಾದೆಯಲ್ಲಿ ಶ್ರುತಿಶ್ರೇಣಿಯಲ್ಲಿ ಶ್ರೀಸೂಕ್ತವು ಅಗ್ರಮಾನ್ಯವಾಗಿ ನಿಲ್ಲುತ್ತದೆ.

ಈ ಶ್ರೀಸೂಕ್ತವು ಯಾವ ಋಷಿ ದೃಷ್ಟವಾದುದು? ಯಾವ ಛಂದಸ್ಸಿನಲ್ಲಿ ಉದಿಸಿತು? ಮತ್ತು ಇದು ಲೋಕದಲ್ಲಿ ಅವತರಿಸಿದ ಕಾರಣವೇನು? ಎಂಬ ವಿಷಯವನ್ನು ಕುರಿತು ಲಕ್ಷ್ಮೀತಂತ್ರದಲ್ಲಿ ಬಹು ಸ್ವಾರಸ್ಯಪೂರ್ಣವಾದ ವಿವರಣೆಯಿದೆ.

ಇದನ್ನು ಇಂದ್ರನಿಗೆ ಸ್ವಯಂ ಲಕ್ಷ್ಮೀದೇವಿಯೇ ಉಪದೇಶಿಸಿದಳೆಂದು ಹೇಳಿದೆ. ತನ್ನ ಮಹಿಮೆಯನ್ನು ಪುತ್ರ ಪ್ರಾಯನಾದ ಇಂದ್ರನಿಗೆ ತಾನೇ ಉಪದೇಶಿಸುವ ಸಂದರ್ಭದಲ್ಲಿ ವ್ಯಕ್ತವಾದದ್ದು ಇದು. ಹದಿನೈದು ಮಂತ್ರಗಳನ್ನುಳ್ಳ ಈ ಸೂಕ್ತದಲ್ಲಿ ಅನುಷ್ಟುಪ್ ಛಂದಸ್ಸಿನ ಮೂರು ಮಂತ್ರಗಳೂ (೧ ರಿಂದ ೩), ಬೃಹತೀಛಂದಸ್ಸಿನ ಒಂದೂ (೪ ನೆಯದು), ತ್ರಿಷ್ಟುಪ್ಪಿನಲ್ಲಿ ಎರಡೂ (೫ನೇ ೬ನೇ ಮಂತ್ರಗಳು), ಮತ್ತೆ ಅನುಷ್ಟುಪ್ಪಿನಲ್ಲಿ ಎಂಟೂ (೭ ರಿಂದ ೧೩ರ ವರೆಗೆ), ಕೊನೆಯದು ಪ್ರಸ್ತಾರಪಂಕ್ತೀ ಛಂದಸ್ಸಿನದೂ

ಆಗಿವೆ ಎಂದೂ ಕಂಡುಬರುತ್ತದೆ. ಲಕ್ಷ್ಮೀದೇವಿಯೇ ಈ ಸೂಕ್ತಕ್ಕೆ ದೇವತೆ. (ಕೆಲವರು 'ಅಗ್ನಿ'ಯೆಂದು ಹೇಳುವುದರ ಕಾರಣವನ್ನೂ, ಇದರ ವಿಮರ್ಶೆಯನ್ನೂ ಮುಂದೆ ಮಾಡೋಣ.) ಮಂತ್ರದಲ್ಲೇ ಉಕ್ತರಾಗುವ ಆನಂದ, ಕರ್ದಮ, ಶ್ರೀದ, ಚಿಕ್ಲೀತ ಮೊದಲಾದ ಲಕ್ಷ್ಮೀಪುತ್ರರು ಈ ಮಂತ್ರಗಳ ಆದಿ ಪ್ರವರ್ತಕರೆಂಬ ಅರ್ಥದಲ್ಲಿ ಋಷಿಗಳೂ, ಅಥವಾ ಸ್ವಯಂ ಲಕ್ಷ್ಮೀದೇವಿಯೇ ಈ ಸೂಕ್ತಕ್ಕೆ ಋಷಿಯೂ ಹೌದು.

ಮಾಮೇವಾಸ್ಯ ಮುನಿಂ ವಿದ್ಯಾತ್ ಛಂದಃ ಶ್ರೀರ್ನಾಮ
ಕಥ್ಯತೇ ।
ದೇವತಾ ಸಕಲಾಧಾರಾ ವಿಷ್ಣುಪತ್ನ್ಯಹಮೀಶ್ವರೀ ॥
ವಿನಿಯೋಗೋಽಸ್ಯ ಸೂಕ್ತಸ್ಯ ಲಕ್ಷ್ಮೀನಾರಾಯಣಾರ್ಚನೇ ।
ಅಂಕಸ್ಥಾಂ ಭಾವಯೇಲ್ಲಕ್ಷ್ಮೀಂ ವಿಷ್ಣೋರ್ಮಾಂ ಪರ
ಮೇಶ್ವರೀಂ ॥

(ಲಕ್ಷ್ಮೀತಂತ್ರ, 50-21, 22)

ಈ ಶ್ರೀಸೂಕ್ತ ಪುರುಷಸೂಕ್ತಗಳನ್ನು ಲಕ್ಷ್ಮೀನಾರಾಯಣರ ಆರಾಧನೆಯಲ್ಲಿ ಉಪಯೋಗಿಸತಕ್ಕದ್ದು ಎಂಬ ವಿನಿಯೋಗವನ್ನು ಲಕ್ಷ್ಮೀತಂತ್ರವು ಹೇಳಿದೆ. ಆದಿಯಲ್ಲಿ ಲಕ್ಷ್ಮೀನಾರಾಯಣರಿಗೆ ಈ ಪುರುಷಸೂಕ್ತಗಳು ಪ್ರತ್ಯಕ್ಷವಾದುವಂತೆ. ಹೇಗೆಂದರೆ, "ಸ್ಥಾವರ ಜಂಗಮಾತ್ಮಕವಾದ ಈ ವಿಶಾಲವಿಶ್ವಕ್ಕೆ ಒಡೆಯನೂ, ಷಾಡ್ಗುಣ್ಯಾನಂದ ವಿಗ್ರಹನೂ, ಸರ್ವಲೋಕಾಂತರಾತ್ಮನೂ, ಸರ್ವಜ್ಞನೂ, ಹೇಯಗುಣದೂರನೂ, ಸಮಸ್ತ ಕಲ್ಯಾಣ ಗುಣಾತ್ಮಕನೂ, ಲಕ್ಷ್ಮೀಪತಿಯೂ ಆದ ಭಗವಂತನಿಗೆ ಶಕ್ತಿಸ್ವರೂಪಿಣಿಯೂ, ಶ್ರೀನಾಮಕಳೂ, ಅವನಂತೆಯೇ ಸಕಲ ಕಲ್ಯಾಣಗುಣಾಸ್ಪದಳೂ, ದೋಷದೂರಳೂ, ಸರ್ವಕಾಮಪ್ರದಾತ್ರವೂ ಆದ ತಾನು ಲೋಕಕ್ಷೇಮಾರ್ಥವಾಗಿ ಅವನನ್ನೆಡೆಬಿಡದೆ ಅನುಸರಿಸುತ್ತಾ ಇದ್ದ ಒಂದಾನೊಂದು ಕಾಲದಲ್ಲಿ, ಈ ದಿವ್ಯದಂಪತಿಗಳು, ಸಂಸಾರದಲ್ಲಿ ಕಷ್ಟಪಡುವ ಜೀವರಾಶಿಯನ್ನು ಕಂಡು, ಇವರ ಹಿತದ ಸಲು

ವಾಗಿ, ಸುಖದ ಸಲುವಾಗಿ ಏನಾದರೊಂದು ಉಪಾಯ ಮಾಡಬೇಕೆಂದು ಚಿಂತನ ರೂಪದ ತಪಸ್ಸಿನಲ್ಲಿ ತೊಡಗಿದಾಗ, ಅವರಿಬ್ಬರಿಗೂ ಒಂದು ಜೋಡಿ ಸೂಕ್ತಗಳು ಪ್ರತ್ಯಕ್ಷವಾದವು. ಇವುಗಳಲ್ಲೊಂದು ಪುರುಷಸೂಕ್ತ, ಮತ್ತೊಂದು ಶ್ರೀಸೂಕ್ತ" (ಲಕ್ಷ್ಮೀತಂತ್ರ, ಅಧ್ಯಾಯ 50, ಶ್ಲೋ 5, 8, 10, 12, 14.)

ದೇವೋ ನಾರಾಯಣಃ ನಾಮ ಜಗತಃ ತಸ್ಥುಷಸ್ಪತಿಃ ।
ಆತ್ಮಾ ಚ ಸರ್ವಲೋಕಾನಾಂ ಷಾಡ್ಗುಣ್ಯಾನಂದ ವಿಗ್ರಹಃ ॥
ಶಕ್ತಿಮಾನ್ ಸಕಲಾಧಾರಃ ಸರ್ವಶಕ್ತಿರ್ಮದೀಶ್ವರಃ ।
ತಸ್ಯಾಹಂ ಪರಮಾ ಶಕ್ತಿಃ ಏಕಾ ಶ್ರೀರ್ನಾಮ ಶಾಶ್ವತೀ ॥
ನಿರಸ್ತ ನಿಖಿಲಾವದ್ಯಾ ಸರ್ವಕಾಮದುಘಾ ವಿಭೋಃ ।
ಅನುಗ್ರಹಾಯ ಲೋಕಾನಾಂ ಸ್ಥಿತೌ ಸ್ವಃ ಪರಯಾ ಶ್ರಿಯಾ ॥
ಕದಾಚಿತ್ ಕೃಪಯಾವಿಷ್ಟೌ ಜೀವಾನಾಂ ಹಿತಕಾಮ್ಯಯಾ ॥
ಸುಖಿನಃ ಸ್ಯುಃ ಇಮೇ ಜೀವಾಃ ಪ್ರಾಪ್ನುಯುಃ ನೌ ಕಥಂ
ನ್ವಿತಿ ।
ಉಪಾಯಾನ್ವೇಷಣಾಯತ್ತಾ ಪರಮೇಣ ಸಮಾಧಿನಾ ॥
ತಕ್‌ಸೂಕ್ತ ಮಿಥುನಂ ದಿವ್ಯಂ ದಧ್ನೋ ಘೃತಮಿವೋತ್ಥಿತಂ ।
ಅನಾಹತಂ ಅಸಂದಿಗ್ಧಂ ಅನಸ್ಪಷ್ಟಂ ಅನಶ್ವರಂ ॥
ಸರ್ವೈಶ್ವರ್ಯ ಗುಣೋಪೇತಂ ಅನಾಕುಲಪದಾಕ್ಷರಂ ।
ಆದ್ಯೋಃ ತಥಾಂತಯೋಃ ಶಶ್ವತ್ ಅನ್ಯೋನ್ಯಾಕ್ಷರ
ಮಿಶ್ರಿತಂ ॥ (ಇತ್ಯಾದಿ)

ಈ ಪುರುಷ ಶ್ರೀಸೂಕ್ತಗಳು ವೇದಗಳೆಂಬ ಮೊಸರಿನಲ್ಲಿ ತುಪ್ಪದಂತೆಯೂ, ಅವ್ಯಾಹತವಾಗಿಯೂ (ಅಡೆ–ತಡೆ ಇಲ್ಲದೆ), ಸ್ಪಷ್ಟವಾಗಿಯೂ, ಸಂದೇಹಾರ್ಥಗಳಿಗೂ ಸಂದೇಹಶಬ್ದಾಕ್ಷರಗಳಿಗೂ ಅವಕಾಶವೇ ಇಲ್ಲದಂತೆಯೂ,

ಶಾಶ್ವತರೂಪ, ಸಂಪತ್ತುಳ್ಳವಾಗಿಯೂ, ಪದಾಕ್ಷರಗಳಲ್ಲಿ ಯಾವ ಒಂದು ಕೊರತೆಯಿಲ್ಲದುವಾಗಿಯೂ ಅವತರಿಸಿದುವು.

## ೨. ಶ್ರೀಸೂಕ್ತ-ಪುರುಷಸೂಕ್ತಗಳಲ್ಲಿ ಒಂದು ಸ್ವಾರಸ್ಯ

ಇನ್ನೂ ಒಂದು ವಿಶೇಷವೇನೆಂದರೆ, ಈ ಸೂಕ್ತಗಳ ಆದಿ, ಅಂತ್ಯದ ಶಬ್ದಾಕ್ಷರಗಳು (ಮುದ್ರಿಕೆಗಳಂತೆ) ಒಂದರೊಳಗೊಂದು ಪರಸ್ಪರ ಹೊಕ್ಕು ಲಕ್ಷ್ಮೀ ಮತ್ತು ನಾರಾಯಣ ತತ್ತ್ವಗಳು ಒಂದನ್ನೊಂದು ಎಂದೆಂದೂ ಬಿಟ್ಟಿಲ್ಲದಿರುವುದನ್ನು, ಅನ್ಯೋನ್ಯವಾಗಿ, ಗಾಢೋಪಗೂಢವಾಗಿ, ಪರಸ್ಪರವಾಗಿ, ಒಂದನ್ನೊಂದು ಹೊಕ್ಕು ವ್ಯಾಪಿಸಿರುವುದನ್ನೂ ಸೂಚಿಸುತ್ತವೆ.

ಹೇಗೆಂದರೆ. ಶ್ರೀಸೂಕ್ತದ ಮೊದಲನೆಯ ಋಕ್ಕಿನಲ್ಲಿ "ಲಕ್ಷ್ಮೀಂ ಜಾತವೇದೋ ಮ ಆವಹ" ಎಂಬಲ್ಲಿ, ಆದಿಯಲ್ಲಿ ಬರುವ ಲಕ್ಷ್ಮೀ ಶಬ್ದವು ಪುರುಷಸೂಕ್ತದ ಕೊನೆಯಲ್ಲಿ (ಉತ್ತರಾನುವಾಕದಲ್ಲಿ) ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ ಎಂಬಲ್ಲಿ ಬಂದಿದ್ದು, ಈ ಪುರುಷಸೂಕ್ತಪ್ರತಿಪಾದ್ಯನಾದ ಪುರುಷನು ಶ್ರೀವಿಶಿಷ್ಟನೆಂಬುದನ್ನು ನಿರೂಪಿಸಿ, ಅವನು ಲಕ್ಷ್ಮಿಯನ್ನು ತನ್ನ ಶಕ್ತಿಯನ್ನಾಗಿ ಹೊಂದಿದ್ದಾನೆಂದು ತೀರ್ಪಿತ್ತಿದೆ.

ಹಾಗೆಯೇ ಪುರುಷಸೂಕ್ತದ ಆದಿಯಲ್ಲಿ "ಸಹಸ್ರಶೀರ್ಷಾ ಪುರುಷಃ" ಎಂಬಲ್ಲಿ ಬರುವ ಪುರುಷ ಶಬ್ದವು ಶ್ರೀಸೂಕ್ತದ ಕೊನೆಯ ಋಕ್ಕಿನಲ್ಲೂ "ವಿಂದೇಯಂ ಪುರುಷಾನಹಂ" ಎಂಬಲ್ಲಿ ಬಂದಿದ್ದು, ಶ್ರೀಯೆಂಬುವಳು ಈ ಶಕ್ತಿಯನ್ನುಳ್ಳವನ ಪತ್ನಿ ಆಗಿದ್ದಾಳೆಂದು ತೀರ್ಪಿತ್ತಿದೆ, ಹೀಗೆ ಶ್ರೀ. ಲಕ್ಷ್ಮೀ, ಪುರುಷ, ಜಾತವೇದಸ್ ಎಂಬ ಲಕ್ಷ್ಮೀ ಮತ್ತು ನಾರಾಯಣ ವಾಚಕಗಳು ಪರಸ್ಪರರ ಸ್ವರೂಪ ನಿರ್ಧಾರಕಗಳಾಗಿರುವುದನ್ನು ಈ ದಿವ್ಯ ಸೂಕ್ತಗಳು

ಈ ಚಮತ್ಕಾರದಿಂದಲೇ ತಿಳಿಸಿಕೊಟ್ಟಿವೆ. ಇದನ್ನೇ ಮೇಲಿನ ಲಕ್ಷ್ಮೀತಂತ್ರ ವಾಕ್ಯವು :

ಆದ್ಯೋಃ ತಥಾಂತಯೋಃ ಶಶ್ವತ್ ಅನ್ಯೋನ್ಯಾಕ್ಷರ ಮಿಶ್ರಿತಂ ॥

ಎಂದು ತೋರಿಸಿದೆ. ಇದರ ತತ್ತ್ವವೇನೆಂದರೆ, ಶಕ್ತಿ ಶಕ್ತಿಮದ್ದಾವಿದ್ಧಂ ತತ್ತದಕ್ಷರ ಮಿಶ್ರಿತಂ । ಎಂಬಂತೆ, ಲಕ್ಷ್ಮಿಯು ವಿಷ್ಣುಶಕ್ತಿಯೆಂದೂ ವಿಷ್ಣುವು ಶ್ರೀಶಕ್ತಿಮತ್ ಎಂದೂ ತೋರಿಸುವುದೇ ಎಂದೂ ಹೇಳಿದೆ.

ಇವುಗಳಲ್ಲಿ ಅರವಿಂದಾಕ್ಷನಾದ ಭಗವಂತನು ತನ್ನ ಮಹಿಮೆಯಲ್ಲಿಯೇ ಆಧಾರ ತಳೆದ ಪುರುಷಸೂಕ್ತವನ್ನು ತನ್ನ ವಿಷಯಕವಾದುದೆಂದು ಒಪ್ಪಿಕೊಂಡು, ತಾನೇ ಋಷಿಯೂ ದೇವತೆಯೂ ಆದನು. ಅದರಂತೆಯೇ ಪರಮಾತ್ಮನ ಪತ್ನಿಯಾದ ಲಕ್ಷ್ಮೀದೇವಿಯು ಆ ಪರಮಾತ್ಮನ ಗುಣಭೂಷಣ ಪ್ರಾಯವಾದ ತನ್ನ ಸ್ವರೂಪವನ್ನು ವರ್ಣಿಸುವ ಶ್ರೀಸೂಕ್ತವನ್ನು ತನ್ನ ವಿಷಯದ್ದೆಂದು ಅಂಗೀಕರಿಸಿ ತಾನೇ ಋಷಿಯೂ ದೇವತೆಯೂ ಆದಳು. ಹೀಗೆ ಮನುಷ್ಯರಾದ ಋಷಿಗಳಿಗೂ ಪೂರ್ವದಲ್ಲೇ ದಿವ್ಯದಂಪತಿಗಳಿಗೇ ಗೋಚರವಾದ— ಅವರಿಂದಲೂ ಸೃಷ್ಟಿಸಲ್ಪಡದ ಈ ಅಪೂರ್ವ ವೇದಮಂತ್ರಗಳನ್ನು ಮಹರ್ಷಿಗಳೆಲ್ಲರೂ ಶಿರಸ್ಸಿನಲ್ಲಿಟ್ಟು ಅಂಗೀಕರಿಸಿ, ಗೌರವಿಸಿ ಕೃತಾರ್ಥರಾದರು. ಈ ಸೂಕ್ತಗಳನ್ನು ಅಧ್ಯಯನ ಮಾಡಿದರೂ, ವಿಮರ್ಶಿಸಿದರೂ, ವಿಚಾರವನ್ನು ಚಿಂತಿಸಿದರೂ, ಅರ್ಥಾನುಸಂಧಾನ ಮಾಡಿದರೂ ಇವು ಉಪಾಸಕನನ್ನು ಪರಮಗತಿಗೆ ಒಯ್ಯುತ್ತವೆ ಎಂಬುದನ್ನು ಈ ಋಷಿಗಳೆಲ್ಲ ಕಂಡುಕೊಂಡರು.

ತತ್ರ ಪುಂ ಲಕ್ಷಣಂ ಸೂಕ್ತಂ ಸದ್‌ಬ್ರಹ್ಮಗುಣಭೂಷಿತಂ ।
ಸ್ವೀಚಕಾರಾರವಿಂದಾಕ್ಷಃ ಸ್ವಮಹಿಮ್ನಿ ಪ್ರತಿಷ್ಠಿತಂ ॥
ತತ್ರಸ್ತ್ರೀಲಕ್ಷಣಂ ಸೂಕ್ತಂ ಸದ್‌ಬ್ರಹ್ಮಗುಣಭೂಷಿತಂ ।
ಸ್ವೀಚಕಾರಾಹಮವ್ಯಗ್ರಾ ಸ್ವಮಹಿಮ್ನಿ ಪ್ರತಿಷ್ಠಿತಂ ॥

ತೇ ಏತೇ ಪರಮೇ ಸೂಕ್ತೇ ಮಹರ್ಷಿಗಣ ಸೇವಿತೇ ।
ಅಧೀತೇ ಚ ವಿಮೃಷ್ಟೇ ಚ ನಯೇತಾಂ ಪರಮಾಂ ಗತಿಂ ॥

(ಲಕ್ಷ್ಮೀತಂತ್ರ, 50-16 ರಿಂದ 18)

ಇಷ್ಟು ಮಹಿಮೆಯುಳ್ಳ ಈ ದಿವ್ಯಸೂಕ್ತವನ್ನು ಲಕ್ಷ್ಮೀದೇವಿಯ ಪೂಜಾಕಾಲದಲ್ಲಿ ಹೇಗೆ ವಿನಿಯೋಗಿಸಬೇಕೆಂಬುದನ್ನು ಇಲ್ಲೇ ಮುಂದೆ ಹೇಳಿದೆ. ಅಂದರೆ, ಸೂಕ್ತದ ಯಾವ ಯಾವ ಋಕ್ಕುಗಳನ್ನು ಅರ್ಚನೆಯ ಯಾವ ಯಾವ ಹಂತಗಳಲ್ಲಿ – ಅರ್ಘ್ಯ, ಪಾದ್ಯ, ಪುಷ್ಪಸಮರ್ಪಣೆ ಮೊದಲಾದ ಹಂತಗಳಲ್ಲಿ— ವಿನಿಯೋಗಿಸಬೇಕೆಂಬ ವಿವರಗಳೂ ಇಲ್ಲುಂಟು. ವಸಿಷ್ಠ, ಬೋಧಾಯನ ಮುಂತಾದ ಸ್ಮೃತಿಕಾರರೂ ಈ ಸೂಕ್ತ ಮಹಿಮೆಯನ್ನು ಸ್ತುತಿಸಿ, ವಿನಿಯೋಗಗಳನ್ನು ಹೇಳಿರುವುದಲ್ಲದೆ, ಶ್ರೀಸೂಕ್ತ (ಹೋಮ) ಯಾಗ ಪ್ರಕಾರವನ್ನೂ ಅನುಶಾಸನ ಮಾಡಿ, ಪುಷ್ಕಳವಾದ ಫಲಗಳನ್ನು ವರ್ಣಿಸಿದ್ದಾರೆ. ಪಾದ್ಮಪುರಾಣದಲ್ಲೂ ಈ ವಿಷಯಗಳು ಉಕ್ತವಾಗಿವೆ.

## ೩ ಒಂದು ಪ್ರಶ್ನೆಗೆ ಉತ್ತರ

ಹಾಗಾದರೆ, ಒಂದುಕಡೆ ಹಿರಣ್ಯಗರ್ಭನೆನಿಸಿದ ಚತುರ್ಮುಖಬ್ರಹ್ಮನನ್ನೇ ಈ ಸೂಕ್ತಕ್ಕೆ ದ್ರಷ್ಟಾ ಎಂದೂ, ಇನ್ನೊಂದುಕಡೆ ಆನಂದ, ಕರ್ದಮ. ಚಿಕ್ಲೀತ, ಶ್ರೀದ ಇತ್ಯಾದಿಗಳನ್ನೂ ಋಷಿಗಳೆಂದು ಹೇಳಿರುವುದರ ಭಾವ ಏನು ? ಒಂದೇ ಸೂಕ್ತಕ್ಕೆ ಎಷ್ಟು ಜನ ಋಷಿಗಳಿರಲು ಸಾಧ್ಯ ? ಎಂದು ಕೇಳುವುದಾದರೆ ಪ್ರಾಚೀನರು (ಸಾಯಣಾದಿಗಳು) ಹೀಗೆ ಸಮಾಧಾನ ಹೇಳಿದ್ದಾರೆ.

ಹಿಂದೊಮ್ಮೆ ಲಕ್ಷ್ಮೀದೇವಿಗೆ ಮೊದಲು ಪ್ರತ್ಯಕ್ಷವಾದ ಈ ಸೂಕ್ತವೇ ಕಾಲಕ್ರಮದಲ್ಲಿ ಲುಪ್ತವಾಗಿ, ಮತ್ತೆ ಈ ಎಲ್ಲಾ ಶ್ರೀಪುತ್ರರಿಗೂ ಪ್ರತ್ಯಕ್ಷವಾದುದರಿಂದ ಈ ಎರಡೂ ವ್ಯವಹಾರಬಗೆಗಳಲ್ಲಿ ವಿರೋಧವೇನಿಲ್ಲ ಎಂದು.

ಹಿಂದೆ ಯಾರಿಗೋ ಪ್ರತ್ಯಕ್ಷವಾಗಿದ್ದ ಮಂತ್ರವೇ ಆದರೂ, ಅದು ಉಪಲಬ್ಧವೇ ಆಗಿದ್ದರೂ, ಆ ಮಂತ್ರಗಳ ಸಾಕ್ಷಾತ್ಕಾರರೂಪ ಜ್ಞಾನವನ್ನು ಪಡೆದುಕೊಳ್ಳುವವರೂ ಋಷಿಗಳೇ ಎಂಬುದು ವೇದದಲ್ಲಿ (ತೈ. ಸಂ. II–5–8) ಬರುವ ನೃಮೇಧ-ಪರುಚ್ಛೇಪರ ಕಥೆಯಿಂದ ತಿಳಿದು ಬರುತ್ತದೆಂಬುದನ್ನು ನಮ್ಮ ಗ್ರಂಥಮಾಲೆಯ ೫ನೆಯ ಸಂಪುಟದಲ್ಲಿ ಈಗಾಗಲೇ ನಿರೂಪಿಸಿಯಾಗಿದೆ. (ಪುಟ 25–33). ಸಾಮಿಧೇನೀ ಎಂಬ ಮಂತ್ರಗಳು ಜಗತ್ಪ್ರಸಿದ್ಧವಾಗಿ ಅಂದೂ ಇಂದೂ ವೈದಿಕರಿಗೆಲ್ಲ ತಿಳಿದೇ ಇದೆ !

ತಂ ತ್ವಾ ಸಮಿದ್ಭಿರಂಗಿರಃ ।
ಘೃತೇನ ವರ್ಧಯಾಮಸಿ ।
ಬೃಹಚ್ಛೋಚಾ ಯವಿಷ್ಠ್ಯ ॥
(ಋ. ಸಂ. VI–16–11 ಮತ್ತು ತೈ. ಬ್ರಾ. III–5–2.)

ವೈದಿಕರು ವೇದಿಯಲ್ಲಿ ಅಗ್ನಿಯನ್ನು (ಯಜ್ಞೇಶ್ವರನನ್ನು) ಆವಾಹನೆ ಮಾಡುವ ಮಂತ್ರ ಇದು. ನೃಮೇಧ ಪರುಚ್ಛೇಪರಿಬ್ಬರಿಗೂ ಈ ಮಂತ್ರ ಶಬ್ದಗಳು ಅಧ್ಯಯನವಾಗಿದ್ದವು, ಸಮಾನವಾಗಿ ! ಆದರೆ ಪರುಚ್ಛೇಪನಿಗೆ ಈ ಮಂತ್ರವು ಅರ್ಥಸಹಿತ ಸ್ವಾಧೀನವಾಗಿ ಸಾಕ್ಷಾತ್ಕಾರವಾಗಿದ್ದಂತೆ, ನೃಮೇಧನಿಗೆ ಆಗಿರಲಿಲ್ಲ ! ಇದೇ ಮಂತ್ರ ಹೇಳುತ್ತಾ ಯಜ್ಞಾರಣಿಗಳನ್ನು ಹುತ ಮಾಡಿದಾಗ ಅವನು ಕೇವಲ ಹೊಗೆಯನ್ನು ಮಾತ್ರ ಉಂಟುಮಾಡಿದರೆ, ಪರುಚ್ಛೇಪನು ಅಗ್ನಿಯನ್ನೇ ನೇರವಾಗಿ ತರಿಸುತ್ತಾನೆ. ನೃಮೇಧನು ತನ್ನ ಸೋಲೊಪ್ಪಿಕೊಂಡು ಮಿತ್ರನ ಕಾಲಿಗೆ ಬಿದ್ದು "ನೀನೀಗ ಋಷಿ" ಎಂದು ಹೇಳಿದನೆಂಬಲ್ಲಿ ಋಷಿಶಬ್ದದ ವ್ಯಾಖ್ಯಾನವೇ ಆವಿರ್ಭವಿಸಿದೆ. ಇಂದಿಗೂ ಶ್ರೀಸೂಕ್ತವನ್ನು ಹೀಗೆ ಸಾಕ್ಷಾತ್ಕಾರ ಮಾಡಿಕೊಂಡ ಋಷಿಗಳು ಇರುವುದು ಸಾಧ್ಯ. ಆದರೆ ಎಷ್ಟು ಜನ ಹಾಗಿದ್ದಾರೆಂಬುದು ಬೇರೆ ವಿಚಾರ. ನೇರವಾಗಿ ಮೊದಲಿಗೇ ಪ್ರತ್ಯಕ್ಷಮಾಡಿಕೊಳ್ಳದಿದ್ದರೂ, ಹನ್ನೆರಡಾವೃತ್ತಿಯೊಳಗೇ ಯಾವನಿಗೆ ಕಿವಿಗೆ ಬಿದ್ದ ಮಂತ್ರವು ಅರ್ಥಸಮೇತ ಕಣ್ಣಿಗೆ ಕಾಣಲಾರಂಭಿಸು

ವುದೋ ಅವನೂ ಋಷಿಯೇ ಎಂದು ಶ್ರೀಮನ್ಮಧ್ವಾಚಾರ್ಯರು ತಮ್ಮ ಋಗ್ಭಾಷ್ಯದಲ್ಲಿ ಹೇಳಿರುವುದೂ ಇಲ್ಲಿ ಸ್ಮರಣೀಯ.

ಯಃ ಪಶ್ಯತಿ ಸ್ವಯಂ ವಾಕ್ಯಂ ಸ ಋಷಿಃ ತಸ್ಯ ಕೀರ್ತಿತಃ ।
ಅರ್ವಾಕ್ತು ದ್ವಾದಶಾವೃತ್ತೇಃ ಅಧೀತ್ಯಾಪಿ ಋಷಿರೇವ ಸಃ ॥

ಮನುವು ಮೊದಲು ಕಂಡ ಮಂತ್ರವೊಂದನ್ನು (ಋ. ಸಂ X–61–62) ನಾಭಾನೇದಿಷ್ಠನೆಂಬ ಅವನ ಪುತ್ರನೂ 'ಕಂಡು', ಇಬ್ಬರೂ ಒಂದೇ ಮಂತ್ರಕ್ಕೆ ಋಷಿಗಳಾಗಿರುವುದೂ, ಇಂಥ ಹಲವು ಪ್ರಸಂಗಗಳೂ ವೇದವಾಙ್ಮಯದಲ್ಲಿ ಪ್ರಸಿದ್ಧವಾಗಿವೆ. ಆದ್ದರಿಂದ ಕುಚೋದ್ಯಗಳಿಗೆ ಇಲ್ಲಿ ಅವಕಾಶವೇ ಇಲ್ಲ.

## ೪ ಶ್ರೀಸೂಕ್ತ ಭಾಷ್ಯಗಳು

ಈಗ ಇಷ್ಟೊಂದು ಮಹಿಮೆಯುಳ್ಳ ಈ ಶ್ರೀಸೂಕ್ತವನ್ನು ಪ್ರಾಚೀನ ವ್ಯಾಖ್ಯಾನಗಳ ಸಹಾಯದಿಂದ ಅರಿಯಲು ಯತ್ನಿಸೋಣ.

ಈ ಸೂಕ್ತಕ್ಕೆ ಶ್ರೀಸಾಯಣ ಭಾಷ್ಯವಲ್ಲದೆ ಮಹೀಧರಾಚಾರ್ಯರ ಭಾಷ್ಯವೂ, ಶತಾನಂದ ವೃತ್ತಿಯೂ, ಶ್ರೀಕಂಠ ಭಾಷ್ಯವೂ, ಒಂದು ಪರಂಪರೆಯ ಅರ್ಥಕ್ರಮವಾದರೆ, ಶ್ರೀರಂಗನಾಥ ಮುನಿಗಳೆಂದು ಖ್ಯಾತರಾದ (ನಂಜೀಯರ್ ಎಂಬ ತಮಿಳು ರೂಢಿಯ ಹೆಸರಿನ) ಶ್ರೀವೈಷ್ಣವಾಚಾರ್ಯರ ವ್ಯಾಖ್ಯಾನವೂ (ಸುಮಾರು ೧೨ನೆಯ ಶತಮಾನದ ಪೂರ್ವಾರ್ಧದಲ್ಲಿ ರಚಿತವಾದ ಈ ಭಾಷ್ಯ ಸಾಯಣರದ್ದಕ್ಕಿಂತ ಹಳೆಯದೆಂಬುದು ನಿರ್ವಿವಾದವಾಗಿದ್ದು,) ಇದಲ್ಲದೆ ಇದಕ್ಕಿಂತಲೂ ಪ್ರಾಚೀನವಾದ, ಶ್ರೀವೈಷ್ಣವ ಪಾರಂಪರಿಕ ಅರ್ಥಗಳನ್ನೆಲ್ಲ ಸಂಗ್ರಹಿಸಿ, ವಿವರಿಸಿ ಬರೆದಿರುವ ಈಚಿನ ತಮಿಳು ವ್ಯಾಖ್ಯಾನವೂ ತಮಿಳುನಾಡಿನ (ತಿರುಚ್ಚಿರಾಪಳ್ಳಿಯ ಬಳಿಯ ಪುತ್ತೂರು ಎಂಬ ಅಗ್ರಹಾರವಾಸಿಗಳೂ, ಶ್ರೀವೈಷ್ಣವ ಸುದರ್ಶನಂ ಎಂಬ

ಪತ್ರಿಕೆಯ ಸಂಪಾದಕರೂ, ವಕೀಲರೂ, ವಿದ್ವಾಂಸರೂ ಆದ ಶ್ರೀ ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ಯರಿಂದ ರಚಿತವಾಗಿ, ಅವರಿಂದಲೇ ಮುದ್ರಿಸಲ್ಪಟ್ಟು ಪ್ರಚುರಗೊಂಡುದೂ) ಉಪಲಬ್ಧವಿವೆ. ಮಾಧ್ವಸಂಪ್ರದಾಯದಲ್ಲೂ ಶ್ರೀಸೂಕ್ತವ್ಯಾಖ್ಯಾನಗಳಿರಬೇಕೆಂಬುದು ನಮ್ಮ ಗ್ರಹಿಕೆಯಾಗಿದ್ದು, ಎಷ್ಟು ಪ್ರಯತ್ನಿಸಿಯೂ ಇವು ಯಾವುವೂ ಈ ವರೆಗೆ ಈ ಲೇಖಕನಿಗೆ ದೊರೆಯಲಿಲ್ಲ. ದೊರೆತಿರುವ ಒಂದು ಮಾಧ್ವ ಸಂಪ್ರದಾಯದ್ದೋ ಅಲ್ಲವೋ ಎಂದು ಸ್ಪಷ್ಟವಾಗಿ ಹೇಳಬರುವಂತಿಲ್ಲ. ಅಲ್ಲಲ್ಲಿ ಮಾಧ್ವಲಕ್ಷಣಗಳಿದ್ದರೂ ಇದು ಆಮೂಲಾಗ್ರವಾಗಿ ಸಾಯಣ ಭಾಷ್ಯವನ್ನೇ ಬಹುಪಾಲು ಅನುಸರಿಸಿರುವುದು ಕಾಣಬರುತ್ತದೆ. ಮತ್ತು ಗ್ರಂಥ ಕರ್ತೃಗಳ ಹೆಸರು ಎಲ್ಲೂ ಕಾಣಬರುವುದಿಲ್ಲ. ಆದಿಯಲ್ಲೂ ಅಂತ್ಯದಲ್ಲೂ ಯಾವ ಮಂಗಳ ಶ್ಲೋಕಗಳೂ ಇಲ್ಲದಿರುವುದೂ ಸಂಶಯಕ್ಕೆ ಆಸ್ಪದವಾಗಿರುವ ಇನ್ನೊಂದು ಕಾರಣ. ನನ್ನ ಅಧ್ಯಾಪಕ (ಕಿರಿಯ) ಮಿತ್ರರಾದ ಡಾ. ಶ್ರೀ ಕೆ. ಬಿ. ಅರ್ಚಕ್ ಅವರು ತಮ್ಮ ಮಿತ್ರರೊಬ್ಬರಿಂದ ಇದನ್ನು ತರಿಸಿ, ಝೆರಾಕ್ಸ್ ಪ್ರತಿಯನ್ನು ತಾವೇ ಮಾಡಿಸಿ ಕೊಟ್ಟು ಉಪಕರಿಸಿದ್ದರೂ, ಇದು ವಿಶೇಷ ಉಪಯುಕ್ತವಲ್ಲದಿರುವುದು ದುರದೃಷ್ಟಕರ.

ಶ್ರೀವೈಷ್ಣವ ಸಂಪ್ರದಾಯದಲ್ಲೂ, ಮೇಲೆ ಹೆಸರಿಸಿದ ನಂಜೀಯರೆಂಬ ರಂಗನಾಥಮುನಿಗಳದುದು ಹೆಸರಿಸಲ್ಪಟ್ಟ ಆಚಾರ್ಯರ ಹೆಸರಿನಲ್ಲಿ ಈಗ ದೊರಕುವ ಶ್ರೀಸೂಕ್ತಭಾಷ್ಯ ಅವರದ್ದಲ್ಲವೆಂದು ಮಾನ್ಯ ಶ್ರೀ ಉ. ವೇ. ಕೃಷ್ಣಸ್ವಾಮಿ ಅಯ್ಯಂಗಾರ್ಯರು ಅನೇಕ ಯುಕ್ತಿಗಳನ್ನು ತೋರಿಸಿದ್ದಾಗ್ಯೂ, ಮಹಾಮಹೋಪಾಧ್ಯಾಯ (ವೈ. ವಾ) ಗೋಷ್ಠೀಪುರಂ ಸೌಮ್ಯ ನಾರಾಯಣಾಚಾರ್ಯ ಸ್ವಾಮಿಗಳಿಗೆ ದೊರೆತ ಈ ತಾಳಕೋಶ ಗ್ರಂಥವನ್ನು ಹಿಂದೆ ಅಚ್ಚುಮಾಡಿಸಿದ ಶ್ರೀ. ಉ. ವೇ. ಎ. ಶ್ರೀನಿವಾಸರಾಘವಾಚಾರ್ಯರೂ, ಮತ್ತು ಅಭಿನವದೇಶಿಕಾದ್ಯನೇಕ ಬಿರುದಾಲಂಕೃತರಾದ (ವೈ. ವಾ) ಪಂಡಿತ ಸಾರ್ವಭೌಮರಾದ ಶ್ರೀ ಉತ್ತಮೂರು ವೀರರಾಘವಾಚಾರ್ಯ ಸ್ವಾಮಿಗಳೂ (ಇವರೂ ಇದನ್ನು ಮತ್ತೆ ಅಚ್ಚುಮಾಡಿಸಿರುವುದಲ್ಲದೆ ತಮ್ಮ ಟಿಪ್ಪಣಿಗಳನ್ನೂ ಸೇರಿಸಿ ಮುದ್ರಿಸಿರುವುದರಿಂದ), ಇದನ್ನು ಆ ಆಚಾರ್ಯರದೆಂದೇ ಅಂಗೀ

ಕರಿಸಿರುವುದರಿಂದ, ಇಲ್ಲೂ ಮಾನ್ಯಮಾಡಲಾಗಿದ್ದು, ಉಪಯೋಗಿಸಿಕೊಳ್ಳ ಲಾಗಿದೆ.

ಇವಲ್ಲದೆ ಮಂತ್ರಕಲ್ಪಾರ್ಣವ, ಚಿದ್ವಿಲಾಸವೃತ್ತಿ, ಸೂಕ್ತಾರ್ಥರತ್ನಾಕರ, ಭಾಗಧೇಯಾಭೂಷಣಂ, ಸಾರಸ್ವತಸಿದ್ಧಿ, ಸೌಭಾಗ್ಯಸಂಜೀವಿನೀ. ಮುಂತಾದ ಭಿನ್ನ ಭಿನ್ನ ಸಂಪ್ರದಾಯಗಳಲ್ಲಿ ಬರುವ ಉಪಯುಕ್ತ ನಿರ್ವಚನ, ಮಹಿಮವರ್ಣನ, ವಿನಿಯೋಗ ಪ್ರಕಾರಗಳೂ ಈ ಸೂಕ್ತವನ್ನು ಅರಿಯುವಲ್ಲಿ ಸಹಾಯಕವಾಗಿವೆ. ಸ್ಕಾಂದಪುರಾಣ, ಪಾದ್ಮಪುರಾಣಾದಿಗಳಲ್ಲೂ ಇಂಥ ವರ್ಣನೆಗಳುಂಟು.

ಎಲ್ಲಕ್ಕಿಂತ ಮಿಗಿಲಾಗಿ ಲಕ್ಷ್ಮೀತಂತ್ರದಲ್ಲಿ ಪ್ರಕೃತ ಶ್ರೀಸೂಕ್ತದ ಒಂದೊಂದು ಋಕ್ಕಿನಲ್ಲೂ ಬರುವ ಎಲ್ಲ ಲಕ್ಷ್ಮೀನಾಮಗಳ ಬಹುಮಾರ್ಮಿಕ ನಿರ್ವಚನವೂ, ಅಪೂರ್ವಾಂಶಗಳೂ ಕೂಡಿರುವುದರಿಂದ ಯಥಾಮತಿ ಈ ಎಲ್ಲ ಸ್ವಾರಸ್ಯಾಂಶಗಳನ್ನೂ ಕೂಡಿಸಿ, ಸಂಗ್ರಹವಾಗಿ ಇಲ್ಲಿ ವಿವರಿಸಲು ಯತ್ನಿಸಲಾಗುವುದು. ನಮ್ಮ ವಿಶೇಷ ಗಮನ ಲಕ್ಷ್ಮೀತತ್ತ್ವವನ್ನು ವಾಚಕರಿಗೆ ಪರಿಚಯ ಮಾಡಿಕೊಡುವ ವಿಷಯದಲ್ಲಿರುವುದು, ಎಂಬುದನ್ನು ವಾಚಕರು ಮರೆಯಬಾರದು.

ಮಾಧ್ವಸಂಪ್ರದಾಯದಲ್ಲಿ ಅಂಭೃಣೀ ಸೂಕ್ತವ್ಯಾಖ್ಯಾನ ದೊರೆಯುವುದಾದ್ದರಿಂದ ಮುಂದೆ ಆ ಸೂಕ್ತ ವಿವರಣೆಯನ್ನೂ ಹಲವರು ಇಲ್ಲಿಯೇ ಎದುರು ನೋಡುವುದು ಅಪ್ರಕೃತವಾಗಲಾರದೆಂದು ಬಿನ್ನೈಸುತ್ತೇವೆ. ಶ್ರೀಮದಾನಂದ ತೀರ್ಥರೂ, ಶ್ರೀ ಜಯತೀರ್ಥರೂ, ಶ್ರೀ ವಾದಿರಾಜ ಸ್ವಾಮಿಗಳೂ ಶ್ರೀಸೂಕ್ತ, ಮೇಧಾಸೂಕ್ತ ಮೊದಲಾದ ಶ್ರೀವಿಷಯಕ ಸೂಕ್ತಗಳನ್ನೂ, ಋಗ್ವೇದೀಯ, ಸಾಮವೇದಿಯಾದಿ ಅನೇಕ ಲಕ್ಷ್ಮೀ ಮಂತ್ರಗಳನ್ನೂ, ತಂತಮ್ಮ ಗ್ರಂಥಗಳಲ್ಲಿ ಪ್ರಸಂಗೋಚಿತವಾಗಿ ಉದಾಹರಿಸಿ ವ್ಯಾಖ್ಯಾನ ಮಾಡಿರುವುದು (ಉದಾ. ಗೀತಾಭಾಷ್ಯ, ಅಧ್ಯಾಯ ೧೨ರಲ್ಲಿ ಮಧ್ವಾಚಾರ್ಯರು ಶ್ರೀಸೂಕ್ತ ಅನುಬಂಧೀ "ಶ್ರಿಯಂ ವಸಾನಾ" ಇತ್ಯಾದಿ. ಮಂತ್ರವನ್ನು ದಾಹರಿಸಿದ್ದಾರೆ. ) ಪ್ರಸಿದ್ಧವಿದೆ. ಆದ್ದರಿಂದ ಅವರಿಗೂ ಇದು ಮಾನ್ಯವೇ. ಹೀಗೆ ಮತತ್ರಯದಲ್ಲೂ, ಬೇರೆ ಸಂಪ್ರದಾಯಗಳಲ್ಲೂ

ಈಗಲೂ ಮಾನ್ಯವಾಗಿರುವ ಈ ದಿವ್ಯಸೂಕ್ತವನ್ನು ನಮಗೆ ದೊರಕುವ ಭಾಷ್ಯಗಳ ಸಾರಸಂಗ್ರಹದೊಡನೆ ಈಗ ಮನನ ಮಾಡೋಣ.

ಪ್ರವೇಶ ಮುಗಿಯಿತು

# ಮೊದಲನೆಯ ಮಂತ್ರ— "ಹಿರಣ್ಯವರ್ಣಾಂ"

॥ಹರಿಃ ಓಂ॥

ಹಿರಣ್ಯವರ್ಣಾಂ ಹರಿಣೀಂ ಸುವರ್ಣರಜತಸ್ರಜಾಂ ।
ಚಂದ್ರಾಂ ಹಿರಣ್ಮಯೀಂ ಲಕ್ಷ್ಮೀಂ ಜಾತವೇದೋ ಮ
ಆವಹ ॥ ೧ ॥

ಅರ್ಥ : "ಎಲೈ ಜಾತವೇದನೇ ! ಸುಂದರವಾದ, ಚಿನ್ನದ ಬಣ್ಣವುಳ್ಳವಳೂ, ಜಿಂಕೆಯಂತೆ ಸೊಬಗುಳ್ಳವಳೂ, ಚಿನ್ನದ ಮತ್ತು ಬೆಳ್ಳಿಯ ಮಾಲಿಕೆಗಳನ್ನು ಧರಿಸಿದವಳೂ, ಚಂದ್ರನಂತೆ ಆಹ್ಲಾದಕರಳೂ. ಸ್ವರ್ಣಮಯಳೂ ಆದ ಶ್ರೀಲಕ್ಷ್ಮೀದೇವಿಯ ಸಾಂನ್ನಿಧ್ಯವು, ಆವಿರ್ಭಾವವು ನನ್ನ ಬಳಿ ಆಗುವಂತೆ ಮಾಡು."

## ೧ "ಜಾತವೇದ"ನಾರು

ವಿವರಣೆ : ಇಲ್ಲಿ ಜಾತವೇನೆಂದರೆ ಯಾರು ? ಎಂಬ ಪ್ರಶ್ನೆಗೆ ಶ್ರೀಸಾಯಣ (ವಿದ್ಯಾರಣ್ಯ)ರು ಪ್ರಸಿದ್ಧಾರ್ಥದ ಅಗ್ನಿಯೆಂದೇ ಅರ್ಥಮಾಡಿದ್ದಾರೆ. ಜಾತವೇದ—ಎಂದರೆ —ಜಾತಪ್ರಜ್ಞಃ ಅಂದರೆ, ಹುಟ್ಟಿದ ಎಲ್ಲ

ವಸ್ತುಗಳ ಬಗೆಗೂ ತಿಳುವಳಿಕೆಯುಳ್ಳವನು ಎಂದರ್ಥ. ಪೃಥ್ವೀಧರಾಚಾರ್ಯರೂ ಹೀಗೆಯೇ ಅರ್ಥಮಾಡಿದ್ದಾರೆ. ಶ್ರೀಕಂಠಭಾಷ್ಯಕಾರರು ಇದು ಅಗ್ನಿವಿಷಯಕ ಪ್ರಾರ್ಥನೆಯೇ ಎಂದು ಹೇಳಿ, ಇದನ್ನು ಸಮರ್ಥಿಸಲು ಐಶ್ವರ್ಯಪ್ರಾಪ್ತಿಗೆ ಅಗ್ನಿಯು ಕಾರಣನೆಂಬ ಒಂದು ಪ್ರಮಾಣವಾಕ್ಯವನ್ನು (ಶ್ರಿಯಂ ಇಚ್ಛೇತ್ ಹುತಾಶನಾತ್) ಉದಾಹರಿಸಿದ್ದಾರೆ. ಇಷ್ಟು ಈ ಮೂವರಲ್ಲೂ ಏಕಾರ್ಥವಾದರೆ, ಶ್ರೀಕಂಠರು ಮುಂದುವರೆದು, ಅಗ್ನಿಯೆಂದರೆ ರುದ್ರನೆಂದೂ, ರುದ್ರನಿಗೂ ಅಗ್ನಿಗೂ ತಾದಾತ್ಮ್ಯ ಹೇಳುವ: "ರುದ್ರೋ ವಾ ಏಷೋಽಗ್ನಿಃ" ಎಂಬ ಶ್ರುತಿವಾಕ್ಯವನ್ನು ತೋರಿಸಿ, ರುದ್ರನೇ ಪುರುಷನೆಂದೂ, ಇವನೇ ಪುರುಷಸೂಕ್ತ ಪ್ರತಿಪಾದ್ಯನೆಂದೂ ಬರೆದು, ಪುರುಷಸೂಕ್ತವು ಹೀಗೆ ರುದ್ರಪರವಾದ ಮೇಲೆ, ಶ್ರೀಸೂಕ್ತವು ಪಾರ್ವತೀಪರವೇ ಆಗಿರತಕ್ಕದ್ದೆಂದೂ ವಾದಿಸಿ, ಒಂದಕ್ಕೊಂದಕ್ಕೆ ಬಹುದೂರದ ಅರ್ಥಗಳನ್ನು ಗಂಟುಹಾಕಿ, ಪ್ರತಿಪಾದಿಸಿ, ಶಿವಪಾರಮ್ಯವನ್ನೂ, ಪಾರ್ವತೀವೈಭವವನ್ನೂ ಈ ಪ್ರಸಂಗದಲ್ಲಿ ಕಾಣಲೆಳೆಸಿದ್ದಾರೆ! 'ಶೈವ'ವೆಂಬ ಈ ನಿಷ್ಠೆ ಇಲ್ಲಿ ಅವಶ್ಯಕವೇ ಎಂಬುದೂ, ಉಳಿದ ಮತತ್ರಯಾಚಾರ್ಯರುಗಳ ದಾರಿಯನ್ನು ಇವರೇಕೆ ಬಿಟ್ಟರೆಂಬುದೂ ಇಲ್ಲಿ ವಿವೇಚನೀಯ. ಈ 'ಶ್ರೀಕಂಠ'ರು ಯಾರೆಂಬುದನ್ನು ಅವರು ಶಿವೋತ್ಕರ್ಷದ ಬಗೆಗೆ ಈ ನಿಲುವನ್ನು ತಳೆದ ಪ್ರಸಂಗವನ್ನೂ ನಮ್ಮ ಈ ಹಿಂದಿನ (೮ನೆಯ) ಸಂಪುಟದಲ್ಲಿ ವಿವರಿಸಿಯಾಗಿದೆ! (ಪುಟ ೯೩ ರಿಂದ ೯೭) ಪುರುಷಸೂಕ್ತದಲ್ಲಿನ 'ಪುರುಷ' ನಾರೆಂಬುದನ್ನು ಉತ್ತರಾನುವಾಕದ "ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ" ಎಂಬ ವಾಕ್ಯವು "ಭೂದೇವಿಯೂ ಲಕ್ಷ್ಮಿಯೂ ನಿನ್ನ ಪತ್ನಿಯರು" ಎಂದು ಕರೆಯುವುದರ ಮೂಲಕ ನಿರ್ಣಯಿಸಿಯೇ ಕೊಟ್ಟಾಗಿದೆ. "ಆದರೆ, ಇದು ಉತ್ತರಾನುವಾಕದಲ್ಲೇ ಹೊರತು ಮೂಲದಲ್ಲಿಲ್ಲವಲ್ಲ!" ಎಂದು ಕೇಳುವವರಿಗೆ ಹೇಳುವುದಿಷ್ಟೇ: ಇಲ್ಲಿ "ಪುರುಷನಾರು?" ಎಂಬ ಸಂದೇಹ ಎದ್ದಿದ್ದರೆ ವೇದವ್ಯಾಸರು ಬ್ರಹ್ಮಸೂತ್ರಗಳಲ್ಲಿ ಇದರ ಪ್ರಸ್ತಾಪ ಮಾಡುತ್ತಿರಲಿಲ್ಲವೇ? ಹಾಗೆ ಸಂದೇಹಾಸ್ಪದವಾದಲ್ಲೆಲ್ಲ: "ಜ್ಯೋತಿಃ ಚರಣಾಭಿಧಾನಾತ್," "ಆಕಾಶಃ ತಲ್ಲಿಂಗಾತ್", ಮುಂತಾದೆಡೆಗಳಲ್ಲಿನಂತೆ ಆಕಾಶ, ಜ್ಯೋತಿಃ ಇತ್ಯಾದಿ ಶಬ್ದಗಳ ವಾಚ್ಯನಾರೆಂದು ನಿರ್ಣಯಿಸಿದಂತೆ, ಇಲ್ಲೂ

ನಿರ್ಣಯಿಸುತ್ತಿದ್ದರು. ಅವರ ಕಾಲದಲ್ಲಿ ವೈದಿಕರಿಗೆ ಇಲ್ಲಿ ಸಂದೇಹವೇ ಇರಲಿಲ್ಲ. ವೇದಗಳಲ್ಲೂ ಸ್ಮೃತಿಗಳಲ್ಲೂ ಪುರುಷಸೂಕ್ತದ ಪುರುಷನಾರೆಂದು ಬೇರೆಕಡೆಗಳಲ್ಲಿ ಹೇಳಿಯೇ ಇದ್ದರು.

೧ ಪುರುಷೋ ಹ ವೈ ನಾರಾಯಣೋಽ ಕಾಮಯತ।

(ಛಾಂದೋಗ್ಯ)

೨ ಏಷಾ ವೈಷ್ಣವೀ ನಾಮ ಸಂಹಿತಾ। ಏತಾಂ ಪ್ರಯುಂಜನ್
ವಿಷ್ಣುಂ ಪ್ರೀಣಾತಿ ॥ (ಅದೇ)

೩ ಪುರುಷಸ್ಯ ಹರೇಃಸೂಕ್ತಂ ಸ್ವರ್ಗ್ಯಂ ಧನ್ಯಂ ಯಶಸ್ಕರಂ
(ಯಮಸ್ಮೃತಿ)

೪ ಆಸೀನಃ ಪ್ರಾಙ್ಮುಖಃ ಶುದ್ಧಃ ಚಿನ್ತಯನ್ ಮನಸಾ
ಹರಿಂ।
ಪೌರುಷೇಣೈವಸೂಕ್ತೇನ ಜುಹುಯಾದ್ಧವ್ಯವಾಹನಂ ॥
(ಯೋಗವಾಸಿಷ್ಠ)

೫ ಬ್ರಹ್ಮಹತ್ಯಾದಿ ಪಾಪಾನಾಂ ಸರ್ವೇಷಾಂ ಅಪನುತ್ತಯೇ।
ಪಠೇತ್ತು ಪೌರುಷಂ ಸೂಕ್ತಂ ಏಕಾಂತೇ ಸಂಸ್ಮರನ್
ಹರಿಂ ॥ (ಪಾದ್ಮಪುರಾಣ)

೬ ಪೂಃ ಸಂಜ್ಞೇ ತು ಶರೀರೇಽಸ್ಮಿನ್ ಶಯನಾತ್ ಪುರುಷೋ
ಹರಿಃ।
ಶಕಾರಸ್ಯ ಷಕಾರೋಽಯಂ ವ್ಯತ್ಯಾಸೇನ ಪ್ರಯುಜ್ಯತೇ ॥
ಯದ್ವಾ ಪುರೇ ಶರೀರೇಽಸ್ಮಿನ್ ಆಸ್ತೇ ಸ ಪುರುಷೋ
ಹರಿಃ।
ಯದಿ ವಾ ಪುರಿ ವಾಸೀತಿ ಪುರುಷಃ ಪ್ರೋಚ್ಯತೇ ಹರಿಃ ॥
(ಅದೇ, ನಿರ್ವಚನಾಧ್ಯಾಯ)

(ಪುರ = ಶರೀರ, ಇದರಲ್ಲಿ ವಾಸಿಸುವವನು, ಮಲಗಿರುವವನು = ಪುರುಷ ಸರ್ವಾಂತರ್ಯಾಮಿ, ಶ್ರೀಹರಿ.)

೭ ಪುರಿಶೇತೇ, ಪುರಿಶಯಂ

ಇತ್ಯಾದಿ ಔಪನಿಷದ ಪ್ರಯೋಗಗಳೂ ಉಂಟು.

೮ ಯಥಾ ಭಾಸ್ಕರ ಶಬ್ದೋsಯಂ ಆದಿತ್ಯೇ ಪ್ರತಿತಿಷ್ಠತಿ ।
ಯಥಾ ಪುರುಷಶಬ್ದೋsಯಂ ವಾಸುದೇವೇ ಪ್ರತಿಷ್ಠತೇ ॥
ತಥಾ ಶಂಕರ ಶಬ್ದೋsಯಂ ಮಹಾದೇವೇ ಪ್ರತಿಷ್ಠತೇ ॥
(ಸ್ಕಾಂದಪುರಾಣ)

(ರೂಢಿಯಲ್ಲೇ ನೋಡಿದರೂ ಭಾಸ್ಕರ ಶಬ್ದವು ಸೂರ್ಯನನ್ನು ತಪ್ಪದೇ ಸೂಚಿಸುವಂತೆಯೂ, ಪುರುಷ ಶಬ್ದವು ಶ್ರೀವಾಸುದೇವನನ್ನು ಸೂಚಿಸವಂತೆಯೂ ಶಂಕರ ಶಬ್ದವು ಮಹಾದೇವನಾದ ರುದ್ರನನ್ನೇ ಸೂಚಿಸುವುದು ಎಂದು ಹೇಳಿರುವಲ್ಲಿ ಶಿವಪರವಾದ ಪುರಾಣವೇ ಪುರುಷನಾರೆಂದು ತೀರ್ಪಿತ್ತಿದೆ!)

ಪುರುಷ ಸೂಕ್ತಾರ್ಥವನ್ನೇ ಪ್ರತಿಪಾದಿಸುವ ಸಮಾನ ಇತರ ಪ್ರಕರಣಗಳೂ ಇವೆ. ಸುಪ್ರಸಿದ್ಧವಾದ ನಾರಾಯಣಾನುವಾಕ (ತೈ. ಅರಣ್ಯಕ)— "ಸಹಸ್ರಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಂ..." ಎಂಬುದು ಇವನನ್ನು ನಾರಾಯಣನೆಂದೇ ಕರೆದಿದೆ. ಇದೇ "ಸಾವಿರ ತಲೆಯ, ಸಾವಿರ ಕಣ್ಣಿನ" ಲಕ್ಷಣದ ಪುರುಷನನ್ನೇ ಪುರುಷಸೂಕ್ತವೂ, "ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ..." ಇತ್ಯಾದಿ ಕೊಂಡಾಡಿರುವಲ್ಲಿ ಇವನಾರೆಂಬುದನ್ನು ಹೇಳುವ ಅವಶ್ಯವಿಲ್ಲವಷ್ಟೆ! ಉತ್ತರಾನುವಾಕದಲ್ಲೂ ಹೀಗೇ, ಲಕ್ಷ್ಮೀಪತಿಯಾದವನೇ ಪುರುಷನೆಂದು ಹೇಳಿರುವುದನ್ನು ತೋರಿಸಿಯಾಗಿದೆ. ನಾರಾಯಣಾನುವಾಕ ಪ್ರತಿಪಾದ್ಯನು, ವೇದದ ಎಲ್ಲಾ ವಿದ್ಯೆಗಳಿಗೂ ಏಕಮಾತ್ರ ಉಪಾಸ್ಯವಸ್ತುವೆಂಬುದನ್ನು ಲಿಂಗಭೂಯಸ್ತ್ವಾಧಿಕರಣದಲ್ಲಿ ವೇದವ್ಯಾಸರೇ ನಿರ್ಧರಿಸುತ್ತಾರಾದಿ (ಬ್ರ. ಸೂ. III–3–43), ಪುರುಷ ಸೂಕ್ತದ ವಿಷ

ಯಕ್ಕೂ ಇದೇ ಅನ್ವಯವಾಗುತ್ತದೆ. ಲಿಂಗವೆಂದರೆ ಚಿಹ್ನೆ. ಪರವಸ್ತುವಿಗೆ ಅಕ್ಷರ, ಶಿವ, ಶಂಭು, ಪರಂಬ್ರಹ್ಮ, ಪರೋಜ್ಯೋತಿಃ, ಪರತತ್ವಂ, ಪರಮಾತ್ಮಾ ಮೊದಲಾದ ಅಸಾಧಾರಣ ಚಿಹ್ನೆಗಳನ್ನೆಲ್ಲ ಹೇಳಿ ಇದೆಲ್ಲ ನಾರಾಯಣತ್ವದಲ್ಲಿ ಮುಗಿಯುತ್ತವೆಯೆಂದು ಸೂಚಿಸಲು, ಈ ಒಂದೊಂದರೊಡನೆಯೂ ನಾರಾಯಣ ಶಬ್ದವನ್ನು ಕೂಡಿಸಿ ಕೂಡಿಸಿ ಹೇಳಿ ನಿರ್ಣಯಿಸಿರುವ ಶ್ರುತಿಯನ್ನು ಯಾರು ಅಲುಗಾಡಿಸಿಯಾರ ? (ನಾರಾಯಣ ಪರಂಬ್ರಹ್ಮ, ತತ್ವಂ ನಾರಾಯಣಃ ಪರಃ। ನಾರಾಯಣ ಪರೋ ಜ್ಯೋತಿಃ, ಆತ್ಮಾ ನಾರಾಯಣಃ ಪರಃ... ಸ ಬ್ರಹ್ಮಾ ಸ ಶಿವಃ ಸೇಂದ್ರಃ ಸೋಽಕ್ಷರಃ ಪರಮಃ ಸ್ವರಾಟ್ ॥) ಆದ್ದರಿಂದ ಹೀಗೆ ಪುರುಷಸೂಕ್ತವು ರೂಢಿಯ ಶಿವಪರವಲ್ಲವಾಗಿ, ಶ್ರೀಸೂಕ್ತವೂ ರೂಢಿಯ ದುರ್ಗಾಪರವಲ್ಲವೆಂದು ನಿರ್ಣಯವಾಗುತ್ತದೆಯಾಗಿ "ಶ್ರೀಕಂಠ"ಭಾಷ್ಯದ ಅತಿರೇಕಗಳು ಉಪೇಕ್ಷಣೀಯ. ಜಾತವೇದನೆಂದರೆ ಬೇರೆಲ್ಲೋ ರುದ್ರನೆಂದೂ ಪರ್ಯಾಯದ ಅಗ್ನಿನಾಮಸಮಾನಾಂತರಾರ್ಥವನ್ನು ಕಾಣುವುದು ಇಲ್ಲಿ ಹೊಂದಲಾರದು.

## ೨ ಜಾತವೇದ— ನಿರುಕ್ತಕಾರರ ವಿವರಣೆ

ಶ್ರೀ ಯಾಸ್ಕಮಹರ್ಷಿಗಳು ನಿರುಕ್ತದಲ್ಲಿ (VII–19) ಜಾತವೇದಾಃ ಎಂಬ ಶಬ್ದಕ್ಕೆ ಅಗ್ನಿಪರವಾಗಿ ಮಾತ್ರ ಹೀಗೆ ವಿವರಣೆ ನೀಡಿರುವುದು ಗಮನೀಯ.

ಜಾತಾನಿ ವೇದ। ಜಾತಾನಿ ವಾ ಏನಂ ವಿದುಃ। ಜಾತೇ ಜಾತೇ ವಿದ್ಯತೇ ಇತಿ ವಾ। ಜಾತವಿತ್ತೋ ವಾ ಜಾತಧನಃ। ಜಾತ ವಿದ್ಯೋ ವಾ ಜಾತ ಪ್ರಜ್ಞಾನಃ। ಯತ್ತತ್ ಜಾತಃ

ಪಶೂನವಿಂದತೇತಿ ತಜ್ಜಾತವೇದಸೋ ಜಾತವೇದಸ್ತ್ವಂ ಇತಿ ಬ್ರಾಹ್ಮಣಂ... (ಇತ್ಯಾದಿ)

ಇದರರ್ಥ: ೧) ಹುಟ್ಟಿದ ಎಲ್ಲಾ ಪ್ರಾಣಿಗಳನ್ನೂ ಇವನು ತಿಳಿದಿರುವುದರಿಂದ ಅಗ್ನಿಯೇ ಜಾತವೇದನು.

೨) ಹುಟ್ಟಿದ ಎಲ್ಲ ಪ್ರಾಣಿಗಳೂ ಯಾವನನ್ನು (ಅಗ್ನಿಯನ್ನು) ತಿಳಿದಿವೆಯೋ ಅವನು ಜಾತವೇದನು.

೩) ಹುಟ್ಟಿದ ಒಂದೊಂದು ಪ್ರಾಣಿಯಲ್ಲೂ (ಪ್ರಜ್ಞಾರೂಪದಲ್ಲಿ) ಇವನು ಇರುವುದರಿಂದ (ವಿದ್ಯತೇ ಇತಿ) ಇವನು ಜಾತವೇದನು.

೪) (ಸಮೃದ್ಧವಾಗಿ) ಧನವುಳ್ಳವನಾದುದರಿಂದ (ಜಾತವಿತ್ತಃ) ಜಾತವೇದನು.

೫) ವಿದ್ಯೆ (ಜ್ಞಾನ)ವುಳ್ಳವನಾದುದರಿಂದ ಇವನು ಜಾತವೇದನು. (ಜಾತವಿದ್ಯಃ).

೬) "ಇವನು ಹುಟ್ಟಿದೊಡನೆಯೇ ಸ್ವಭಾವತಃ ಪಶುಗಳನ್ನು ಹೊಂದಿದನು. ಆದುದರಿಂದ ಜಾತವೇದನು"

ಎಂದು ಹೇಳುವ ಶ್ರುತಿ (ಮೈತ್ರಾಯಣೀಯ ಸಂಹಿತಾ, I-8-2) ಯಂತೆಯೂ ಇವನು ಜಾತವೇದನು. "ಇದಕ್ಕಾಗಿಯೇ ಪಶುಗಳೆಲ್ಲವೂ ಇವನನ್ನು ತಮ್ಮ ಒಡೆಯನೆಂದು ತಿಳಿದು, ಸಕಲ ಋತುಗಳಲ್ಲೂ ಅವನನ್ನು ಶರಣು ಹೋಗಿ, ಆಶ್ರಯಿಸುತ್ತವೆ." ಎಂಬ ಶ್ರುತಿವಾಕ್ಯವೂ (ಅದೇ ಸಂಹಿತೆ) ಇದನ್ನೇ ಸಮರ್ಥಿಸುತ್ತದೆ. (ಪಶುಗಳೇ ವಿತ್ತ = ಧನ ಎಂಬರ್ಥ ಇಲ್ಲಿರುವಂತಿದೆ. ಗೋಧನವೆಂದಂತೆ.) ಹೀಗೆ ಜಾತವೇದನೆಂದರೆ ಅಗ್ನಿಯೇ ಎಂದು ಯಾಸ್ಕರ ಅಭಿಪ್ರಾಯ.

## ೩ ಜಾತವೇದಾಃ— ಶ್ರೀಸಾಯಣರ ವಿವರಣೆ

ಶ್ರೀಸಾಯಣಾಚಾರ್ಯರೂ ಸಹ (ಋಗ್ಭಾಷ್ಯ ||-2-1ರಲ್ಲಿ) "ಜಾತ ವೇದಸಂ" ಎಂಬುದಕ್ಕೆ "ಜಾತಾನಾಂ ವೇದಿತಾರಂ, ಜಾತಧನಂ, ಜಾತ ಪ್ರಜ್ಞಂವಾ ಅಗ್ನಿಂ" ಎಂದೇ ವಿವರಣೆ ನೀಡಿದ್ದಾರೆ. ("ಹುಟ್ಟಿದ್ದೆಲ್ಲವನ್ನೂ ತಿಳಿದವನು, ಧನೋತ್ಪಾದಕನು, ಜ್ಞಾನವನ್ನು ಬೆಳೆಸುವವನು" ಎಂದರ್ಥ.)

ದೇವತೆಗಳಿಗೆ ನಷ್ಟವಾಗಿಹೋಗಿದ್ದ ಧನವನ್ನು ಅಗ್ನಿಯು ಮತ್ತೆ ದೊರಕಿಸಿಕೊಟ್ಟನೆಂಬ ಅರ್ಥವನ್ನು ಪೋಷಿಸುವ ಒಂದು ಆಖ್ಯಾನವೂ ಯಜು ರ್ವೇದದಲ್ಲಿದೆ. [ತೈ. ಸಂ (|-9-5)] ಅದು ಹೀಗಿದೆ :

ಒಮ್ಮೆ ಹಗಲೆಂಬುದೆಲ್ಲಾ ದೇವತೆಗಳ ವಶದಲ್ಲೂ, ರಾತ್ರಿಯೆಲ್ಲಾ ಅಸುರರವಶದಲ್ಲೂ ಇತ್ತು. ಆಗ ಅಸುರರು ದೇವತೆಗಳ ಯಾವ ಧನವಿತ್ತೋ ಅದನ್ನು, (ಅಂದರೆ-ವಿತ್ತಂ-ದೇವತೆಗಳ ಬಳಿ ಈಗಾಗಲೇ ಇದ್ದದ್ದನ್ನೂ, ಅವರು ಪಡೆದದ್ದನ್ನೂ, ಮತ್ತು-ವೇದ್ಯಂ-ಮುಂದೆ ಪಡೆಯಲು ಯೋಗ್ ವಾದುದನ್ನೂ, ಹೀಗೆ ಎರಡನ್ನೂ ಎಂದು ಶ್ರೀಭಟ್ಟಭಾಸ್ಕರರ ಭಾಷ್ಯದಂತೆ) ಅಪಹರಿಸಿಕೊಂಡು ರಾತ್ರಿಯಲ್ಲಿ ಪ್ರವೇಶಿಸಿದರು. (ಈ ಧನವು ಗೋಸಂಪ ತ್ತಿನ ರೂಪದ್ದೆಂದು ಶ್ರೀಸಾಯಣಭಾಷ್ಯ) ಗೋ = ಎಂದರೆ ಬೆಳಕು ಎಂದೂ ಅರ್ಥವಿದೆ. ಜ್ಞಾನವೆಂಬ ಆತ್ಮದ ಬೆಳಕಿನ ಪ್ರಸಿದ್ಧಾರ್ಥದ ಹಿನ್ನೆಲೆ ಯಲ್ಲಿ ನಡೆದ ಈ ಅಪಹಾರವು, ಬೆಳಕಿನ ಶಕ್ತಿಗಳೆಂದು ಖ್ಯಾತರಾದ ದೇವತೆ ಗಳ ಸರ್ವಸ್ವಾಪಹಾರವೆಂಬ ವಿಶಾಲಾರ್ಥ ಈ ಕಥೆಗುಂಟು. ("ವಿತ್ತಂ, ಪೂರ್ವಲಬ್ಧಂ ಪಶುರೂಪಂ ಧನಂ, ವೇದ್ಯಂ, ಅತಃಪರಂ ಲಬ್ಧುಂ ಯೋಗ್ಯಂ, ತದುಭಯಂ ದೇವದ್ರವ್ಯಂ" ಎಂದು ಭಾಷ್ಯ.)

ಆಗ ಧನರಹಿತರಾದ ದೇವತೆಗಳು ಹೀಗೆ ಯೋಚಿಸಿದರು. "ರಾತ್ರಿ ಯಲ್ಲೂ ಅಗ್ನಿಗೆ ಪ್ರಭುತ್ವವುಂಟು ! ಪಶುಗಳೂ ಅವನವೇ! ಆದುದರಿಂದ ಈ ಅಗ್ನಿಯನ್ನೇ ಸ್ತುತಿಸೋಣ, ಹಾಗೆ ಸ್ತುತಿಸಿದರೆ ನಮ್ಮ ಪಶುಗಳನ್ನು ಅವನು ಪುನಃ ನಮಗೆ ಕೊಡುವನು" ಎಂದು. ಹೀಗೆ ತೀರ್ಮಾನಿಸಿದಮೇಲೆ ಅವರು ಅಗ್ನಿಯನ್ನು ಸ್ತುತಿಸಿದರು. ಸ್ತುತಿಸಲ್ಪಟ್ಟ ಅಗ್ನಿಯು ರಾತ್ರಿಯೊಳ

ಗಿಂದ, ಅಸುರರು ಅಪಹರಿಸಿ ಬಚ್ಚಿಟ್ಟಿದ್ದ, ದೇವತೆಗಳ ಧನವಾದ, ಗೋವುಗಳನ್ನು ಬಿಡಿಸಿ ತಂದು ದೇವತೆಗಳಿಗೆ ಕೊಟ್ಟನು. ಯಥಾವನು ಹೀಗೆ ಅರಿತು ಅಗ್ನಿಯನ್ನು ಉಪಾಸಿಸುವನೋ ಅವನು ಗೋಸಮೃದ್ಧಿಯನ್ನು ಹೊಂದುವನು— ಎಂಬುದೇ ಆ ಕಥೆ.

(ಅಹರ್ದೇವಾನಾಂ ಆಸೀತ್ ರಾತ್ರಿರಸುರಾಣಾಂ ತೇಽಸುರಾಯದ್ದೇವಾನಾಂ ವಿತ್ತಂ ವೇದಮಾಸೀತ್ತೇನ ಸಹ ರಾತ್ರಿಂ ಪ್ರಾವಿಶನ್ ತೇ ದೇವಾ ಹೀನಾ ಅಮನ್ಯನ್ತ ತೇಽಪಶ್ಯನ್ನಾಗ್ನೇಯೀ ರಾತ್ರಿರಾಗ್ನೇಯಾಃ ಪಶವ ಇಮಮೇವಾಗ್ನಿಗ್ಂ ಸ್ತವಾಮ ಸನಃಸ್ತುತಃ ಪಸೂನ್ ಪುನರ್ದಾಸ್ಯತೀತಿ ತೇಽಗ್ನಿಮಸ್ತುವನ್ ಸ ಏಭ್ಯಃ ಸ್ತುತೋ ರಾತ್ರಿಯಾ ಅಧ್ಯಹರಭಿಪಶೂನ್ ನಿರಾರ್ಜತ್ತೇ ದೇವಾಃ ಪಶೂನ್ ವಿತ್ತ್ವಾ ಕಾಮಾಗ್ಂ ಅಕುರ್ವತ ಯ ಏವಂ ವಿದ್ವಾನ್ ಅಗ್ನಿಮುಪತಿಷ್ಠತೇ ಪಶುಮಾನ್ಭವತಿ ॥)

ಇಲ್ಲಿ ಅಗ್ನಿಯ ಜಾತವೇದಾಃ ಎಂಬ ಶ್ರೀನಾಮಕ್ಕೆ ಪ್ರಮಾಣಸಹಿತ ವ್ಯಾಖ್ಯೆಹೇಳಿದಂತಾಗಿದೆ. ಏಕೆಂದರೆ ದೇವತೆಗಳ ಧನವಾವುದೆಂಬುದನ್ನೂ, ಅಸುರರು ಅದನ್ನು ಕದ್ದು ಎಲ್ಲಿ ಬಚ್ಚಿಟ್ಟರೆಂಬುದನ್ನೂ ತಿಳಿದವನೂ, ದೇವತೆಗಳಿಗೆ ಆ ಗುಪ್ತಧನವನ್ನು ಮರಳಿ ಕೊಡಬಲ್ಲವನೂ ಅಗ್ನಿಯೇ ಎಂಬುದು ಇಲ್ಲಿ ಸಿದ್ಧವಾಯಿತಷ್ಟೆ !

## ೪ ಶ್ರೀವೈಷ್ಣವಾಚಾರ್ಯರು ಕಂಡ 'ಜಾತವೇದ'

ಪ್ರಾಯಃ ಈ ಹಿನ್ನಲೆಯಲ್ಲಿಯೇ ಪ್ರಕೃತ ಶ್ರೀಸೂಕ್ತ ಮಂತ್ರದಲ್ಲೂ, ಉಪಾಸಕನ ಎದುರಿಗೆ ಪ್ರತ್ಯಕ್ಷಳಾಗುವಂತೆ ಲಕ್ಷ್ಮೀದೇವಿಯನ್ನು ಅಗ್ನಿಯು ತಂದು ನಿಲ್ಲಿಸುವಂತಾಗಲಿ ಎಂಬ ಪ್ರಾರ್ಥನೆ ಇರುವುದೂ ಅರ್ಥಪೂರ್ಣ

ವಾಗಿದೆ. ಮತ್ತು "ಧನಮಿಚ್ಛೇತ್ ಹುತಾಶನಾತ್" ಎಂಬ ಸ್ಮೃತಿ ವಾಕ್ಯಕ್ಕೂ ವೈದಿಕಹಿನ್ನೆಲೆ ಇರುವುದು ಸ್ಪಷ್ಟವಾಗುತ್ತದೆ ಇದೊಂದು ಸಾಮಾನ್ಯಾರ್ಥ.

ಆದರೆ ಇಲ್ಲಿ ಶ್ರೀ ವೈಷ್ಣವಾಚಾರ್ಯರು ಈ ಪ್ರಕರಣಕ್ಕೆ ಉಚಿತವಾದ ಬೇರೊಂದರ್ಥವನ್ನು ಬರೆದಿದ್ದಾರೆ.

ಇಲ್ಲಿ ಪ್ರಾರ್ಥಿಸಿರುವುದು ಲಕ್ಷ್ಮೀಸಾಂನ್ನಿಧ್ಯ, ಆಭಿಮುಖ್ಯಗಳಿಗಾಗಿ. ಇವಳೋ ಶ್ರೀಮನ್ನಾರಾಯಣನನ್ನು ಕ್ಷಣಮಾತ್ರವೂ ಬಿಟ್ಟಿರದವಳು. ಅವನನ್ನು ಬಿಟ್ಟು ಇವಳೊಬ್ಬಳನ್ನೇ ಅಗ್ನಿಯು ಹೇಗೆ ತಂದು ಉಪಾಸಕನೆದುರು ನಿಲ್ಲಿಸಿಯಾನು ? ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲದಂತೆ, ಮತ್ತು ಲಕ್ಷ್ಮೀ ತಂತ್ರದಿಂದ ವಿವರಿಸಲ್ಪಟ್ಟ ರಹಸ್ಯಾನುಸಾರವಾಗಿ, (ಲಕ್ಷ್ಮೀನಾರಾಯಣರ ಸ್ತುತಿಗಳು, ಶ್ರೀಸೂಕ್ತ ಪುರುಷಸೂಕ್ತಗಳೆರಡರಲ್ಲೂ ಪರಸ್ಪರ ಹೊಕ್ಕಿರುವುದರ ಹಿನ್ನೆಲೆಯಲ್ಲಿ) ಇಲ್ಲಿನ ಪ್ರಕೃತ ಪ್ರಾರ್ಥನೆಯು ಶ್ರೀಮನ್ನಾರಾಯಣನಿಗೇ ಹೇ ಜಾತವೇದಃ —ಎಂಬ ಸಂಬೋಧನೆಯ ದ್ವಾರಾ —ಮಾಡಲ್ಪಟ್ಟಿದೆಯೆಂದು ಶ್ರೀರಂಗನಾಥ ಮುನಿಗಳ (ನಂಜೀಯರರ) ವಿವರಣೆ : "ಹೇ ಜಾತವೇದಃ —ಲಕ್ಷ್ಮೀಪತೇ ! ಜಾತಂ —ಸ್ವತಸ್ಸಿದ್ಧಂ, ವೇದಂ —ಧನಂ ವಾ, ಜ್ಞಾನಂ ವಾ, ಯಶೋ ವಾ —ಯಸ್ಯ ಸಃ ಜಾತವೇದಾಃ." ಅಂದರೆ ಯಾವ ಪರಮಾತ್ಮನಿಗೆ ತನ್ನದೇ ಆದ ಧನವೂ, ತನ್ನದೇ ವಿಷಯಕವಾದ ಜ್ಞಾನವೂ, ತನ್ನದೇ ಅಸಾಧಾರಣವಾದ ಕೀರ್ತಿಯೂ ಉಂಟೋ ಅವನೇ ಜಾತವೇದನು ಎಂದು ಹೇಳಿದಂತಾಯಿತು. ತ್ರೈಲೋಕ್ಯ ಸಂಪತ್ತೇ ಅವನ ಐಶ್ವರ್ಯ. ಜ್ಞಾನವೆಲ್ಲ ಪರಿಸಮಾಪ್ತಿಯಾಗುವುದೇ ಬ್ರಹ್ಮಜ್ಞಾನದಲ್ಲಿ. ತಸ್ಯನಾಮ ಮಹದ್ಯಶಃ ಎಂಬಂತೆ, ಮಹಾಕೀರ್ತಿಶಾಲಿಯೂ ಅವನೇ. ಅಗ್ನಿಪರವಾಗಿ ಈ ಶಬ್ದವನ್ನು ಅರ್ಥೈಸಿದಾಗ "ತನ್ನದಲ್ಲದ ದನವನ್ನು (ದೇವತೆಗಳದ್ದನ್ನು) ಇಟ್ಟುಕೊಂಡವನು"ಜಾತವೇದನಾಗಿ, ಅವರ ಸ್ವತ್ತನ್ನು ಅವರಿಗೇ ಕೊಟ್ಟನೆಂಬ ಗೌಣರೀತಿಯ ಜಾತವೇದನು ಮಾತ್ರ ಅಗ್ನಿಯಾಗುವನು. ಶ್ರೀವಿಷ್ಣುಪರವಾಗಿ ಅನ್ವಯಿಸಿದಾಗ ಸ್ವತಸ್ಸಿದ್ಧವಾದ ಧನ, ಜ್ಞಾನ, ಕೀರ್ತಿಗಳನ್ನು ಅನುಗ್ರಹಿಸುವನೆಂಬ ಆತ್ಯಂತಿಕವೂ, ಪೂರ್ಣವೂ ಆದ ಅರ್ಥ ಪ್ರಾಪ್ತಿಯಾಗು

ತ್ತದೆ. ಇದು ಲಕ್ಷ್ಮೀಪ್ರಾಪ್ತಿ ಎನಿಸಿ, ಶ್ರೀಮನ್ನಾರಾಯಣನೇ, ಈ ಬಗೆಯ ಅನುಗ್ರಹ ಮಾಡುವುದು ತುಂಬ ಉಚಿತವೂ ಆಗುತ್ತದೆ. ಶಬ್ದಗಳ ಮುಖ್ಯಾರ್ಥಗಳು ಭಗವಂತನನ್ನೇ ಕುರಿತು ಹೇಳುವುದೆಂಬ ಎಲ್ಲ ವೈದಿಕರ ಮೂಲ-ಗ್ರಹಿಕೆಗೂ ಸರಿಹೊಂದುತ್ತವೆ. ಮಹಾಲಕ್ಷ್ಮಿಯು ಶ್ರೀಮನ್ನಾರಾಯಣನ ಪತ್ನಿಯಾದುದರಿಂದ, ಅವಳು ಕೊಡಬಹುದಾದ ಧನವೆಲ್ಲ ಅವನದೂ ಆದುದರಿಂದ, ಅವನ ಕರುಣೆಯಿದ್ದರೆ ಇವಳು ಒಲಿಯುವುದು ಸುಲಭವೆಂಬರ್ಥವನ್ನೂ, ಧನವು ಯಾರದ್ದೋ ಅವನನ್ನೇ ಪ್ರಾರ್ಥಿಸುವುದೇ ಉಚಿತವೆಂಬುದನ್ನೂ ಈ ಯೋಜನೆ ಮನದಟ್ಟುಮಾಡಿಕೊಡುತ್ತದೆ. ಇದಕ್ಕೊಂದು ನಿದರ್ಶನವನ್ನೂ ಕೊಡಬಹುದು.

ಹಿಂದೆ ಬ್ರಹ್ಮನು (ಚತುರ್ಮುಖನು) ಪರಮಾತ್ಮನಿಂದ ತನಗುಪದಿಷ್ಟವಾದ ವೇದರಾಶಿಯನ್ನು ಮಧುಕೈಟಭರೆಂಬ ಅಸುರರ ಅಪಹಾರದ ದೆಸೆಯಿಂದ ಕಳೆದುಕೊಂಡನಷ್ಟೆ.

ವೇದಾ ಮೇ ಪರಮಂ ಚಕ್ಷುಃ ವೇದಾ ಮೇ ಪರಮಂ
ಧನಂ ।

ಎಂದು ಅವನೇ ಹೇಳಿಕೊಂಡಂತೆ, "ನನ್ನ ಕಣ್ಣಾಗಿದ್ದ ವೇದ ಹೋಯಿತಲ್ಲ! ನನ್ನ ಸರ್ವಧನ ರೂಪವಾಗಿದ್ದ ವೇದ ನಷ್ಟವಾಯಿತಲ್ಲ!" ಎಂದು ಜ್ಞಾನ, ಧನ, ಹೀನನಾಗಿ ಅತ್ತಾಗ, ಭಗವಂತನು ಪುನಃ ಹಯಗ್ರೀವಾವತಾರದಲ್ಲಿ ಅಸುರರನ್ನು ನಿಗ್ರಹಿಸಿ, ಅದನ್ನು ತಂದು ಬ್ರಹ್ಮನಿಗೆ ಉಪದೇಶಿಸಿದನೆಂದು ಹೇಳುವ ಪುರಾಣದ ಕಥೆಗೆ ಉಪನಿಷತ್ತಿನ ವಾಕ್ಯವೊಂದು ಆಧಾರವಾಗಿದೆ.

ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ
ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ ॥
(ಶ್ವೇತಾಶ್ವತರ VI–18)

"ಬ್ರಹ್ಮನನ್ನು ಸೃಷ್ಟಿಸಿದವನೂ, ಅವನಿಗೆ ವೇದೋಪದೇಶವನ್ನು ಮಾಡಿದವನೂ" ಪರಮಾತ್ಮನಾದ ಮೇಲೆ, ಈ ಜಾತವೇದಾಃ ಎಂಬ ಶ್ರೀನಾಮವು

ಅವನಿಗೇ ಚೆನ್ನಾಗಿ ಒಪ್ಪುವುದು. ಅಗ್ನಿಯು ದೇವತೆಗಳ 'ಧನ'ವನ್ನು ತಂದುಕೊಟ್ಟುದು ಇಷ್ಟು ದೊಡ್ಡ ವಿಷಯವಲ್ಲ. ಬ್ರಹ್ಮನಿಗೆ ದೇವರು ವೇದಗಳನ್ನು ಉಪದೇಶಿಸದಿದ್ದರೆ, ಪರಂಪರೆಯಿಂದ ಮುಂದೆ ಅದು ದೇವತೆಗಳ ಆಸ್ತಿಯೇ ಆಗುತ್ತಿರಲಿಲ್ಲ. ಆದುದರಿಂದ ಸರ್ವಮೂಲ ಧನವನ್ನು ತಂದು ಕೊಟ್ಟವನೇ ಅನ್ವರ್ಥವಾಗಿ, ಅಬಾಧಿತನಾಗಿ, ಜಾತವೇದನಾದನು.

ಇದು ಅತಿವಾದವೇನಲ್ಲ. ಸರ್ವಶಬ್ದವಾಚ್ಯತ್ವವು ವಿಷ್ಣುವಿಗೇ ವಿನಾ ಅಗ್ನಿಗಲ್ಲ ! 'ಅಗ್ನಿ' ಎಂಬುದೂ ವಿಷ್ಣುವಾಚಕವೇ ಎಂದ ಮೇಲೆ ಉಳಿದ ಶಬ್ದಗಳ ಮಾತೇನು ? ಅಗ್ನಿಯನ್ನೇ ಇಟ್ಟುಕೊಂಡರೂ ಅವನಿಗೆ ಈ ಧನ ಪ್ರದಾತೃತ್ವ ಎಂಬುದು, ತನ್ನಲ್ಲಿ ಅಂತರ್ಯಾಮಿಯಾಗಿ ಶ್ರೀ ವಿಷ್ಣುವು ಇರುವುದರಿಂದಲೇ ಎಂಬುದೂ ವೈದಿಕ ಪ್ರಕ್ರಿಯಾ ಸಿದ್ಧವಾದದ್ದೇ. ಆದ್ದರಿಂದ ಲಕ್ಷ್ಮೀಕಟಾಕ್ಷಕ್ಕಾಗಿ ವಿಷ್ಣುಪ್ರಾರ್ಥನೆಯು ಇಲ್ಲಿ ಮಾಡಲ್ಪಟ್ಟಿದೆಯೆಂಬ ರೀತಿಯ ವಿವರಣೆಯು ಹೆಚ್ಚು ಸಮಂಜಸವೂ, ಸಮರ್ಪಕವೂ, ಸ್ವರಸವೂ ಆಗಿದೆ. ಮೇಲ್ನೋಟದ ಅಗ್ನಿಪರಪ್ರಾರ್ಥನೆಯಲ್ಲೂ ಬಾಧಕವೇನಿಲ್ಲವಾದರೂ, ವಾಚಕರು ಈ ವಿಶೇಷಾರ್ಥವು ಅದನ್ನು ಒಳಗೊಳ್ಳುವಷ್ಟು ವ್ಯಾಪಕವೆಂಬುದನ್ನು ಮನಗಂಡಾರು.

ನಿರುಕ್ತಸಾರವೆಂಬ ಪ್ರಾಚೀನ ಗ್ರಂಥದಲ್ಲಿಯೂ ಇದೇ ರೀತಿ ವಿವರಿಸುತ್ತಾರಾಗಿ, ಶ್ರೀವೈಷ್ಣವಾಚಾರ್ಯರ ಅರ್ಥವು ಹಳೆಯದೂ ಆಗಿದೆ. "ಹೇ ಜಾತವೇದಃ, ಶಾಸ್ತ್ರಯೋನೇ !, ಭೋ ಭಗವನ್", ತ್ವದೀಯಾಂ ಲಕ್ಷ್ಮೀಂ, ಮೇ ಮಹ್ಯಂ, ಆವಹ ಆಕರ್ಷಯ— ಇತಿ ಯಜ್ಞಪುರುಷಂ ಪ್ರಾರ್ಥಯೇತ್ ತೇನ ನಾರಾಯಣಃ ಪ್ರೀತಃ ಲಕ್ಷ್ಮೀಂ ಭಕ್ತಾಯ ದಾಸ್ಯತಿ —ಇತಿ ತತ್ರೈವ ಹ್ಯುಕ್ತೇಃ ।" (ಅರ್ಥ) "ಎಲೈ, ವೇದ ಪ್ರತಿಪಾದ್ಯವಾದ, ವೇದಗಳಿಗೂ ಉಗಮಸ್ಥಾನನಾದ, ಯಜ್ಞಕರ್ಮಸಮಾರಾಧ್ಯನಾದ ಶ್ರಿಯಃಪತಿಯೇ ! ನಿನ್ನ ಪತ್ನಿಯಾದ ಲಕ್ಷ್ಮೀದೇವಿಯ ಅನುಗ್ರಹವು ನನ್ನ ಮೇಲೆ ಆಗುವಂತೆ, ಅದನ್ನು ಆಕರ್ಷಿಸಿಕೊಡು, ಎಂದು ಪ್ರಾರ್ಥಿಸಬೇಕು, ಇದರಿಂದ ಪ್ರೀತನಾದ ಶ್ರೀಮನ್ನಾರಾಯಣನು ಭಕ್ತನಿಗೆ ಲಕ್ಷ್ಮೀ ಅನುಗ್ರಹವನ್ನು ಮಾಡಿಸುತ್ತಾನೆ ಎಂದು ಅಲ್ಲೇ ಹೇಳಿರುವುದರಿಂದಲೂ ಈ ಶಬ್ದವು ವಿಷ್ಣು ಪರವಾದುದು."

ಶಾಸ್ತ್ರಯೋನಿತ್ವವು ಪರಬ್ರಹ್ಮ ವಿಷಯಕವೇ ಹೊರತು ದೇವತಾಂತರ ವಿಷಯಕವಲ್ಲವೆಂಬುದನ್ನು ಶ್ರೀ ವೇದವ್ಯಾಸರು ಬ್ರಹ್ಮಸೂತ್ರಗಳಲ್ಲಿ ಸ್ಥಾಪಿಸಿದ್ದಾರೆ. ಯಜ್ಞಪುರುಷನೆಂದರೆ 'ಯಜ್ಞೋವೈ ವಿಷ್ಣುಃ' ಎಂಬಂತೆ ಶ್ರೀ ವಿಷ್ಣುವೇ ಎಂಬುದೂ ವೇದದ ಹೃದಯವೇ. ಹೀಗೆ ಈ ಅರ್ಥ ವ್ಯಾಪಕವಾದಿದೆ.

ವೇದಾಃ ತ್ವದರ್ಥಂ ಜಾತಾಶ್ಚ ಜಾತವೇದಾಸ್ತತೋಽಹ್ಯಸಿ ।

ಎಂಬುದು ಶ್ರೀ ಮಹಾಭಾರತದ ನಿರುಕ್ತಿಯಾಗಿದೆ. "ವೇದಗಳುಂಟಾದುದೇ ಭಗವಂತನ ಮಹಿಮೆಯನ್ನು ಕೊಂಡಾಡುವುದಕ್ಕಾಗಿ. ಆದುದರಿಂದ ಯಾವನ ಸಲುವಾಗಿ ವೇದಗಳು ಉದಿಸಿದವೋ, ಇವೆಯೋ, ಅವನೇ ಜಾತವೇದನು" ಎಂಬ ಈ ನಿರ್ವಚನವೂ ವಿಷ್ಣುಪರವೇ ಆಗಿದೆ. ಈ ಎಲ್ಲ ಪ್ರಾಚೀನ ಪ್ರಮಾಣಗಳ ಹಿನ್ನೆಲೆಯಲ್ಲಿ ಲಕ್ಷ್ಮೀಕಟಾಕ್ಷಪ್ರಾಪ್ತಿಗೆ ವಿಷ್ಣು ಸ್ತುತಿಯು ಶ್ರೀಸೂಕ್ತದ ಆರಂಭದಲ್ಲಿ ಬಂದಿರುವುದು ಯುಕ್ತವಾಗಿದೆ.

## ೫ 'ಹಿರಣ್ಯವರ್ಣಾಂ'

ಲಕ್ಷ್ಮೀದೇವಿಯು ಚಿನ್ನದ ಬಣ್ಣವುಳ್ಳವಳು ಎಂಬ ವರ್ಣನೆ ಸಮಂಜಸವಾದುದೇ, ಹೇಗೆಂದರೆ, ಪರಮಾತ್ಮನೂ ಇದೇ ಬಣ್ಣವುಳ್ಳವನೆಂದು ಶ್ರುತಿಯು ಹೇಳುತ್ತದೆ: "ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷಃ, ಆ ಪ್ರಣಖಾತ್ ಸ್ವರ್ಣ ಏವ..." (ಛಾಂದೋಗ್ಯ 1-6.) ಲಕ್ಷ್ಮೀನಾರಾಯಣರು ಸ್ವರೂಪ, ರೂಪ, ಗುಣ ಮುಂತಾದುವುಗಳಲ್ಲಿ ಒಬ್ಬರಿಗೊಬ್ಬರು ಅನುರೂಪರು ಎಂಬುದು ಸಕಲಪ್ರಮಾಣಸಿದ್ಧವಾಗಿದೆ. ಶ್ರೀರಾಮಾನುಜಾಚಾರ್ಯರು ತಮ್ಮ ಶರಣಾಗತಿಗದ್ಯದ ಆರಂಭದಲ್ಲಿ "ಭಗವನ್ನಾರಾಯಣಾಭಿಮತಾನುರೂಪ ಸ್ವರೂಪ, ರೂಪ ಗುಣವಿಭವೈಶ್ವರ್ಯ

ಶೀಲಾದಿ " ಎಂದು ಇದನ್ನೇ ವರ್ಣಿಸಿದ್ದಾರೆ. ಇವರ ಪರಮಾಚಾರ್ಯ ರಾದ ಶ್ರೀಯಾಮುನರೂ ಇದನ್ನೇ ತಮ್ಮ ಚತುಃಶ್ಲೋಕೀ ಎಂಬ ಲಕ್ಷ್ಮೀ ಸ್ತೋತ್ರದಲ್ಲಿ :

ಯಾನ್ಯನ್ಯಾನಿ ಯಥಾಸುಖಂ ವಿಹರತೋ
ರೂಪಾಣಿ ಸರ್ವಾಣಿ ತಾ—
ನ್ಯಾಹುಃ ಸ್ವೈಃ ಅನುರೂಪರೂಪವಿಭವೈ
ರ್ಗಾಢೋಪಗಾಢಾನಿ ತೇ ॥ (ಶ್ಲೋ–4)

ಎಂದು ತಿಳಿಸಿದ್ದಾರೆ. ಭಗವಂತನು ಶ್ರೀರಾಮನಾಗಿಯೂ, ಲಕ್ಷ್ಮಿಯು ಸೀತಾದೇವಿಯಾಗಿಯೂ ಅವತರಿಸಿದ ಪ್ರಸಂಗದಲ್ಲಿಯೂ, ಇವರಿಬ್ಬರೂ ಒಂದೇ ಸಮನಾದ, ಒಂದೇ ಬಗೆಯ ಮತ್ತು ಪರಸ್ಪರ ಹೊಂದುವ ಶೀಲ, ವಯಸ್ಸು, ಚಾರಿತ್ರ್ಯ, ಕುಲ, ಮುಂತಾದವುಗಳನ್ನು ಹೊಂದಿ, ಒಬ್ಬರನ್ನೊಬ್ಬರು ಕೈಹಿಡಿಯಲು ಸರ್ವಥಾಯೋಗ್ಯರಾದವರೆಂಬುದನ್ನು (ಈ ವಿವಾಹವು ನಡೆದ ೨೮ ವರ್ಷಗಳ ಮೇಲೆ) ಮಾರುತಿಯು ಅಶೋಕವನದಲ್ಲಿ ಅವಳನ್ನು ಕಂಡಾಗ ಹೇಳುವ ಮಾತಿನಲ್ಲಿಯೂ ಈ ಅನುರೂಪ್ಯವು ನಿಶ್ಚಿತವಾಗಿದೆ :

ತುಲ್ಯಶೀಲವಯೋ ವೃತ್ತಾಂ ತುಲ್ಯಾಭಿಜನ ಲಕ್ಷಣಾಂ ।
ರಾಘವೋಽರ್ಹತಿ ವೈದೇಹೀಂ ತಂ ಚೇಯಂ ಅಸಿತೇಕ್ಷಣಾ ॥
(ರಾ. ಸುಂದರ 16–5)

ಈ ಬಗೆಯ ವರ್ಣನೆಗಳಲ್ಲಿ 'ಹಿರಣ್ಯವರ್ಣಾಂ' ಇತ್ಯಾದಿಗಳಿಗೂ ಸೂಕ್ಷ್ಮ ವ್ಯಾಖ್ಯೆ ಇರುವುದು ಇಲ್ಲಿ ಗಮನೀಯ. ಶ್ರೀಸಾಯಣಾಚಾರ್ಯರೂ, ಶ್ರೀ ಪೃಥ್ವೀಧರಾಚಾರ್ಯರೂ ಇದೇ ಅರ್ಥವನ್ನೇ ಎತ್ತಿ ಹಿಡಿದಿದ್ದಾರೆ.

ಮತ್ತೊಂದು ನಿರ್ವಚನದಂತೆ ಹಿರಣ್ಯ ಶಬ್ದವೇ ವಿಷ್ಣುವಾಚಕ ವಾದುದರಿಂದ, ಅವನ ಬಣ್ಣಕ್ಕೆ ಅನುಗುಣವಾದವಳು (ಲಕ್ಷ್ಮೀ) ಹಿರಣ್ಯ ವರ್ಣಳೇ ಆಗುತ್ತಾಳೆ :

ಹಿರಣ್ಯಂ ವಿಷ್ಣುರಾಖ್ಯಾತಃ ತಸ್ಯ ವರ್ಣಸ್ತು ವೈಷ್ಣವೀ ।
ಲಕ್ಷ್ಮೀಃ ಹಿರಣ್ಯವರ್ಣೇತಿ ಶ್ರೂಯತೇ ಕನಕಪ್ರಭಾ ॥

## ೬ ಲಕ್ಷ್ಮೀತಂತ್ರದ ಅನೋಘ ವಿವರಣೆ— 'ಹಿರಣ್ಯವರ್ಣಾಂ'

ಲಕ್ಷ್ಮೀತಂತ್ರದಲ್ಲಿ ಹಿರಣ್ಯ ಎಂಬ ಶಬ್ದಕ್ಕೆ ಹೀಗೆ ನಿರ್ವಚನವಿದೆ :

ನಿಹಿತಾ ಸರ್ವಭೂತೇಷು ರಣ್ತೀ ಭೃಂಗವಧೂರಿವ ।
ಜನಯಂತೀ ಪರಂ ನಾದಂ ತೈಲಧಾರಾವದಚ್ಯುತಂ ॥
(50-37)

ಇಲ್ಲಿ ನಿಹಿತಾ ಎಂಬಲ್ಲಿ 'ಹಿ' ಕಾರವೂ, ರಣ್ತೀ ಎಂಬಲ್ಲಿ 'ರಣ್' ('ಧ್ವನಿಸು') ಎಂಬುದೂ, ಜನಯಂತೀ ಎಂಬಲ್ಲಿನ 'ಯ' ಕಾರವೂ ಕೂಡಿಕೊಂಡು (ಅರ್ಥದಲ್ಲಿ) ಹಿರಣ್ಯವಾಗಿದೆ ಎಂದು ತಾತ್ಪರ್ಯ.

ಶ್ಲೋಕಾರ್ಥ ಹೀಗಿದೆ: "ತಾನು ಎಲ್ಲ ಭೂತರಾಶಿಗಳಲ್ಲಿಯೂ ಗೂಢವಾಗಿ ಇದ್ದುಕೊಂಡು, ಹೆಣ್ಣುದುಂಬಿಯಂತೆ ಆನಂದಪಡುತ್ತಾ, ಇಂಪಾದನಾದವನ್ನು ಉಂಟುಮಾಡಿಕೊಂಡು ಹಾಡುತ್ತಾ, ಅವಿಚ್ಛಿನ್ನವಾದ ತೈಲಧಾರೆಯಂತೆ, ಅಚ್ಯುತನಾದ ಭಗವಂತನನ್ನು ಸದಾ ಸೇವಿಸುತ್ತಾ ಇರುವುದರಿಂದ ತನಗೆ ಈ ಹಿರಣ್ಯ ಶಬ್ದವು ವಿಶೇಷಣವಾಗಬಲ್ಲುದು.

ಇದು ಅರ್ಥಮಾಡಿಕೊಳ್ಳಲು ಸ್ವಲ್ಪ ಕಷ್ಟವಾದ ನಿರುಕ್ತವಾದದ್ದಾಗಿದೆ. [ಹೀಗೆ ಒಂದು ಶಬ್ದದ ಅನೇಕ ಅಕ್ಷರಗಳಿಗೆ ಬಿಡಿಬಿಡಿಯಾಗಿ ಅರ್ಥ ಹೇಳಿ ಆಮೇಲೆ ಕೂಡಿಸಿಬರುವ ಸಮುದಾಯಾರ್ಥವನ್ನು ಹೇಳುವ ರೀತಿ ಉಪನಿಷತ್ತುಗಳಲ್ಲಿದೆ. ತೈತ್ತಿರೀಯ ಉಪನಿಷತ್ತಿನಲ್ಲಿ ಸತ್ಯಂ ಎಂಬುದನ್ನು

ಸತ್ + ತ್ಯತ್ ಕೂಡಿಸಿ, "ಈಗ ಇಲ್ಲಿ ಎದುರಿಗಿರುವ ಜಗತ್ತು (ಸತ್)" ಮತ್ತು "ಹಿಂದಾದದ್ದು ಅಥವಾ ಮುಂದೆ ಆಗುವುದು," ಹೀಗೆ "ದೂರದಲ್ಲಿರುವುದು" (ತ್ಯತ್) ಕೂಡಿದಾಗ ಸಮಗ್ರ ಸತ್ಯ ಆಗುವುದೆಂಬ ನಿರ್ವಚನ (ಸಚ್ಚತ್ಯಚ್ಚಾಭವತ್... ಇತ್ಯಾದಿ) ಪ್ರಸಿದ್ಧವಾಗಿದೆ. ಬೃಹದಾರಣ್ಯಕ ಉಪನಿಷತ್ತಿನಲ್ಲಿ ಬರುವ ಹೃದಯ ಶಬ್ದಾರ್ಥವೂ ಸಹ ಹೀಗೆಯೇ ಹೃ = ಹರಣ, ದ = ದಾನ, ಯ = ಯಾನ ಎಂಬ ಬಿಡಿ ಅರ್ಥಗಳಿಂದ ಕೂಡಿ, ಯಾವ ಪರವಸ್ತುವು ಚೇತನಾಚೇತನಗಳನ್ನು ವಶೀಕರಿಸಿಕೊಂಡು, ಅನುಗ್ರಹಿಸಿ, ತನ್ನೆಡೆಗೆ ಮತ್ತೆ ಸೆಳೆದುಕೊಳ್ಳಬಲ್ಲುದೋ ಅದನ್ನೇ, ಆ ಪರಬ್ರಹ್ಮವನ್ನೇ ಈ ಹೃದಯಶಬ್ದದಿಂದ ಕರೆದಿದೆ ಎಂಬುದೂ ಪ್ರಸಿದ್ಧ. (V-4-1)]

ಇದನ್ನು ಕೊಂಚ ವಿವರಿಸೋಣ : ಚಿನ್ನವು ಕಲ್ಲುಮಣ್ಣುಗಳಲ್ಲಿ ಸೇರಿಕೊಂಡು, ಕಣ್ಣಿಗೆ ಕಾಣದೆ, ಭೂಗರ್ಭದಲ್ಲಿ, ಗಣಿಯಲ್ಲಿ ಹುದುಗಿಕೊಂಡಿರುವಂತೆ, ತಾನೂ ಸಕಲಪದಾರ್ಥಗಳಲ್ಲಿಯೂ ಭಗವಂತನೊಡನೆಯೇ, ಅವನಂತೆಯೇ, ಅಂತರ್ಯಾಮಿಯಾಗಿ, ಗೂಢವಾಗಿ, ಹುದುಗಿಕೊಂಡಿದ್ದರೂ, ಚಿನ್ನಕ್ಕೆ ಎಲ್ಲರೂ ಆಸೆಪಡುವಂತೆ, ಈ ಲಕ್ಷ್ಮೀದೇವಿಯ ವಿಚಿತ್ರವಾದ ಮತ್ತು ಹೊರಗಿವಿಗೆ ಕೇಳದ ಮೋಹಕ 'ನಾದ'ವನ್ನು ಈ ನಿರ್ವಚನವು ಕೊಂಡಾಡಿದೆ. (ಈ ನಾದವನ್ನೇ ಮುಂದೆ ಮೂರನೇ ಮಂತ್ರವು ಮತ್ತಷ್ಟು ಮನೋಹರವಾಗಿ ವರ್ಣಿಸುವುದು.) ಚೇತನಾಚೇತನವಸ್ತುವೆಲ್ಲದರಲ್ಲೂ ನಾದ ಮಾಡುವ ಶಕ್ತಿ ಈ ದೇವಿಯದೇ ಆದುದೆಂದಮೇಲೆ ಮನುಷ್ಯರ ಭಾಷಾಶಕ್ತಿಯೂ, ಪ್ರಾಣಿಪಶುಪಕ್ಷಿಗಳ ನಾನಾಬಗೆಯ ಶಬ್ದಶಕ್ತಿಗಳೂ, ಲೋಹಗಳ ನಾದ ಶಕ್ತಿಯೂ, ಗಾಳಿ, ಮಳೆ, ಗುಡುಗು, ಮಿಂಚು ಮೊದಲಾದ ಪ್ರಾಕೃತ ವಸ್ತುಗಳ, ವ್ಯಾಪಾರಗಳ ಮೂಲಕ ಬರುವ ವಿವಿಧ ವಿಚಿತ್ರ ಶಬ್ದಜಾಲವೂ –ಎಲ್ಲಾ ಅವಕ್ಕೆ ಲಕ್ಷ್ಮೀದೇವಿಯ ಕೊಡುಗೆಯೇ ಎಂಬ ಧ್ವನಿ ಈ ನಿರ್ವಚನದಲ್ಲಿರುವುದು ಮಾರ್ಮಿಕ. ಶಬ್ದಗಳಿಗೆಲ್ಲ ಅವಳೇ ಮೂಲವಾಗಿ, ವಾಗ್ದೇವತೆಯೆಂಬ ನಿರೂಪಣೆ ಇವಳಿಗೇ ಮುಖ್ಯಾರ್ಥದಲ್ಲಿ ಹೊಂದುವುದೆಂದು ಇಲ್ಲಿ ಹೇಳಿದಂತಾಗಿದೆ. ಲಕ್ಷ್ಮೀತಂತ್ರವು ಇದನ್ನು ಕಂಠೋಕ್ತವಾಗಿಯೇ ಹೇಳಿದೆ.

ಮೂಲಮಾಧಾರಮಾರಭ್ಯ ದ್ವಿಷಟ್ಕಾಂತಂ ಉಪೇಯುಷೀ ।...
ವರ್ಣಾನಾಂ ಜನನೀಭೂತ್ವಾ ಭೋಗಾನ್ ಪ್ರಸ್ನೌಮಿ
ಗೌರಿವ ॥

ಹಿರಣ್ಯವರ್ಣೇತ್ಯೇವಂ ಮಾಂ ಪ್ರಜಾಪತಿರುದಾರಧೀಃ ।
ಸ್ತುತ್ವಾ ತು ಮತ್ಪ್ರಸಾದಾತ್ ಸ ಯೋಗಾನಾಂ ಧರ್ಮ
ಮೂಚಿವಾನ್ ॥

ಮೂಲಾಧಾರ ಪ್ರದೇಶದಿಂದ ಹಿಡಿದು ತಲೆಯಲ್ಲಿನ ಬ್ರಹ್ಮರಂಧ್ರ ಪ್ರದೇಶದ ವರೆಗಿನ ಹನ್ನೆರಡು ಸ್ಥಾನಗಳಲ್ಲಿಯೂ ವಿರಾಜಿಸುತ್ತಿರುವವಳೂ, ಹಲವಾರು ಸಾವಿರ ಸೂರ್ಯರೂ, ಅಗ್ನಿಗಳೂ, ಚಂದ್ರರೂ, ಒಟ್ಟಿಗೆ ಸೇರಿ ಉದಿಸಿದಂತೆ, ತೇಜೋವಿಶೇಷವುಳ್ಳವಳೂ, ಚಕ್ರಾಕಾರವಾದ ಮೂಲಾಧಾರ ಪ್ರದೇಶದಿಂದ ಶಾಂತಾ ಎಂದೂ, ಪಶ್ಯಾ ಎಂದೂ, ಮಧ್ಯಮಾ ಎಂದೂ ಹೆಸರುಳ್ಳ ಧ್ವನಿಗಳಾಗಿ, ವೈಖರೀಸ್ಥಾನವನ್ನು ಹೊಂದಿ ಅಲ್ಲಿ ಕಂಠವೇ ಮೊದಲಾಗಿ ಎಂಟು ಸ್ಥಾನಗಳಲ್ಲಿ ಇರುವವಳೂ, ಸಕಲಶಬ್ದಗಳಿಗೂ ತಾಯಿಯ ಜಾಗದಲ್ಲಿದ್ದು ಕೊಂಡು ಗೋವಿನಂತೆ— 'ಧೇನು' —ವಿನಂತೆ, ಇಷ್ಟಾರ್ಥಗಳನ್ನು ಕರುಣಿಸುವವಳೂ ಆದುದರಿಂದ, ಬುದ್ಧಿಶಾಲಿಯಾದ ಬ್ರಹ್ಮದೇವನಿಂದ ಹಿರಣ್ಯವರ್ಣಳೆಂದು ಕೊಂಡಾಡಲ್ಪಟ್ಟಿರುವುದಾಗಿ ಈ ಶ್ಲೋಕಗಳ ಭಾವ.

ಉದಿತಾನೇಕಸಾಹಸ್ರಸೂರ್ಯವಹ್ನೀಂದು ಸಂನ್ನಿಭಾ ।
ಚಕ್ರಕಾತ್ ಪವನಾಧಾರಾತ್ ಶಾಂತಾ ಪಶ್ಯಾಥ ಮಧ್ಯಮಾ ॥
ವೈಖರೀಸ್ಥಾನಮಾಸಾದ್ಯ ತತ್ರಾಷ್ಟಸ್ಥಾನವರ್ತಿನೀ ॥ (ಅದೇ)

ಈ ವರ್ಣನೆಗಳಲ್ಲಿ ಎದ್ದು ಕಾಣುವ ಅಂಶಗಳೆಂದರೆ: (೧) ಸಕಲ ಪ್ರಾಣಿಗಳಲ್ಲೂ ಶಬ್ದಾತ್ಮಕಳಾಗಿರುವವಳೂ ಲಕ್ಷ್ಮಿಯೇ ಎಂಬುದೊಂದು. (೨) ಮತ್ತು ವಿಶೇಷವಾಗಿ ಮನುಷ್ಯರಲ್ಲಿ ಪರಾ, ಪಶ್ಯಂತೀ, ಮಧ್ಯಮಾ, ವೈಖರೀ ಎಂಬ ನಾಲ್ಕು ಬಗೆಯ ವಾಗ್ರೂಪಗಳಲ್ಲಿರುವವಳೂ ಲಕ್ಷ್ಮಿಯೇ ಎಂಬುದೊಂದು.

## ೭ ಲಕ್ಷ್ಮಿಯು 'ವಾಗ್ದೇವಿ'ಯೆಂಬುದಕ್ಕೆ ಋಗ್ಯ ಜುರ್ವೇದಗಳಿಂದ ಪ್ರಮಾಣಗಳು

ಈ ಎರಡೂ ಇಲ್ಲಿ ಲಕ್ಷ್ಮೀತಂತ್ರಕ್ಕೆ ಬಂದಿರುವುದೇ ವೇದಗಳಿಂದ ಎಂಬುದನ್ನು ಮನಗಂಡರೆ ಲಕ್ಷ್ಮೀಪ್ರಸ್ತಾಪವು ಹೇಗೆ ವೇದದಷ್ಟು ಅನಾದಿ ಮತ್ತು ಪೂಜ್ಯ ಎಂಬುದು ನಿಸ್ಸಂಶಯವಾಗಿ ಸ್ಥಾಪಿತವಾದಂತಾಗುತ್ತದೆ. ಇದಕ್ಕಾಗಿ ಕೆಲವು ನಿದರ್ಶನಗಳನ್ನು ಈಗ ನೋಡೋಣ.

(1) ಸಕಲ ಪ್ರಾಣಿಗಳಲ್ಲೂ ವಿವಿಧ ಶಬ್ದಾತ್ಮಕಳಾಗಿ 'ವಾಗ್ದೇವಿ' ಯಾಗಿರುವವಳು ಲಕ್ಷ್ಮೀ ಎಂಬುದನ್ನು ಈ ಕೆಳಗಿನ ಸೂಕ್ತ ಹೇಳುತ್ತದೆ:

೧) ದೇವೀಂ ವಾಚಮಜನಯನ್ತ ದೇವಾಃ ।
ತಾಂ ವಿಶ್ವರೂಪಾಃ ಪಶವೋ ವದನ್ತಿ ।
ಸಾನೋ ಮಂದ್ರೇಷಮೂರ್ಜಂ ದುಹಾನಾ ।
ಧೇನು ರ್ವಾಗಸ್ಮಾನ್ ಉಪಸುಷ್ಟುತೈತು ॥
(ತೈ. ಬ್ರಾ. II–4–6 ಮತ್ತು ಋ. ಸಂ. VIII–100–11)

"ದೇವತೆಗಳು ಪ್ರಕಾಶಮಾನಳಾದ ವಾಗ್ದೇವಿಯನ್ನು ಪಡೆದರು. ('ಉತ್ಪಾದಿಸಿದ'ರೆಂದರೆ ಅವತರಿಸುವಂತೆ ಮಾಡಿದರೆಂದು ತಿಳಿಯಬೇಕೇ ಹೊರತು, ಇಲ್ಲದವಳನ್ನು ಸೃಷ್ಟಿಸಿದರೆಂದು ಹೇಳುವಂತಿಲ್ಲ, ಇದು ವೈದಿಕರ ಗ್ರಹಿಕೆ ಆಗಲಾರದಷ್ಟೆ!) ವಿಶಾಲ ವಿಶ್ವದಲ್ಲೆಲ್ಲೂ ರೂಪಗೊಂಡ ಅವಳನ್ನು ಪಶುಗಳೂ ಸಹ ತಂತಮ್ಮ ಸ್ವಭಾವ, ಭಾಷೆಗಳಿಗನುಗುಣವಾದ ಭಾಷೆಗಳಲ್ಲಿ ಆಡುತ್ತವೆ. (ಸ್ತುತಿಸುತ್ತವೆ, ವರ್ಣಿಸುತ್ತವೆ.) ಆ ವಾಗ್ದೇವಿಯು ಧೇನುವೆನಿಸಿ (ಹಾಲುಕರೆಯುವ ಗೋವಿನಂತೆ) ನಮಗೆ ಆನಂದವನ್ನುಂಟುಮಾಡುವವಳಾಗಿರುತ್ತಾ, ಅನ್ನವನ್ನು ಅನುಗ್ರಹಿಸುತ್ತಾ, ಕ್ಷೀರಾದಿರಸಗಳಿಂದ ಸಂಕೇತಿಸಲ್ಪಡುವ ದಿವ್ಯಾನಃಭೂತಿಗಳನ್ನನುಗ್ರಹಿಸುತ್ತಾ, (ಕ್ಷೀರಂ, ಸರ್ಪಿಃ, ಮಧು, ಉದಕಂ ಎಂಬುದಾಗಿ ಹೇಳಲ್ಪಡುವ ಮೋಕ್ಷ, ಧರ್ಮ, ಕಾಮ, ಅರ್ಥಗಳ ಅನುಭವವನ್ನು, ಚತುರ್ವಿಧ ಪುರುಷಾರ್ಥಗಳನ್ನನುಗ್ರಹಿಸುವ ವೇದಾಕ್ಷರ

ಗಳ ಸ್ವರೂಪದಲ್ಲಿರುತ್ತಾ— (ಸಂ. ೬ ಪು ೧೦೧ ನ್ನೂ, ಸಂ ೨– ಪು XXI–XYIII ನ್ನು ನೋಡಿರಿ,) ನಮ್ಮಿಂದ ವೈದಿಕ ಮಂತ್ರಗಳ ಮೂಲಕ ಸುತ್ತಿಸಲ್ಪಡುವವಳಾಗಿದ್ದು, ನಮ್ಮ ಬಳಿ ಬಂದು ಸೇರುವಂತಾಗಲಿ. (ಅವಳ ಕೃಪೆ ನಮ್ಮಮೇಲಿರುವಂತಾಗಲಿ.)"

೨) ಯದ್ವಾಗ್ವದನ್ತ್ಯವಿಚೇತನಾನಿ ।
ರಾಷ್ಟ್ರೀ ದೇವಾನಾಂ ನಿಷಸಾದ ಮಂದ್ರಾ ।
ಚತಸ್ರ ಊರ್ಜಂ ದುದುಹೇ ಪಯಾಗ್ಂಸಿ ।
ಕ್ವಸ್ವಿದಸ್ಯಾಃ ಪರಮಂ ಜಗಾಮ ॥
(ತೈ. ಬ್ರಾ ಅದೇ. ಮತ್ತು ಋ. ಸ. VIII–100–10)

"ರಾಷ್ಟ್ರವನ್ನು ಸೃಜಿಸುವವಳೂ (ಪ್ರಜೆಗಳಲ್ಲಿ ಏಕಾತ್ಮತೆಯನ್ನು ಬೆಸೆದು ಸಾಮೂಹಿಕ ಜೀವನವನ್ನು ರಾಜಿಸುವಂತೆ ಮಾಡಬಲ್ಲವಳೂ) ದೇವತೆಗಳಿಗೆ ಸಂತೋಷವನ್ನು ಕೊಡುವವಳೂ, ಸ್ವಯಂ ಹರ್ಷದಿಂದಿರುವವಳೂ, ನಮ್ಮೆಲ್ಲರ ಸಕಲ ವ್ಯಾಪಾರಗಳಲ್ಲೂ ನಿಂತಿರುವವಳೂ, ಆದ ಈ ವಾಗ್ದೇವಿಯು ಅಚೇತನ ಸದೃಶರಾದ ಮೂಕ ಪ್ರಾಣಿಗಳನ್ನೂ ಮಾತಾಡುವ ಸಾಮರ್ಥ್ಯ ಹೊಂದುವಂತೆ ಮಾಡಬಲ್ಲವಳು. ನಾಲ್ಕು ದಿಕ್ಕುಗಳಲ್ಲೂ ಇರುವ ದೇವತೆಗಳೂ ಇವಳ ಪ್ರಸಾದದಿಂದಲೇ (ಅನುಭವಕ್ಕೆ ಸಂಕೇತವಾದ) ಉದಕವನ್ನು ಸಂಪಾದಿಸುತ್ತಾರೆ. (ಅಥವಾ, ಮಾನವ ಪ್ರಜ್ಞೆಗೆ ಮೀರಿದ ಮಾತುಗಳನ್ನಾಡುತ್ತಾ ಈ ದೇವಿಯು ಯಜ್ಞಭೂಮಿಯಲ್ಲವತರಿಸಿದಾಗ. ನಾಲ್ಕು ದಿಕ್ಕುಗಳಲ್ಲೂ ಅನ್ನರೂಪ ಉದಕವನ್ನು ವರ್ಷಿಸುತ್ತಾಳೆ ಎಂದು ಋಗ್ಭಾಷ್ಯ ಪ್ರಕರಣದಲ್ಲಿ ಸಾಯಣರ ಭಾಷ್ಯ; ಈ ಹಿಂದಿನ ಅರ್ಥ ತೈ. ಬ್ರಾ. ಭಾಷ್ಯದಲ್ಲಿ ಅವರಿಂದಲೇ ಉಕ್ತವಾಗಿದೆ.) ಈ ಬಗೆಯ ವೈಭವವುಳ್ಳ ವಾಗ್ದೇವಿಯ ಮೂಲವನ್ನು (ಲಕ್ಷ್ಮೀತತ್ತ್ವ ಮೂಲವನ್ನು) ಅರಿಯಬಲ್ಲವನಾರು ?" [ರಾಷ್ಟ್ರವು ಏಕೀಕೃತವಾಗಬೇಕಾದರೆ ಭಾಷಾರೂಪ ಲಕ್ಷ್ಮೀಸಂಪತ್ತು ಬೇಕೆಂದೂ ಅನುಭವವು ವಿಶಾಲವಾಗಲೂ ಈ ದೇವಿಯು ನಮ್ಮ ಪ್ರಜ್ಞೆಗೆ ಮೀರಿದ ಅನುಭವಗಳನ್ನು ದಿವ್ಯಭಾಷೆಯಲ್ಲಿ ಹಿಡಿದುಕೊಡುವುದವಶ್ಯವೆಂದೂ ಭಾವ.]

೩) ಗೌರೀ ರ್ಮಿಮಾಯ ಸಲಿಲಾನಿ ತಕ್ಷತಿ ।
ಏಕಪದೀ ದ್ವಿಪದೀ ಸಾ ಚತುಷ್ಪದೀ ।
ಅಷ್ಟಾಪದೀ ನವಪದೀ ಬಭೂವುಷೀ ।
ಸಹಸ್ರಾಕ್ಷರಾ ಪರಮೇ ವ್ಯೋಮನ್ ॥
(ತೈ. ಬ್ರಾ. ಅದೇ ತೈ. ಆ. I–9–4 ಮತ್ತು ಋ. ಸಂ. I–164–41)

"ಪರಮವ್ಯೋಮವೆಂದು ಪ್ರಸಿದ್ಧವಾದ ವಿಷ್ಣುಪದದಲ್ಲಿ ಪ್ರತಿಷ್ಠಿತಳಾದ, ಹೊಂಬಣ್ಣವುಳ್ಳ ವಾಗ್ದೇವಿಯು, ಸೃಷ್ಟಿಯ ಆರಂಭಕಾಲದಲ್ಲಿ ಉದಕದಂತೆ ಜಗದ್ಬೀಜವಾಗಿ, ಮೂಲಕಾರಣವಾಗಿರುವ ಶಬ್ದರಾಶಿಯನ್ನು ವರ್ಣ, ಪದ. ವಾಕ್ಯಗಳಲ್ಲಿ ಸೃಷ್ಟಿಸುತ್ತಾ ಶಬ್ದವನ್ನು ಉತ್ಪಾದಿಸಿದಳು. ಮೊದಲು ಪ್ರಣವ ವೆಂಬ ಓಂಕಾರವು ಏಕಪದವಾಗಿ ಪರಮಾತ್ಮನ ಮುಖದಿಂದ ಹೊರಡುವಂತೆ ಮಾಡಿ ಏಕಪದೀ ಆದಳು. ಆಮೇಲೆ ವ್ಯಾಹೃತಿಗಳೂ, ಗಾಯತ್ರಿಯೂ ಆದ ಎರಡು ಪದಪುಂಜಗಳುಂಟಾಗಿ ದ್ವಿಪದೀ ಎನಿಸಿದಳು. ಅನಂತರ ನಾಲ್ಕು ವೇದಗಳನ್ನೂ ಹೊರಬರುವಂತೆ ಮಾಡಿ ಈ ಶಬ್ದನಿತ್ಯಪ್ರಪಂಚ ದ್ವಾರಾ ಚತುಷ್ಪದೀ ಆದಳು. ಹಾಗೇ ಶಿಕ್ಷಾ, ವ್ಯಾಕರಣ, ನಿರುಕ್ತ, ಛಂದಸ್ಸು ಕಲ್ಪ, ಜ್ಯೋತಿಷಗಳೆಂಬ ಆರು ವೇದಾಂಗಗಳನ್ನು ನಿರ್ಮಿಸಿ ಷಟ್ಪದೀ ಆಗಿಯೂ ಪ್ರಸಿದ್ಧಳಾದಳು ಮುಂದೆ ಮೀಮಾಂಸಾ, ನ್ಯಾಯ, ಸಾಂಖ್ಯ, ಯೋಗ, ಪಾಂಚರಾತ್ರ, ಪಾಶುಪತ, ಆಯುರ್ವೇದ, ಧನುರ್ವೇದ, ಗಾಂಧರ್ವವೇದಗಳನ್ನು ಸೃಷ್ಟಿಸಿ ನವಪದೀ ಆದಳು. ಕೊನೆಗೆ, ಕೊನೆಯೇ ಇಲ್ಲದಷ್ಟು ವಾಕ್ಯಸಂಪತ್ತಿನಿಂದ, ಅನಂತವಿಧರೂಪ ತಳೆದು ಸಹಸ್ರಾಕ್ಷರಾ ಎನಿಸಿ, ವಿಶ್ವವ್ಯಾಪಕಳಾದಳು."

ಲಕ್ಷ್ಮೀತಂತ್ರದಲ್ಲಿ : ವರ್ಣಾನಾಂ ಜನನೀಭೂತ್ವಾ
ಭೋಗಾನ್ ಪ್ರಸ್ನೌಮಿ ಗೌರಿವ ।

ಎಂದು ಹೇಳಿದುದಕ್ಕೆ ವಿಶೇಷವಾಗಿ ಈ ಮಂತ್ರವೇ ಕಾರಣವಿರಬೇಕೆಂದು ಈಗ ಅನ್ನಿಸದಿರಲಾರದಷ್ಟೆ !

ಅಥವಾ ಗೌರೀ ಎಂದರೆ 'ಹೊಂಬಣ್ಣದವಳು' ಎಂಬುದನ್ನು ಬಿಟ್ಟು, "ಗರಣಶೀಲಾ. ಶಬ್ದಬ್ರಹ್ಮಾತ್ಮಿಕಾ ವಾಕ್" ಎಂದಿಷ್ಟೇ ಗ್ರಹಿಸಿದರೂ, "ಈ ಶಬ್ದಬ್ರಹ್ಮರೂಪದಲ್ಲಿರುವ ವಾಗ್ದೇವತೆಯು ಅವ್ಯಾಕೃತವಾಗಿದ್ದಾಗ (ಮೂಲ ಕಾರಣಾವಸ್ಥೆಯಲ್ಲಿ, ಇನ್ನೂ ಅವ್ಯವಸ್ಥಿತವಾಗಿದ್ದಾಗ) ಒಂದೇ ಆದಿದ್ದರೂ, ಸುಬಂತ (ನಾಮಪದ), (ಕ್ರಿಯಾಪದ) ತಿಙಂತಗಳೆಂದು ಎರಡು ಪಾದಗಳನ್ನು ಹೊಂದಿಯೂ, ಕ್ರಮವಾಗಿ ಮುಂದೆ, ನಾಮ, ಅಖ್ಯಾತ, ಉಪಸರ್ಗ, ನಿಪಾತಗಳೆಂಬ ನಾಲ್ಕು ಪಾದಗಳನ್ನು ಹೊಂದಿಯೂ, ಹಾಗೇ ಮುಂದೆ, ಸಂಬೋಧನೆಯೊಡಗೂಡಿದ ಎಂಟು ವಿಭಕ್ತಿರೂಪಗಳನ್ನಾಶ್ರಯಿಸಿಯೂ, ಅವ್ಯಯದಿಂದೊಡಗೂಡಿ ಮುಂದೆ ಇವಳೇ ನವಪದಿಯಾಗಿಯೂ ಕೊನೆಗೆ ವ್ಯಾಪಕಳಾಗಿ ಎಲ್ಲೆಲ್ಲೂ ಹರಡಿ ಸಹಸ್ರಾಕ್ಷರಾ ಎನಿಸಿ, ಸರ್ವಶಬ್ದವಾಚ್ಯನಾದ ಪರಬ್ರಹ್ಮನನ್ನು ಗ್ರಹಿಸಿ, ಆ ಪರಮಪದದಲ್ಲೇ ಸುಪ್ರತಿಷ್ಠಿತಳಾದಳು" ಎಂದೂ ಈ ಋಕ್ಕಿಗೆ ಪೂರ್ವಿಕರು ಅರ್ಥಮಾಡಿದ್ದಾರೆ.

ಒಂದೇ ಕಾಲಿನ, ಎರಡು ಕಾಲಿನ, ನಾಲ್ಕು ಕಾಲಿನ, ಎಂಟು ಕಾಲಿನ, ಒಂಬತ್ತು ಕಾಲನ ವಿಚಿತ್ರ ಪ್ರಾಣಿಗಳ ಶಬ್ದರೂಪಗಳಲ್ಲೂ ಜಗತ್ತನ್ನು ವ್ಯಾಪಿಸಿ, ಪರಮಾತ್ಮನ ಮಹಿಮೆಯಲ್ಲಿ, ವೈಭವದಲ್ಲಿ ಕಲೆತು, ಅವನೊಡನೆಯೇ ಅವನಿರುವಲ್ಲೇ (ವೈಕುಂಠದಲ್ಲಿ) ಸುಪ್ರತಿಷ್ಠಿತಳಾದಳೆಂದು ವಿವರಣೆಯೂ ಉಂಟು.

ವಿಷ್ಣುಪುರಾಣಕಾರರು : ಅರ್ಥೋ ವಿಷ್ಣುರಿಯಂ ವಾಣೀ —ಎಂದು ಲಕ್ಷ್ಮಿಯು 'ವಾಣೀ' ಎಂಬ ಶಬ್ದರೂಪದಲ್ಲೂ, ವಿಷ್ಣುವು ಈ ಶಬ್ದಗಳೊಳಗಿನ ಅರ್ಥರೂಪದಲ್ಲೂ ಜಗತ್ತನ್ನು ವ್ಯಾಪಿಸಿದ್ದಾರೆಂದು ವರ್ಣಿಸಿರುವುದಕ್ಕೂ ಈ ಮಂತ್ರವೇ ಮೂಲ. ನಿಶ್ಶಬ್ದವಾದ ಪ್ರಪಂಚಭಾಗವಾಗಲೀ, (ಕಾರ್ಯ ಕಾರಣರೂಪದಲ್ಲಿ) ಅರ್ಥಶೂನ್ಯವಾದ ಶಬ್ದಖಂಡವಾಗಲೀ, ಅಖಂಡ ಬ್ರಹ್ಮಾಂಡ, ಅಖಿಳಾಂಡ ಕೋಟಿ ಬ್ರಹ್ಮಾಂಡ ಸಮೂಹವಾಗಲೀ ಯಾವುದೂ ಇಲ್ಲವೆಂದು ಸಾರುವ ಈ ಮಂತ್ರವು ವಿಷ್ಣುಭಗವಂತನ, ಲಕ್ಷ್ಮೀದೇವಿಯು ಸರ್ವವ್ಯಾಪಕ ಸ್ವರೂಪ, ಸ್ವಭಾವಗಳಿಗೆ ಕನ್ನಡಿ ಹಿಡಿದು, ವಿಷ್ಣುಶಬ್ದಕ್ಕೇ ವ್ಯಾಖ್ಯಾನಮಾಡಿದೆ.

ವಿಸ್ತಾರವಾಗಿ ವರ್ಣಮಾಲೆಯ ರೂಪದಲ್ಲಿ ಲಕ್ಷ್ಮೀದೇವಿಯ ಆವಿಷ್ಕರಣ ಪ್ರಕಾರವನ್ನು ಲಕ್ಷ್ಮೀತಂತ್ರವು ೧೯ನೆಯ ಅಧ್ಯಾಯದಲ್ಲಿ ವರ್ಣಿಸಿದೆ' ಹದಿನೈದು ಸ್ವರಗಳೂ, ಮಾದಿ-ಕಾಂತ ವ್ಯಂಜನಗಳೂ (ಪುರುಷನಿಂದ ಪೃಥ್ವೀವರೆಗಿನ, ಇವುಗಳಿಗೆ ಸರಿಹೊಂದುವ ಸೃಷ್ಟಿರೂಪವೂ) ಯಾದಿ-ವಾಂತವಾದ ನಾಲ್ಕು ಧಾರಣಾವಿಶೇಷಗಳೂ, ಶಾದಿ-ಕ್ಷಾಂತವಾದ (ಶ: ಷ, ಸ, ಹ, ಕ್ಷ ಗಳೆಂಬ) ಐದು ಬ್ರಹ್ಮಪಂಚಕಾಧಿಷ್ಠಿತಗಳೂ, ಇವುಗಳಿಗೆ ಸರಿಹೊಂದುವ ತತ್ವವಿಶೇಷಗಳೂ, ಬಹುಮಾರ್ಮಿಕವಾಗಿ ಇಲ್ಲಿ ವಿವರಿಸಲ್ಪಟ್ಟುದಕ್ಕೆಲ್ಲಾ ವೇದವೇ ಹೃದಯಸ್ಥಾನವೆಂದೂ ಈಗ ನಿಸ್ಸಂದೇಹವಾಗಿ ತಿಳಿಯಬಹುದಲ್ಲವೇ ?

ಹೆಚ್ಚೇನು ? ಮೇಲಿನ ಋಕ್ಕಿಗೇ —ಏಕಪದೀ, ದ್ವಿಪದೀ ಇತ್ಯಾದಿ ವಿವರಗಳಿಗೂ, ಸಲಿಲವೆಂಬ ಸೃಷ್ಟಿ ಮೂಲದ್ರವ್ಯದೊಳಗಿಂದ ಹೊರಬಂದ ಸೃಷ್ಟಿವಿವರಣೆಗೂ —ಲಕ್ಷ್ಮೀತಂತ್ರದಲ್ಲಿ ಲಕ್ಷ್ಮೀದೇವಿಯೇ ವಿವರಣೆ ನೀಡಿರುವುದೊಂದೇ ಈ ವಿಷಯಕ್ಕೆ ಕೊನೆಯ ನಿರ್ಣಯವಾಗಲಿ :

## ೮ "ಗೌರೀರ್ಮಿ(ರ್)ಮಾಯ" —ಋಕ್ಕಿಗೆ ಲಕ್ಷ್ಮೀತಂತ್ರದ ವಿವರಣೆ

ಅಹಮೇಕಪದೀ ದಿವ್ಯಾ ಶಬ್ದಬ್ರಹ್ಮಮಯೀ ಪರಾ ।
ಘೋಷವರ್ಣಸ್ವರೂಪೇಣ ವರ್ತೇಽಹಂ ದ್ವಿಪದೀ ಪುನಃ ॥
ತಕ್ಷತೀ ಸಲಿಲಂ ಸರ್ವಂ ದ್ರವ್ಯಜಾತಿ ಗುಣಕ್ರಿಯಾಃ ।
ಚತುರ್ಧಾಭಿದಧಾನಾಹಂ ಚತುಷ್ಪದ್ಯುದಿತಾ ಬುಧೈಃ ॥
ನಾಮಭಾವದ್ವಯೋಪೇತಾ ಸಾಹಮಷ್ಟಪದೀ ಸ್ಮೃತಾ ।
ಅವಿಕಲ್ಪವಿಕಲ್ಪಸ್ಥಾ ಸಾಹಂ ನವಪದೀ ಸ್ಮೃತಾ ॥

ವ್ಯೋಮ್ನ್ಯಹಂ ಪರಮೇ ದಿವ್ಯಾಹ್ಯನಂತಾಕ್ಷರ ಮಾಲಿನೀ।
ಇಯದ್ವಿತತಿ ವಿಸ್ತೀರ್ಣಾ ಪೂರ್ಣಾಹಂತಾಹ ಮಾದಿಮಾ ॥

ಮಂತ್ರಾಣಾಂ ಜನನೀ ಜ್ಞೇಯಾ ಭುಕ್ತಿ ಮುಕ್ತಿ ಪ್ರದಾಯಿನೀ।
ಉದ್ಯನ್ತಿ ಮಂತ್ರಕಲ್ಲೋಲಾ ಮತ್ತ ಏವ ಚಿದಂಬುಧೇಃ ॥

(ಅಧ್ಯಾಯ 18, ಶ್ಲೋ. 33–37.)

ಶಬ್ದಬ್ರಹ್ಮಸಮಷ್ಟಿರೂಪದಲ್ಲಿ ಏಕವಾಗಿ ಏಕಪದೀ, ಧ್ವನಿ, ವರ್ಣಗಳೆಂಬ ರೂಪದಲ್ಲಿ ದ್ವಿಪದೀ, ದ್ರವ್ಯ, ಜಾತಿ, ಗುಣಕ್ರಿಯಾ ವರ್ಣನ ಪರಶಬ್ದಗಳ ನ್ನೊಳಗೊಂಡು ಚತುಷ್ಪದೀ, ಇವುಗಳ ಶಬ್ದ–ಅರ್ಥಗಳ ರೀತಿಯಲ್ಲಿ ಪ್ರತ್ಯೇಕತ್ವ ಹೊಂದಿ ಮತ್ತೆ ಎಂಟಾಗಿ ಅಷ್ಟಪದೀ, ಎನಿಸಿ ಪ್ರಾಕೃತ ಸೃಷ್ಟಿರೂಪದ ಈ ವಿಶಾಲ ಲೋಕದಲ್ಲಿ (ತಕ್ಷತೀ = ತನೂ ಕುರ್ವತೀ) ಮೈದಳೆದು ವ್ಯಾಪಿಸಿರುವ ಲಕ್ಷ್ಮೀದೇವಿಯು, ಅಪ್ರಾಕೃತವಾದ ವೈಕುಂಠಲೋಕದಲ್ಲಿ ಅನಂತಾಕ್ಷರರೂಪದಲ್ಲಿರುವಳೆಂದೂ, "ಅಹಂ–ಇದಂ" ಎಂಬಂತೆ ನಿರ್ದೇಶನಾರ್ಹವಾದ ಎಲ್ಲ ವಸ್ತುಗಳ ಸ್ವರೂಪಗಳಿಗೂ ನಿರೂಪಕಳಾಗಿರುತ್ತಾ, ಸಂಸರಿಸುವ, ಪರಿಣಾಮಹೊಂದುವ, 'ಸಲಿಲ'ದೊಳಗಿಂದ ಬಂದ ಈ ಎಲ್ಲಕ್ಕೂ, ಈ ಎಲ್ಲದರ ಹೆಸರುಗಳಿಗೂ, ತಾಯಿಯಾಗಿ, ಅಭಿಮಾನೀ ದೇವತೆ ಎನಿಸಿ, ಎಲ್ಲ ಚಿದ್ವಸ್ತುಗಳಿಗೂ (ಚೇತನರಿಗೂ) ಭೋಗಮೋಕ್ಷಕಾರಕಳಾಗಿದ್ದು, ಪ್ರಾಕೃತಾತೀತವಸ್ತುವರ್ಣನಪರವಾದ ವೇದಮಂತ್ರ ಸಮೂಹಕ್ಕೂ ಉತ್ಪತ್ತಿಸ್ಥಾನಳಾಗಿರುತ್ತಾಳೆಂದಮೇಲೆ. ವೇದಮಾತೆ ಎಂಬುದಕ್ಕೂ ವಿವರಣೆ ಕೊಟ್ಟಂತಾಗಿದೆ. "ವೇದಾನಾಂ ಮಾತಾ‌‌ಽ ಮೃತಸ್ಯನಾಭಿಃ" (ತೈ. ಬ್ರಾ. II–8–8) ಎಂಬುದೂ ಇಲ್ಲಿ ವಿವೃತವಾಗಿದೆ ಇಂಥ ಅನಂತಮಹಿಮಳಾದ ವಾಗ್ದೇವಿಯನ್ನು ದೇವತೆಗಳೂ, ಗಂಧರ್ವರೂ, ಪಶುಗಳೂ ಮನುಷ್ಯರೂ, 'ಭೋಜನ'ವನ್ನಾಗಿ ಉಪಜೀವಿಸಿ, ಬದುಕುತ್ತಿರುವರೆಂದೂ, ಈ ಲೋಕಗಳೆಲ್ಲ ಹರವಿರುವುದೇ ವಾಕ್‌ತತ್ವದಲ್ಲಿ ಎಂದೂ, ಋತವೆನಿಸಿದ ಸೃಷ್ಟಿಗೆ ಅದೇ ಮೂಲವೆಂದೂ, ಮಂತ್ರದ್ರಷ್ಟೃಗಳಾದ ಋಷಿಗಳು ಇವಳನ್ನು ತಪಸ್ಸಿನಿಂದ, ಶ್ರಮದಿಂದ, ಹೊಂದಲು (ಪ್ರತ್ಯಕ್ಷ ಮಾಡಿಕೊಳ್ಳಲು) ಪ್ರಯತ್ನಪಟ್ಟ

ರೆಂದೂ, ಇವಳನ್ನು ಯಜ್ಞಗಳಲ್ಲಿ ಹವಿಸ್ಸಿನಿಂದ ಆರಾಧಿಸುವುದು ಯುಕ್ತವೆಂದೂ ವೇದ ಹೇಳುವುದಕ್ಕೆ ಇಲ್ಲಿ ಮುಂದೆ ವಿವರಣೆ ಇದೆ :

೪) ಅನಂತಾಮಂತಾದಧಿನಿರ್ಮಿತಾಂ ಮಹೀಂ ।
ಯಸ್ಯಾಂ ದೇವಾ ಅದಧುರ್ಭೋಜನಾನಿ ।
ಏಕಾಕ್ಷರಾಂ ದ್ವಿಪದಾಂ ಷಟ್ಪದಾಂ ಚ ।
ವಾಚನ್ದೇವಾ ಉಪಜೀವನ್ತಿ ವಿಶ್ವೇ ।
ವಾಚಂ ಗಂಧರ್ವಾಃ ಪಶವೋ ಮನುಷ್ಯಾಃ ।
ವಾಚೀಮಾ ವಿಶ್ವಾ ಭುವನಾನ್ಯರ್ಪಿತಾ ।...

(ಇತ್ಯಾದಿ, ತೈ. ಬ್ರಾ. ಅದೇ)

ಅಳೆಯಲು ಬಾರದ ಈ ಗಂಭೀರ ವಿಸ್ತೃತ ವಾಕ್ತತ್ವವನ್ನು ಬಹುಸ್ಥೂಲವಾಗಿ ಅಳೆಯಲೇ ಬೇಕಾದರೆ, ಕೇವಲ ನಾಲ್ಕು ಬಗೆಯಲ್ಲಿ ಮಾತ್ರ ಅಳೆಯತಕ್ಕದ್ದೆಂದೂ, ಈ ನಾಲ್ಕನ್ನು ಶಾಸ್ತ್ರಜ್ಞರಾದ ವೇದವಿದರುಮಾತ್ರ ಬಲ್ಲರೆಂದೂ, ಈ ಪೈಕಿ ಮೂರು ಮೊದಲ ಬಗೆಗಳು ಶರೀರ ಮಧ್ಯ ಗುಹೆಯಲ್ಲೇ ನಿಂತಿರುವುವೆಂದೂ, ಕೊನೆಯದು ಮಾತ್ರ ಎಲ್ಲ ಮನುಷ್ಯರಿಗೂ ವ್ಯಕ್ತವೆಂದೂ ಹೇಳುವ ಮುಂದಿನ ವೇದಮಂತ್ರಕ್ಕೂ ಲಕ್ಷ್ಮೀತಂತ್ರದಲ್ಲಿ ವಿವರಣೆಯಿದೆ.

೫) ಚತ್ವಾರಿ ವಾಕ್ ಪರಿಮಿತಾ ಪದಾನಿ ।
ತಾನಿ ವಿದುರ್ಬ್ರಾಹ್ಮಣಾ ಯೇ ಮನೀಷಿಣಃ ॥
ಗುಹಾ ತ್ರೀಣಿ ನಿಹಿತಾ ನೇಂಗಯನ್ತಿ ।
ತುರೀಯಂ ವಾಚೋ ಮನುಷ್ಯಾ ವದಂತಿ ॥

(ತೈ ಬ್ರಾ. ಅದೇ; ಋ ಸಂ. 1-164-45.)

ಭಾಷ್ಯಕಾರರು ಈ ನಾಲ್ಕನ್ನು ಪರಾ. ಪಶ್ಯನ್ತೀ, ಮಧ್ಯಮಾ, ವೈಖರೀ ಎಂದು ಗುರುತಿಸಿ ವ್ಯಾಖ್ಯಾನಿಸಿದ್ದಾರೆ ಈ ಪರಾ ಎಂಬುದೇ ನಾದವೆಂದೂ, ನಾದವಾದ ಮೇಲೆ ಮಿಂಚುವ ಶಬ್ದವಿಶೇಷವು, ಪಶ್ಯಂತೀ ಎಂಬುದೇ ಬಿಂದು

ವೆಂದೂ, ಇದಾದಮೇಲೆ ತೋರಿಕೊಳ್ಳುವ ಅವಿಷ್ಕಾರವು ಮಧ್ಯಮಾ ಎಂಬುದೇ ವಾಚ್ಯ-ವಾಚಕಭೇದದಲ್ಲಿದ್ದು ಅವುಗಳಲ್ಲಿ ಸಂಗತಿಯನ್ನು ಸಂಸ್ಕರಿಸುವುದೆಂದೂ ಕೊನೆಯದು ವರ್ಣ, ವಾಕ್ಯಾದಿಗಳಲ್ಲಿ ಸ್ಫುಟವಾಗಿದ್ದು ವೈಖರೀ ಎನಿಸುವುದೆಂದೂ ಲಕ್ಷ್ಮೀತಂತ್ರದ ವಿವರಣೆ. (ಅಧ್ಯಾಯ 18, ಶ್ಲೋ-22-26)

ನಾದವು ಸೂಕ್ಷ್ಮವಾಗಿದ್ದು ಹೃದಯದ ಆಳದಲ್ಲೇ ನಿಂತು ದುರ್ನಿರೂಪವಾದಿ ಪರಾ ಎನಿಸಿದರೆ, ಅದೇ ಮುಂದೆ ಹೃದಯದ ತುದಿಗೆ ಬಂದು ನಿಂತು, ಯೋಗೀಗಳಿಗೆ ಮಾತ್ರ ನೋಡಲು ದೊರೆಯುವ ರೂಪವೇ ಪಶ್ಯಂತೀ ಎನಿಸಿ, ಮುಂದೆ ಅದೇ ಬುದ್ಧಿಗೆ ಮಾತ್ರ ನಿಲುಕಿ, ಇನ್ನೂ ನಾಲಿಗೆಗೆ ಎಟುಕದ ಸ್ಥಿತಿಗೆ ಮಾಧ್ಯಮಾ ಎಂದು ಹೆಸರಾಗಿ, ಕೊನೆಗೆ ನಾಲಿಗೆಯಲ್ಲಿ ನಿಂತಾಗ ಮಾತ್ರ ವೈಖರೀ ಎನಿಸುವುದೆಂದು ಋಗ್ಭಾಷ್ಯದಲ್ಲಿ ಸಾಯಣರ ವಿವರಣೆ ಇದೆ. (ಈ ನಾಲ್ಕು ಬಗೆಗೆ ಬೇರೆ ವಿವರಣೆಗಳನ್ನೂ ಅವರು ತೋರಿಸಿದ್ದಾರೆ.) ವೇದಗಳ ಇತರ ಭಾಗಗಳಲ್ಲೂ, (ಶತಪಥಬ್ರಾಹ್ಮಣ 4-1-3-14), ಸಾ ವೈ ವಾಕ್ ಸೃಷ್ಟಾ ಚತುರ್ಧಾ ಇತ್ಯಾದಿ ತೊಡಗುವ, ಮೇಲಿನ ಋಕ್ಕಿನ ಐತರೇಯ ಬ್ರಾಹ್ಮಣ ಬಾಗ ವಿವರಣೆಯೂ), ಬೃಹದ್ದೇವತೆ, ನಿರುಕ್ತಕಾರರ ವಿವರಣೆಗಳಲ್ಲೂ ಈ ತತ್ತ್ವ ಪ್ರಸಿದ್ಧವಾಗಿದೆ. ಇದನ್ನೇ ಲಕ್ಷ್ಮೀತಂತ್ರವು ವಿವರಿಸಿದ್ದು ಮಂತ್ರತಂತ್ರಶಾಸ್ತ್ರಗಳ ಏಕಾರ್ಥತೆಯನ್ನು ನಿರೂಪಿಸಿದಂತಾಗಿದೆ.

ಪ್ರಕೃತ ಹಿರಣ್ಯವರ್ಣಾಂ ಎಂಬ ಶ್ರೀಸೂಕ್ತ ವರ್ಣನೆಯಲ್ಲಿ 'ಹಿ-ರ-ಣ್ಯ' ಎಂದು ಅಕ್ಷರ ಅಕ್ಷರವಾಗಿ ಬಿಡಿಸಿ ಹೇಳಲ್ಪಟ್ಟ ಲಕ್ಷ್ಮೀತಂತ್ರದ ನಿರುಕ್ತಿಯು ಈ ರೀತಿ ವ್ಯಾಪಕಾರ್ಥವುಳ್ಳದ್ದಾಗಿದ್ದು ಬಹು ಪ್ರಾಚೀನ ವೈದಿಕ ಮರ್ಮಗಳನ್ನೊಳಗೊಂಡಿರುವುದೂ, ಶಬ್ದಪ್ರಪಂಚಕ್ಕೆ ಲಕ್ಷ್ಮಿಯೇ ಅಧೀಶ್ವರೀ ಎಂಬುದೂ ಹೀಗೆ ಸುಸ್ಪಷ್ಟವಾಗಿದೆ.

ವಾಗ್ದೇವತೆ ಎಂದರೆ ರೂಢಿಯಲ್ಲಿ ಸರಸ್ವತಿಯೆಂಬ ಬ್ರಹ್ಮಪತ್ನಿಯು ಒಡೆಯಳೆಂಬುದು ಪರಿಮಿತಾರ್ಥದಲ್ಲಿ ಮಾತ್ರ. ರೂಢಿಗೆ ಮೀರಿದ ಅರ್ಥ

ದಲ್ಲಿ ಸರಸ್ವತೀ ಶಬ್ದವೂ ಲಕ್ಷ್ಮೀಪರವೇ. ಹೇಗೆಂದರೆ ಈ ಬಗೆಯ ಪ್ರಾಚೀನ ಪ್ರಯೋಗಗಳನ್ನು ನೋಡಿದಾಗ ಮಾತ್ರ ಸಂಶಯ ಕಳೆಯುವುದು.

ಹಯಗ್ರೀವಮಹಂ ವಂದೇ ಸ್ಫಟಿಕಾಚಲ ಸನ್ನಿಭಂ ।
ಚಂದ್ರಮಂಡಲ ಮಧ್ಯಸ್ಥಂ ಸರಸ್ವತ್ಯಾ ಸಮನ್ವಿತಂ ॥
(ವಿಷ್ಣುತಿಲಕ ಸಂಹಿತೆ. ೨೫೦)

ಇಲ್ಲೇ ಮುಂದೆ :

ಇತೀದಂ ಪರಮಂ ಗುಹ್ಯಂ ಹಂಸೋ ಹಯಶಿರಾ ಹರಿಃ ।
ವೇದೋಪದೇಶ ಸಮಯೇ ಮಾಂ ವಿಬೋಧ್ಯ ಉಪದಿಷ್ಟ
ವಾನ್ ॥
ಅಂಕೇನೋದೂಹ್ಯವಾಗ್ದೇವೀಂ ಆಚಾರ್ಯಕಮುಪಾಶ್ರಿತಃ ।
ವೇದವೇದಾನ್ತ ಶಾಸ್ತ್ರಾರ್ಥ ತತ್ತ್ವವ್ಯಾಖ್ಯಾನ ತತ್ಪರಃ ॥

ಎಂದೂ, ವೇದಾಂತರಹಸ್ಯವನ್ನು ಭಗವಂತನು ಹಯಗ್ರೀವ ರೂಪಿಯಾಗಿ, 'ವಾಗ್ದೇವಿ' ಎನಿಸಿದ ಲಕ್ಷ್ಮೀದೇವಿಯನ್ನು, ತನ್ನ ಮಡಿಲಲ್ಲಿ ಕೂರಿಸಿಕೊಂಡು ಉಪದೇಶಿಸಿದುದಾಗಿ ವರ್ಣಿಸಿದೆ. (ಇದೆಲ್ಲವನ್ನೂ ಶ್ರೀ ಬ್ರಹ್ಮತಂತ್ರ ಸ್ವತಂತ್ರ ಪರಕಾಲಯತೀಂದ್ರಮಹಾದೇಶಿಕರು ತಮ್ಮ 'ಹಯಶಿರೋ ಪಾಖ್ಯಾನ' ವಾಖ್ಯಾನದಲ್ಲಿ (ಪು ೨೩೭) ವಿವರಿಸಿರುವರು.) ತೈ. ಆರಣ್ಯಕ (III)ದಲ್ಲಿ ಬರುವ 'ವಾಚಸ್ಪತೇ ವಿಧೇನಾಮನ್' 'ವಾಚಸ್ಪತೇ ಹೃದ್ವಿಧೇ ನಾಮನ್' ಎಂಬಲ್ಲಿನ ವಾಚಸ್ಪತಿ ಶಬ್ದಕ್ಕೇ ವಿಷ್ಣುವೆಂತಲೂ.— ವಾಙ್ನಾಮ ವೈಷ್ಣವೀ ಶಕ್ತಿಃ ಎಂಬ ಪ್ರಮಾಣದಂತೆ ವಾಗ್ದೇವಿಯು ಲಕ್ಷ್ಮಿಯೆಂದೂ ಅಹಿರ್ಬುಧ್ನ್ಯರು ಅರ್ಥಮಾಡಿರುವುದನ್ನೂ ಅವರು ಎತ್ತಿತೋರಿಸಿದ್ದಾರೆ.

ಹೀಗೆ ಸಕಲವರ್ಣಾತ್ಮಿಕಳೂ, ಶಬ್ದಬ್ರಹ್ಮಸ್ವರೂಪಳೂ ಆದ ಲಕ್ಷ್ಮೀ ದೇವಿಯನ್ನು ಹಿರಣ್ಯವರ್ಣಳೆಂದು ಮಂತ್ರವು ಕೊಂಡಾಡಿರುವುದು ಬಹು ಮಾರ್ಮಿಕವಾಗಿದ್ದು, ಯುಕ್ತವೂ ಮನೋಹರವೂ ಆಗಿದೆ.

ಕೊನೆಯದಾದಿ ಶ್ರೀರಂಗನಾಥ ಮುನಿಗಳ ವ್ಯಾಖ್ಯಾನವನ್ನು

ನೋಡೋಣ: ಅವರ ಪ್ರಕಾರ 'ಹಿರಣ್ಯವರ್ಣ'ಳೆಂದರೆ 'ಹಿತರಮಣೀಯಳು' ಎಂದು. ಹಿತತ್ವಂ ಅಪೇಕ್ಷಿತಾರ್ಥಸಾಧಕತ್ವಂ; ರಮಣೀಯತ್ವಂ ಪ್ರೀತ್ಯನುರೂಪತ್ವಂ। "ಸಾಧಕನು ಬಯಸಿದ್ದನ್ನೆಲ್ಲ ಕೊಡುವವಳೂ, ಪ್ರೀತಿಯ ಸ್ವರೂಪವುಳ್ಳವಳೂ ಲಕ್ಷ್ಮೀದೇವಿ"ಯೆಂದು ಭಾವ. ಇದೂ ಸಂಗತವಾಗಿದ್ದು ಸ್ಪಷ್ಟವಾಗಿರುವುದರಿಂದ ಹೆಚ್ಚಿನ ವಿವರಣೆ ಅವಶ್ಯವಿಲ್ಲ.

## ೯ "ಹರಿಣೀಂ"—ವಿವರಣೆ

ಈ ಶಬ್ದಕ್ಕೆ ಶ್ರೀ ಸಾಯಣರು: ಹರಿತವರ್ಣಾಂ, ಹರಿಣೀರೂಪಧರಾಂ ವಾ ಎಂದು ಅರ್ಥಮಾಡಿದ್ದಾರೆ. "ಅರಿಶಿನದಂತೆ ಗೌರವರ್ಣವುಳ್ಳವಳೂ, ಅಥವಾ ಜಿಂಕೆಯ (ಚಿಗುರೆಯ) ರೂಪ ಧರಿಸಿದಳು" ಎಂದರ್ಥ. ಈ ಎರಡನೆಯ ರೂಪವನ್ನು ಲಕ್ಷ್ಮೀದೇವಿಯು ಒಮ್ಮೆ ಧರಿಸಿ ಅರಣ್ಯದಲ್ಲಿ ಸಂಚಾರ ಮಾಡಿದುದಾಗಿ ಹೇಳುವ ಒಂದು ಪುರಾಣವಾಕ್ಯವನ್ನು ಅವರು ಉದಾಹರಿಸಿದ್ದಾರೆ: "ಶ್ರೀರ್ಧೃತ್ವಾ ಹರಿಣೀ ರೂಪಂ ಅರಣ್ಯೇ ಸಂಚಚಾರ ಹ" ಎಂದು. ಇದನ್ನೇ ಪೃಥ್ವೀಧರಾಚಾರ್ಯರೂ ಒಪ್ಪಿದ್ದಾರೆ.

'ಆಥರ್ವಣಿಕ ಸ್ತುತಿ'ಯಲ್ಲಿ ಹೀಗೆ ವಿವರಣೆಯಿದೆ: (ಇದನ್ನು ಶತಾನಂದ ವೃತ್ತಿಯಲ್ಲಿ ಉದಾಹರಿಸಿದೆ)

ಹರಿಣೀಂ ತು ಹರೇಃ ಪತ್ನೀಂ ದಾರಿದ್ರ್ಯಪರಿಹಾರಿಣೀಂ।
ಪ್ರಪದ್ಯೇಽಹಂ ಹರಿದ್ರಾಭಾಂ ಹರಿಣಾಕ್ಷೀಂ ಹಿರಣ್ಮಯೀಂ॥

ಇಲ್ಲಿ ದಾರಿದ್ರ್ಯವನ್ನು ಪರಿಹರಿಸುವವಳೆಂದೂ, ಜಿಂಕೆಯಂತೆ ಕಣ್ಣುಳ್ಳವಳೆಂದೂ, ಅರಿಶಿನದಂತೆ ಹೊಂಬಣ್ಣದ ಮೈಕಾಂತಿಯುಳ್ಳವಳೆಂದೂ ಮೂರು ಅರ್ಥಗಳನ್ನು ಹೇಳಿದಂತಾಗಿದೆ.

ಶ್ರೀರಂಗನಾಥ ಮುನಿಗಳು "ಸರ್ವಪಾಪಹರಣಶೀಲಾಂ" ಸರ್ವಪಾಪ ನಿವಾರಕಳಾದ್ದರಿಂದ 'ಹರಿಣೀ' ಎಂದು ಅರ್ಥಮಾಡಿದ್ದಾರೆ.

ಇತರ ಶ್ರೀ ವೈಷ್ಣವಾಚಾರ್ಯರುಗಳ ಅರ್ಥ ಹೀಗಿದೆ.

(೧) 'ಹರಂತಿ, ಬಧ್ನಂತಿ (ಭಕ್ತ್ಯಾ) ಏನಾಂ —ಇತಿ ಹರಿಣೀ.' ಬೇಡರು ಜಿಂಕೆಗಳನ್ನು ಬಲೆಯಲ್ಲಿ ಹಿಡಿದು ಹಾಕುವಂತೆ ಪರಮಯೋಗಿಗಳು ಭಕ್ತಿ ಎಂಬ ತಮ್ಮ ಬಲೆಯಲ್ಲಿ ಹಿಡಿದುಹಾಕುತ್ತಾರಾದುದರಿಂದ ಇವಳು ಹರಿಣೀ.

(೨) ಲಕ್ಷ್ಮೀತಂತ್ರವು ಇದನ್ನು ಅನುಮೋದಿಸುವ ಬಗೆ ಹೀಗಿದೆ :

ದೂರಾತ್ ದೂರತರಂ ಯಾಮಿ ಹರಿಣೀ ಯೋಗಿಮಾನಸಾತ್ ।
ಭಕ್ತ್ಯಾ ಬಧ್ನಂತಿ ನಿಜಯಾ ಯೋಗಿನೋ ಮಾಂ ಯತ-
ವ್ರತಾಃ ॥

ಷಷ್ಟಿರಷ್ಟ ಸಹಸ್ರಾಣಿ ಯೋಗಿನೋ ಮತ್ಪರಾಯಣಾಃ ।
ಹರಿಣೀಂ ಮಾಮನುಧ್ಯಾಯ ಪ್ರತ್ಯಾಹಾರಂ ಪರಂಗತಾಃ ॥

"ಜಿಂಕೆಯಂತಿರುವ ನಾನು ಯೋಗಿಗಳ ಮನಸ್ಸಿನಿಂದ ಬಹುದೂರಕ್ಕೆ ಹೋಗಿರುತ್ತೇನೆ. ಆದರೂ ವ್ರತವ್ರತರಾದ ಅವರು ತಮ್ಮ ಭಕ್ತಿಯಿಂದಲೇ ನನ್ನನ್ನು ಬಂಧಿಸುತ್ತಾರೆ. ಎಂಭತ್ತಾರುಸಾವಿರ ಯೋಗಿಗಳು ನನ್ನನ್ನೇ ಉತ್ತಮ ಪ್ರಾಪ್ಯವಸ್ತುವನ್ನಾಗಿ ಧ್ಯಾನಿಸುತ್ತಾ, ನನ್ನನ್ನು ಜಿಂಕೆಯರೂಪದಲ್ಲಿ ಉಪಾಸಿಸುತ್ತಾ ಯೋಗದ ಪ್ರತ್ಯಾಹಾರಾವಸ್ಥೆಯನ್ನು ಮುಟ್ಟಿದರು."

## ೧೦ "ಹರಿಣೀಂ" —ಲಕ್ಷ್ಮೀತಂತ್ರದಲ್ಲಿ ವಿಶೇಷ ವಿವರಣೆಗಳು

(೨) ಲಕ್ಷ್ಮೀತಂತ್ರದ ಮತ್ತೂ ಹಲವು ನಿರ್ವಚನಗಳು ಹೀಗಿವೆ.

ಹರಿಣಾಜಿನ ಸಂವೀತಾಂ ಹರಿಣಾಜಿನ ಸಂಸ್ತರಾಂ ।-
ಹರಿಣಾಶ್ಲಿಷ್ಟಮಧ್ಯಾಂ ತಾಂ ಹರಿಣಾಯತ ಲೋಚನಾಂ ॥
(ಶ್ಲೋ 45)

ಹರಿಣೀಂ ಮಾಂ ಅನುಸ್ಮೃತ್ಯ ಪರಾಂ ಶಾಂತಿಮವಾ
ಪ್ನುಯಾತ್ ।
ಹರಿಂ ನಯಾಮಿ ಕಾರ್ಯೇಷು ನೀಯೇಚ ಹರಿಣಾ ಸ್ವಯಂ ॥
(46)

ಇಲ್ಲಿ ಕ್ರಮವಾಗಿ ಈ ಅರ್ಥಗಳು ಉಕ್ತವಾಗಿವೆ.

(a) ಕೃಷ್ಣಾಜಿನದಿಂದ ಸುತ್ತುವರೆಯಲ್ಪಟ್ಟವಳು. (b) ಕೃಷ್ಣಾಜಿನವನ್ನು ಆಸನವನ್ನಾಗಿ ಹೊಂದಿದವಳು. (c) ಶ್ರೀ ಹರಿಯಿಂದ ಆಲಿಂಗಿಸಲ್ಪಟ್ಟ ಮಧ್ಯಶರೀರವುಳ್ಳವಳು. (d) ಜಿಂಕೆಯಂತೆ ಸುಂದರ ಕಣ್ಣುಳ್ಳವಳು. (e) ಶ್ರೀ ಹರಿಯನ್ನು ಸೃಷ್ಟಿಸ್ಥಿತ್ಯಾದಿ ವ್ಯಾಪಾರಗಳಲ್ಲಿ ಪ್ರೇರಿಸುವಳು. (f) ಶ್ರೀ ಹರಿಯಿಂದ ತನ್ನಿಚ್ಛೆಗನುಗುಣವಾಗಿ ಒಯ್ಯಲ್ಪಡುವವಳು— ಎಂಬ ಆರು ಅರ್ಥಗಳು ಇಲ್ಲಿ ತೋರುತ್ತವೆ,

ಇಲ್ಲಿ ಕೊಂಚ ವಿವರಣೆ ಅವಶ್ಯವಾಗುವುದು. ಕೃಷ್ಣಾಜಿನದಿಂದ ಸುತ್ತುವರಿಯಲ್ಪಡುವುದು ಎಂದರೆ ಲಕ್ಷ್ಮೀದೇವಿಗೆ ಇದೂ ಒಂದು ಭೋಗವೇ ಸರಿ ಸ್ವರ್ಣರಜತಗಳು ಐಶ್ವರ್ಯದ ಕುರುಹು ಎಂದು ತಿಳಿಯುವಂತೆ, ವನ್ಯಸಂಪತ್ತಾದ ಕೃಷ್ಣಾಜಿನವೂ ಐಶ್ವರ್ಯದ ಸಂಕೇತವೇ. ಇಂದಿಗೂ ವನ್ಯಸಂಪತ್ತಿನಲ್ಲಿ ಇದನ್ನು ಪರಿಗಣಿಸುವುದುಂಟು. ಅಲ್ಲದೆ ಇದು ವೈದಿಕ ಸಂಪತ್ತೂ ಹೌದು! ದೇವರ ಪೆಟ್ಟಿಗೆಯನ್ನು ಕೃಷ್ಣಾಜಿನದಲ್ಲಿ ಸುತ್ತಿಡುವುದನ್ನು ಎಲ್ಲರೂ ಬಲ್ಲರು. ಇದು ಲಕ್ಷ್ಮೀದೇವಿಗೆ ಒಂದು ವಿಶೇಷ ಭೋಗ, ಎಂಬುದು ಮೊದಲನೆಯ ವರ್ಣನೆಯ ಅರ್ಥ.

ಇಲ್ಲೊಂದು ಅವತಾರವೃತ್ತಾಂತವೂ ನೆನೆಯಲ್ಪಡುವುದು ಯುಕ್ತವಾಗುವುದು. ಭಗವಂತನ ಅವತಾರಗಳಲ್ಲಿ ಪ್ರಕಟವಾಗಿ ಕಾಣಿಸಿಕೊಳ್ಳಲು ನಿರ್ಬಂಧವೇರ್ಪಟ್ಟ ಅವತಾರವೆಂದರೆ ವಾಮನಾವತಾರ.

ಏಕೆಂದರೆ, ಇದು ಬ್ರಹ್ಮಚರ್ಯಾಶ್ರಮದಲ್ಲಿ ವಾಮನನು ಬಲಿಚಕ್ರವರ್ತಿಯ ಯಜ್ಞವಾಟಿಕೆಗೆ ಆಗಮಿಸಿದ ಪ್ರಸಂಗ. ಆದರೆ ಲಕ್ಷ್ಮೀಪತಿತ್ವವು ಯಾವುದೇ ಪ್ರಸಂಗದಲ್ಲಿಯೂ ಭಗವಂತನನ್ನು ಬಿಟ್ಟಿರದ ಲಕ್ಷಣವಾದುದರಿಂದ, ಆಗಲೂ ಅವನು ಅವಳನ್ನು ತನ್ನೆದೆಯಲ್ಲಿ ಧರಿಸಿಯೇ ಹೊರಟನೆಂದೂ, ಆದರೆ ಅಸುರರಿಗೆ ಆ ಲಕ್ಷ್ಮೀಕಟಾಕ್ಷವು ಬೀಳದಿರಲೆಂದೂ, ತಾನು ಸ್ವಯಂ ವಿಷ್ಣುವೇ ಬಂದಿರುವವನೆಂಬುದನ್ನು ಅವರು ತಿಳಿದುಕೊಳ್ಳದಿರಲೆಂದೂ, ಎದೆಯಲ್ಲಿನ ಲಕ್ಷ್ಮೀದೇವಿಯನ್ನು ತಾನು ಹೊದ್ದಿದ್ದ ಕೃಷ್ಣಾಜಿನದಿಂದ ಮುಚ್ಚಿಕೊಂಡ ನೆಂದೂ ಪುರಾಣಗಳು ಹೇಳುತ್ತವೆ - ಕೃಷ್ಣಾಜಿನೇನ ಸಂವೃಣ್ವನ್ (ಶ್ರೀ ಭಾಗವತ.) ಶ್ರೀ ವೇದಾಂತ ದೇಶಿಕರೂ ಇದನ್ನು ದೇಹಳೀಶಸ್ತುತಿ ಯಲ್ಲಿ (ಶ್ಲೋ. 11) ವರ್ಣಿಸಿದ್ದಾರೆ :

ಭಿಕ್ಷೋಚಿತಂ ಪ್ರಕಟಯನ್ ಪ್ರಥಮಾಶ್ರಮತ್ವಂ
ಕೃಷ್ಣಾಜಿನಂ ಯವನಿಕಾಂ ಕೃತವಾನ್ ಪ್ರಿಯಾಯಾಃ ।
ಇತ್ಯಾದಿ

ಈ ಅರ್ಥದಲ್ಲಿ ಮೊದಲನೆಯ ವಿವರಣೆ ಯುಕ್ತವಾಗಿದೆ.

ಎರಡನೆಯದಾಗಿ, "ಕೃಷ್ಣಾಜಿನದ ಮೇಲೆ ಕುಳಿತಿರುವವಳು, ಅದನ್ನು ತನಗೆ ಆಸನವನ್ನಾಗಿ ಮಾಡಿಕೊಂಡವಳು" ಎಂಬುದನ್ನು ನೋಡೋಣ. ಇದು ಪವಿತ್ರವಾದ ಆಸನವಾದುದರಿಂದ, ಮತ್ತು ಸಾತ್ವಿಕರ ಆಸನವಾದುದರಿಂದ, ಇದು ಲಕ್ಷ್ಮೀದೇವಿಯು ವಾಸಸ್ಥಾನವೂ, ಆಸನವೂ ಆಗಲು ಯೋಗ್ಯವಾಗಿದೆ. ಲಕ್ಷ್ಮೀ ದೇವಿಗೆ ಪದ್ಮಾಸನೆಯೆಂದೂ, ಸ್ವರ್ಣಪೀಠಸ್ಥೆಯೆಂದೂ ಮುಂತಾಗಿ ಅನೇಕ ವರ್ಣನೆಗಳಿದ್ದರೂ, ಅವಳಿಗೆ ಈ ಎಲ್ಲ ಆಸನಗಳಿಗಿಂತಲೂ ಕೃಷ್ಣಾಜಿನದ ಮೇಲೆಯೇ ಹೆಚ್ಚು ಪ್ರೀತಿ ಎಂದು ತೋರುತ್ತದೆ. ಬಹುಶಃ ಇದನ್ನು ತೋರಿಸ ಲೆಂದೋ ಏನೋ ಶ್ರೀರಾಮಾಯಣದಲ್ಲೂ ಒಂದು ಪ್ರಸಂಗವಿದೆ ಮಾರೀಚನ ಮಾಯಾಮೃಗದ ಚರ್ಮದ ಸೊಬಗಿಗೆ ಬೆರಗಾಗಿ, ಲಕ್ಷ್ಮೀದೇವಿಯು ಅವತಾರ ವಾದ ಸೀತಾಮಾತೆಯು, ಆ ಅದ್ಭುತ ಕೃಷ್ಣಾಜಿನವನ್ನು ಬಯಸಿ, ಅದನ್ನು ತಂದುಕೊಡಬೇಕೆಂದು ಶ್ರೀರಾಮನನ್ನು ಕೇಳಿದ ಪ್ರಸಂಗ ಇದು. ಮುಂದೆ ಮಾರೀ ಚನು ವಧಿಸಲ್ಪಟ್ಟ ಮೇಲೂ ಅವನ ಅರ್ಧಶರೀರಭಾಗವು ಕೃಷ್ಣಾಜಿನ ರೂಪದಲ್ಲಿ

ಶ್ರೀರಾಮನಿಗೆ ದೊರೆಯಿತೆಂದೂ, ಮತ್ತು ಭಗವಂತನು ಇದನ್ನು ಹಾಸಿಕೊಂಡೇ ಕುಳ್ಳಿರುತ್ತಿದ್ದನೆಂದೂ ಹನುಮನ್ನಾಟಕದಲ್ಲಿ ವಿವರಿಸಿದೆ. (XI–7.) ಶ್ರೀದೇಶಿಕರೂ ರಘುವೀರ ಗದ್ಯದಲ್ಲಿ : "ಮಾರೀಚ ಮಾಯಾಮೃಗ ಚರ್ಮ ಪರಿಕರ್ಮಿತ ನಿರ್ಭರ ದರ್ಭಾಸ್ತರಣ" ಎಂಬಲ್ಲಿ ಇದನ್ನು ಸಮರ್ಥಿಸಿದ್ದಾರೆ. ಪುನಃ ರಾವಣನನ್ನು ಕೊಂದು ಸೀತೆಯನ್ನು ಪಡೆದಮೇಲೆ ಅಯೋಧ್ಯೆಗೆ ತೆರಳಿದ ದಿವ್ಯದಂಪತಿಗಳು ಈ ಅಪೂರ್ವ ಮೃಗ ಚರ್ಮವನ್ನು ಎಷ್ಟೊಂದು ಪ್ರೀತಿಯಿಂದ ಆಸನವನ್ನಾಗಿ ಪರಿಗ್ರಹಿಸಿರಬೇಡ ! ಹೀಗೆ ಕೃಷ್ಣಾಜಿನವು ಲಕ್ಷ್ಮೀದೇವಿಗೆ ವಿಶೇಷ ಪ್ರೀತಿಪಾತ್ರವಾದ ಆಸನವೆಂಬುದು ಯುಕ್ತವಾಗಿದೆ.

ಮೂರನೆಯದಾಗಿ, ಭಗವಂತನು ತನ್ನ ಎಡತೊಡೆಯಲ್ಲಿ "ವಾಮೇ ಭೂಮಿಸುತಾ" ಎಂಬಂತೆ, ಲಕ್ಷ್ಮೀದೇವಿಯನ್ನು ಕೂಡಿಸಿಕೊಂಡು ಆಕೆಯನ್ನು ದೇಹಮಧ್ಯದಲ್ಲಿ ಆಲಿಂಗಿಸಿರುತ್ತಾನೆ ಎಂಬುದು ಲಕ್ಷ್ಮೀನಾರಾಯಣರ ಧ್ಯಾನ ಶ್ಲೋಕಗಳಲ್ಲೆಲ್ಲಾ ಪ್ರಸಿದ್ಧವಾದ ವಿಷಯ. ಇದು ಶ್ರೀಮನ್ನಾರಾಯಣನೊಬ್ಬನಿಗೇ ಅಸಾಧಾರಣವಾದಭೋಗವೆಂಬುದನ್ನೂ, ಮತ್ತು ಲಕ್ಷ್ಮೀದೇವಿಗೂ ಇದರಲ್ಲಿ ತುಂಬಾ ಸೌಖ್ಯವುಂಟೆಂಬುದನ್ನೂ ಈ ವರ್ಣನೆ ಸೂಚಿಸುತ್ತದೆ.

ನಾಲ್ಕನೆಯದಾಗಿ ಜಿಂಕೆಯಂತೆ ಸುಂದರವಾದ ಕಣ್ಣುಳ್ಳವಳು ಎಂಬ ವಿಶೇಷಣದಿಂದ ಲಕ್ಷ್ಮಿಯನ್ನು ವರ್ಣಿಸುವುದಂತೂ ಸಮಂಜಸವಾಗಿಯೇ ಇದೆ. ಚೆಲುವಿನ ಪರಮಾವಧಿ ಸೀಮೆಯೆಂದು ಖ್ಯಾತಳಾದ ಈ ದೇವಿಯ ವರ್ಣನೆಗಳಲ್ಲಿ ಇದು ಪದೇಪದೇ ಬರುವುದನ್ನು ಎಲ್ಲೆಲ್ಲೂ ಕಾಣುತ್ತೇವೆ.

ಇನ್ನು ಐದನೆಯ ವಿಶೇಷಣಕ್ಕೆ ತುಂಬ ಮಾರ್ಮಿಕವಾದ ವೇದಾಂತ ಪರವಾದ ಅರ್ಥವಿದೆ. ಭಗವಂತನು ಸೃಷ್ಟಿಸ್ಥಿತ್ಯಾದಿ ವ್ಯಾಪಾರಗಳಲ್ಲಿ ತೊಡಗುವುದೇ ಲಕ್ಷ್ಮೀದೇವಿಯ ಪ್ರೇರಣೆಯಂತೆ ಎಂದು ಈ ವಿಶೇಷಣದ ಅರ್ಥ. ಚರಾಚರ ಜಗತ್ತನ್ನೆಲ್ಲ ತನ್ನ ಸ್ವಾಧೀನದಲ್ಲಿಟ್ಟುಕೊಂಡ ಭಗವಂತನು, ಲಕ್ಷ್ಮೀದೇವಿಯ ವಿಷಯದಲ್ಲಿ ಮಾತ್ರ ಪರಾಧೀನನೋ ಹೇಗೆ ? ಎಂದು ಕೇಳುವುದಾದರೆ. ಎಂಥ ಸ್ವಾಧೀನನಾದ ಪತಿಯೂ ಸ್ವೇಚ್ಛೆಯಿಂದಲೇ ತನ್ನ ಭೋಗದ ಸಲುವಾಗಿ, ತನ್ನ ಪತ್ನಿಯ ಇಂಗಿತವನ್ನರಿತು ನಡೆದರೆ, ಇದ

ರಲ್ಲಿ ಅವನ ಸ್ವಾತಂತ್ರ್ಯಕ್ಕೆ ಯಾವ ಭಂಗವೂ ಇಲ್ಲವಷ್ಟೆ! ಪ್ರಳಯಕಾಲ ದಲ್ಲಿ ಏಕಾರ್ಣವವಾಗಿದ್ದ ಚೇತನಾಚೇತನರಾಶಿಯನ್ನು ಕಂಡು ಕನಿಕರದಿಂದಲೇ ಅಲವೇ ಭಗವಂತನು ಸೃಷ್ಟಿವ್ಯಾಪಾರ ಆರಂಭಿಸಿದ್ದು? ಇಲ್ಲಿ ಅವನ 'ಈಕ್ಷಣ'ದಲ್ಲೇ ಲಕ್ಷ್ಮಿಯು ಕರುಣಾರೂಪಿಣಿಯಾಗಿ ಸೇರಿಕೊಂಡು ಅವನನ್ನು ಸೃಷ್ಟಿಗೆ ಪ್ರೇರಿಸಿದಳೆಂಬುದನ್ನು ಹಿಂದೆಯೇ ತೋರಿಸಿಯಾಗಿದೆ. ಇದನ್ನು ತೋರಿಸಿಯೇ ಪೂರ್ವಾಚಾರ್ಯರೂ ಲಕ್ಷ್ಮೀಸ್ತೋತ್ರಗಳನ್ನು ಬರೆದಿದ್ದಾರೆ.

ಕೊನೆಯದಾಗಿ ಆರನೆಯ ವಿಶೇಷಣವನ್ನು ನೋಡೋಣ. "ಶ್ರೀಹರಿಯಿಂದ ಒಯ್ಯಲ್ಪಡುವವಳು" ಎಂದರೆ ತನ್ನ ಸಮಸ್ತ ವ್ಯಾಪಾರಗಳಲ್ಲೂ, ಎಲ್ಲ ಅವತಾರಗಳಲ್ಲೂ ತನ್ನೊಡನೆಯೇ ಕರೆದೊಯ್ಯಲ್ಪಡುವವಳು ಲಕ್ಷ್ಮೀದೇವಿಯೆಂಬುದು ಇದರ ಅರ್ಥ. ಅವಳು "ವಿಷ್ಣೋಃ ಶ್ರೀರನಪಾಯಿನೀ" ಎಂದು ವರ್ಣಿಸಲ್ಪಟ್ಟಿರುವುದರ ಭಾವ (ವಿಷ್ಣುಪುರಾಣದಲ್ಲಿ) ಇದೇ. ಪೌರಾಣಿಕ ಪ್ರಸಂಗಗಳೂ ಇದನ್ನೇ ತೋರಿಸಿ ವಿವರಿಸುತ್ತವೆ. "ಅನನ್ಯಾಹಿ ಮಯಾ ಸೀತಾ ಭಾಸ್ಕರೇಣ ಪ್ರಭಾ ಯಥಾ" "ಅನನ್ಯಾ ರಾಘವೇಣಾಹಂ ಭಾಸ್ಕರೇಣ ಪ್ರಭಾ ಯಥಾ" ಎಂಬ (ರಾಮಾಯಣದ) ರಾಮ, ಸೀತೆಯರ ಸೂಕ್ತಿಗಳೇ ಇಲ್ಲಿ ಪ್ರಮಾಣವಾಗಲು ಸಾಕು.

"ಪಾಪನಿವಾರಕಳು" ಎಂಬರ್ಥದ "ಹರಿಣೀ ದುರಿತಂ ಸತಾಂ" ಎಂಬ ಏಳನೆಯ ಅರ್ಥವನ್ನು ಲಕ್ಷ್ಮೀತಂತ್ರವು ಇಲ್ಲಿ ಹೇಳಿದೆ. ಇದನ್ನು ವಿವರಿಸುವಂತೆಯೇ "ಸಂಸಾರಾರ್ಣವ ತಾರಿಣೀಂ", "ಭವಭಂಗಾಪಹಾರಿಣೀ" ಮೊದಲಾದ ವರ್ಣನೆಗಳೂ ಮುಂದೆ ಬಂದಿವೆ. ಆದುದರಿಂದ ಹಾರಿಣೀ ಎವ ಹರಿಣೀ ಎಂಬ ನಿರ್ವಚನವೂ ಯುಕ್ತವಾಗಿದೆ. ಲಕ್ಷ್ಮೀದೇವಿಯು ಚೇತನರ ವಿರೋಧಿಗಳಾದ ಪಾಪಗಳನ್ನು ನಿವಾರಿಸುವ ಬಗೆ ಹೇಗೆ? ಎಂದರೆ, ಭಗವಂತನನ್ನು ಪ್ರಸನ್ನನನ್ನಾಗಿ ಮಾಡಿ, ಅವನು ನಮ್ಮ ತಪ್ಪುಗಳನ್ನು ಮನ್ನಿಸುವಂತೆ ಮಾಡುವಳು. ಭಗವತ್ಪ್ರೀತಿಯುಂಟಾದಲ್ಲಿ ಪಾಪಗಳು ತಾವೇ ತೊಲಗುವುವು ಎಂಬುದನ್ನು ಸ್ಮೃತಿಗಳು ಹೇಳುತ್ತವೆ. ಕ್ಷಮಾಮೂರ್ತಿಯಾದ ಈ ದೇವಿಯು ನಿಗ್ರಹಮಾಡುವುದನ್ನೇ ಅರಿಯಳು ಎಂಬುದನ್ನು "ಅನುಗ್ರಹಮಯೀಂ ವಂದೇ ನಿತ್ಯಮಜ್ಞಾತನಿಗ್ರಹಾಂ" ಎಂಬ ನಿತ್ಯಾನು

ಸಂಧೇಯಃಶ್ಲೋಕದ ವಿಶೇಷಣವೂ, ಇದನ್ನು ಘೋಷಿಸುವ ಶ್ರೀರಾಮಾಯಣದ ಅನೇಕ ಪ್ರಸಂಗಗಳೂ ಸ್ಪಷ್ಟಪಡಿಸುತ್ತವೆ. ಹರಿಣೀ ಎಂಬ ಶ್ರೀನಾಮಕ್ಕೆ ಇಷ್ಟು ವಿವರಣೆ ಸಾಕಾದೀತು. ಆದರೆ ಗಂಭೀರಾರ್ಥಗಳನ್ನುಳ್ಳ ಈ ಒಂದೊಂದು ಶ್ರೀನಾಮವೂ, ವಿಶೇಷಣವೂ ನಿರಂತರ ಧ್ಯಾನಕ್ಕೆ ಯೋಗ್ಯವೂ, ಭೋಗ್ಯವೂ ಆದುವು ಎಂಬುದನ್ನು ಉಪಾಸಕರು ನಮ್ಮ ಈ ವಿವರಣೆಯ ದಾರಿಯಲ್ಲಿ ಸ್ವಯಂ ಕಂಡುಕೊಳ್ಳಬೇಕು.

## ೧೧ "ಸುವರ್ಣರಜತಸ್ರಜಾಂ"

ಈ ವಿಶೇಷಣಕ್ಕೆ ವಿದ್ಯಾರಣ್ಯರು "ಚಿನ್ನದ ಮತ್ತು ಬೆಳ್ಳಿಯ ಹೂಗಳಿಂದ ಕೂಡಿದ ಹಾರವನ್ನು ಧರಿಸಿರುವವಳು; ಅಥವಾ ಚಿನ್ನದ ಮತ್ತು ಬೆಳ್ಳಿಯ ಬಣ್ಣದ ಹೂಗಳ ಹಾರದಿಂದ ಶೋಭಿಸುವವಳು" ಎಂದು ಅರ್ಥ ಬರೆದಿದ್ದಾರೆ. ಇತರರೂ ಈ ಅರ್ಥವನ್ನೇ ಅನುಮೋದಿಸಿದ್ದಾರೆ.

ಇಲ್ಲಿ ನಿಜವಾದ ಹೂಗಳನ್ನು ಬಿಟ್ಟು ಚಿನ್ನದ ಮತ್ತು ಬೆಳ್ಳಿಯ ಹೂವುಗಳನ್ನೇಕೆ ಧರಿಸಿರುವಳು ? ಎಂದರೆ, ಇವು ಬಾಡದಿರುವುದರಿಂದಲೂ ನಿತ್ಯತ್ವವನ್ನು ಸೂಚಿಸುವುದರಿಂದಲೂ ಶ್ರೇಷ್ಠ ಎಂಬ ಅರ್ಥವನ್ನು ಲಕ್ಷ್ಮೀಕೋಶವೆಂಬ ಗ್ರಂಥದಲ್ಲಿ ಸೂಚಿಸಲಾಗಿದೆ :

ಪಿಶಂಗ ಧವಳಾಭಿಶ್ಚ ಸ್ರಗ್ಭಿರಮ್ಲಾನ ಮೂರ್ತಿಭಿಃ ।
ಸೌವರ್ಣೈಃ ಕಮಲೈರ್ನಿತ್ಯಂ ರಾಜತೈಃ ಶ್ರೀರ್ವಿಭೂಷಿತಾ ॥

ಇದೇ ಅರ್ಥವನ್ನು ಶ್ರೀರಂಗನಾಥ ಮುನಿಗಳೂ ತಮ್ಮ ಭಾಷ್ಯದಲ್ಲಿ ಅನುಮೋದಿಸಿದ್ದಾರೆ. "ತನ್ನ ಸೌಂದರ್ಯಕ್ಕೂ. ಲಾವಣ್ಯಕ್ಕೂ ಅನುಗುಣವಾದ, ನಿತ್ಯವೂ. ನಿರ್ಮಲವೂ ಆಗಿ ಶೋಭಿಸುವ ಹಾರ, ವಸ್ತ್ರ, ಆಭರಣಗಳಿಂದ

ಅಲಂಕೃತಳಾಗಿರುವವಳು" —"ಸ್ವಸೌಂದರ್ಯಲಾವಣ್ಯಾನುಗುಣ ನಿತ್ಯ ನಿರ್ಮಲವಿರಾಜಮಾನ ಸ್ರಗ್ವಸ್ತ್ರಾಭರಣ ಉದ್ಭಾಸಿತಾಂ."

ಲಕ್ಷ್ಮೀತಂತ್ರದಲ್ಲಿ ಇದಕ್ಕೊಂದೆರಡು ಆಖ್ಯಾನಗಳನ್ನು ಸೂಚಿಸಿ ಹೀಗೆ ವಿವರಿಸಿದೆ: ಹಿಂದೆ ಕುಬೇರನು ಮೇರುಪರ್ವತದಲ್ಲಿ ಈಕೆಯನ್ನು ಚಿನ್ನದ ಹಾರ ಧರಿಸಿದವಳನ್ನಾಗಿ ಉಪಾಸಿಸಿ, ಮುಂದೆ ಧನೇಶಪದವಿ ಪಡೆದನಂತೆ. ಇದರಂತೆಯೇ ಪರಶಿವನು, ಏಕಾದಶರುದ್ರರಲ್ಲಿ ಒಬ್ಬನು, ಈಕೆಯನ್ನು ಬೆಳ್ಳಿಹೂಗಳ ಮಾಲೆಯನ್ನು ಧರಿಸಿದವಳನ್ನಾಗಿ ಕೈಲಾಸದಲ್ಲಿ ಉಪಾಸಿಸಿ ರಜತಗಿರಿ ಎಂಬ (ಹಿಮಾಲಯದ ಕೈಲಾಸಭಾಗ) ಬೆಟ್ಟಕ್ಕೆ ಒಡೆಯನಾದನು.

ಸುವರ್ಣಸ್ರಜಮಿತ್ಯೇವಂ ಗುಹ್ಯಕಾನಾಂ ಅಧೀಶ್ವರಃ ।
ಮೇರೌ ಚಿರಮುಪಾಸ್ಥಾಯ ಧನೇಶತ್ವಂ ಅವಾಪ್ತವಾನ್ ॥
ರಜತಸ್ರಜಮಿತ್ಯೇವ ರುದ್ರಾಣಾಂ ಪ್ರವರಃ ಪುರಾ ।
ಕೈಲಾಸೇ ಸಮುಪಾಸ್ಥಾಯ ರಜತಾಧಿಪತಾಂ ಯಯೌ ॥
(50-50, 52)

ಹೀಗೆ ಸುವರ್ಣರಜತಸ್ರಜಾಂ ಎಂಬುದನ್ನು ಸುವರ್ಣಸ್ರಜಾಂ, ಮತ್ತು ರಜತಸ್ರಜಾಂ ಎಂಬ ಎರಡು ವಿಶೇಷಣಗಳನ್ನಾಗಿ ವಿಭಜಿಸಿ, ಲಕ್ಷ್ಮೀತಂತ್ರವು ಅರ್ಥೈಸಿದೆ. ಶ್ರೀವಿಷ್ಣುಪುರಾಣದಲ್ಲಿ (1-9) ದಿವ್ಯಮಾಲ್ಯಾಂಬರಧರಾಂ ಎಂದು ವರ್ಣಿಸಿರುವುದರ ವಿವರಣೆಯೂ ಇದೇ ಭಾವವನ್ನು ಹೊಂದಿದೆ.

ಅಲ್ಲದೆ, ಸುವರ್ಣರಜತಸ್ರಜಾಂ ಎಂಬುದಕ್ಕೆ ಬೇರೊಂದು ವಿಧವಾಗಿಯೂ ಹಲವರು ಅರ್ಥಮಾಡಿದ್ದಾರೆ. ಸುವರ್ಣ ಎಂದರೆ "ಚೆನ್ನಾಗಿರುವ ಬಣ್ಣ" ಎಂಬಂತೆ, ಒಳ್ಳೆಯ, ಸುಂದರವಾದ ವರ್ಣಗಳನ್ನು ಸೃಷ್ಟಿಸುವವಳಾದುದರಿಂದ ಲಕ್ಷ್ಮಿಯು ಹೀಗೆ ಕೊಂಡಾಡಲ್ಪಡುವಳು— "ಸೃಜಾಮಿ ಶೋಭನಾನ್ ವರ್ಣಾನ್." (ಲಕ್ಷ್ಮೀತಂತ್ರ, 50-49) ಇಲ್ಲಿ ಹಿಂದೆ ವಿವರಿಸಿದಂತೆ ಸಕಲ ಶಬ್ದರಾಶಿಗೂ ಇವಳೇ ಮೂಲವೆಂಬರ್ಥ ಮತ್ತೆ ಇಲ್ಲಿ

ಬಂದಂತಾಗುತ್ತದೆ. "ಸುಷ್ಠು ವಿಶ್ವಂ ವೃಣಾವಿಂವಾ", "ಚೆನ್ನಾಗಿ ವಿಶ್ವವನ್ನು ಸುತ್ತುವರೆದವಳು" ಎಂಬರ್ಥದಲ್ಲೂ "ಸು-ವರ್ಣ" ಶಬ್ದವನ್ನು ವಿವರಿಸುವುದಾದರೆ, (ಲಕ್ಷ್ಮೀತಂತ್ರ, ಅದೇಶ್ಲೋಕ,) ಇವಳ ವ್ಯಾಪಕತ್ವಕ್ಕೆ ಇದು ವಿಶೇಷಣವಾಗುತ್ತದೆ. ಅಥವಾ ವಿಶ್ವಶಬ್ದವಾಚ್ಯನಾದ ಭಗವಂತನನ್ನು (ವಿಶ್ವಂ = ವಿಷ್ಣುಃ) "ಪತಿತ್ವೇನ ವೃಣೀ" ಎಂಬಂತೆ, ಪತಿ ಭಾವದಲ್ಲಿ ಆರಿಸಿಕೊಂಡವಳೆಂದೂ, ವಿಶ್ವವನ್ನು ವಾಸಸ್ಥಾನಭಾವದಿಂದ ಆರಿಸಿಕೊಂಡವಳೆಂದೂ ವಿವರಿಸುವುದೂ ಯುಕ್ತವಾಗದೆ.

ಅಲ್ಲದೆ, "ಸೃತಾಶ್ಚಾಪಿ ಮಯಾಜಸ್ರಂ ಬದ್ಧಮುಕ್ತಾದಯೋಽಜಾಃ" ಎಂದು ಅಲ್ಲೆ (ಶ್ಲೋ. 49) ಹೇಳಲ್ಪಟ್ಟಿರುವಂತೆ, ಸೃ-ಗತೌ, ಎಂಬ ಧಾತುವಿನಂತೆ, ಹುಟ್ಟುಸಾವಿಲ್ಲದ ಜೀವಾತ್ಮರು (ಅಜಾಃ), ನಿತ್ಯ ಮುಕ್ತ ಬದ್ಧರೆಂಬುವರು, ಯಾವಳಿಂದ ವ್ಯಾಪಿಸಲ್ಪಟ್ಟು ಶೋಭಿಸುವರೋ ಅವಳು ಸ್ರಜ ಎನಿಸುವಳು. ಸರ್ವವ್ಯಾಪಕಳು, ಇದು ಗುಣ ವ್ಯಾಪ್ತಿಯೂ ಹೌದು, ದಿವ್ಯಮಂಗಳ ವಿಗ್ರಹವ್ಯಾಪ್ತಿಯೂ ಹೌದು. ಪರಮಾತ್ಮನ ಸ್ವರೂಪ ವ್ಯಾಪ್ತಿಯಲ್ಲಿ ಇವಳ ಸ್ವರೂಪವೂ ವ್ಯಾಪಿಸಿರುವುದರಿಂದ ಇಲ್ಲಿ ಚೋದ್ಯಗಳಿಗೆ ಅವಕಾಶವಿಲ್ಲ.

ಇನ್ನು ರಜತಸ್ರಜಾ ಎಂದುದರ ಆಶಯವನ್ನು ನೋಡೋಣ. "ರಾಜತಾ ಏವ ರಜತಾ" ಎಂಬಂತೆ, ರಜತ ಶಬ್ದವು ರಜೋಗುಣ ಪ್ರಚುರರಾದ ಜೀವರಾಶಿಯನ್ನು ಕುರಿತು ಹೇಳುವುದಾದರೆ, ರಜತಾಃ ಸ್ರಜಃ ಯಯಾ ಸಾ —ಎಂಬಂತೆ, ರಜೋಗುಣವುಳ್ಳ ಬ್ರಹ್ಮಾದಿದೇವತೆಗಳನ್ನು ಜಗತ್ತಿನ ವ್ಯಾಪಾರದಲ್ಲಿ ತೊಡಗಿಸುವವಳು ಎಂದು ಅರ್ಥವಾಗುತ್ತದೆ. "ರಾಜತಾಶ್ಚ ಸ್ರಜಃ ಸರ್ವೇ ಸ್ರಷ್ಟಾರೋ ಜಗತಾಂ ಮಯಾ" (ಲ. ತಂ. 50-51.)

## ೧೨ "ಚಂದ್ರಾಂ"

ಈ ವಿಶೇಷಣಕ್ಕೆ ಶ್ರೀ ವಿದ್ಯಾರಣ್ಯರು: "ಚಂದ್ರವತ್ ಪ್ರಕಾಶ

ಮಾನಾಂ, ತದ್ರೂಪೇಣಾವಸ್ಥಿತಾಂ ವಾ" ಎಂದು ಅರ್ಥಮಾಡಿದ್ದಾರೆ. "ಚಂದ್ರನಂತೆ ಕಂಗೊಳಿಸುವವಳು, ಅಥವಾ ಚಂದ್ರರೂಪದಲ್ಲಿರುವವಳು" ಎಂದರ್ಥ.

ನಿರುಕ್ತದಲ್ಲಿ (XI-5) ಚಂದ್ರ ಶಬ್ದಕ್ಕೆ "ಚಂದತೇಃ ಕಾಂತಿ ಕರ್ಮಣಃ" ಎಂದೂ, ಚಾರುದ್ರಮತೀ "ಚಿರಂದ್ರಮತೀ, ಚಮೇರ್ವಾ ಪೂರ್ವಂ" ಎಂದೂ ಯಾಸ್ಕರ ವಿವರಣೆಯುಂಟು. 'ಪ್ರಕಾಶಿಸು' ಎಂಬರ್ಥವುಳ್ಳ ಚಂದ್ ಧಾತುವಿನಿಂದ 'ಹೊಳೆಯುವುದು' ಚಂದ್ರನೆನಿಸುತ್ತದೆ. (ಚಾರು ರುಚೇಃ ವಿಪರೀತಸ್ಯ) ಎಂಬಂತೆ ರುಚಾ ಶಬ್ದದ ರಕಾರ ಚಕಾರಗಳ ಸ್ಥಳ ಪಲ್ಲಟದಿಂದ ಚಾರು ಶಬ್ದವುಂಟಾಗಿ, "ಅತಿಶಯವಾದ ಕಾಂತಿಯಿಂದ ಬೆಳಗು ವುದು" ಎಂಬರ್ಥದಲ್ಲಿಯೂ ಚಂದ್ರಶಬ್ದವು ಆಗಿದೆ. "ಚೆನ್ನಾಗಿ ಸಂಚ ರಿಸುತ್ತಾನೆ" (ಚಾರುದ್ರಮತಿ) ಎಂತಲೂ ಇವನು ಚಂದ್ರ. (ಚಿರಂದ್ರಮತಿ) —ನಿಧಾನವಾಗಿ ಗಮಿಸುತ್ತಾನಾಗಿಯೂ ಚಂದ್ರ. ಚಾಯನ್ ದ್ರಮತಿ —(ಚಾಯ್ಯ —ಪೂಜಾ ನಿಶಾಮನಯೋಃ ಎಂಬಂತೆ) ಅಂತರಿಕ್ಷದಲ್ಲಿದ್ದು ಸಕಲ ಭೂತ ಜಾತವನ್ನೂ ನೋಡುತ್ತಾ ಸಂಚರಿಸುವವನಾದುದರಿಂದಲೂ, ಚಂದ್ರನೆನಿಸುತ್ತಾನೆ. ಈ ಗುಣಗಳೆಲ್ಲ ಲಕ್ಷ್ಮಿಗೂ ಉಂಟಾದ್ದರಿಂದ ಚಂದ್ರಾ ಎನಿಸಿದ್ದಾಳೆಂದು ವಿದ್ಯಾರಣ್ಯ ಭಾಷ್ಯದ ಅಂತರಂಗ. ನಡಿಗೆಯಲ್ಲಿ ಸೊಬಗು, ಚೇತನರೆಲ್ಲರನ್ನೂ ಅನುಗ್ರಹ ದೃಷ್ಟಿಯಿಂದ ನೋಡುವುದು, ಕಾಂತಿಯುಕ್ತ ಳಾಗಿರುವುದು, ಎಂಬರ್ಥಗಳೆಲ್ಲ ಲಕ್ಷ್ಮೀದೇವಿಗೂ ಸಂಗತವೇ ಆಗಿವೆ.

"ಚದೀ ಆಹ್ಲಾದನೇ, ದೀಪ್ತೌಚ" ಎಂಬಂತೆ, "ಸಕಲ ಜನ ಆಹ್ಲಾದ ಕಾರಿಣೀಂ", ಎಲ್ಲರನ್ನೂ ಸಂತೋಷಪಡಿಸುವವಳು ಎಂದು ಪೃಥ್ವೀಧರಾ ಚಾರ್ಯರ ವಿವರಣೆ.

"ಚಂದ್ರಾಂ, ಚಂದ್ರನಿಭಾಸ್ಯಾಂ, ಚಪಲಾಂ,ಚಂದ್ರಸ್ಯ ಸೋದರೀಂ" ಎಂಬ ನಿರ್ವಚನದಂತೆ, ಚಂದ್ರಬಿಂಬದಂತೆ ಸುಂದರವಾದ ಮುಖವುಳ್ಳವಳೂ, ಚಪಲೆಯೂ, ಚಂದ್ರಸೋದರಿಯೂ ಎಂಬರ್ಥವನ್ನು ಶತಾನಂದ ವೃತ್ತಿ ಯಲ್ಲಿ ಮಾಡಿದೆ. ಸಮುದ್ರಮಥನಕಾಲದಲ್ಲಿ ಚಂದ್ರನೂ, ಲಕ್ಷ್ಮಿಯೂ ಏಕತ್ರ ಉದ್ಭೂತರಾದುದರಿಂದ ಈ ವಿವರಣೆ ಗ್ರಾಹ್ಯವಾಗಿದೆ.

ಲಕ್ಷ್ಮೀತಂತ್ರದಲ್ಲಿ ಮತ್ತೆ ಹಲವು ವಿಶೇಷ ವಿವರಗಳನ್ನು ನೋಡಬಹುದು. (೧) ಚಂದ್ರಾ ಎಂಬುದನ್ನು ಚಂ–ದ್ರಾ ಎಂದು ಎರಡಾಗಿ ಬಿಡಿಸಿಕೊಂಡರೆ, ಒಂದು ವಿಶೇಷಾರ್ಥವು ಭಾಸವಾಗುವುದು.

ಚಂಕ್ರಮ್ಯಮಾಣಾ ಭಕ್ತಾನಾಂ ದ್ರಾವಯಾಮಿ ಚ
ದುಷ್ಕೃತಂ ।

"ಸತತವೂ ಸಂಚಾರಶೀಲಳಾಗಿ ಭಕ್ತರಹಿಂದೆಯೇ ಹೋಗುತ್ತಾ ಅವರ ಪಾಪವನ್ನು ಕರಗಿ ಹೋಗುವಂತೆ ಮಾಡಿ, ನಿವಾರಿಸುವವಳು" ಎಂದರ್ಥ.

(೨) ಚಂದ್ರನಂತೆ ಸದಾ ಭಕ್ತರ ಹೃದಯವನ್ನು, ಸಂತೋಷದಿಂದ ಕರಗುವಂತೆ ಮಾಡುವವಳು— ಚಂದ್ರವತ್ ಸತತಂ ಚಿತ್ತಂ ಭಕ್ತಾನಾಂ ದ್ರಾವಯಾಮಿ ಚ. (ಅದೇ. ಶ್ಲೋ. 54.)

(೩) "ಆನಂದದ ಪ್ರವಾಹವೇ ರೂಪಗೊಂಡಂತೆ, ಮೂರ್ತೀಭವಿಸಿದ ನಾನು ಯೋಗಿಗಳ ಹೃದಯದಲ್ಲಿ ಚಂದ್ರನಂತೆಯೇ, ಅವರ ಯೋಗಾವಸ್ಥೆಯಲ್ಲಿ ನಾಲ್ಕನೆಯ ಮೆಟ್ಟಲಾದ ಧ್ಯಾನಾರಂಭದಲ್ಲಿ ಉದಿಸಿ ಬರುತ್ತೇನೆ. ಆಗ ಚಂದ್ರನಂತೆಯೇ ಬೆಳಗುತ್ತೇನೆ."

ಉದೇಮಿ ಯೋಗಿನಾಮಂತರಾನಂದ ಸ್ಪಂದ ಲಕ್ಷಣಾ ।
ಚತುರ್ಥೀ ತು ದಶಾಂ ತೇಷಾಂ ಚಂದ್ರವತ್ ಭಾಸಯಾಮಿ ಚ ॥
(ಶ್ಲೋ. ೫೫)

ಹೀಗೆ ಯಾರಾದರೂ ಲಕ್ಷ್ಮೀದೇವಿಯನ್ನು ಯೋಗ ಪ್ರತ್ಯಕ್ಷಮಾಡಿಕೊಂಡವರುಂಟೋ ? ಎಂಬ ಪ್ರಶ್ನೆಗೆ ಈ ಪ್ರಕರಣದಲ್ಲಿ ಒಂದು ನಿದರ್ಶನವನ್ನು ಕೊಡಲಾಗಿದೆ. ಪರಮವೈಷ್ಣವರಾದ ವಸಿಷ್ಠಮಹರ್ಷಿಗಳು ಯೋಗದಲ್ಲಿ ತೊಡಗಿದ್ದಾಗ, ಒಮ್ಮೆ ವಿಘ್ನವಾಯಿತಂತೆ. ಆಗ ಅವರು ಸುಷುಮ್ನಾನಾಡಿಯಲ್ಲಿರುವಂತೆ, ಚಂದ್ರಮಯೀ ಆದ, ಶುದ್ಧೆಯಾದ, ಚಿದಾನಂದ ಮಹೋದಧಿಯಾದ ಲಕ್ಷ್ಮೀದೇವಿಯನ್ನು ತಮ್ಮಲ್ಲಿ ಧ್ಯಾನಿಸಿ

ಮತ್ತೆ ಯೋಗವನ್ನು ನಿರ್ವಿಘ್ನವಾಗಿ ಮುಗಿಸಿದರಂತೆ. ಇದನ್ನೂ ಲಕ್ಷ್ಮೀ ತಂತ್ರ ಉದಾಹರಿಸಿದೆ. (ಶ್ಲೋ. ೫೬, ೫೭.)

ಯೋಗಾಂತರಾಯ ನಿಹತಃ ವಸಿಷ್ಠಃ ಪರಮೋ ಮುನಿಃ ।
ಅಂತಃ ಚಂದ್ರಮಯೀಂ ಶುದ್ಧಾಂ ಚಿದಾನಂದಮಹೋದಧಿಂ ॥
ನಾಡೀಸ್ಥಾಂ ಮಾಮನುಸ್ಮೃತ್ಯ ಪುನಃ ಸ್ವಂ ಯೋಗಂ
ಆಪ್ತವಾನ್ ॥

ಹೀಗೆ ಲಕ್ಷ್ಮೀಕಟಾಕ್ಷವು ಐಹಿಕ ಐಶ್ವರ್ಯವನ್ನು ಮಾತ್ರವಲ್ಲದೆ, ಯೋಗಗತಿ ಯಿಂದ ಕೈವಲ್ಯವನ್ನೂ ಮೋಕ್ಷವನ್ನೂ ಹೊಂದಬಯಸುವವರಿಗೂ ಸಾಧ ಕವೂ ಉಪಾಯವೂ ಆಗಿದೆಯೆಂಬುದನ್ನು ಇಲ್ಲಿ ಹೇಳಿದಂತಾಯಿತು. ಇದನ್ನೇ ಪೂರ್ವಾಚಾರ್ಯರೂ ಸ್ತುತಿಸಿದ್ದಾರೆ :

ಶ್ರೇಯೋ ನಹ್ಯರವಿಂದಲೋಚನ ಮನಃಕಾಂತಾ
ಪ್ರಸಾದಾದೃತೇ ।
ಸಂಸೃತ್ಯಕ್ಷರ ವೈಷ್ಣವಾಧ್ವಸು ನೃಣಾಂ
ಸಂಭಾವ್ಯತೇ ಕರ್ಹಿಚಿತ್ ॥
(ಶ್ರೀ ಯಾಮುನರ ಚತುಃಶ್ಲೋಕೀ, ೩)

ಐಶ್ವರ್ಯಮಕ್ಷರಗತಿಂ ಪರಮಂಪದಂವಾ
ಕಸ್ಮೈಚಿದಂಜಲಿ ಭರೇ ವಹತೇ ವಿತೀರ್ಯ ।
ಅಸ್ಮೈ ನ ಕಿಂಚಿತ್ ಉಚಿತಂ ಕೃತಮಿತ್ಯಥಾಂಬ
ತ್ವಂ ಲಜ್ಜಸೇ, ಕಥಯ, ಕೋಽಯ ಮುದಾರಭಾವಃ ॥
(ಶ್ರೀ ಪರಾಶರಭಟ್ಟರ ಶ್ರೀ ಗುಣರತ್ನಕೋಶ, ೫೮.)

(ಮೊದಲನೆಯದರ ಅರ್ಥ : "ಅರವಿಂದಲೋಚನನಾದ ಶ್ರೀಹರಿಯ ಮನಃಕಾಂತೆಯಾದ ಲಕ್ಷ್ಮೀದೇವಿಯ ಪ್ರಸಾದಾನುಗ್ರಹಗಳಿಲ್ಲದೆ ಸಂಸಾರ ದಲ್ಲಿ ಸುಖವಾಗಲೀ, ಪರದಲ್ಲಿ ಕೈವಲ್ಯಸುಖಾನುಭವವಾಗಲೀ, ಕೊನೆಗೆ

ವಿಷ್ಣುಪದಕ್ಕೆ ದಾರಿಯಾದ ಅರ್ಚಿರಾದಿಗಮನವಾಗಲೀ ಎಂದಿಗೂ ಆಗಲಾರದು."

ಎರಡನೆಯದರ ಅರ್ಥ: "ಎಲೈ ತಾಯಿಯೇ! ಕೈಮುಗಿದು ಬೇಡುವ ಯಾವನೊಬ್ಬ ಅರ್ಥಿಗೆ ಐಶ್ವರ್ಯವನ್ನೋ, ಕೈವಲ್ಯವನ್ನೋ, ಮೋಕ್ಷವೆಂಬ ಪರಮಪದಪ್ರಾಪ್ತಿಯನ್ನೋ, ಕೊಟ್ಟು ಉಪಕರಿಸಿದರೂ, 'ಅಯ್ಯೋ, ಈ ಭಕ್ತನಿಗೆ ಸರಿಯಾಗಿ, ಉಚಿತವಾಗಿ ಏನನ್ನು ಮಾಡಿದಂತಾಗಲಿಲ್ಲವಲ್ಲ!' ಎಂದು ನೀನಿನ್ನು ಲಜ್ಜಿಸುತ್ತಿರುವಂತಿದೆ. ಹೇಳು, ಅಮ್ಮಾ, ನಿನ್ನದೆಷ್ಟು ಉದಾರ ಭಾವ ಇದು!!")

ಇಷ್ಟು ಅದ್ಭುತಾರ್ಥವುಳ್ಳ ಶ್ರೀನಾಮ ಚಂದ್ರಾ ಎಂಬುದು.

## ೧೪ "ಹಿರಣ್ಮಯೀಂ"

ಶ್ರೀ ವಿದ್ಯಾರಣ್ಯರು ಇಲ್ಲಿ: "ಹಿರಣ್ಯ ಸ್ವರೂಪಾಂ, ಹಿರಣ್ಯ ವಿಗ್ರಹಾಂ ವಾ" ಎಂದರೆ, "ಚಿನ್ನದ ಸ್ವರೂಪವುಳ್ಳವಳು, ಸ್ವರ್ಣಮಯ ವಿಗ್ರಹಳು" ಎಂದು ಅರ್ಥಮಾಡಿದ್ದಾರೆ. ಶ್ರೀ ಪೃಥ್ವೀಧರಾಚಾರ್ಯರೂ ಹೀಗೆ ಬರೆದಿದ್ದಾರೆ. ಶತಾನಂದ ವೃತ್ತಿಯಲ್ಲಿ ಕೊಂಚ ಹೆಚ್ಚು ವಿಶೇಷಾರ್ಥವನ್ನು ಹೇಳಿದೆ:

ಹಿಂಕಾರೋ ವಜ್ರಃ, ರಂ ಅಗ್ನಿಃ, ತನ್ಮಯೀಂ–ತತ್ಕಾಂತಿ ಪ್ರಚುರಾಂ। ದಂಭೋಲ್ಯಾತ್ಮಕ ದಿವ್ಯತೇಜಃ ಪುಂಜ ಮಂಜುಲಾಂ, ರಿಪುನಿಗ್ರಾಹಿ ಕಾಂ। ಪಾಪಘ್ನೀಮಿತಿ ವಾ ॥

ಎಂದರೆ, ಹಿಂ-ಕಾರವು ವಜ್ರವೆಂದೂ, ರಂ-ಅಗ್ನಿಯೆಂದೂ, ಪ್ರಸಿದ್ಧಿಯಿರು ವುದರಿಂದ, ಹೊಳೆಯುವ ವಜ್ರಾಯುಧದಂತೆ ಕಾಂತಿಯುಳ್ಳವಳೆಂದೂ, ಶತ್ರುನಿಗ್ರಾಹಕಳೂ, ಪಾಪನಿವಾರಕಳೆಂದೂ ಅರ್ಥವಾಗುವುದು.

ಶ್ರೀ ರಂಗನಾಥ ಮುನಿಗಳು "ಹಿರಣ್ಯಾದಿ ಸರ್ವಧನ ಪ್ರಚುರಾಂ" ಎಂದರೆ ಸುವರ್ಣವೇ ಮೊದಲಾದ ಸಕಲ ಸಂಪತ್ತುಳ್ಳವಳು ಎಂದರ್ಥ ಮಾಡಿದ್ದಾರೆ.

ಹಿರಣ್ಮಯೇ ಪರೇ ಲೋಕೇ ವಿರಜಂ ಬ್ರಹ್ಮ ನಿಷ್ಕಲಂ ।

(ಮುಂಡಕ, ||-2-10)

ಎಂದು ಶ್ರುತಿ ಹೇಳುವಂತೆ, ಸ್ವರ್ಣಮಯವಾದ ಪರಮಪದದಲ್ಲಿ ರಜೋ ದೂರನಾದ, ನಿರ್ಲೇಪನಾದ ಭಗವಂತನಿರುವನು ಎಂದು ವರ್ಣಿತವಾದ ಸ್ವರ್ಣಮಯ ಲೋಕದಲ್ಲಿ ಲಕ್ಷ್ಮೀದೇವಿಯೂ ವಿರಾಜಮಾನಳಾಗಿರುವುದರಿಂದ ಹಿರಣ್ಮಯೀ ಎಂದು ಅವಳನ್ನು ಕರೆಯುವುದು ಉಚಿತವಾಗಿದೆ, ಎಂದು ಮತ್ತೊಬ್ಬ ಶ್ರೀ ವೈಷ್ಣವಾಚಾರ್ಯರು ಹೇಳಿದ್ದಾರೆ.

ಅಲ್ಲದೆ, ವೇದಕ್ಕೇ ಹಿರಣ್ಯವೆಂಬ ಹೆಸರೂ ಉಂಟು! ಹೇಗೆಂದರೆ, 'ಹಿತ'ವೂ 'ರಮಣೀಯ'ವೂ ಆದ ಶಬ್ದಗಳನ್ನೂ ಹೊಂದಿರುವುದರಿಂದ, ಇಂಥ ವೇದಮಂತ್ರಗಳಲ್ಲಿ ಕೀರ್ತಿಸಲ್ಪಡುವ ಸೂರ್ಯಮಂಡಲವು ಹಿರಣ್ಮಯವೆಂದು ವೇದಗಳಲ್ಲಿ ಪ್ರಸಿದ್ಧವಾಗಿದೆ. ಇದರಲ್ಲಿ ಸುಪ್ರತಿಷ್ಠಿತನಾಗಿರುವವನು ಶ್ರೀಮನ್ನಾರಾಯಣನು. ಲಕ್ಷ್ಮೀದೇವಿಯು ಇವನೊಡನೆಯೇ ಇರುವುದ ರಿಂದ, ಅವನು ಹಿರಣ್ಮಯನಾದಂತೆ, ಇವಳೂ ಹಿರಣ್ಮಯೀ ಆಗುವುದು. ಯುಕ್ತವಾಗಿದೆ. ಲಕ್ಷ್ಮೀತಂತ್ರವೂ ಸಹ ಇದನ್ನು ಹೀಗೆ ಹೇಳಿದೆ :

ಹಿರಣ್ಮಯೇ್ಽವತಿಷ್ಠೇ್ಽಹಂ ಹಿತಾಯ ಜಗತಾಂ ಸದಾ ।
ತಾಂ ಮಾಂ ಹಿರಣ್ಮಯೀತ್ಯೇವಂ ಮುನಯೋ ವೇದಪಾರಗಾಃ ॥

(ಶ್ಲೋ ೬೦)

## ೧೪ "ಲಕ್ಷ್ಮೀಂ"

ಈ ಶಬ್ದಕ್ಕೆ ನಿರುಕ್ತಕಾರರು ಕೊಟ್ಟಿರುವ ಅರ್ಥವನ್ನು ಈಗಾಗಲೇ ವಿವರಿಸಿದೆ, ಉಳಿದ ವಿವರಗಳನ್ನು ಈಗ ನೋಡೋಣ.

ಶ್ರೀ ವಿದ್ಯಾರಣ್ಯರು ನಿರುಕ್ತದ ಒಂದು ಅರ್ಥವನ್ನೇ— ಲಕ್ಷಣವತೀಂ —ಎಂಬುದನ್ನು, ಎತ್ತಿ ಹಿಡಿದಿದ್ದಾರೆ. ಸಮಸ್ತಶುಭ ಲಕ್ಷಣಗಳಿಂದ ಕೂಡಿದವಳು ಎಂದರ್ಥ. ಪೃಥ್ವೀಧರರು ಇದು ದೇವಿಯ ಪ್ರಸಿದ್ಧ ಹೆಸರೆಂದೇ ಗ್ರಹಿಸಿದ್ದಾರೆ. ಶತಾನಂದ ವೃತ್ತಿಯಲ್ಲಿ ನಿರುಕ್ತ ಪಾಠದ ಈ ಕೆಳಗಿನ ವಚನವನ್ನುದಾಹರಿಸಿ, ಲಕ್ಷ್ಮೀ ಎಂದರೆ ಈ ಕೆಳಗಿನ ಲಕ್ಷಣಗಳನ್ನುಳ್ಳವಳು ಎಂದು ಅರ್ಥ ಹೇಳಿದ್ದಾರೆ.

ಜ್ಞಾನೈಶ್ವರ್ಯಸುಖಾರೋಗ್ಯ ಧನಧಾನ್ಯ ಜಯಾದಿಕಂ ।
ಲಕ್ಷ್ಮ ಯಸ್ಯಾಃ ಸಮುದ್ದಿಷ್ಟಂ ಸಾ ಲಕ್ಷ್ಮೀತಿ ನಿಗದ್ಯತೇ ॥

"ಜ್ಞಾನ, ಐಶ್ವರ್ಯ, ಸುಖ, ಆರೋಗ್ಯ, ಧನಧಾನ್ಯ, ಜಯ, ಮುಂತಾದ ಲಕ್ಷಣಗಳಿಂದ ಕೂಡಿದವಳು." ಎಂದರೆ ಇವನ್ನೆಲ್ಲ ತನ್ನ ಭಕ್ತರಿಗೆ ಅನುಗ್ರಹಿಸುವವಳು ಎಂದರ್ಥ.

ಶ್ರೀರಂಗನಾಥ ಮುನಿಗಳು : "ಸರ್ವಸುರಾಸುರ ಮನುಜ ಮುನೀಂದ್ರಾದಿಭಿಃ ಲಕ್ಷಣೀಯಾಂ ಪ್ರಾರ್ಥನೀಯಾಂ, ಸರ್ವೈಶ್ವರ್ಯನಿಮಿತ್ತಭೂತ ದಿವ್ಯ ಲಕ್ಷಣಸಂಪನ್ನಾಂ ವಾ ।", ಎಂದರೆ, "ಎಲ್ಲ ದೇವ, ಅಸುರ, ಮನುಷ್ಯ ಮುನೀಂದ್ರರುಗಳಿಂದಲೂ ಪ್ರಾರ್ಥಿಸಲ್ಪಡುವವಳು, ಅಥವಾ ಸರ್ವೈಶ್ವರ್ಯ ನಿಮಿತ್ತದಿಂದ ಬರುವ ದಿವ್ಯಲಕ್ಷಣ ಸಂಪನ್ನೆಯಾದಳು" ಎಂದು ವ್ಯಾಖ್ಯಾನ ಮಾಡಿದ್ದಾರೆ.

ಇತರರು "ಲಕ್ಷಯತೀತಿ ಲಕ್ಷ್ಮೀಃ", ಎಂದರೆ, "ಸಕಲ ಜೀವರಾಶಿಯ ಪಾಪಪುಣ್ಯಗಳನ್ನು ಕುರಿತು ಚಿಂತಿಸುವಳಾದ್ದರಿಂದ ಲಕ್ಷ್ಮೀ" ಎಂದರ್ಥ ಮಾಡಿದ್ದಾರೆ ಈ ಅರ್ಥವು "ಲಕ್ಷ್–ದರ್ಶನೇ, ಆಲೋಚನೇ"– "ನೋಡು, ಚಿಂತಿಸು" ಎಂಬ ಧಾತುವಿನಿಂದ ಬಂದಿದೆ.

ಇದನ್ನು ಕುರಿತು ಲಕ್ಷ್ಮೀತಂತ್ರದಲ್ಲಿ :

ಸಾಕ್ಷಿಣೀ ಸರ್ವಭೂತಾನಾಂ ಲಕ್ಷಯಾಮಿ ಶುಭಾಶುಭಂ !

(ಶ್ಲೋ ೬೨)

ಎಂದು ವಿವರಿಸಿದೆ. ಎಲ್ಲ ಭೂತರಾಶಿಗಳ ಪುಣ್ಯಪಾಪಗಳ ಸಾಕ್ಷಿಣಿಯಾಗಿರುವವಳು ಎಂದರ್ಥ. ಭಗವಂತನಂತೆಯೇ ಇವಳೂ ಸರ್ವಜ್ಞಳೆಂಬುದಿಷ್ಟೆ !

ಲಕ್ಷ್ಮೀತಂತ್ರದಲ್ಲೇ ಬೇರೆ ಇನ್ನೆರಡು ನಿರ್ವಚನಗಳನ್ನು ಹೇಳಿದೆ :

೧) ಲಕ್ಷ್ಮೀಶ್ಚಾಸ್ಮಿ ಹರೇರ್ನಿತ್ಯಂ ಲಕ್ಷ್ಯಂ ಸರ್ವ
ಮಿತೇರಹಂ । (ಶ್ಲೋ. ೬೨)

"ಶ್ರೀ ಹರಿಗೆ ನಿತ್ಯವೂ ಐಶ್ವರ್ಯಪ್ರಾಯಳಾಗಿರುವವಳು; ಅವನನ್ನು ನಿಶ್ಚಯವಾಗಿ ಯಾರೆಂದು ತಿಳಿಯುವ ಶಾಸ್ತ್ರಜ್ಞರಿಗೆಲ್ಲ ಬಹುಮುಖ್ಯಲಕ್ಷ್ಯಳಾಗಿರುವವಳು" ಎಂಬರ್ಥ. ವಿಷ್ಣುಪುರಾಣದಲ್ಲಿ "ವಿಷ್ಣೋಃ ಶ್ರೀರನಪಾಯಿನೀ" ಎಂದುದಕ್ಕೆ ವಿವರಣೆ.

೨) ದದತೀ ಕ್ಷೇಪಣೀ ಚಾಸ್ಮಿ ನಿತ್ಯಾ ತ್ರಿಪ್ರೇರಣೀ ತಥಾ ।
ತಥಾ ಜ್ಞಾನಸ್ವರೂಪಾಹಂ ಲಕ್ಷಣೀಯಾ ಮಿತೌ
ಮಿತೌ ॥ (ಶ್ಲೋ. ೬೩)

ಇಲ್ಲಿ ಲ–ಕ್ಷ್ಮೀ ಎಂದು ಶಬ್ದವನ್ನು ಬಿಡಿಸಿ, "ಲಾ = ದಾನೇ," "ಕ್ಷಿಪ = ಪ್ರೇರಣೇ" ಎಂಬ ಎರಡು ಧಾತುಗಳಿಂದ ಅರ್ಥ ಹೇಳಲು ಯತ್ನಿಸಿರುವಂತಿದೆ. "ಭಕ್ತರಿಗೆ ಇಷ್ಟಾರ್ಥಗಳ ದಾನ ಮಾಡುವವಳಾದುದರಿಂದಲೂ, ಅವರ ಕಾಯ, ವಾಕ್ಕು, ಮನಸ್ಸು ಎಂಬ ತ್ರಿಕರಣಗಳನ್ನೂ ಪ್ರೇರಿಸುವವಳಾದುದರಿಂದಲೂ, ಲಕ್ಷ್ಮಿಯು" ಎಂದರ್ಥ. ಅಲ್ಲದೆ ಜ್ಞಾನಸ್ವರೂಪಳಾಗಿ ಶಾಸ್ತ್ರಜ್ಞರು ನಿಷ್ಕರ್ಷಿಸಿರುವ ಪ್ರಮೇಯದಂತೆಯೂ, ಇವಳು ಲಕ್ಷ್ಮೀ ಎಂದು ಇನ್ನೊಂದರ್ಥ. ತ್ರಿಪ್ರೇರಣೀ ಎಂದರೆ, ಬದ್ಧಮುಕ್ತ ನಿತ್ಯರೆಂಬ ತ್ರಿವಿಧ ಚೇತನರನ್ನು ಪ್ರೇರಿಸಿ ಅನುಗ್ರಹಿಸುವವಳೆಂದೂ, ಚಿತ್, ಅಚಿತ್, ಈಶ್ವರರೆಂಬ ತತ್ವತ್ರಯಗಳನ್ನು ಆಗಾಗ ಪ್ರೇರಿಸಿ ಜಗದ್ಧಿತವನ್ನು ಸಾಧಿಸುವವ

ಳಿಂದೂ ಸಹ ಅರ್ಥವನ್ನು ಹಿರಿಯರು ಮಾಡಿ, ಲಕ್ಷ್ಮೀ ಶಬ್ದವನ್ನು ನಿರ್ವಹಿಸಿದ್ದಾರೆ. ಲಕ್ಷ್ಮೀ ಎಂಬಲ್ಲಿ ಲ, ಕ್ಷ, ಮಿ —ಎಂಬಂತೆ, ಲಾ = ದಾನೇ॰ ಕ್ಷಿಪ್ = ಪ್ರೇರಣೇ, ಎಂಬೆರಡು ಧಾತ್ವರ್ಥಗಳನ್ನು ಯೋಜಿಸಿ ವಿವರಿಸಿದಂತೆಯೇ, ಕೊನೆಯುದಕ್ಕೆ ಮನ್ = ಜ್ಞಾನೇ ಎಂಬ ಧಾತ್ವರ್ಥವನ್ನು ಹೇಳಿ, ಜ್ಞಾನಸ್ವರೂಪಳೆಂದು ಮೇಲೆ ಕೊನೆಯ ಅರ್ಥವನ್ನು ಹೇಳಿದೆ.

ಲಕ್ಷ್ಮೀತಂತ್ರದಲ್ಲೇ ಇನ್ನಿತರ ನಿರ್ವಚನಗಳನ್ನು ಹೇಳಿದೆ.

ಲಯೇ, ನಿವಾಸೇ, ನಿರ್ಮಾಣೇ, ಪ್ರೇರಣೇ ಪ್ರಕೃತೇ ರಹಂ ।
ಲಕ್ಷಣಾಖ್ಯಸ್ಯ ಭಾವಸ್ಯ ಕಲಾಕಾಷ್ಠಾದಿರೂಪಿಣೀ ॥

(ಶ್ಲೋ. ೬೪)

ಲಕಾರವು ಲಯವನ್ನೂ, 'ಕ್ಷಿ–ನಿವಾಸೇ' ಎಂಬಂತೆ, ಕ್ಷ–ಕಾರವು ಸ್ಥಿತಿಯನ್ನೂ, 'ಮಾಙ್–ಮಾನೇ' ಎಂಬಂತೆ, ಮಕಾರವು ನಿರ್ಮಾಣವನ್ನೂ, (ಸೃಷ್ಟಿಯನ್ನು) ಹೇಳುವುದಾಗಿ ಗ್ರಹಿಸಿದರೆ, ಪ್ರಕೃತಿಯನ್ನು ಸೃಷ್ಟಿಸ್ಥಿತಿಲಯಗಳಲ್ಲಿ ಹಾಕುವವಳು ಲಕ್ಷ್ಮೀ ಎಂದರ್ಥವಾಗುವುದು. ಪ್ರಕೃತಿಯ (ಅಚಿತ್ತಿನ) ಇನ್ನೊಂದು ರೂಪವಾದ ಕಾಲತತ್ತ್ವವನ್ನು ಕಲಾ, ಕಾಷ್ಠಾದಿ ಭಾಗಭೇದ ಭಾವಗಳಿಂದ ಲಕ್ಷಿತವಾಗುವಂತೆ ಮಾಡಬಲ್ಲವಳೂ ಇವಳೇ ಎಂಬುದು ಇನ್ನೊಂದರ್ಥ. ಯಾವ ಪದಾರ್ಥಗಳನ್ನಾದರೂ ತಿಳಿಯುವ ಉಪಕರಣವಾದದ್ದು ಕಾಲ. ಇದನ್ನೇ ಲಕ್ಷಣಾ ಎಂದು ಕಾಲಜ್ಞರು ಕರೆಯುವರು, ಈ ಕಾಲವು ಎಣಿಸಲ್ಪಡುವಾಗ, ಚಿಕ್ಕ ಭಾಗಗಳಿಂದ ದೊಡ್ಡ ಭಾಗಗಳ ವರೆಗೆ ಬೇರೆ ಬೇರೆ ಹೆಸರುಗಳುಂಟಾಗಿ, ಸೂಕ್ಷ್ಮವಸ್ತುಗಳನ್ನು (ತೀರ ಅಲ್ಪಾಯುಷ್ಯವುಳ್ಳವುಗಳನ್ನೂ), ಸ್ಥೂಲವಸ್ತುಗಳನ್ನೂ (ಅತಿ ದೀರ್ಘಾಯುಷ್ಯವುಳ್ಳವುಗಳನ್ನೂ) ಮನಸ್ಸು ಗ್ರಹಿಸುವುದು ಸಾಧ್ಯವಾಗಿರುವುದೇ ಈ ಕಾಲದಲ್ಲೂ ಲಕ್ಷ್ಮೀ ಸಾನ್ನಿಧ್ಯವಿರುವುದರಿಂದ ಎಂದು ಭಾವ. ಹೀಗೆ ಇನ್ನೂ ಅನೇಕ ವಿಚಿತ್ರಾರ್ಥಗಳನ್ನು ಲಕ್ಷ್ಮೀತಂತ್ರದಲ್ಲಿ ಮಾಡಲಾಗಿದೆ.

ಲಕ್ಷಂ ನಯಾಮಿ ಚಾತ್ಮಾನಂ ಲಾಮಿ ಚಾಂತೇ ಕ್ಷಿಪಾಮಿಚ ॥

(ಶ್ಲೋ. ೬೫.)

“ಯೋಗಿಗಳಿಗೆ ತನ್ನನ್ನು ಧ್ಯಾನಗೋಚರಳನ್ನಾಗಿ ಮಾಡಿಕೊಳ್ಳುವವಳು, ಅಥವಾ ‘ಲಾ = ಆದಾನೇ’ ಎಂಬಂತೆ, ಪ್ರಳಯಕಾಲದಲ್ಲಿ (ಭಗವಂತನೊಡನಿರುತ್ತಾ) ಸಕಲ ವಸ್ತುಗಳನ್ನೂ ತನ್ನೊಳಗೇ ಉಪಸಂಹರಿಸಿಕೊಳ್ಳುವವಳು” ಎಂಬುದು ಇನ್ನೊಂದರ್ಥ.

ಅಥವಾ ‘ಲಾ’–ಆದಾನೇ ಎಂಬಂತೆ. ಪ್ರಳಯಕಾಲದಲ್ಲಿ ಭಗವಂತನೊಡಗೂಡಿ ಜಗತ್ತನ್ನೆಲ್ಲ ತನ್ನೊಳಗೆ ಉಪಸಂಹರಿಸಿಕೊಳ್ಳುವಳು ಎಂಬುದು ಲಕಾರದ ಅರ್ಥವಾದರೆ, ‘ಕ್ಷಿ’ ಎಂಬಲ್ಲಿ ಕ್ಷಿಪ್ ಧಾತುವಿನಿಂದ ಪುನಃ ಎಲ್ಲವನ್ನೂ ಸೃಷ್ಟಿಸುವವಳು ಎಂಬರ್ಥವನ್ನು ಹೇಳಿದೆ, (ಕ್ಷಿಣುಧಾತುವಿನಿಂದ) ಚೇತನರ ಪಾಪನಾಶಕಳು ಎಂದಾದರೂ ಅರ್ಥವಾಗುವುದು. ಅಥವಾ ಕ್ಷಮ್–ಸಹನೇ ಎಂಬ ಧಾತುವಿನಂತೆ, ಭಕ್ತರ ಅಪರಾಧಗಳನ್ನು ಸಹಿಸುವವಳು, ಕ್ಷಮಾಸ್ವರೂಪಿಣಿ, ಎಂಬರ್ಥವೂ ಆಗುವುದು. ಈ ಬಗೆಯ ಅರ್ಥಗಳನ್ನೆಲ್ಲ ಒಟ್ಟುಗೂಡಿಸಿ ಲಕ್ಷ್ಮೀತಂತ್ರವು ಹೀಗೆ ವಿವರಿಸಿದೆ :

ಕ್ಷಿಪಾಮಿ ಕ್ಷಪಯಾಮ್ಯೇಕಾ ಕ್ಷಿಣೋಮಿ ದುರಿತಂ ಸತಾಂ ।
ಕ್ಷಮೇ ಕ್ಷಮಾ ಹಿ ಭೂತಾನಾಂ ಮಿಮೇ ಮನ್ಯೇ ಚ ಮಾಮಿ
ಚ ॥ (೭೬)

ಈ ಎಲ್ಲ ಅರ್ಥಗಳನ್ನೂ ಪ್ರತ್ಯಕ್ಷ ಮಾಡಿಕೊಂಡು ಪರಮರ್ಷಿಗಳೂ, ಉದಾರಬುದ್ಧಿಯವರೂ ಆದ ಕಪಿಲರು ಲಕ್ಷ್ಮೀಕಟಾಕ್ಷಕ್ಕಾಗಿ ಪ್ರಾರ್ಥಿಸಿದರಂತೆ.

ಇಂಥ ಮಹಾ ಮಹಿಮಳಾದ ಲಕ್ಷ್ಮೀದೇವಿಯನ್ನು ತಮಗೆ ಪ್ರತ್ಯಕ್ಷ ಮಾಡಿಕೊಡಬೇಕೆಂದು ಸಾಧಕನು ಅಗ್ನಿಯನ್ನೋ ಅಥವಾ ಸ್ವಯಂ ಭಗವಂತನನ್ನೋ ಪ್ರಾರ್ಥಿಸುವ ರೂಪದಲ್ಲಿ ಈ ಮೊದಲನಯ ಮಂತ್ರವು ಉದಿಸಿ ಬಂದಿದೆ.

ಎರಡನೆಯ ಮಂತ್ರ

## "ತಾಂ ಮ ಆವಹ"

ತಾಂ ಮ ಆವಹ ಜಾತವೇದೋ ಲಕ್ಷ್ಮೀಮನಪಗಾಮಿನೀಂ ।
ಯಸ್ಯಾಂ ಹಿರಣ್ಯಂ ವಿಂದೇಯಂ ಗಾಮಶ್ವಂ
ಪುರುಷಾನಹಂ ॥೨॥

ಅರ್ಥ : "ಎಲೈ ಅಗ್ನಿಯೇ! (ಅಥವಾ ಭಗವಂತನೇ!) ಯಾವಳ ಬಳಿಯಲ್ಲಿ (ಐಶ್ವರ್ಯವನ್ನೂ), ಗೋವುಗಳನ್ನೂ, ಕುದುರೆಗಳನ್ನೂ, ನಾನು ಹೊಂದುವೆನೋ, ಆ ಲಕ್ಷ್ಮೀದೇವಿಯನ್ನು ನನಗೆ ಪ್ರತ್ಯಕ್ಷ ಮಾಡಿಸು."

ವಿವರಣೆ : ಈ ಮಂತ್ರದಲ್ಲಿ ಲಕ್ಷ್ಮೀದೇವಿಯು ಭಕ್ತನಿಗೆ ಅನುಗ್ರಹ ಮಾಡುವ ಸಂಪತ್ತಿನ ವರ್ಣನೆಯಿದೆ. ದೇವಿಯು ಒಬ್ಬನನ್ನು ಒಲಿದರೆ ಆವನಿಗೆ ಎಂಥ ಬಗೆಯ ಐಹಿಕ ಸಂಪತ್ತು ಪ್ರಾಪ್ತವಾಗುವುದೆಂಬುದನ್ನು ಇಲ್ಲಿ ಹೇಳಿದೆ— ಧನ, ಪಶು, ದಾಸದಾಸಿಯರು ಮೊದಲಾದವು.

ಹೀಗೆ ಪ್ರಾರ್ಥನೆ ಮಾಡುವುದು ತಪ್ಪೇನಲ್ಲ. ನಿವೃತ್ತಿ ಮಾರ್ಗದ ಅತಿರೇಕಿಗಳಿಗೆ ಇಲ್ಲಿ ಈ ಸಂಪತ್ತು ತುಚ್ಛವಾಗಿ ಕಾಣಬಹುದಾದರೂ, ಇದನ್ನೇ ಪರಲೋಕ ಸಾಧನೆಗೆ, ದಾನಧರ್ಮಗಳ ರೂಪದಲ್ಲಿಯೂ, ಅಥವಾ ಲೋಕೋಪಕಾರಾರ್ಥವಾಗಿ (ಲೋಕಸಂಗ್ರಹಕ್ಕಾಗಿ), ತಪಸ್ಸಾಧನವಾದ ಶರೀರದ ದಾರ್ಢ್ಯಕ್ಕಾಗಿ, ಮಾನಸಿಕ ಸ್ವಾಸ್ಥ್ಯಕ್ಕಾಗಿ, ಏಕೆ ಉಪಯೋಗಿಸಬಾರದು? ದ್ರವ್ಯವು ತುಚ್ಛವಾಗುವುದು ಸ್ವಾರ್ಥಬಯಕೆಯಿಂದ, ಮತ್ತು ಆ ದ್ರವ್ಯಸಂಪಾದನೆಗೆ ಉಪಯೋಗಿಸುವ ಅನ್ಯಾಯ ಮಾರ್ಗದಿಂದ ಮಾತ್ರ ವಲ್ಲವೇ! ಐಶ್ವರ್ಯವನ್ನು ಪರಾರ್ಥಕ್ಕಾಗಿ ಉಪಯೋಗಿಸುವುದು ತಪ್ಪೆಂದು ಯಾವ ಶಾಸ್ತ್ರವೂ ವಿಧಿಸಿಲ್ಲ; ಅದನ್ನು ಪ್ರಶಂಸಿಸಿಯೇ ಇದೆ. ಋಷಿಗಳು ಯಾರೂ ಸಂನ್ಯಾಸಿಗಳಾಗಿರಲಿಲ್ಲ. ಸಂನ್ಯಾಸಿಗಳಾಗಿರುವವರೂ ಮಠ, ದೇವಾಲಯ, ಸಮಾಜಗಳ ಉನ್ನತೀಕರಣಕ್ಕಾಗಿ ದ್ರವ್ಯಾರ್ಜನೆಯ ಕೆಲಸವನ್ನು ಇಂದಿಗೂ ಬಿಟ್ಟಿಲ್ಲ. ಯತಿಗಳಾಗಿದ್ದ ವಿದ್ಯಾರಣ್ಯರು ವಿಜಯನಗರ ಸಾಂಮ್ರಾಜ್ಯಕ್ಕಾಗಿ ಲಕ್ಷ್ಮಿಯನ್ನು ಪ್ರಾರ್ಥಿಸಿ ಹೊನ್ನಿನ ಮಳೆಯನ್ನೇ

ಸುರಿಸಿದರೆಂಬ ಐತಿಹ್ಯವಿದೆ. ಶ್ರೀ ಶಂಕರರೂ ಹೀಗೇ ಹೊನ್ನಿನ ಮಳೆ ಸುರಿಸಿದ ಮಹಿಮೆಯ ಕನಕಧಾರಾ ಸ್ತೋತ್ರ ಮಾಡಿದರೆಂದು ಹೇಳುತ್ತಾರೆ. ಪರಮವಿರಕ್ತರಾಗಿ, ಉಂಛವೃತ್ತಿಯಲ್ಲಿದ್ದ ಶ್ರೀ ವೇದಾಂತ ದೇಶಿಕರೂ, ಬ್ರಹ್ಮಚಾರಿಯೊಬ್ಬನ ಪ್ರಾರ್ಥನೆಗೆ ಓಗೊಟ್ಟು, ಅವನ ವಿವಾಹದ ಖರ್ಚಿಗೆಂದು, ಲಕ್ಷ್ಮೀಸ್ತುತಿಮಾಡಿ ಹೊನ್ನಿನ ಮಳೆ ಸುರಿಸಿದ ಮಹಿಮೆಯ ಶ್ಲೋಕವೊಂದು ಅವರ ಶ್ರೀಸ್ತುತಿಯಲ್ಲಿದೆ. (ಯೋಗಾರಂಭ ತ್ವರಿತಮನಸೋ... ಧಾರಾ ನಿರ್ಯಾಂತ್ವಧಿಕಮಧಿಕಂ ವಾಂಛಿತಾನಾಂ ವಸೂನಾಂ।) ಆದ್ದರಿಂದ ಧನವೇ ತುಚ್ಛವಲ್ಲ. ಅದರ ಹಂಬಲ, ಅದರಿಂದ ಬರುವ ಸ್ವಾರ್ಥ; ಮತಿಗೇಡಿತನ ಇತ್ಯಾದಿಗಳು ಮಾತ್ರ ತುಚ್ಛ. ಆತ್ಮವನ್ನೇ ಗೆದ್ದವರ ಕೈಯಲ್ಲಿ ಧನವು ಲೋಕೋಪಕಾರವನ್ನೇ ಮಾಡಬಲ್ಲುದು. ರಾಮಾಯಣದ ಭರತ, ವಿಭೀಷಣರೇ ಸಾಕ್ಷಿ. ಈ ಬಗೆಯ ಜ್ಞಾನಿಗಳಿಗೇ ಮಾತ್ರ ಪ್ರತ್ಯಕ್ಷವಾದ ಈ ಮಂತ್ರದಲ್ಲಿರುವ ಪ್ರಾರ್ಥನೆಯೂ ಮಹೋದ್ದೇಶ್ಯವನ್ನೇ ಹೊಂದಿದೆ.

ಈ ಮಂತ್ರದಲ್ಲಿ ಲಕ್ಷ್ಮೀದೇವಿಗೆ ಬಂದಿರುವ ವಿಶೇಷಣ ಅನಪಗಾಮಿನೀ ಎಂಬುದು. ಇದನ್ನರಿಯೋಣ.

## ೧ "ಅನಪಗಾಮಿನೀಂ"

ಶ್ರೀ ವಿದ್ಯಾರಣ್ಯಭಾಷ್ಯದಂತೆ : "ಅಪಗಮನರಹಿತಾಂ, ಅನಪಾಯಿನೀಂ" ಎಂಬಂತೆ "ಓಡಿಹೋಗದವಳು, ಬಿಟ್ಟಿರದವಳು" ಎಂದು ಈ ಶಬ್ದಕ್ಕೆ ಅರ್ಥವಾಗುತ್ತದೆ. "ಯಾರನ್ನು ?" ಎಂದು ಕೇಳುವುದಾದರೆ, ಸಾಧಕನು ತನ್ನನ್ನು ಬಿಟ್ಟು ಹೋಗದಿರುವಂತೆ ಇಲ್ಲಿ ಶಾಶ್ವತರೂಪ ಐಶ್ವರ್ಯಕ್ಕೆ ಪ್ರಾರ್ಥಿಸುತ್ತಿರುವನೆಂದು ಅಲ್ಲಿ ಹೇಳಿದೆ. ಶ್ರೀ ಮಹೀಧರಾಚಾರ್ಯರ ಅರ್ಥವೂ ಇದೇ.

ಚಿದ್ವಿಲಾಸವೃತ್ತಿಯೆಂಬ ವ್ಯಾಖ್ಯಾನದಲ್ಲಿ ಇದಕ್ಕಿಂತ ಮೇಲಾದ ಇನ್ನೊಂದರ್ಥವನ್ನು ಪ್ರತಿಪಾದಿಸಿದೆ— "ವಿಷ್ಣೋರನಪಾಯಿನೀಂ ಲಕ್ಷ್ಮೀಂ" ಎಂದು. ಶ್ರೀಮಹಾವಿಷ್ಣುವನ್ನು ಎಂದೆಂದೂ ಅಗಲೀದ ಲಕ್ಷ್ಮೀದೇವಿ ಎಂದರ್ಥ. ಈ ಭಾವವು ವಿಷ್ಣುಪುರಾಣದಲ್ಲಿ ಬಂದಿರುವ ಬಗೆಯನ್ನೂ, ವೈಷ್ಣವರೆಲ್ಲರ ಮೂಲಗ್ರಹಿಕೆ ಇದೆಂಬುದನ್ನೂ ಈ ಹಿಂದೆ ತೋರಿಸಿ ಆಗಿದೆ. ಇಂಥವಳು ನಮ್ಮಲ್ಲಿ ನಿತ್ಯವಾಸಮಾಡುವಂತಾಗಲು, ಶ್ರೀಹರಿಯ ನಿತ್ಯ ವಾಸವೂ ನಮ್ಮಲ್ಲಿ ಆಗಲೇಬೇಕಾದುದರಿಂದ ಸಾಧಕನು ಪ್ರಾರ್ಥಿಸುವ ಐಶ್ವರ್ಯವು ನಿಜವಾಗಿ ತನ್ನಲ್ಲಿ ಭಗವಂತನು ಕೃಪೆದೋರಬೇಕೆಂಬುದೇ. ಇದೇ ಪರಮಾರ್ಥದ ಐಶ್ವರ್ಯ. ಲಕ್ಷ್ಮಿಯು ಚಂಚಲೆ ಎಂಬ ಭಾವನೆ ಅವಿವೇಕಿಗಳ ಬುದ್ಧಿ ಚಂಚಲವಾದ್ದರಿಂದಲೇ ! ಈ ವೇದಾಂತ ಬಾಹ್ಯವಾದ ಕುಹಕವನ್ನು ತೊಡೆದು ಹಾಕುವಂತೆಯೇ ಈ ಶಬ್ದ ಬಂದಿರುವುದನ್ನು ವಿವೇಕಿಗಳು ಗಮನಿಸಬೇಕು.

## ೨ ಲಕ್ಷ್ಮೀತಂತ್ರದಲ್ಲಿ ವಿಶೇಷ ವಿವರಣೆ

ಇಲ್ಲಿ ವಸಿಷ್ಠ ವಿಶ್ವಾಮಿತ್ರರ ಕಲಹದ ಸಂದರ್ಭದಲ್ಲಿ ದೇವಿಗೆ ಈ ಹೆಸರು ಬಂದಿತೆಂಬ ಹೆಚ್ಚಿನ ವಿವರಣೆ ಬಂದಿದೆ.

ಅಪಶ್ಚಾಹಮಯಾಪ್ಯೇಕಾ ದ್ರವೋ ಭೂತ್ವಾ ಗುಹೋ
ಮಹಾನ್ ।
ಅಪಾವಾಹಯಮಾದೌಚ ಮುನಿಂ ಭೂತ್ವಾ ಸರಸ್ವತೀ ॥
ಸಾರಸ್ವತೇ ಜಲೇ ಪೂರ್ವಂ ವಿಶ್ವಾಮಿತ್ರೋದಿತಾ ಸತೀ ।
ಅಪೋವಾಹ ವಸಿಷ್ಠಂ ತಂ ಸತ್ಯಸಂಧಾ ಸರಸ್ವತೀ ॥

ಋಷಯಃ ಪ್ರಾಹುರೇವಂ ಮಾಂ ವಸಿಷ್ಠೇ ಸ್ರೋತಸಾ ಹೃತೇ।
ಸತ್ಯೇ ಸತ್ಯಪ್ರಿಯಂ ಪಾಹಿ ವಸಿಷ್ಠಂ ಶಾತ್ರವಾದಿತಿ ॥
ಸಾಹಂ ಸರಸ್ವತೀ ಭೂತ್ವಾ ತಮಪೋವಾಹ ಶಾತ್ರವಾತ್ ।
ಋಷಯೋ ನಾಮ ಚಕ್ರುರ್ಮೇ ತದಾ ಹ್ಯನಪಗಾಮಿನೀಂ ॥

ಇಲ್ಲಿ ಎರಡು ನಿರ್ವಚನಗಳಿವೆ: (೧) ನೀರಿನಲ್ಲಿ ದ್ರವಿಸುವ ಗುಣವುಂಟಷ್ಟೆ ! (ಪ್ರವಾಹಶಕ್ತಿ) ಇದೂ ಲಕ್ಷ್ಮೀದೇವಿಯ ಮಹಿಮೆಯಾದ್ದರಿಂದ; ಅವಳು ಅದರಲ್ಲಿ ಅನುಪ್ರವೇಶ ಮಾಡಿರುವುದರಿಂದ, ಸಾಮಾನ್ಯವಾಗಿ ನೀರನ್ನು ಅಪಗಾಮಿನೀ ಎನ್ನುತ್ತಾರೆ, (೨) ಇದಕ್ಕೆ ವಿರುದ್ಧವಾದ ಗುಣವೇ ಅನಪಗಾಮಿತ್ವ; ಈ ಪರಸ್ಪರ ವಿರುದ್ಧ ಗುಣಗಳೂ ನೀರಿಗೆ ಹೇಗೆ ಬಂದವೆಂಬುದಕ್ಕೆ ಒಂದು ವೈದಿಕ ಇತಿಹಾಸವಿದೆ. (ನಮ್ಮ ಮಾಲೆಯ ಐದನೆಯ ಸಂಪುಟ. ಪುಟ ೨೫೮-೨೬೯ನ್ನು ನೋಡಿರಿ.) ವಸಿಷ್ಠ ವಿಶ್ವಾಮಿತ್ರರಲ್ಲಿ ಭಯಂಕರ ಸ್ಪರ್ಧೆ ಏರ್ಪಟ್ಟ ಕಾಲದಲ್ಲಿ, ಒಮ್ಮೆ ವಿಶ್ವಾಮಿತ್ರರು ಸರಸ್ವತೀ ನದಿಯನ್ನು, ತಮ್ಮಲ್ಲಿಗೆ ವಸಿಷ್ಠರನ್ನು ತನ್ನ ನೀರಿನಲ್ಲಿ ಕೊಚ್ಚಿಕೊಂಡು ತರುವಂತೆ ಪ್ರಾರ್ಥಿಸಿದರು. ಸರಸ್ವತಿಯು ವಿಶ್ವಾಮಿತ್ರರ ಭಯದಿಂದ ಹಾಗೇ ಮಾಡಿದಳು, ಸತ್ಯನಿಷ್ಠೆ ತೋರಿ, ಕೊಟ್ಟ ಮಾತಿನಂತೆ ನಡೆದುಕೊಂಡಳು. ನೀರಿನಲ್ಲಿ ವಸಿಷ್ಠರು ಎಳೆಯಲ್ಪಡುತ್ತಿದ್ದಾಗ, ಉಳಿದ ಮಹರ್ಷಿಗಳು ಸರಸ್ವತಿಯನ್ನು ಕುರಿತು: "ಎಲೈ! ಸತ್ಯಸಂಧಳೇ ! ಸತ್ಯಪ್ರಿಯರಾದ ಈ ಮಹರ್ಷಿಯನ್ನು, ಕೋಪರೂಪದ ನಿನ್ನ ಪ್ರವಾಹದಿಂದ ರಕ್ಷಿಸಬೇಕು." ಎಂದು ಪ್ರಾರ್ಥಿಸಿದರು. "ಅವರೆಗೆ ನೀರಿಗೆ ಸಹಜಗುಣದಂತೆ ಅಪಗಾಮಿನಿಯಾಗಿ ಅವರನ್ನು ಸೆಳೆದೊಯ್ಯುತ್ತಿದ್ದ ನಾನು ಆಮೇಲೆ ನೀರಿಗೆ ವಿರುದ್ಧಗುಣವನ್ನು ಹೊಂದಿ, ದಿಕ್ಕನ್ನು ಬದಲಿಸಿ, ಮತ್ತೆ ಅವರನ್ನು ಅವರಾಶ್ರಮಕ್ಕೇ ಬಿಟ್ಟುಬಂದೆನಾಗಿ, ಅನಪಗಾಮಿನಿಯಾದೆನು" ಎಂದು ಸರಸ್ವತಿಯ ಭಾವದಲ್ಲಿ, ಅವಳಲ್ಲಿ ಅಂತರ್ಗತಳಾಗಿ ಲಕ್ಷ್ಮೀದೇವಿಯೇ ಇಲ್ಲಿ ಈ ಮಾತುಗಳನ್ನಾಡಿ, ಅಂದಿನಿಂದ ತನಗೆ ಈ ಅನಪಗಾಮಿನೀ ಎಂಬ ಹೆಸರು ಬಂದಿತೆಂದು ಹೇಳಿಕೊಂಡ ರೀತಿಯಲ್ಲಿ ಇಲ್ಲಿ ವಿವರಣೆಯಿದೆ. ಸರಸ್ವತೀ,

ವಾಗ್ದೇವಿ ಎಂಬ ಶ್ರೀನಾಮಗಳು ಮೂಲದಲ್ಲಿ ಲಕ್ಷ್ಮೀವಾಚಕಗಳೇ ಎಂದು ವಿವರಿಸಿ ಆಗಿರುವುದರಿಂದ ಈ ಕಥೆಯಲ್ಲಿ ಲಕ್ಷ್ಮೀ ಅನ್ವಯವು ಸ್ಪಷ್ಟ.

ವಸಿಷ್ಠರು ಕೊಚ್ಚಿಕೊಂಡು ಬಂದ ಪ್ರವಾಹವು ವಿಶ್ವಾಮಿತ್ರರ ಕೋಪರೂಪ, ಶಾಪರೂಪ, ವಾಗ್‌ಸ್ರೋತಸ್ಸೆಂದೂ, (ಅವರಿಂದ ದೃಷ್ಟವಾದ ಕೆಲವು ಮಂತ್ರಗಳೆಂದೂ, ಇವಕ್ಕೆ ವಸಿಷ್ಠವಿದ್ವೇಷಿಣೀ ಸೂಕ್ತಗಳೆಂದೂ) ಈ ದುಷ್ಟಮಂತ್ರಗಳು ಅವರನ್ನು–ವಸಿಷ್ಠರನ್ನು–ತೊಂದರೆ ಮಾಡದೇ, ವಿಶ್ವಾಮಿತ್ರರನ್ನೂ ತಣ್ಣಗಾಗಿಸುವ ಬೇರೆ ಕೆಲವು ಮಂತ್ರಗಳನ್ನು ವಸಿಷ್ಠರ ಬಾಯಿಂದ ಬರುವಂತೆ ಮಾಡಿದುವೆಂದೂ— ಹೀಗೆ ವಾಗ್ದೇವತೆಯಾದ ಲಕ್ಷ್ಮಿಯು ಮನುಷ್ಯಸಹಜ ಕೋಪದ ದಿಕ್ಕಿನಲ್ಲಿ ಪ್ರವಹಿಸಿ, ಅಪಗಾಮಿನಿ ಎನಿಸಿದರೂ, ಅದರ ವಿರುದ್ಧ ಕ್ಷಮಾಗುಣದ ದಿಕ್ಕಿನಲ್ಲೂ ಪ್ರವಹಿಸಿ ಅನಪಗಾಮಿನೀ ಎನಿಸುವಳೆಂಬ ಈ ಇತಿಹಾಸಪೂರ್ವಕ ನಿರ್ವಚನವು ಅಪೂರ್ವವೂ, ಅಮೋಘವೂ ಆಗಿದೆ.

ಕ್ಷಮಾಗುಣ ಯುಕ್ತವಾದ ಮಾತುಗಳಲ್ಲಿ ಲಕ್ಷ್ಮೀಸಾಂನಿಧ್ಯವಿರುವುದರಿಂದ, ಈ ಗುಣಯುಕ್ತ ಪುರುಷನಲ್ಲಿ ಸಕಲವಿಧ ಐಶ್ವರ್ಯವೂ ನೆಲೆಸುವುದನ್ನು ಅನುಭವದಲ್ಲೂ ಕಾಣುತ್ತೇವೆ. ಇದೇ ಈ ಮಂತ್ರದಲ್ಲಿ ಪ್ರಾರ್ಥಿಸಲ್ಪಟ್ಟಿದೆ,

## ಮೂರನೆಯ ಮಂತ್ರ

## "ಅಶ್ವಪೂರ್ವಾಂ"

ಅಶ್ವಪೂರ್ವಾಂ ರಥಮಧ್ಯಾಂ ಹಸ್ತಿನಾದ ಪ್ರಬೋಧಿನೀಂ।
ಶ್ರಿಯಂ ದೇವೀಮುಪಹ್ವಯೇ ಶ್ರೀರ್ಮಾ ದೇವೀ ಜುಷತಾಂ ॥೩॥

ಅರ್ಥ : "(ಯೋಗಾರಂಭದ ದೆಸೆಯಲ್ಲಿ) ಕುದುರೆಯಂತೆ ಶಬ್ದಿಸುವವಳೂ,

ನಡುವೆ ರಥಧ್ವನಿಯಂತೆ ನಾದಮಾಡುವವಳೂ ಕೊನೆಯಲ್ಲಿ ಆನೆಯಂತೆ ಘೀಂಕರಿಸುವವಳೂ ಆದ ಶ್ರೀದೇವಿಯನ್ನು ಕರೆಯುತ್ತೇನೆ. ನನ್ನಲ್ಲಿ ಆ ದೇವಿಯು ಪ್ರೀತಿಯುಳ್ಳವಳಾಗಲಿ."

ವಿವರಣೆ : ಈ ಮೇಲಿನ ಅರ್ಥವು ಲಕ್ಷ್ಮೀತಂತ್ರಾನುಸಾರವಾದದ್ದು. ವಿದ್ಯಾರಣ್ಯಭಾಷ್ಯದಲ್ಲಿ ಬೇರೆ ರೀತಿ ಅರ್ಥೈಸಲಾಗಿದೆ. "ಯಾವ ದೇವಿಯು (ಯುದ್ಧಕ್ಕೆ ಹೊರಟಾಗ) ಸೈನ್ಯದ ಮುಂಭಾಗದಲ್ಲಿ ಕುದುರೆಗಳನ್ನು ಹೊಂದಿರುವಳೋ, ಮಧ್ಯದಲ್ಲಿ ರಥಗಳನ್ನುಳ್ಳವಳಾಗಿರುವಳೋ, ಯಾವಳ ಸೈನ್ಯವು ಆಗಮಿಸುತ್ತಲೇ ಆನೆಗಳ ಘೀಂಕಾರದಿಂದ ತನ್ನ ಸಾಮೀಪ್ಯವನ್ನು ನೆನಪಿಸುವುದೋ, ಈ ಬಗೆಯ ಕ್ರೀಡಾ ವಿಲಾಸವುಳ್ಳ ಲಕ್ಷ್ಮೀದೇವಿಯನ್ನು ಕರೆಯುತ್ತೇನೆ. ಅವಳು ನನ್ನನ್ನು ಪ್ರೇಮಿಸಲಿ." ಆದರೆ ಲಕ್ಷ್ಮೀದೇವಿಯು ಸ್ವಯಂ ಎಲ್ಲೂ ಯಾವ ಯುದ್ಧದಲ್ಲೂ ಹೀಗೆ ಹೊರಟ ಪ್ರಸ್ತಾಪ ಇತಿಹಾಸ ಪುರಾಣಗಳಲ್ಲಿಲ್ಲವಾಗಿ ಈ ಅರ್ಥ ತಿಳಿಯುವುದು ಕಷ್ಟವೇ ಸರಿ.

ಲಕ್ಷ್ಮೀತಂತ್ರವು ಬಹು ಸೊಗಸಾದ ಚಮತ್ಕಾರಾರ್ಥಗಳನ್ನು ಹೀಗೆ ನೀಡುತ್ತದೆ : ಮಾನವನ ಹೃದಯವೇ ಒಂದು ಪುರ. ಸಕಲಧಾತುಗಳಿಂದ ಸಮೃದ್ಧವಾದ ಕೋಟೆ ಅದು. ಇದನ್ನು ಮಂಗಳಮಯದಿಕ್ಕಿನತ್ತ ಎಳೆಯುವ ಕುದುರೆಯಂತೆ ಲಕ್ಷ್ಮೀದೇವಿಯು ಇರುವವಳಾದುದರಿಂದ, ಅವಳೇ ಒಂದು ಅಶ್ವದಂತೆ ಚಾಲನ ಶಕ್ತಿಯಾಗಿ, ಅಶ್ವಾ ಎನಿಸಿದ್ದಾಳೆ; ಅಥವಾ ಬುದ್ಧಿ, ಪ್ರಾಣ, ಶರೀರ ಎಂಬ ನಮ್ಮ ಮೂರು ಪುರಗಳಲ್ಲೂ ಸದಾ ವಾಸಿಸುವವಳಾಗಿ ಪೂಃ ಎನಿಸಿದ್ದಾಳೆ. ನಮ್ಮ ಆತ್ಮದೊಳಗಿದ್ದುಗೊಂಡು ನಮ್ಮ ಈ ಪುರಗಳನ್ನು ನಡೆಸುವವಳಾದುದರಿಂದ ವಾಹನೀ ಎನಿಸುವಳು. ಈ ಮೂರರ್ಥವನ್ನೂ ಕೂಡಿಸಿದರೆ ಅಶ್ವಪೂರ್ವಾ ಎಂಬ ಶ್ರೀನಾಮವು ಸಾರ್ಥಕವಾಗುವುದೆಂದು ತಂತ್ರದ ವಿವರಣೆ :

ಅಶ್ವಾ ಪೂರ್ ವಾಹನೀ ಚಾಸ್ಮಿ ವಸಾಮಿ ಚ ಪುರೇ ಸದಾ ।
ಬುದ್ಧಿಪ್ರಾಣ ಶರೀರಾಖ್ಯೇ ತ್ರಿವಿಧೇ ತ್ರಿವಿಧಾತ್ಮನಾ ॥

(ಶ್ಲೋ. ೭೫)

ಬುದ್ಧಿಯನ್ನು ನಾನಾ ವಿಷಯಗಳಲ್ಲಿ ಎಳೆದಾಡಿ ಓಡುವುದರಿಂದ ಕುದುರೆ ಯೆಂದು ರೂಪಕದಲ್ಲಿ ಕರೆಯಲ್ಪಟ್ಟಿದ್ದಾಳೆ. ಪ್ರಾಣಾವಾಸಸ್ಥಾನವಾಗಿ ಪುರವೆನಿಸುವಳು. ಆತ್ಮನಂತೆ ಶರೀರರಥವನ್ನೋಡಿಸುತ್ತಾ ವಾಹನೀ ಎನಿಸುವಳೆಂದು ಭಾವ.

ಇನ್ನು ಎರಡನೆಯ ಉನ್ನತಾರ್ಥವನ್ನೂ ಲಕ್ಷ್ಮೀತಂತ್ರ ಹೀಗೆ ಸೂಚಿಸಿದೆ.

## ೧ ಲಕ್ಷ್ಮೀದೇವಿಯ ಮೂರು ಧ್ವನಿಗಳು !

ಅಶ್ವಾನಾಂ ಹೇಷವನ್ನಾದಂ ಯೋಗಾರಂಭೇ ಕರೋಮಿ ಚ ।
ನಾಡೀ ಮಧ್ಯಂ ಸಮಾಯಾತಾ ಕರೋಮಿ ರಥವತ್ ಧ್ವನಿಂ ॥
ವ್ಯೋಮರಂಧ್ರಮನುಪ್ರಾಪ್ತಾ ಹಸ್ತಿನಾದವಿನಾದಿನೀ ।
ಯೋಗಿನೋ ಯತಮಾನಾಂ ಮಾಂ ತ್ರಿಧೈವಂ ಪ್ರತಿಪೇದಿರೇ ॥

"ಯೋಗಿಗಳು ನನ್ನನ್ನು ಕುರಿತು ಪ್ರತ್ಯಕ್ಷವಣಡಿಕೊಳ್ಳಲು ಯೋಗಾ ವಸ್ಥೆಯಲ್ಲಿ ಕುಳಿತಾಗ, ಈ ಯೋಗಾರಂಭಾವಸ್ಥೆಯಲ್ಲಿ ಕುದುರೆಯಂತೆ ಕೆನೆಯುವವಳೂ, ನಾಡೀಮಧ್ಯದಲ್ಲಿ ನಿಂತು ಉಪಾಸಿಸುವ ಅವಸ್ಥೆಯಲ್ಲಿ ರಥದಂತೆ ಧ್ವನಿಮಾಡುವವಳೂ. ಕೊನೆಯಲ್ಲಿ ಬ್ರಹ್ಮರಂಧ್ರಕ್ಕೆ ಯೋಗಿಯ ಪ್ರಜ್ಞೆಯು ಮುಟ್ಟಿದಾಗ. ಆನೆಯಂತೆ ಘೀಂಕಾರ ಮಾಡುವವಳೂ ಆಗಿ' ಗೋಚರಿಸುವುದರಿಂದ ಪರಮ ಯೋಗಿಗಳು ನನ್ನನ್ನು ಈ ಮೂರು ಶ್ರೀನಾಮಗಳಿಂದ ಶರಣು ಹೊಂದಿದರು." ಎಂಬುದು ಸ್ವಯಂ ಲಕ್ಷ್ಮೀ ದೇವಿಯ ವಾಕ್ಯವಾಗಿದ್ದು ಪ್ರಕೃತ ಮಂತ್ರಕ್ಕೆ ವ್ಯಾಖ್ಯಾನವಾಗಿದೆ.

## ೨ ನಂಜೀಯರರ ವ್ಯಾಖ್ಯಾನ

ಪ್ರಕೃತ ಮಂತ್ರಕ್ಕೆ ನಂಜೀಯರರೆಂಬ ಶ್ರೀರಂಗನಾಥಮುನಿಗಳ ವ್ಯಾಖ್ಯಾನ ಇನ್ನೂ ಬೇರೇ ರೀತಿಯದಾಗಿದೆ. ಅಶ್ವಪೂರ್ವಾಂ, ರಥ ಮಧ್ಯಾಂ, ಹಸ್ತಿನಾದ ಪ್ರಬೋಧಿನೀಂ, ಎಂಬ ವಿಶೇಷಣಗಳಿಗೆ ಈ ಆಚಾರ್ಯರ ಅರ್ಥ ಹೀಗಿದೆ:

೧) ಅಶ್ವವೆಂದರೆ (ಅಶೂ-ವ್ಯಾಪ್ತೌ ಎಂಬ ಧಾತುವಿನಂತೆ) ಸರ್ವ ವ್ಯಾಪನಶೀಲನಾದ ಭಗವಂತ. ಇವನು ಯಾವಳಿಗೆ ಮೊದಲಾಗಿ (ಪೂರ್ವ ಪ್ರದೇಶದಲ್ಲಿ)ರುವನೋ ಅವಳೇ ಅಶ್ವಪೂರ್ವಾಳು. ಅಂದರೆ ಜಗತ್ತನ್ನು ವ್ಯಾಪಿಸಿರುವುದು, ರಕ್ಷಿಸುತ್ತಿರುವುದು ನಿಯಮಿಸುವುದು ಮೊದಲಾಗಿ ಎಲ್ಲ ವ್ಯಾಪಾರಗಳಲ್ಲಿ ಭಗವಂತನು ಎಷ್ಟೆಷ್ಟು ಜಾಗರೂಕನಾಗಿದ್ದುಕೊಂಡು, ಆಸಕ್ತನಾಗಿರುವನೋ, ಅಲ್ಲೆಲ್ಲಾ ಅವನೊಡನೆಯೇ ತಾನೂ ಅಷ್ಟೇ ಆಸಕ್ತಿ ಹೊಂದಿದವಳೂ, ಕ್ರಿಯಾಶೀಲಳೂ, ಆಗಿರುವಳು ಲಕ್ಷ್ಮೀದೇವಿ ಎಂಬುದು ಈ ವಿಶೇಷಣದ ಅರ್ಥ.

೨. ರಥವೆಂದರೆ ಮನುಷ್ಯ ಶರೀರ. (ರಂಹ್ ಧಾತುವಿನಿಂದ ಬಂದದ್ದು ಈ ಶಬ್ದ.) ಬಯಕೆಗಳನ್ನು ಮಾಡುವುದು ಶರೀರರೂಪವಾದ 'ರಥ'ದ ಧರ್ಮ. ಇಂಥ ಶರೀರಮಧ್ಯದಲ್ಲಿ, ಹೃದಯ ಗುಹೆಯಲ್ಲಿ (ಭಗವಂತನೊಡನೆ) ಅಂತರ್ಯಾಮಿತ್ವದಿಂದಿರುವವಳು, ಲಕ್ಷ್ಮೀದೇವಿ. ಅಥವಾ ಸರ್ವಶರೀರಿಯಾದ ಭಗವಂತನೇ ಶರೀರ, ರಥ, ಅವನ ವಕ್ಷಃಸ್ಥಳದಲ್ಲಿ ನಿತ್ಯವಾಸಮಾಡುತ್ತಾ ಇರುವವಳು ರಥಮಧ್ಯಳು.

೩. ಹಸ್ತಿನಾದವೆಂದರೆ, ಗಜೇಂದ್ರನ ಆರ್ತನಾದ, (ಇದು ಆನೆಯ ಜನ್ಮದಲ್ಲಿದ್ದ ಇಂದ್ರದ್ಯುಮ್ನ ರಾಜನಿಗೆ ಭಗವಂತನು ಒಲಿದ ಗಜೇಂದ್ರ ವರದಾವತಾರವನ್ನು ನೆನಪಿಸುವ ವಿಶೇಷಣವೆಂದು ಭಾವ.) ಕಷ್ಟದಲ್ಲಿರುವ ಇತರ ಎಲ್ಲ ಭಕ್ತರ ಆರ್ತನಾದಕ್ಕೂ ಉಪಲಕ್ಷಣ. ಇಂಥವರ ಮೊರೆಯನ್ನು ಕೇಳಿ, ಭಗವಂತನಿಗಿಂತಲೂ ಮುಂಚೆ ಎಚ್ಚರಗೊಳ್ಳುವವಳು; ಅಂದರೆ

ಆರ್ತ ಸಂರಕ್ಷಣದಲ್ಲಿ ಭಗವಂತನಿಗಿಂತಲೂ ಹೆಚ್ಚು ಜಾಗ್ರತಳು, ಎಂಬ ಮನೋಹರ ವಿವರಣೆಯನ್ನು ಈ ಆಚಾರ್ಯರು ಮಾಡಿದ್ದಾರೆ.

## ೩ "ಶ್ರಿಯಂ ದೇವೀಂ"

ಇನ್ನು, ಮುಂದಿನ ವಿಶೇಷಣ, ಲಕ್ಷ್ಮೀದೇವಿಯನ್ನು ಶ್ರೀ ಎಂದು ಕರೆದಿರುವುದು. ಇಲ್ಲಿ ವಿದ್ಯಾರಣ್ಯರು ಲಕ್ಷ್ಮೀ ಎಂದಷ್ಟೇ ವಿವರಣೆ ನೀಡಿದ್ದಾರೆ.

ಲಕ್ಷ್ಮೀತಂತ್ರದಲ್ಲಿ ಈ ಶಬ್ದಕ್ಕೂ ವಿಶೇಷ ವಿವರಣೆಗಳಿವೆ. ಈ ಶಬ್ದದ ನಿರ್ವಚನವನ್ನು ಆರು ಬಗೆಗಳಲ್ಲಿ ಮಾಡಿದೆ.

ಶೃಣೋಮಿ ಕರುಣಾಂ ವಾಚಂ ಶೃಣಾಮಿ ದುರಿತಂ ಸತಾಂ ।
ಶೃಣಾಮಿ ಚ ಗುಣೈರ್ವಿಶ್ವಂ ಶರಣಂ ಚಾಸ್ಮಿ ಶಾಶ್ವತಂ ॥
ಶರೀರಂ ಚ ಹರೇರಸ್ಮಿ ಶ್ರದ್ಧಯಾ ಚೇಪ್ಸಿತಾ ಸುರೈಃ ।
ಶಾಂತಾಧಾರಪದಸ್ಥಾಸ್ಮಿ ಪಶ್ಯಾ ರನ್ತೀ ಚ ನಾಭಿಜಾ ॥
ಪ್ರೇರಣೀ ಚ ಧಿಯಾಂ ಮಧ್ಯಾ ಸೃಷ್ಟಿರ್ವಕ್ತ್ರೀ ತಥಾರ್ಣಸಾಂ ।
ಚತುಃಸ್ಥಾನಸ್ಥಿತಾ ಚೈವಂ ಶಾಂತಾಪಶ್ಯಾದಿಭೇದಿನೀ ॥
ಶ್ರಯಾಮಿ ಶ್ರಯಣೀ ಯಾಸ್ಮಿ ಶಕ್ತಿಭೀ ರೇಮಿ ರಾಮಿ ಚ ।
ಶಕ್ತೇರುಜ್ಜ್ವಲಿನೀ ಚಾಸ್ಮಿ ಶಂತಮಾ ರತಿರೀಪ್ಸಿತಾ ॥
ಇತಿ ತ್ರಯ್ಯಂತ ತತ್ವಜ್ಞಾಃ ಶ್ರಿಯಂ ಮಾಂ ವಿದುರಂಜಸಾ ।
(ಶ್ಲೋ. ೭೯-೮೩.)

ಇಲ್ಲಿನ ಅರ್ಥಗಳನ್ನು ಹೀಗೆ ಸಂಗ್ರಹಿಸಬಹುದು :

೧) ಭಕ್ತರ ಆರ್ತನಾದವನ್ನು ಕೇಳುವವಳು. (ಶೃಣೋಮಿ)—(ಶ್ರು-ಶ್ರವಣೇ ಧಾತುವಿನಿಂದ.)

೨) ಅವರ ಪಾಪಗಳನ್ನು ಹೋಗಲಾಡಿಸುವವಳು. (ಶೃಣಾಮಿ)—(ಶೃ-ಹಿಂಸಾಯಾಂ ಧಾತುವಿನಿಂದ.)

೩) ಜಗತ್ತನ್ನು ತನ್ನ ಗುಣಗಳಿಂದ ಪೋಷಿಸಿ ಬೆಳೆಸುವವಳು. (ಶೃ-ವಿಸ್ತಾರೇ ಧಾತುವಿನಿಂದ)-(ಶೃಣಾಮಿ)

೪) ಜಗತ್ತಿಗೆ ಎಂದೆಂದೂ ಶರಣ್ಯಳಾಗಿರುವವಳು, ಶ್ರೀದೇವಿ.

೫) ಶ್ರೀಹರಿಯ ಶರೀರಭೂತಳಾಗಿರುತ್ತಾ, ಶ್ರೀದೇವಿಯೆನಿಸಿರುವವಳು.

೬) ದೇವತೆಗಳಿಂದ ಬಹು ಶ್ರದ್ಧೆಯೊಡನೆ ಪ್ರಾರ್ಥಿಸಲ್ಪಡುವವಳಾದ್ದರಿಂದಲೂ ಶ್ರೀದೇವಿ. (ಇಲ್ಲಿ ಶ್ರದ್ಧಾ ಪದದ ಶಕಾರ, ರೇಫಗಳೊಡನೆ ಈಪ್ಸಿತ ಶಬ್ದದ 'ಈ' ಕಾರವನ್ನೂ ಕೂಡಿಸಿಕೊಂಡರೆ, ಶ್ರೀ ಶಬ್ದ ಆಗುವುದೆಂದು ನಿಷ್ಪತ್ತಿ.)

೭) ಮೂಲಾಧಾರ ಸ್ಥಾನದಲ್ಲಿ ಶಾಂತಳಾಗಿರುತ್ತಾ, ನಾಭಿಯಲ್ಲಿ ಪಶ್ಯಾ ರೂಪದಲ್ಲಿರುತ್ತಾ ರಂತೀ ಎನಿಸಿ, ಮಧ್ಯಸ್ಥಾನದಲ್ಲಿ ಬುದ್ಧಿಗೆ ಪ್ರೇರಕಳಾಗಿಯೂ, ಬಾಯಲ್ಲಿ ಸೃಷ್ಟಿಯಾಗಿಯೂ —ಅಂದರೆ ಶಬ್ದೋಚ್ಚಾರ ರೂಪದಲ್ಲಿಯೂ ಇರುವುದರಿಂದ ಇವಳಿಗೆ ಶ್ರೀದೇವಿಯೆಂದು ಹೆಸರಾಯಿತು. (ಇಲ್ಲಿ ಶಾಂತಾ ಎಂಬ ಪದದಿಂದ ಶ ಕಾರವನ್ನೂ, ರಂತೀ ಎಂಬುದರ ರೇಫವನ್ನೂ, ಪ್ರೇರಣೀ ಪದದಿಂದ ಈ ಕಾರವನ್ನೂ ಕೂಡಿಸಿಕೊಂಡರೆ, 'ಶ್ರೀ' ಶಬ್ದವಾಗುವುದೆಂದು ಭಾವ. ಅಂದರೆ ಸಮಸ್ತ ವರ್ಣಮಾಲೆಗೂ, ಶಬ್ದ ಶಾಸ್ತ್ರಕ್ಕೂ, ಶಬ್ದೋಚ್ಚಾರಣೆಗೂ, ಅಧಿದೇವತೆಯಾದ ವಾಗ್ದೇವತೆ ಎಂಬ —ಹಿಂದೆ ವಿವರಿಸಿದ ಅರ್ಥವೇ ಇಲ್ಲಿಯೂ ಕಾಣಲ್ಪಡತಕ್ಕದ್ದು.)

೮) ಭಕ್ತರಿಗೆ ಇಷ್ಟಪ್ರಾಪ್ತಿಯನ್ನೂ, ಅನಿಷ್ಟನಿವೃತ್ತಿಯನ್ನೂ ಮಾಡಲು ಶಕ್ತಿಯುಳ್ಳವಳಾದುದರಿಂದಲೂ, ಆಶ್ರಿತ ಪಾಪಗಳನ್ನು ತೊಡೆದು ಅವರ ಸರ್ವಕಾಮಗಳನ್ನೂ ಅನುಗ್ರಹಿಸುವವಳೂ ಆದುದರಿಂದಲೂ ಇವಳು

ಶ್ರೀದೇವಿ. (ಶೇಮಿ —ಆಶ್ರಿತಪಾಪಾನಿ ಕ್ಷಿಣೋಮಿ; ಶಾಮಿ —ಸರ್ವಾನ್ ಕಾಮಾನ್ ದದಾಮಿ.)

೯) ಶ್ರೀವಿಷ್ಣುವನ್ನು ಭಕ್ತರ ಸಲುವಾಗಿ ಆಶ್ರಯಿಸುವವಳು (ಶ್ರಯಾಮಿ ವಿಷ್ಣುಂ), ಶ್ರೀದೇವಿ.

೧೦) ಜಯಾ ಮೊದಲಾದ ತನ್ನ ಅನುಚರ ಶಕ್ತಿಗಳಿಂದ ಆಶ್ರಯಿಸಲ್ಪಡುವವಳು. (ಶ್ರಿಯಣೀಯಾಸ್ಮಿ ಶಕ್ತಿಭಿಃ.)

೧೧) ಪರಮಾತ್ಮನಾದ ವಿಷ್ಣುವಿನ ಶಕ್ತಿಯನ್ನು ಉಜ್ವಲಿಸಿ, ಪ್ರಕಾಶಿಸುವಂತೆ ಮಾಡುವವಳು. (ಶಕ್ತೇರುಜ್ಜ್ವಲಿನೀ)

೧೨) ಮಂಗಳ ಸ್ವರೂಪಿಣಿಯಾಗಿರುವವಳು. (ಶಂತಮಾ.)

೧೩) ಆನಂದ ಸ್ವರೂಪಳು, ಪ್ರಾರ್ಥನೀಯಳು. (ರತಿಃ, ಈಪ್ಸಿತಾ.) —(ಈ 'ಶಂತಮಾ, ರತಿಃ, ಈಪ್ಸಿತಾ'ಗಳ ಮೊದಲ ಮೂರಕ್ಷರಗಳನ್ನು 'ಶ್, ರ್, ಈ' = ಶ್ರೀ ಎಂದು ನಿಷ್ಪತ್ತಿಯನ್ನು ಇಲ್ಲಿ ಉದ್ದೇಶಿಸಿದೆ.)

ಹೀಗೆ ಈ ಅರ್ಥಗಳು ತ್ರೈಯ್ಯಂತ ತತ್ವಜ್ಞರಿಂದ— ವೈದಿಕರಿಂದ— ತಿಳಿಯಲ್ಪಟ್ಟವೆಂದು ಹೇಳಿದೆ.

ಅಪಿ ನಾಥೋ ವಿಭೂತಿರ್ಮೇ ತ್ರೈಲೋಕ್ಯಂ ಸೇಶ್ವರಾಮರಂ ।
ಪರಾಂ ಮದೀಯ ವರ್ಣಸ್ಯ ಕಲಾಂ ನಾರ್ಹತಿ ಷೋಡಶೀಂ ॥
ಆದ್ಯೇ ಪದತ್ರಯೇ ವರ್ಣಾಃ ಶ್ರೀಂ ಹ್ರೀಂ ಓಂ ಇತಿ
ಮನ್ಮಯಾಃ ।
ಏಷ ವೈಭಿಃಚತುರ್ಭಿಸ್ತ್ಯೈಃ ಮದೀಯಂ ಧಾರ್ಯತೇ ವಪುಃ ॥
ಏಕೈಕಶೋ ದ್ವಿಶೋ ವಾಪಿ ತ್ರಿಶೋ ವಾ ಸರ್ವ ಏವ ವಾ ।
ಜಪ್ತಾರ್ಚಿತ ಹುತಧ್ಯಾತಾಃ ಸಾಧಯೇಯುರಭೀಪ್ಸಿತಂ ॥
ಪ್ರಯತ್ನೇನೈವ ಗೋಪ್ಯಂ ತತ್ ಏತದ್ರತ್ನಚತುಷ್ಟಯಂ ।
ಅನ್ಯೋನ್ಯಫಲಿತಂ ಸರ್ವೈಃ ಆಶೇಷೈರಧಿಕಂ ಗುಣೈಃ ॥
(ಶ್ಲೋ. ೮೭–೮೮.)

"ನನ್ನ ವೈಭವಗಳನ್ನು ವರ್ಣಿಸುವ ಮಂತ್ರಗಳೆಲ್ಲಿ ಮುಖ್ಯವಾದ 'ಲಕ್ಷ್ಮೀ' ಎಂಬುದೂ, ದೇವತೆಗಳನ್ನೂ ದೇವಮುಖ್ಯರನ್ನೂ ಒಳಗೊಂಡು ಮೂರು ಲೋಕವೂ, ನನ್ನ 'ಶ್ರೀಃ' ಎಂಬ ನಾಮದ ಹದಿನಾರರ ಒಂದು ಭಾಗಕ್ಕೆ ಸಹ ಸರಿಸಮವಾಗಲಾರದು. ಆದಿಕಾಲದಲ್ಲುಂಟಾದ 'ಶ್ರೀಂ', 'ಹ್ರೀಂ', 'ಓಂ' ಎಂಬ ಮೂರುಪದಗಳೂ ನನ್ನನ್ನೇ ಕುರಿತು ಹೇಳತಕ್ಕವು. ಈ ಮೂರರಲ್ಲೂ, ಅಶ್ವಪೂರ್ವಾ, ರಥಮಧ್ಯಾ, ಹಸ್ತಿನಾದಪ್ರಬೋಧಿನೀ, ಶ್ರೀಃ, ಎಂಬ ಈ ನಾಲ್ಕು ಶ್ರೀನಾಮಗಳಲ್ಲೂ ನನ್ನ ದಿವ್ಯಶರೀರವು ಧರಿಸಲ್ಪಡುವುದು. ಈ ನಾಲ್ಕು ಶ್ರೀನಾಮಗಳೂ, ಒಂದೊಂದಾಗಿಯಾಗಲಿ, ಎರಡೆರಡಾಗಿ ಆಗಲಿ, ಮೂರು ಮೂರಾಗಿಯಾಗಲಿ. ನಾಲ್ಕೂ ಸೇರಿಯಾಗಲಿ, ಜಪಮಾಡಲ್ಪಟ್ಟರೂ. ಅರ್ಚಿಸಲ್ಪಟ್ಟರೂ, ಹೋಮದಲ್ಲಿ ವಿನಿಯುಕ್ತವಾದರೂ, ಇಷ್ಟಾರ್ಥಗಳನ್ನು ಸಾಧಿಸಿಕೊಡುವುದು. ಒಂದರೊಡನೊಂದು ಸೇರಿ ಫಲಕೊಡುವವೂ. ಗುಣಪುಷ್ಕಲವೂ. ನಾಲ್ಕು ರತ್ನಗಳಂತಿರುವವೂ ಆದ ಈ ಶ್ರೀನಾಮಗಳನ್ನು ಬಹು ಪ್ರಯತ್ನದಿಂದ (ಅನಧಿಕಾರಿಗಳ ಕಿವಿಯುಲ್ಲಿ ಬೀಳಗೊಡದೆ) ರಕ್ಷಿಸತಕ್ಕದ್ದು."

ಅಂದರೆ "ಅಶ್ವಪೂರ್ವಾ"ದಿ ಶ್ರೀನಾಮತ್ರಯಗಳೂ ಬೀಜಾಕ್ಷರಯುಕ್ತವಾಗಿ ಮಂತ್ರಪ್ರಾಯವೆಂದು ಹೇಳಿದಂತಾಗಿದೆಯಲ್ಲದೆ "ಶ್ರೀ"ಕಾರ ಸಮವೆಂದೂ ಹೇಳಿದಂತಾಯಿತು.

## ೪ ಅಹಿರ್ಬುಧ್ನ್ಯ ಸಂಹಿತೆಯಲ್ಲಿ "ಶ್ರೀ"ನಾಮ

ಇದೇ "ಶ್ರೀ"ನಾಮಕ್ಕೆ ಇನ್ನೊಂದು ಪಾಂಚರಾತ್ರಸಂಹಿತೆಯಲ್ಲೂ ಇದೇ ಮಾದರಿ ಅರ್ಥಗಳನ್ನು ಹೇಳಿದೆ:

ಶೃಣಾತಿ ನಿಖಿಲಾನ್ ದೋಷಾನ್ ಶ್ರೀಣಾತಿ ಚ ಗುಣೈರ್ಜಗತ್ ।

ಶ್ರೀಯಃತೇಜಾಖಿಲೈರ್ನಿತ್ಯಂ ಶ್ರಯತೇ ಚ ಪರಂ ಪದಂ ॥
ಶ್ರಯಂತೀಂ ಶ್ರೀಯಮಾಣಾಂ ಚ ಶೃಣತೀಂ ಶೃಣ್ವತೀಮಪಿ ॥

(೧) ಚೇತನರ ಎಲ್ಲಾ ದೋಷ ನಿವಾರಕಳು. (೨) ಲೋಕಸ್ಥರಿಗೆ ಸದ್ಗುಣಗಳನ್ನುಂಟುಮಾಡುವವಳು. (೩) ಎಲ್ಲರಿಂದಲೂ ಸದಾ ಆಶ್ರಯಿಸಲ್ಪಡುವವಳು. (೪) ತಾನೂ (ನಮ್ಮಪರವಾಗಿ) ಭಗವಂತನನ್ನು ಆಶ್ರಯಿಸುವವಳು. (೫) ಸ್ವಯಂ ಭಗವಂತನನ್ನಾಶ್ರಯಿಸಿದವಳೂ. (೬) ಬೇರೆಯವರಿಂದ ಆಶ್ರಯಿಸಲ್ಪಡುವವಳೂ. (೭) ಆಶ್ರಯಿಸಿದವರ ದೋಷ ಹೋಗಲಾಡಿಸುವವಳೂ (೮) ಭಕ್ತರ ಮೊರೆ ಕೇಳುವವಳೂ ಆದವಳು, ಶ್ರೀದೇವಿ.

ಶ್ರೀಶಬ್ದಕ್ಕೆ ಸಮಾನಾರ್ಥಕವಾದ 'ಮಾ' ಶಬ್ದಾರ್ಥವನ್ನು, ಪ್ರಸಂಗಾತ್, ಲಕ್ಷ್ಮೀತಂತ್ರವು ವಿವರಿಸಿರುವುದನ್ನು ನೋಡೋಣ: "ಶ್ರೀರ್ಮಾದೇವೀಜುಷತಾಂ" ಎಂಬ ಮೂಲದಲ್ಲಿ ಶ್ರೀಃ = ಮಾ, ಎಂದು ಗ್ರಹಿಸುವುದೂ ಉಂಟಾದ್ದರಿಂದ.)

ಮಿಮೇ ಮೀಯೇಽಖಿಲೈರ್ಮಾನೈಃ ಮಯಿ ಮಾತಿ ಜಗತ್ ಕ್ಷಯೇ ।
ಆತ್ಮೇಶ್ವರವತೀ ಚಾಹಂ ವ್ಯಾಪ್ತಾಯಾಂ ಮಯಿ ಮೇತಿ ಧೀಃ ॥

"ಎಲ್ಲವನ್ನೂ ಅಳೆಯುತ್ತೇನೆ. ಎಲ್ಲಾ ಪ್ರಮಾಣಗಳಿಂದಲೂ ಅಳೆಯಲ್ಪಡುತ್ತೇನೆ. ಪ್ರಳಯಕಾಲದಲ್ಲಿ ಜಗತ್ತು ನನ್ನಲ್ಲಿ ಅಳವಡುತ್ತದೆ. ಜೀವಾತ್ಮರನ್ನೂ ಈಶ್ವರನನ್ನು ಉಳ್ಳವಳಾದ ನಾನು ಸರ್ವವ್ಯಾಪಿನಿಯಾದುದರಿಂದಲೂ ನನ್ನನ್ನು 'ಮಾ' ಎನ್ನುತ್ತಾರೆ." ಎಂದು ಲಕ್ಷ್ಮೀದೇವಿಯು ವಿವರಿಸುವಂತಿದೆ ಈ ವಿವರಣೆ.

## ೫ "ದೇವೀ"

ಈ ಶ್ರೀನಾಮವು ದಿವ್ ಧಾತುವಿನಿಂದ ಬಂದಿದ್ದು. "ಕ್ರೀಡಾ, ವಿಜಿಗೀಷಾ, ವ್ಯವಹಾರ, ದ್ಯುತಿ, ಸ್ತುತಿ, ಮೋದ, ಮದ, ಸ್ವಪ್ನ, ಕಾಂತಿ, ಗತಿಷು" ಎಂಬಂತೆ ೧೦ ಅರ್ಥಗಳನ್ನು ಹೊಂದಿದೆ. ಸೃಷ್ಟಿಸ್ಥಿತ್ಯಾದಿ ಜಗದ್ವ್ಯಾಪಾರವೆಲ್ಲ ಭಗವಂತನಿಗೆ "ಕ್ರೀಡಾ ಹರೇರಿದಂಸರ್ವಂ" ಎಂಬಂತೆ, ಇವಳಿಗೂ ಕ್ರೀಡೆಯಾಗಿರುವುದರಿಂದ ಇವಳೂ 'ದೇವಿ.' ಜೀವಕೋಟಿಗಳಲ್ಲಿ ಎಲ್ಲರೂ ಇವಳ ಗುಣಗಳಿಗೆ ಸೋಲುವಂತೆ, ಇವಳು ಗುಣದಿಂದಲೇ ಎಲ್ಲರನ್ನೂ ಗೆಲ್ಲತಕ್ಕವಳು. ("ಜಿತಂ ತೇ" ಎಂದು ಭಗವಂತನಿಗೆ ಹೇಳಿದ್ದೇ ಇವಳಿಗೂ ಅನ್ವಯ.) ವೇದಶಾಸ್ತ್ರಗಳಿಂದ ಲೋಕವ್ಯವಹಾರ, ಮರ್ಯಾದೆಯನ್ನೇರ್ಪಡಿಸುವವಳು. ತೇಜೋಮಯವಾದವಳು; ಕಾಂತಿಯುಳ್ಳವಳು. ಸ್ತುತಿಸಲ್ಪಡುವವಳು ಅಥವಾ ಭಗವಂತನಿಗೆ ಸ್ತೋತ್ರರೂಪವಾದ ವೇದವಾಕ್ ಸ್ವರೂಪಳಾಗಿರುವವಳು. ಸಂತೋಷದಿಂದಿರುವವಳು. ವಾಙ್ಮನಗೋಚರವಾದ ಆನಂದದಿಂದಿರುವವಳು. (ಭಗವಂತನಿಗೂ ಕಾಂತೆಯಲ್ಲವೇ !) ಲೋಕಕ್ಕೆ ಗತಿ, ದಾರಿದೋರುವವಳು ಎಂಬೀ ಅರ್ಥಗಳು ಇಲ್ಲಿ ಸ್ಫುರಿಸುವುವು.

ಲಕ್ಷ್ಮೀತಂತ್ರದಲ್ಲಿ ಈ ಕೆಳಗಿನ ಹೆಚ್ಚಿನ ವಿವರಣೆಗಳಿವೆ :

ಪ್ರದಾತ್ರೀ ಸರ್ವಕಾಮಾನಾಂ ಅವಿತ್ರೀ ಸರ್ವಕರ್ಮಣಾಂ ।
ದೇವಸ್ಯ ದಯಿತಾ ಚಾಸ್ಮಿ ದೇವೀಂ ಮಾಂ ಮುನಯೋ ವಿದುಃ ॥
(ಶ್ಲೋ. ೯೦)

ಎಲ್ಲಾ ಇಷ್ಟಾರ್ಥಗಳನ್ನೂ ಕೊಡುವವಳೂ, ಎಲ್ಲಾ ಕರ್ಮಗಳನ್ನೂ ರಕ್ಷಿಸುವವಳೂ, ಭಗವಂತನಿಗೆ ಪ್ರಿಯೆಯೂ ಆಗಿರುವುದರಿಂದ ಇವಳನ್ನು ಮುನಿಗಳು ದೇವೀ ಎಂದು ತಿಳಿದಿದ್ದಾರೆಂದು ಅರ್ಥ.

## ನಾಲ್ಕನೆಯ ಮಂತ್ರ

## "ಕಾಂ ಸೋಽಸ್ಮಿತಾಂ"

ಕಾಂ ಸೋಽಸ್ಮಿತಾಂ ಹಿರಣ್ಯಪ್ರಾಕಾರಾಂ
ಆರ್ದ್ರಾಂ ಜ್ವಲಂತೀಂ ತೃಪ್ತಾಂ ತರ್ಪಯನ್ತೀಂ।
ಪದ್ಮೇ ಸ್ಥಿತಾಂ ಪದ್ಮವರ್ಣಾಂ
ತ್ವಾಮಿಹೋಪಹ್ವಯೇ ಶ್ರಿಯಂ ॥೪॥

(ಅರ್ಥ :) "ಶಬ್ದಿಸುವವಳೂ (ಕಾಂ), ಪರಮಾತ್ಮನ ಮಹಿಮೆಗೆ ಕಾರಣಳಾಗಿರುವವಳೂ (ಸೋಽಸ್ಮಿತಾಂ), ಸುಂದರ ಸ್ವಭಾವವುಳ್ಳವಳೂ, ಕರುಣೆಯಿಂದ ಒದ್ದೆಯಾದ ಹೃದಯವುಳ್ಳವಳೂ, ತೇಜಸ್ಸಿನಿಂದ ಮಿಂಚುವ ವ್ಯಕ್ತಿತ್ವವುಳ್ಳವಳೂ, ನಿತ್ಯತೃಪ್ತಳೂ, ಭಕ್ತರನ್ನೂ ತೃಪ್ತಿಪಡಿಸುವವಳೂ, ಪದ್ಮದಲ್ಲಿ ನಿಂತಿರುವವಳೂ, ಪದ್ಮದ ಬಣ್ಣವುಳ್ಳವಳೂ. ಶ್ರೀಶಬ್ದವಾಚ್ಯಳೂ, ಆದ ನಿನ್ನನ್ನು, ಎಲೈ ತಾಯಿಯೇ, ನನ್ನಲ್ಲಿಗೆ ಆಹ್ವಾನಿಸುತ್ತೇನೆ."

(ಅಥವಾ) "ಕಾಂ —ಮನಸ್ಸುವಾಕ್ಕುಗಳಿಗೆ ತಿಳಿಯದವಳೂ, ಸೋಽಸ್ಮಿತಾಂ —ಕೊಂಚ ಮಂದಹಾಸ ಬೀರುವವಳೂ...... ಆದ ನಿನ್ನನ್ನು ಕರೆಯುತ್ತೇನೆ."

(ಅಥವಾ) "ಕಾಂ —ಸುಖಸ್ವರೂಪಳೂ, ಸೋಽಸ್ಮಯಾಂ (ಪಾಠಾಂತರದಲ್ಲಿ) —ನಗೆಬೀರುವವಳೂ... ಕರೆಯುತ್ತೇನೆ.

ವಿವರಣೆ : ಲಕ್ಷ್ಮೀದೇವಿಯನ್ನು ಇಲ್ಲಿ ಹಲವು ವಿಚಿತ್ರ ವರ್ಣನೆಗಳಿಂದ ಕೊಂಡಾಡಿರುವುದನ್ನು ಗಮನಿಸೋಣ. ಮೊದಲನೆಯದಾಗಿ ಇವಳನ್ನು ಕಾ ಎಂದು ಕರೆದಿದೆ. ಭಗವಂತನನ್ನು 'ಕಸ್ಮೈದೇವಾಯ' ಋಕ್ಕಿನಲ್ಲಿ ಕಃ ಎಂದು ಕರೆದದ್ದರ ಸ್ತ್ರೀಲಿಂಗರೂಪ ಈ ಶಬ್ದವಾದರೆ, ಅಲ್ಲಿ ಹೇಳಲ್ಪಟ್ಟ ಅರ್ಥಗಳೆಲ್ಲ ಇಲ್ಲೂ ಅನ್ವಯವಾಗುವುವು. ಕ ಇತಿ ಬ್ರಹ್ಮಣೋ ನಾಮ ಎಂಬಂತೆ ಸುಖಸ್ವರೂಪನು ಎಂದು ಭಗವಂತನು ವರ್ಣಿತನಾದರೆ, ಇವಳೂ ಸುಖಸ್ವರೂಪಳೇ, ಕ ಎಂಬುದಕ್ಕೆ (ಕೈಶಬ್ದೇ) "ಶಬ್ದಮಾಡು

ವವಳು" ಎಂದೂ ಅರ್ಥವಿದ್ದು, ಸಕಲ ಶಬ್ದರಾಶಿಗೂ ಮೂಲವಾಗಿ ವಾಗ್ದೇವಿ ಎನಿಸಿದವಳೆಂದೂ ಅರ್ಥವಾಗುತ್ತದೆ. ಸರ್ವಶಬ್ದವಾಚ್ಯಳೆಂದೂ ಆಗಬಹುದು. ಜೀವಾತ್ಮನಿಗೆ ಸುಖವಾದ ಮೋಕ್ಷವನ್ನೂ, ಭಗವತ್ ಕೈಂಕರ್ಯವನ್ನೂ ಕೊಟ್ಟು ಅನುಗ್ರಹಿಸುವಂತೆ, ಭಗವಂತನಿಗೂ ಲೀಲಾ ರೂಪಸುಖವನ್ನು ಕೊಡುವವಳು. ಸ್ವಯಂ ಜ್ಞಾನಾನಂದ ಸ್ವರೂಪಳು.

ನಮಾಮಿ ಭಾರ್ಗವೀಂ ಖ್ಯಾತಿಂ ಸುಖಾಂ ಸೌಮ್ಯಾಂ
ಸುಖಪ್ರದಾಂ ।

ಎಂಬ ಪ್ರಾಚೀನರ ಸೂಕ್ತಿಯಲ್ಲಿ ಇವಳನ್ನೇ ಸುಖಾ, ಸುಖಪ್ರದಾ ಎಂದೂ ಈ ಶಬ್ದವಿವರಣರೂಪದಲ್ಲೇ ಸ್ತುತಿಸಿದೆ.

ಅಥವಾ ತೈತ್ತಿರೀಯ ಉಪನಿಷತ್ತಿನಲ್ಲಿ : (ತೈ. ನಾ. ೩೬)

ಕತಮಾ ಕಾ ಯಾ ಸಾ ಸತ್ಕಾ ಇತಿ ಅಮೃತೇತಿ ವಸಿಷ್ಠಃ ।

ಎಂದು ಕೊಂಡಾಡಲ್ಪಟ್ಟಿರುವಂತೆ, "ಕತಮಾ = ಸುಖತಮಾ, ಕಾ ಯಾ = ಕಾಯರೂಪೇಣ ಪರಿಣತಾ", ಎಂದು ವಿದ್ಯಾರಣ್ಯರು ವಿವರಿಸಿರುವಂತೆ, ಸುಖರೂಪಳೂ, ಶರೀರರೂಪದಲ್ಲಿರುವವಳೂ ಇವಳು, ಅಥವಾ ಭಟ್ಟಭಾಸ್ಕರರು ವಿವರಿಸುವಂತೆ, "ಕತಮಾ.— ಅಶಕ್ಯನಿರ್ಧಾರಣಾ, ಕಾ— ಅವ್ಯಕ್ತ ರೂಪಾ, ಯಾ —ಯಾದೃಶೀ, ಸಾ ಭವತಿ ತಾದೃಶೀ", "ಇಷ್ಟು ಮಾತ್ರದವಳೆಂದು ಮಹಿಮೆಯು ವರ್ಣಿಸಲ್ಪಡಲಾರದಂತೆ ಅವ್ಯಕ್ತಳಾಗಿರುವವಳು" ಎಂದೂ ತಿಳಿಯಬಹುದು.

ಇಲ್ಲೇ ಹಿಂದಿನ (೨೯ನೇ) ಮಂತ್ರದಲ್ಲಿ ಭಗವಂತನನ್ನು ಹೀಗೆಯೇ "ಕಿಂ ಕಂ... ಕತಮಃ" "ಸ್ವಯಂಭೂಃ" —ಇತ್ಯಾದಿ ವರ್ಣಿಸಿರುವುದರಿಂದ, ಇಂಥದೇ ವರ್ಣನೆ ಲಕ್ಷ್ಮೀದೇವಿಗೂ ಇಲ್ಲಿ ಯುಕ್ತವಲ್ಲವೇ ? (ಸರ್ವವಸ್ತು ಸ್ವರೂಪನಾದ ಭಗವಂತನನ್ನು ಯಾರೆಂದು ತಿಳಿಯಲಾರದೆ "ಏನು ? ಯಾವನು ? ಎಂಥವನು ?" ಎಂದು ಪರಮರ್ಷಿಗಳೂ ಆಶ್ಚರ್ಯಪಟ್ಟು ಹುಡುಕುವಂತೆ, ಇವಳನ್ನೂ ಹಾಗೇ ವರ್ಣಿಸಿ ಹುಡುಕುವುದೂ ಯುಕ್ತವಾಗಿದೆಯಲ್ಲವೆ !)

## ೧ ಲಕ್ಷ್ಮೀತಂತ್ರದಲ್ಲಿ 'ಕಾಂ'

ಲಕ್ಷ್ಮೀತಂತ್ರದಲ್ಲಿ ಇದನ್ನೇ ಹೀಗೆ ವಿವರಿಸಿದೆ.

ಶಬ್ದಾಯೇ ಸರ್ವಭೂತಾನಾಂ ಅಂತಸ್ಥಾ ಚಿನ್ಮಯೀ ಸದಾ ।
ಕಾಯೇ ಚ ನಿಖಿಲೈರ್ವೇದೈಃ ಅನ್ವಿಷ್ಯೇ ಕೇತಿ ಚಾಖಿಲೈಃ ॥
ಬ್ರಹ್ಮರೂಪಧರಾಚಾಹಂ ಜಟಾಮಂಡಲ ಧಾರಿಣೀ ।
ಸೃಜಾಮಿ ವಿವಿಧಾನ್ ಭಾವಾನ್ ಸ್ವಾಧ್ಯಾಯಾಧ್ಯಾಯ
ತತ್ಪರಾನ್ ॥
ಅತಃ ಕಾಮಿತಿ ಮಾಂ ಪ್ರಾಹುಃ ಮುನಯೋ ವೇದಪಾರಗಾಃ ॥
(ಶ್ಲೋ. 91–93)

"ಜ್ಞಾನಾನಂದ ಮಯಳಾಗಿದ್ದುಕೊಂಡು ಎಲ್ಲಾ ಪ್ರಾಣಿಗಳಲ್ಲೂ ನಾನೇ ಶಬ್ದಿಸುವೆನು, ಎಲ್ಲಾ ವೇದಗಳಿಂದಲೂ ಶಬ್ದಿಸಲ್ಪಡುವವಳೂ ನಾನೇ. 'ಯಾವಳಿವಳು' (ಕಾ ?) ಎಂದು ಎಲ್ಲರಿಂದಲೂ ಹುಡುಕಲ್ಪಡುವವಳೂ ನಾನೇ." (ಅಥವಾ 'ಕ' ಶಬ್ದವಾಚ್ಯನಾದ ಚತುರ್ಮುಖಬ್ರಹ್ಮನಲ್ಲಿರುತ್ತಾ, ವೇದಗಳನ್ನು ಅವನ ಮುಖದ್ವಾರಾ ಶಬ್ದಿಸಿ, ವಿಧವಿಧವಾದ ಲೋಕಗಳನ್ನು ಸೃಷ್ಟಿಸುವವಳೂ ನಾನೇ — ಎಂದೂ ಅರ್ಥ.) "ಜಟಾಮಂಡಲಗಳನ್ನು ಧರಿಸಿ, ಬ್ರಹ್ಮರೂಪದಲ್ಲಿರುತ್ತಾ, ವೇದಗಳನ್ನುಚ್ಚರಿಸುತ್ತಾ ವಿಧವಿಧವಾದ ಭೂತರಾಶಿಗಳನ್ನೆಲ್ಲ ಸೃಷ್ಟಿಸುತ್ತೇನೆ. ಈ ನಾಲ್ಕರ್ಥಗಳನ್ನು ಅರಿತೇ ವೇದದ (ಅರ್ಥದ) ದಡವನ್ನು ಕಂಡುಕೊಂಡ ಮಹಾಮುನಿಗಳು ನನ್ನನ್ನು 'ಕಾ' ಎಂದು ಕರೆಯುತ್ತಾರೆ."

"ಸಂಸಾರಸಾಗರ ನಿಮಗ್ನೈಃ ಸ್ವೋತ್ತರಣಾಯ ಪ್ರಷ್ಟವ್ಯಾಂ" "ಸಂಸಾರಸಾಗರವನ್ನು ದಾಟಿಸುವವಳು ನನಗೆ ಯಾರುಂಟು ?" ಎಂದು ಚೇತನರಿಂದ ಹುಡುಕಲ್ಪಡುವವಳು, ಎಂದು ನಂಜೀಯರರ ವಿವರಣೆ.

## ೨ ಸೋಽಸ್ಮಿತಾಂ

ಈ ಶಬ್ದಕ್ಕೆ "ಉತ್ಕೃಷ್ಟ ಸ್ಮಿತೇನ ಸಹಿತಾಂ" ಎಂದು ಪೃಥ್ವೀಧರಾಚಾರ್ಯರೂ, "ಉತ್–ಉದ್ಗತಂ ಯತ್ ಸ್ಮಿತಂ ಹಾಸಃ ತೇನ ಸಹಿತಾಂ" ಎಂದು ವಿದ್ಯಾರಣ್ಯರೂ ವ್ಯಾಖ್ಯಾನ ಮಾಡಿರುತ್ತಾರೆ. ಕೊಂಚ ಮಂದಹಾಸವುಳ್ಳವಳು, ನಗೆಮುಖದವಳು ಎಂದರ್ಥ. ನಂಜೀಯರರ ಭಾಷ್ಯದಲ್ಲಿ "ಉತ್‌ಸ್ಮಯಂ ಸಹಿತಾಂ" ಎಂದು ಇದೇ ಅರ್ಥ ಹೇಳುವಾಗ 'ಸೋಽಸ್ಮಯಾಂ' ಎಂಬ ಪಾಠವಿರುತ್ತದೆ.

ಇಲ್ಲಿ ಇನ್ನೊ ಒಂದರ್ಥವನ್ನು ಹಿರಿಯರು ಹೇಳುವರು: ಉತ್ ಎಂಬುದು ಪುಂಡರೀಕಾಕ್ಷನಾದ, ಉತ್ತಮ ಪುರುಷನಾದ ಶ್ರೀಮನ್ನಾರಾಯಣನ ಹೆಸರೆಂದು ಛಾಂದೋಗ್ಯ ಉಪನಿಷತ್ತು ಹೇಳುತ್ತದೆ. (I–6–7.) ಇದು ಪ್ರಸಿದ್ಧವಾದ "ಕಪ್ಯಾಸಂ ಪುಂಡರೀಕಂ..." ಎಂಬ ಪ್ರಸಂಗದಲ್ಲೇ ಬಂದಿರುವುದರಿಂದ ಅನ್ವಯದಲ್ಲಿ ಸಂದೇಹಕ್ಕೆ ಅವಕಾಶವಿಲ್ಲ.

"ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷಃ ದೃಶ್ಯತೇ, ಹಿರಣ್ಯಶ್ಮಶ್ರುಃ, ಹಿರಣ್ಯಕೇಶಃ ಆಪ್ರಣಖಾತ್ ಸರ್ವ ಏವ ಸುವರ್ಣಃ, ತಸ್ಯ ಕಪ್ಯಾಸಂಪುಂಡರೀಕಂ ಏವಂ ಅಕ್ಷಿಣೀ ತಸ್ಯ ಉದಿತಿ ನಾಮ" ಎಂಬುದು ಮೂಲ.

'ಅಸ್ಮಿತಾ' ಎಂದರೆ ಮಹಿಮೆ, ದೊಡ್ಡತನ. ಅಕಾರ ಲೋಪವಾಗಿ, ಇದು 'ಸ್ಮಿತಾ' ಆಗಿ, ಉತ್ ಎಂಬುದಕ್ಕೆ ಇದು ಸೇರಿದರೆ, 'ಉತ್' ಎಂಬ ಪರಮಪುರುಷನ ಮಹಿಮಾ ಎಂದರ್ಥವಾಗಿ ಉತ್‌ಸ್ಮಿತಾ ಆಗಬೇಕು. ವೇದವಾದ್ದರಿಂದ ತಕಾರವು ಲೋಪವಾಗಿ ಉಸ್ಮಿತಾ ಆಗುವುದು. "ಉಸ್ಮಿತಯಾ ಸಹವರ್ತತೇ ಇತಿ ಸೋಽಸ್ಮಿತಾ", "ಪರಮಾತ್ಮನ ದೊಡ್ಡತನಕ್ಕೆ ಕಾರಣಭೂತಳಾಗಿ, ಅದರೊಡನೆಯೇ ಇರುವವಳು" ಎಂಬುದು ಆಗ ಲಕ್ಷ್ಮೀದೇವಿಗೆ ಹೊಂದುವ ವಿಶೇಷಣವಾಗುವುದು. "ಅಸ್ಮಿತಾ" ಎಂಬುದು ಭಗವಂತನ ಸ್ವರೂಪಕ್ಕೆ ಅಂತರಂಗ ನಿರೂಪಕವಾದರೆ, ಲಕ್ಷ್ಮಿಯೂ ಈ ನಿರೂಪಣೆಗೆ ಮೂಲವಾದವಳು ಎಂದು ಭಾವ. ವೇದಗಳೆಲ್ಲದರಲ್ಲಿ

ನಿರೂಪಣೀಯನಾದ ಅವನು 'ವೇದವೇದ್ಯ'ನಾದರೆ, ಇವಳ ಮಹಿಮೆಯೂ ಅವನ ಮಹಿಮೆಗೆ ಕಾರಣವಾಗಿದ್ದು, ಇವಳೂ ವೇದವೇದ್ಯಳೇ ಎಂಬುದು ಇಲ್ಲಿನ ಧ್ವನಿ. ಎಲ್ಲ ವೇದಗಳಲ್ಲೂ ಶಬ್ದಿಸಲ್ಪಡುವವಳೆಂದು ಹಿಂದಿನ (ಕಾ) ಶ್ರೀನಾಮದಲ್ಲಿ ಹೇಳಿದ್ದನ್ನೇ ಇಲ್ಲಿ ವಿವರಿಸಿದಂತಾಗಿದೆ. ಇದನ್ನೆಲ್ಲ ಲಕ್ಷ್ಮೀ ತಂತ್ರ ಸೊಗಸಾಗಿ ಹೇಳುತ್ತದೆ.

ಉದಿತಿ ಬ್ರಹ್ಮಣೋ ನಾಮ ವಿಕಸ್ತಿಃ ತಸ್ಯತು ಸ್ಮಿತಂ ।
ಮಯ್ಯಾಯತ್ತಾ ವಿಕಸ್ತಿಃಸಾ ಸೋಸ್ಮಿತಾಂ ಮಾಂ ತತೋ
ವಿದುಃ ॥ (ಶ್ಲೋ. 94)

ಅಹಂತಾ ಬ್ರಹ್ಮಣಸ್ತಸ್ಯ ಸಾಹಮಸ್ಮಿ ಸನಾತನೀ ।
ಆತ್ಮಾ ಸ ಸರ್ವಭೂತಾನಾಂ ಅಹಂಭೂತೋ ಹರಿಃಸ್ಮೃತಃ ॥
ಅಹಂತಯಾ ವಿನಾಹಂ ಹಿ ನಿರೂಪಾಖ್ಯೋ ನ ಸಿದ್ಧ್ಯತಿ ।
ಅಹಮರ್ಥಂ ವಿನ್ಯಾ ಹಂತಾ ನಿರಾಧಾರಾ ನ ಸಿದ್ಧ್ಯತಿ ॥
(ಅಧ್ಯಾಯ 17–ಶ್ಲೋ. 30, 31.)

ಎಂದು ಇಲ್ಲೇ ಹಿಂದೆ ಹೇಳಿರುವಂತೆ, ಸನಾತನಿಯಾದ (ಅನಾದಿಯಾದ) ಲಕ್ಷ್ಮಿಯು ಭಗವಂತನಿಗೆ 'ನಾನು' ಎಂಬ 'ಅಹಂತೆ'ಗೆ ಕಾರಣಳು. ಸರ್ವಭೂತ ಗಳ ಅಂತರಾತ್ಮನಾದ ಶ್ರೀ ಹರಿಯು ಆ ಎಲ್ಲ ಭೂತರಾಶಿಗಳಲ್ಲೂ 'ಅಹಂ' ಶಬ್ದವಾಚ್ಯನಾಗಿರುವವನು. ಅಹಮರ್ಥವು —'ಅಹಂ' ಶಬ್ದದಿಂದ ಹೇಳಲ್ಪಡುವ, ತಿಳಿಯಲ್ಪಡುವ, ವಸ್ತುವು. ಈ ಅಹಂತೆ ಯೆಂಬುದನ್ನು ಬಿಟ್ಟು ಹೇಳಬರುವಂತಿಲ್ಲ. ಅದು ಆಗ ನಿರಾಧಾರವಾಗುವುದು! ಹೀಗೆ 'ಅಸ್ಮಿ–ತಾ' ಎಂಬ 'ಅಹಂತೆ'ಯ ರೂಪದಲ್ಲಿರುವ ಲಕ್ಷ್ಮೀದೇವಿಯ ಸ್ವರೂಪ ವನ್ನು ವ್ಯಾಖ್ಯಾನಿಸಿರುವುದನ್ನೂ ಗಮನಿಸಿದರೆ, ಈ ವಿವರಣೆಗಳು ಸಮಂಜಸ ವೆನಿಸುವುವು.

## ೩ ಹಿರಣ್ಯಪ್ರಾಕಾರಾಂ

ಈ ಶಬ್ದಕ್ಕೆ ವಿದ್ಯಾರಣ್ಯರೂ, ಪೃಥ್ವೀಧರರೂ "ಚಿನ್ನದ ಹೊದ್ದಿಕೆಯುಳ್ಳವಳು" ಎಂದು ಅರ್ಥಮಾಡಿದ್ದಾರೆ. (ಸುವರ್ಣಾವರಣಾಂ, ಹಿರಣ್ಯಸ್ಯ ಪ್ರಾಕಾರೋ ವರ್ಣಃ, ಪ್ರಕೃಷ್ಟಾ ಆಕೃತಿರ್ಯಸ್ಯಾಃ ತಾಂ.) ಶ್ರೀರಂಗನಾಥ ಮುನಿಗಳೆಂಬ ನಂಜೀಯಾರರು "ನಾನಾ ರತ್ನಮಯ ಸುವರ್ಣಮಯ ಪ್ರಾಕಾರಪರಿವೃತಾನಂದಮಯದಿವ್ಯಮಂಡಪಾಂತರ್ನಿವಾಸಿನೀ" — "ನಾನಾ ರತ್ನಗಳಿಂದಲೂ, ಬಂಗಾರದಿಂದಲೂ ಮಾಡಲ್ಪಟ್ಟ ಪ್ರಾಕಾರದಿಂದೊಡಗೂಡಿದ ಆನಂದಮಯವೆಂಬ ದಿವ್ಯ ಮಂಡಪದೊಳಗೆ (ಶ್ರೀ ವೈಕುಂಠದಲ್ಲಿ) ವಾಸಿಸುವವಳು" ಎಂದರ್ಥಮಾಡಿದ್ದಾರೆ.

ಹಿರಣ್ಯವೆಂದರೆ ಹಿತವೂ, ರಮಣೀಯವೂ ಆದುದೆಂಬ ವಿವರಣೆಯನ್ನು ಹಿಂದೆ ನೋಡಿದ್ದೇವೆ. ಹೀಗೆ ಗ್ರಹಿಸಿದರೆ, "ಪ್ರಕಾರ ಏವ ಪ್ರಾಕಾರಃ" ಎಂದು ಹೇಳುವಂತೆ, ಹಿತರಮಣೀಯ ಗುಣಗಳನ್ನುಳ್ಳವಳು ಲಕ್ಷ್ಮೀ ಎಂದರ್ಥವಾಗುತ್ತದೆ. ಇವು ಚೇತನೋದ್ಧಾರಕ್ಕಾಗಿಯೇ ಇರುವುದರಿಂದ ಇವು ಯಾರಿಗೆ ಹಿತವೆಂಬುದನ್ನು ಬಾಯ್ಬಿಟ್ಟು ಹೇಳುವ ಅವಶ್ಯವಿಲ್ಲವಷ್ಟೆ ?

ಹಿತಾ ಚ ರಮಣೀಯಾ ಚ ಮದೀಯಾ ಪ್ರಕೃತಿಃ ಪರಾ ।
ತಾಂ ಸತ್ವರೂಪಾಂ ಆಲಂಬ್ಯ ತರನ್ತಿ ಮುನಯಸ್ತಮಃ ॥
ಅತೋ ಹಿರಣ್ಯ ಪ್ರಾಕಾರಾಂ ಋಷಯೋ ಮಾಮುಪಾಸತೇ ।
(ಶ್ಲೋ. 96-7)

ಎಂದು ಲಕ್ಷ್ಮೀತಂತ್ರವು ಈ ಶ್ರೀನಾಮವನ್ನು ವಿವರಿಸಿದೆ. ಲಕ್ಷ್ಮೀದೇವಿಯ ಸ್ವಭಾವವು (ವಿಗ್ರಹವು) ಚಿನ್ನದಂತೆ ಆಕರ್ಷಕವಾದುದು. ಚೇತನರಿಗೆ ಹಿತವೂ ರಮಣೀಯವೂ ಆದುದು ಈಕೆಯ ಉತ್ತಮ ಸ್ವಭಾವ. ಈಕೆಯ ಶುದ್ಧ ಸತ್ವಮಯ ಸ್ವಭಾವವನ್ನು ಅವಲಂಬಿಸಿ, ಧ್ಯಾನಿಸಿ, ಮುನಿಗಳು

ಸಂಸಾರವನ್ನು ದಾಟಿದರು. ಆದುದರಿಂದ ಲಕ್ಷ್ಮಿಗೆ ಈ ಹೆಸರಾಯಿತೆಂದು ವಿವರಣೆ.

ನಂಜೀಯರರ ವಿವರಣೆಗೂ ಶ್ರುತಿಯೇ ಆಧಾರ: "ದೇವಾನಾಂ ಪೂರಯೋಧ್ಯಾ, ತಸ್ಯಾಂ ಹಿರಣ್ಮಯಃ ಕೋಶಃ, ಸ್ವರ್ಗೋ ಲೋಕೋ ಜ್ಯೋತಿಷಾವೃತಃ" (ತೈ. ಆ. 1-27-116) ಎಂಬಂತೆ ಭಗವಂತನ ದ್ವೇಷಿಗಳಿಗೆ ಅಭೇದ್ಯವಾದ ಪರಮಪದದಲ್ಲಿ, ಹಿರಣ್ಮಯವಾದ ಲೋಕ (ಕೋಶ)ವೊಂದಿದೆ. ಬೆಳಕಿನಿಂದಲೇ ಸುತ್ತುವರೆಯಲ್ಪಟ್ಟದ್ದು ಈ ದಿವ್ಯ ಲೋಕ, ಇದನ್ನೇ ಕೌಷೀತಕೀಶ್ರುತಿಯಲ್ಲೂ, ಆಗಮೇತಿಹಾಸಪುರಾಣಗಳಲ್ಲೂ ಕಾಣುತ್ತೇವೆಯೇ ಹೊರತು ಇದೆಲ್ಲ ಕಲ್ಪನೆಯಲ್ಲ. ಇಂಥ ಲೋಕದಲ್ಲಿ ನಿತ್ಯವಾಸಮಾಡುವವಳು ಶ್ರೀದೇವಿಯೆಂಬರ್ಥವೂ ಹೀಗೆ ಪ್ರಾಚೀನವೇ ಆಗಿದೆ.

## ೪ ಆದ್ರ್ರಾಂ

ಈ ನಾಮಕ್ಕೆ ಪೃಥ್ವೀಧರಾಚಾರ್ಯರು "ಶೀತಲಗುಣಾಂ" (ಭಕ್ತರ ಹೃದಯಕ್ಕೆ ತಂಪಾಗಿರುವ, ದಯೆ ಮೊದಲಾದ ಗುಣಗಳುಳ್ಳವಳು) ಎಂದೂ, ವಿದ್ಯಾರಣ್ಯರು "ಕ್ಲಿನ್ನಾಂ, ಕ್ಷೀರೋದಧೇಃಉತ್ಪನ್ನತ್ವಾತ್" (ಕ್ಷೀರಸಮುದ್ರದಲ್ಲಿ ಹುಟ್ಟಿದವಳಾದ್ದರಿಂದ, ಹುಟ್ಟಿನಿಂದಲೇ ಒದ್ದೆಯಾದವಳು) ಎಂದೂ, ಅಥವಾ ಆರಿದ್ರಾನಕ್ಷತ್ರದಲ್ಲಿ ಹುಟ್ಟಿದವಳೆಂದೂ ಅರ್ಥಮಾಡಿದ್ದಾರೆ. ನಂಜೀಯರು "ದಯಾರ್ದ್ರ ಹೃದಯಾಂ" ("ದಯೆಯಿಂದ ಒದ್ದೆಯಾದ ಹೃದಯವುಳ್ಳವಳು") ಎಂದು ವಿವರಣೆ ನೀಡಿದ್ದಾರೆ.

ಭಗವಂತನಲ್ಲೂ ದಯೆಯಿದ್ದರೂ, ದಂಡಧರನಾದ್ದರಿಂದ ಪರತ್ವ ಸೂಚಕವಾದ ಇತರ ಉಜ್ವಲ ಗುಣಗಳಲ್ಲಿ ಈ ಸೌಲಭ್ಯ ಗುಣವು ಮರೆಸಿರುವಂತೆ ಕಾಣುವುದು ಸಹಜ, ದಂಡಧರತ್ವವನ್ನೇ ಕಾಣದೆ, ನಿಗ್ರಹವೇ

ಗೊತ್ತಿಲ್ಲದೆ, ಅನುಗ್ರಹವೇ ಮಾತ್ರ ತಿಳಿದ ಲಕ್ಷ್ಮೀದೇವಿಯಲ್ಲಿ ದಯೆಯು ಎದ್ದು ಕಾಣುವುದರಿಂದಲೇ ಈ ಶ್ರೀನಾಮ ಯುಕ್ತವಾಗಿದೆ ಎನ್ನಬಹುದು. ಕರುಣಾರೂಪಿಣಿ ಎಂದು ಇವಳನ್ನು ಕರೆಯುವುದು ಇದಕ್ಕಾಗಿಯೇ. ಶ್ರೀರಾಮಾಯಣವೆಲ್ಲ ಇದಕ್ಕೆ ಪ್ರಮಾಣ ಆಗಬಲ್ಲುದು. ಸಾಪರಾಧರಾದ ರಾಕ್ಷಸಸ್ತ್ರೀಯರು ಶರಣಾಗತಿಯ ಶಬ್ದವನ್ನಾಗಲೀ, ಭಾವವನ್ನಾಗಲೀ ಕಾಣದೇ. ಕೇಳದೇ, ಇನ್ನೂ ಸೀತಾದೇವಿಯನ್ನು ಹಿಂಸಿಸುತ್ತಿರುವಾಗಲೂ, ತ್ರಿಜಟೆಯೆಂಬ ವಿಭೀಷಣಪುತ್ರಿಯು ತಾನು ಕಂಡ ಕನಸನ್ನು ವಿವರಿಸಿ, ರಾಮನಿಗೆ ಜಯ ಖಂಡಿತವೆಂದೂ, ಸಿತಾರಾಮರು ಪುನಃ ಸೇರುವುದು ನಿಶ್ಚಯವೆಂದೂ. ಆಗ ರಾಮನು ಈ ರಾಕ್ಷಸಿಯರನ್ನು ಕೊಲ್ಲದೆ ಬಿಡನೆಂದೂ, ಅದಕ್ಕಾಗಿ ಈಗಲೇ ಈ ಸೀತಾದೇವಿಯಲ್ಲಿ ಕ್ಷಮೆಕೋರಿ, ರಕ್ಷಿಸುವಂತೆ ಕೇಳಬೇಕೆಂದೂ ಹೇಳಿದಾಗ, ಅವರು ಹಾಗೇನೂ ಮಾಡಲಿಲ್ಲವಾದರೂ "ಭವೇಯಂ ಶರಣಂ ಹಿ ವ:" —"ನಾನು ನಿಮ್ಮನ್ನು ಕಾಯುತ್ತೇನೆ" ಎಂದು ದೇವಿಯು ತಾನಾಗಿಯೇ ಅವರಿಗಿತ್ತ ಅಭಯವಚನ ಪ್ರಸಂಗವೊಂದೇ ಸದ್ಯಕ್ಕೆ ಸಾಕು. ಹಾಗೇ ಮುಂದೆ ಆಂಜನೆಯನಿಂದ ಇವರನ್ನು ಕಾಪಾಡಿಯೂ ಬಿಟ್ಟ ಕಥೆ ಯುದ್ಧ ಕಾಂಡದಲ್ಲಿ ಬರುತ್ತದೆ.

## ೫ ಲಕ್ಷ್ಮೀತಂತ್ರದಲ್ಲಿ 'ಆದ್ರಾ್ರಂ'

ಆದ್ರಾ್ರಂ ಎಂಬುದಕ್ಕೆ ಇನ್ನೊಂದರ್ಥವನ್ನೂ ಹಿರಿಯರು ಸೂಚಿಸುವುದುಂಟು. (ಲಕ್ಷ್ಮೀತಂತ್ರೋಕ್ತ.)

ಆರಾದಶೇಷ ದೋಷಾಣಾಂ ದ್ರಾವಿಣೀ ಮಾಮುಪೇಯುಷಾಂ ।
ಅಧೋಮುಖಾತ್ ಶಿರಃ ಪದ್ಮಾತ್ ಸ್ನುತಯಾಮೃತ
ಧಾರಯಾ ॥ (ಶ್ಲೋ. 98)

ಅಭಿಷಿಕ್ತಾ ಸದಾರ್ದ್ರಾಸ್ಮಿ ದಯಯಾರ್ದ್ರಾಂತರಾಸ್ಮಿ ಚ ।

(–98)

ಇಲ್ಲಿ ಮೂರು ಅರ್ಥಗಳು ಉಕ್ತವಾಗಿವೆ. (೧) ಆಶ್ರಿತರ ದೋಷಗಳನ್ನು ಕರಗಿ ಹೋಗುವಂತೆ ಮಾಡುವವಳು (೨) ಕೆಳಮುಖವಾದ ಶಿರಃಪದ್ಮದ ಅಮೃತಾಭಿಷೇಕದಿಂದ ಒದ್ದೆಯಾಗಿರುವವಳು, (೩) ಕರುಣೆಯಿಂದ ಕರಗಿದ ಹೃದಯವುಳ್ಳವಳು.

ಇವುಗಳಲ್ಲಿ ಎರಡನೆಯದು ತಿಳಿಯಲ್ಪಡತಕ್ಕದ್ದು. ಲಕ್ಷ್ಮೀದೇವಿಯು ಕುಳಿತಿರುವುದು ಒಂದು ದಿವ್ಯ ಆಸನ ಪದ್ಮವಾದರೆ, ಶಿರಃಪದ್ಮವೆಂಬು ದಿನ್ನೊಂದುಂಟು. ಛತ್ರಿಯಂತೆ ಮಳೆಬಿಸಿಲುಗಳಿಂದ ಅವಳನ್ನು ಬಾಡದಂತೆ ರಕ್ಷಿಸುತ್ತಾ, ಸದಾ ಅಮೃತಾಭಿಷೇಕಮಾಡುತ್ತಿರುವುದೆಂದು ತಂತ್ರಶಾಸ್ತ್ರ ಹೇಳುತ್ತದೆ. ಇದೇ ಇಲ್ಲಿ ವರ್ಣಿತವಾಗಿದೆ. ಮೊದಲನೆಯದರ ಅರ್ಥ. ಆರಾತ್ = ದೂರಕ್ಕೆ, ಆಶ್ರಿತ ದೋಷಗಳನ್ನು ದ್ರಾಪಯತೀತಿ = ಆರ್ದ್ರಾ = ಓಡಿಸುವಳಾಗಿ ಆರ್ದ್ರಾ ಎನಿಸುವಳು.

ಇದನ್ನು ಈಶ್ವರಸಂಹಿತೆಯೆಂಬ ಇನ್ನೊಂದು ಪಾಂಚರಾತ್ರ ಗ್ರಂಥವು ಬೇರೊಂದು ರೀತಿಯಲ್ಲಿಯೂ ವ್ಯಾಖ್ಯಾನಿಸಿದೆ:

ದಿಗ್ಗಜೇನ್ದ್ರೈಃ ಸ್ನಾಪ್ಯಮಾನಾಂ ಕಾಂಚನೈ ಕಲಶೋದಕೈಃ ।

ಚಿನ್ನದ ಬಿಂದಿಗೆಗಳಿಂದ ಹೊತ್ತ ನೀರಿನಿಂದ ದಿಗ್ಗಜಗಳು ಲಕ್ಷ್ಮಿಗೆ ಸದಾ ಸ್ನಾನ ಮಾಡಿಸುತ್ತಿರುವುದರಿಂದಲೂ ಆರ್ದ್ರೆ ಎನಿಸುವಳೆಂದು ಗಜಲಕ್ಷ್ಮೀ ವರ್ಣನೆ. ಈ ಚಿತ್ರ ಬಹುಪ್ರಸಿದ್ಧವಾದದ್ದು.

## ೯ ಜ್ವಲಂತೀಂ

ಜ್ವಲಿಸುವುದೂ, ಒದ್ದೆಯಾಗಿರುವುದು ಎಂಬೀ ಗುಣಗಳು ಪ್ರಾಕೃತ ವಸ್ತುಗಳಲ್ಲಿ ವಿರುದ್ಧ ಗುಣಗಳಾಗಿ ತೋರಿದರೂ, ದಿವ್ಯಾರ್ಥದಲ್ಲಿ, ಅಪ್ರಾ

ಕೃತ ಗುಣಗಳಾದಾಗ ಸಾಂಕೇತಿಕವಾಗಿದ್ದು, ಬೇರೆಯೇ ಅರ್ಥವನ್ನು ಹೊಂದು ವುದರಿಂದ, ವಿರೋಧವಾಗಿರಲಾರವು.

ಶ್ರೀ ವಿದ್ಯಾರಣ್ಯರೂ, ಪೃಥ್ವೀಧರಾಚಾರ್ಯರೂ ಇಲ್ಲಿ ಕ್ರಮವಾಗಿ "ಪ್ರಕಾಶಮಾನಾಂ" ಮತ್ತು "ಜ್ಯೋತಿಃ ಸ್ವರೂಪಾಂ" ಎಂದು ವಿವರಿಸಿದ್ದಾರೆ. "ಬೆಳಗುವವಳು", "ಜ್ಯೋತಿಯಂತೆ ಇರುವವಳು" ಎಂದರ್ಥ. ಶ್ರೀರಂಗ ನಾಥಮುನಿಗಳು. "ಲಾವಣ್ಯಮಯೇನ ಸ್ವತೇಜಸಾ ಸರ್ವಾನ್ ಲೋಕಾನ್ ಭಾಸಯಂತೀಂ", ಎಂದರೆ, "ಲಾವಣ್ಯಮಯವಾದ ತನ್ನ ದಿವ್ಯತೇಜಸ್ಸಿನಿಂದ ಲೋಕಗಳನ್ನೆಲ್ಲ ಬೆಳಗುವವಳು" ಎಂದು ವಿವರಿಸಿದ್ದಾರೆ. ಈ ವಿವರಣೆ ಯನ್ನೋದುವಾಗ ಶ್ರೀರಾಮಾನುಜರು ತಮ್ಮ ಶ್ರೀವೈಕುಂಠ ಗದ್ಯದಲ್ಲಿ ಮಾಡಿರುವ ಲಕ್ಷ್ಮೀದೇವಿಯ ಇಂಥದೇ ವರ್ಣನೆ ಕಣ್ಣೆದುರಿಗೆ ಬರುವುದೂ ಸಹಜ. (ವ್ಯಾಖ್ಯಾನಕಾರರಿಗೆ ಇದು ನೆನಪಿದ್ದೇ ಈ ರೀತಿ ಬರೆದಿರುವುದೂ ಸಂಭವ)

‚‚ಶ್ರೀಮದ್ವೈಕುಂಠೈಶ್ವರ್ಯಾದಿ ದಿವ್ಯಲೋಕಂ ಆತ್ಮಕಾಂತ್ಯಾ ವಿಶ್ವಮಾಪ್ಯಾಯಯನ್ತ್ಯಾ ಶ್ರಿಯಾಸಹಾಸೀನಂ...''

"ಶ್ರೀ ವೈಕುಂಠಲೋಕವನ್ನೂ ಇಡೀ ವಿಶ್ವವನ್ನೂ, ತನ್ನ ದಿವ್ಯಮಂಗಳ ವಿಗ್ರಹ ಕಾಂತಿಯಿಂದಲೇ ಬೆಳಗುವ ಲಕ್ಷ್ಮೀದೇವಿಯೊಡನೆ ಕೂಡಿರುವ (ಶ್ರೀಮನ್ನಾರಾಯಣನನ್ನು)..."

ವೈಕುಂಠವೆಂದರೇ ಬೆಳಕಿನ ಲೋಕವೆಂದರ್ಥ. ಅಲ್ಲಿ ಸೂರ್ಯ ನಕ್ಷತ್ರ ಚಂದ್ರಾಗ್ನಿಗಳ ಬೆಳಕಿಲ್ಲವೆಂದೂ, (ನ ತತ್ರ ಸೂರ್ಯೋ ಭಾತಿ, ನ ಚಂದ್ರ ತಾರಕಾಃ, ಕುತೋsಯಮಗ್ನಿಃ), ಯಾವ ಈ ಬೆಳಗುವಶಕ್ತಿಗಳೂ ಭಗ ವಂತನ ಬೆಳಕಿನಿಂದಲೇ ಬೆಳಗುವರೋ ಆ ಮೂಲ ಜ್ಯೋತಿಸ್ಸೇ ಅಲ್ಲಿದೆ ಯೆಂದೂ (ತಮೇವಭಾಂತಂ ಅನುಭಾತಿ ಸರ್ವಂ, ತಸ್ಯ ಭಾಸಾ ಸರ್ವಮಿದಂ ವಿಭಾತಿ.) "ಕಠೋಪನಿಷತ್ತಿನಲ್ಲಿಯೂ (II–5), ಗೀತೆಯಲ್ಲಿಯೂ (ನ ತದ್ಭಾಸಯತೇ ಸೂರ್ಯಃ ನ ಶಶಾಂಕೋ ನ ಪಾವಕಃ । ......ಅಧ್ಯಾಯ ...... ಶ್ಲೋ......) ಹೇಳಿರುವಂತೆ, ದೇವರೆಂಬ ಬೆಳಕೇ ಇರುವ

ಲೋಕಕ್ಕೆ ಬೇರಾವ ಬೆಳಕೂ ಬೇಡ. ಜ್ಯೋತಿಷಾಮಪಿ ತಜ್ಜ್ಯೋತಿಃ ತಮಸಃ ಪರಮುಚ್ಯತೇ (ಅಧ್ಯಾಯ... ಶ್ಲೋ...) ಎಂದದ್ದೂ ಈ 'ಪರಂ ಜ್ಯೋತಿ'ಯನ್ನು ಕುರಿತೇ. ಈ ಜ್ಯೋತಿಯು ಶ್ರೀವಿಶಿಷ್ಟವಾಗಿಯೇ ಇರುತ್ತಾ, ಈ ಪ್ರಯುಕ್ತ ಉಜ್ಜ್ವಲವಾಗಿರುವುದರಿಂದ ಶ್ರೀದೇವಿಯೂ ಜ್ವಲಂತೀ ಎಂದು ಶ್ರುತಿಪ್ರಸಿದ್ಧಳಾಗಿರುವುದು ಯುಕ್ತವಾಗಿದೆ. ಶ್ರೀವಿಶಿಷ್ಟನಾದ್ದರಿಂದ ಆವನ ಜ್ಯೋತಿಯು ಇನ್ನಷ್ಟು ಚೆನ್ನಾಗಿ ಬೆಳಗುವುದನ್ನು ಶ್ರೀರಾಮಾಯಣ ದಲ್ಲಿ ಅನೇಕ ಸಲ ಹೇಳಿದೆ.

೧) ತಯಾ ಸ ರಾಜರ್ಷಿ ಸುತೋಽಭಿರಾಮಯಾ
ಸಮೇಯಿವಾನ್ ಉತ್ತಮ ರಾಜಕನ್ಯಯಾ ।
ಅತೀವ ರಾಮಃ ಶುಶುಭೇಽತಿಕಾಮಯಾ
ವಿಭುಃ ಶ್ರಿಯಾ ವಿಷ್ಣುರಿವಾಮರೇಶ್ವರಃ ॥
(ಬಾಲ. 77–30)

"ಶ್ರೀರಾಮನು ರಾಜರ್ಷಿಯಾದ ದಶರಥನ ಮಗನಾದರೆ, ಸೀತೆಯು ಉತ್ತಮರಾಜನಾದ ಜನಕನ ಪುತ್ರಿ. (ಹೀಗೆ ಕುಲದಲ್ಲಿ ಸರಿಸಾಟಿ ಏರ್ಪ ಟ್ಟಿತು.) ಅವನು ರಾಮನಾಗಿ ಸುಂದರನೆನಿಸಿದರೆ, ಇವಳೂ ಅಭಿರಾಮೆ ಯಾಗಿ (ಅವನಿಗಿಂತ) ಹೆಚ್ಚು ಲೋಕಸುಂದರಿಯಾಗಿರುವಳು. ಹೀಗೆ ಇವಳ ದೆಸೆಯಿಂದ, ಇವಳ ನಿರತಿಶಯ ಪ್ರೇಮದಿಂದ ಶ್ರೀರಾಮನಿಗೊಂದು ವಿಶೇಷ ಶೋಭೆ ಏರ್ಪಟ್ಟಿತು. ವ್ಯಾಪಕನಾದ ವಿಷ್ಣುವು ಲಕ್ಷ್ಮಿಯೊಡ ಗೂಡಿದ ಕಾಂತಿಗೆ ಈ ಶೋಭೆ ಸಮವಾಯಿತು," ಎಂದು ಹೇಳಿರುವಲ್ಲಿ ಈ ಜ್ವಲಂತೀಂ ಎಂಬ ಗುಣಕ್ಕೇ ಮಂಗಳಪಾಡಿದಂತಿದೆ.

೨) ಅಪ್ರಮೇಯಂ ಹಿ ತತ್ತೇಜಃ ಯಸ್ಯ ಸಾಜನಕಾತ್ಮಜಾ ।

ಎಂಬ ಮಾರೀಚ ವಾಕ್ಯದಲ್ಲೂ ಇದೇ ಭಾವವಿದೆ. "ಯಾವನ ಕೈಹಿಡಿದವಳು ಜನಕಪುತ್ರಿಯೋ, ಆಕಾರಣದ ದೆಸೆಯಿಂದ ಕೈಹಿಡಿದವನು ಅಳತೆ ಮಾಡಲಾಗದ ತೇಜೋರಾಶಿಯಾಗಿದ್ದಾನೆ" ಎಂಬ ಭಾವ.

ಲಕ್ಷ್ಮೀತಂತ್ರದಲ್ಲೂ ಈ ಬಗೆಯ ವಿವರಣೆಯನ್ನು ಕಾಣಬಹುದು.

ಜ್ವಲಾಮಿ ಸರ್ವಭೂತಾಂತರ್ಗಗನೇ ಪರಮೇ ಸದಾ ।
ಶುದ್ಧಾ ನಿರಂಜನಾ ಸತ್ಯಾ ಭಾಸಯನ್ತೀ ಜಗತ್ ತ್ವಿಷಾ ॥

(ಶ್ಲೋ. ೧೦೦)

"ಸಕಲ ಪ್ರಾಣಿಗಳಲ್ಲೂ, ಪರಮಪದವೆನಿಸಿದ ಶ್ರೀ ವೈಕುಂಠದಲ್ಲೂ ಇರುತ್ತಾ, ಪರಿಶುದ್ಧಳೂ, ದೋಷರಹಿತಳೂ. ನಿರ್ವಿಕಾರಳೂ ಆದ ನಾನು ಈ ಎರಡೂ ಲೋಕಗಳನ್ನು —ಲೀಲಾ ವಿಭೂತಿಯಾದ ಈ ಜಗತ್ತನ್ನೂ, ನಿತ್ಯ ವಿಭೂತಿಯಾದ ಮೇಲಿನ ಲೋಕವನ್ನೂ— ನನ್ನ ಕಾಂತಿಯಿಂದಲೇ ಬೆಳಗುತ್ತಾ ಇರುತ್ತೇನೆ."

ಅಶಿಖಾ ತ್ರಿಶಿಖಾ ಚಾಹಂ ಪಂಚಪಂಚ ಶಿಖಾವತೀ ।
ಸಪ್ತಧಾ ಚ ಪುನಃ ತ್ರೇಧಾ ಜ್ವಲಾಮಿ ವಪುಷಿ ಸ್ಥಿತಾ ॥

(ಶ್ಲೋ. ೧೦)

ಇದು ಮತ್ತೊಂದು ನಿರ್ವಚನ: ಶಿಖೆಯೆಂದರೆ ಅಗ್ನಿಜ್ವಾಲೆಗೆ ಹೆಸರು. ಲಕ್ಷ್ಮೀದೇವಿಯು ಅಕಾರವಾಚ್ಯನಾದ ಭಗವಂತನನ್ನ ತನ್ನ ಜ್ವಾಲೆಯನ್ನಾಗಿ ಹೊಂದಿ ಅಗ್ನಿಯಂತೆ ಬೆಳಗುವವಳಾಗೆ ಅಶಿಖಾ ಎನಿಸಿದ್ದಾಳೆ. (ನಾರಾಯಣ ಸೂಕ್ತದಲ್ಲಿ ತಸ್ಯ ಮಧ್ಯೇ ವಹ್ನಿಶಿಖಾ ಎಂದು ಭಗವಂತನನ್ನು ಶಿಖೆಯೆಂದು ಕರೆದಿರುವುದನ್ನು ಇಲ್ಲಿ ನೆನೆಯಬೇಕು.) ಇದು ಲಕ್ಷ್ಮೀದೇವಿಯ ಪರಾ ರೂಪ. ಅಲ್ಲದೆ ಜಾಠರಾಗ್ನಿಯ ಮೂರು ಜ್ವಾಲಾರೂಪಗಳಲ್ಲಿರುತ್ತಾ ತ್ರಿಶಿಖಾ ಎನಿಸಿರುವಳು. (ಅನ್ನಂ ಅಶಿತಂ ತ್ರಿಧಾ ವಿಧೀಯತೆ ಎಂಬಂತೆ ಉಂಡ ಅನ್ನವನ್ನು ಮೂರಾಗಿ ವಿಭಾಗಿಸುವ ಅಗ್ನಿಯ ಜ್ವಾಲೆಗಳಿವು.) ಇಪ್ಪತ್ತೈದು ತತ್ತ್ವಗಳನ್ನು ಜ್ವಾಲೆಗಳಾಗಿ ಹೊಂದಿ ಪಂಚಪಂಚ ಶಿಖಾ ಎಂದೂ ಪ್ರಸಿದ್ಧಳಾಗಿರುವಳು. ಶರೀರದ ಸಪ್ತಧಾತುಗಳನ್ನೂ ಜ್ವಾಲೆಯಾಗಿ ಹೊಂದಿಯೂ, ಮತ್ತೆ ಸತ್ತ್ವರಜಸ್ತಮೋಗುಣಗಳೆಂಬ ಜ್ವಾಲೆಗಳಿಂದಲೂ ಶೋಭಿಸುವ ಅಗ್ನಿಯೆಂದು ರೂಪದಲ್ಲಿ ವರ್ಣಿತವಾಗಿರುವುದರಿಂದ ಜ್ವಲಂತೀ ಎಂಬ ಶ್ರೀನಾಮವು ಬಹು ವಿಶಿಷ್ಟವಾದುದು.

## ೭ ತೃಪ್ತಾಂ

ಲಕ್ಷ್ಮೀದೇವಿಯನ್ನು ಪ್ರಾಕೃತಾಗ್ನಿಗೆ ಹೋಲಿಸಬಹುದೇ ? ಎಂದರೆ, ಅಲ್ಲಿನ ಜ್ವಾಲೆ, ಕಾಂತಿ, ಬೆಳಕು ಮುಂತಾದ ಗುಣಗಳನ್ನು ಇಲ್ಲಿ ಅನ್ವೈಸಲು ಈ ಹೋಲಿಕೆಯೇ ವಿನಾ, ಉಳಿದ ಅರ್ಥಗಳಲ್ಲಿ ಅಲ್ಲ. ಅಗ್ನಿಗೆ ಏನನ್ನು ಎಷ್ಟು ತಿಂದರೂ ತೃಪ್ತಿ ಇಲ್ಲದವನೆಂದು— ಅನಲಂ— (ನಾಲಂ ವಿದ್ಯತೇ ಯಸ್ಯ ಸಃ) ಹೇಳುವುದುಂಟು. ಲಕ್ಷ್ಮಿಗೆ ಈ ಹೇಯಗುಣವಿಲ್ಲವೆಂದು ಪ್ರಾಕೃತಾಗ್ನಿ ಗುಣವನ್ನು ವ್ಯಾವರ್ತನೆ ಮಾಡಿತೋರಿಸಲು ತೃಪ್ತಾಂ ಎಂದು ಈಗ ವರ್ಣಿಸುತ್ತಾರೆ. ಪೂರ್ಣಕಾಮಾಂ ಎಂದು ಸಾಯಣರ ವಿವರಣೆ. ಭಕ್ತರು ಮಾಡುವ ಪೂಜೆ, ಅವರ ಭಕ್ತಿಯಿಂದ ತೃಪ್ತಳಾದವಳೆಂದು ಮಹೀಧ ರಾಚಾರ್ಯರ ಭಾಷ್ಯ. (ಭಕ್ತಪೂಜಾದಿಭಿಃ ಇತಿ.) ಭಗವಂತನ ನಿತ್ಯ ಆಲಿಂಗನ ಸುಖದಿಂದ ಸದಾ ತೃಪ್ತಳಾದವಳೆಂದು ಶ್ರೀರಂಗನಾಥಮುನಿಗಳ ಭಾಷ್ಯ. (ಭಗವತ್ಸಂಶ್ಲೇಷ ಜನಿತೇನ ಮಹಾನಂದೇನ ಸ್ವಯಂ ತೃಪ್ತಾಂ.) ಲಕ್ಷ್ಮೀತಂತ್ರವೂ ಇದನ್ನೇ ಹೇಳಿದೆ.

ಹರೌ ಪ್ರೀತಿಮತೀ ನಿತ್ಯಂ ತೃಪ್ತಾ ಭಕ್ತೇಷು ನಿತ್ಯದಾ ।
ಪ್ರಾಕೃತೈಶ್ಚ ವಿನಾ ಭೋಗೈಃ ನಿತ್ಯತೃಪ್ತಾಸ್ಮ್ಯಹಂ ಸ್ವತಃ ॥
(೧೦೨)

ಭಗವಂತನಲ್ಲಿ ಸದಾ ಪ್ರೀತಿಯುಳ್ಳವಳೂ ಭಕ್ತರು ಮಾಡುವ ಅರ್ಚನಾದಿ ಗಳಲ್ಲಿ ಸದಾ ತೃಪ್ತಳೂ, ಪ್ರಾಕೃತ ಭೋಗಗಳಲ್ಲಲ್ಲದೆ, ಸಹಜವಾಗಿಯೇ ನಿತ್ಯತೃಪ್ತಳಾಗಿರುವವಳೂ ಆಗಿರುವುದರಿಂದಲೇ ಇವಳನ್ನು ಮುನಿಗಳು 'ತೃಪ್ತಾ' ಎಂದು ಧ್ಯಾನಿಸಿ, ಈ ಜ್ಞಾನಮೂಲದಿಂದ ತಾವೂ ತೃಪ್ತಿ ಹೊಂದಿ, ಆನಂದ ಸಾಗರ ನಿಮಗ್ನರಾದರೆಂದು ಭಾವ.

ತಾಂ ಮಾಂ ತೃಪ್ತಾಮನುಧ್ಯಾಯ ಮುನಯೋ
ವೇದಪಾರಗಾಃ ।

ಜ್ಞಾನಮೂಲಾಂ ಪರಾಂ ತೃಪ್ತಿಂ ನಿತ್ಯಾಂ ಪ್ರಾಪ್ತಾಃ
ಸುಧಾಮಯೀಂ ॥
(೧೦೩)

## ೮ ತರ್ಪಯಂತೀಂ

ಈ ಶಬ್ದಕ್ಕೆ "ಭಕ್ತರನ್ನು ಮನೋರಥಗಳಿಂದ ತೃಪ್ತಿಪಡಿಸುವವಳು" ಎಂಬರ್ಥವನ್ನು ಶ್ರೀವಿದ್ಯಾರಣ್ಯರು ಮಾಡಿದ್ದಾರೆ. ಪೃಥ್ವೀಧರಾಚಾರ್ಯರ ಅರ್ಥವೂ ಹೀಗೆಯೇ ಇದೆ. ಶ್ರೀರಂಗನಾಥಮುನಿಗಳು. "ಕಾಂತಿ ಶಾಂತ್ಯಾಕಾರಮಧುರಶೀತಲವಿಲೋಕನಾಮೃತತರಂಗಪರಂಪರಯಾತಾಪತ್ರ-ಯತಪ್ತಂ ಪ್ರಾಣಿಜಾತಂ ಆಹ್ಲಾದಯಂತೀಂ" ಎಂದು ಅರ್ಥೈಸಿದ್ದಾರೆ. "ಕಾಂತಿಶಾಂತಿಗಳಿಗೆ ಆಕರವಾದ (ನೆಲವೀಡಾದ) ಮಧುರವೂ ತಂಪೂ ಆದ ಕಟಾಕ್ಷಾಮೃತದ ಅಲೆಗಳ ಪರಂಪರೆಯಿಂದ, ಸಂಸಾರತಾಪದಲ್ಲಿ ಬೆಂದ ಯಾವುದೇ ಪ್ರಾಣಿಯನ್ನೂ ಆನಂದಗೊಳಿಸುವವಳು" ಎಂದು ಇದರ ಅರ್ಥ. ತನ್ನ ಸೌಂದರ್ಯಾತಿಶಯದಿಂದ, ಗುಣಗಳಿಂದ, ಸರ್ವೇಶ್ವರನನ್ನು ತೃಪ್ತಿಗೊಳಿಸುವವಳೂ, ತನ್ಮೂಲಕ ಭಗವಂತನೂ ಲೋಕಕ್ಕೆ ಪ್ರಸನ್ನನಾಗಿ, ಅಧ್ಯಾತ್ಮದ ಹಸಿವಿನಿಂದ ಬಳಲಿದ ಚೇತನರಿಗೆ 'ಅನ್ನ'ವಾಗಿ, ಲೋಕಕ್ಕೆ ಹೀಗೆ ತೃಪ್ತಿಯುಂಟಾಗುವಂತೆ ಮಾಡುವವಳು ಎಂದೂ ಹಿರಿಯರು ಇಲ್ಲಿ ಹೇಳುವುದುಂಟು.

ತರ್ಪಯಾಮಿ ಗುಣೈರ್ವಿಷ್ಣುಂ ಆತ್ಮಾನಂ ತದ್ಗುಣೈರಪಿ ।
(ಶ್ಲೋ ೮೦೪)

ಎಂದು ಲಕ್ಷ್ಮೀತಂತ್ರದಲ್ಲೂ ಇದನ್ನು ಸಮರ್ಥಿಸಿದೆ. (ಈ ಹಿಂದಿನ ಅರ್ಥವನ್ನೂ ಅಲ್ಲಿ ಹೇಳಿದೆ.) ಅಲ್ಲದೆ ಇನ್ನೂ ನಾಲ್ಕು ಹೊಸ ಅರ್ಥಗಳನ್ನೂ

ಹೇಳಿದೆ: (೧) ದೇಹವೆಂಬುದೇ ಒಂದು ಸಮುದ್ರ. ಇದರಲ್ಲಿನ ಎಪ್ಪತ್ತೆರಡು ಸಾವಿರ ನಾಡಿಗಳೂ ಸದಾ ಈ ಸಮುದ್ರದೆಡೆಗೇ ಪ್ರವಹಿಸುತ್ತಿವೆ. ಪಂಚಪ್ರಾಣಗಳೆಂಬ 'ಪಂಚವೃತ್ತಿ'ಯಿಂದ, (ಈ ವಾಯುಗಳ ಸಂಚಾರದಿಂದ) ಈ ನದಿಗಳು ಸದಾ ಹರಿದು ಸಮುದ್ರವನ್ನು ಸೇರುವ ಕ್ರಿಯೆಯಲ್ಲಿ ಈ 'ನದೀ' ಸಂಚಾರದಲ್ಲಿ ಆನಂದ ರಸಪ್ರವಾಹವುಂಟಾಗುವಂತೆ ಮಾಡಿ, ಪ್ರಾಣಿದೇಹದಲ್ಲೂ ಆನಂದವುಂಟಾಗುವಂತೆ ತೃಪ್ತಿಪಡಿಸುವವಳು. (೨) ಸುಷುಮ್ನಾನಾಡಿಯ ಮೂಲಕ ಪರಮಪದವನ್ನು ಸೇರುವ ಯೋಗಿಗಳ ನಿರ್ಮಲ ಯೋಗವೆಂಬ ಕನ್ನಡಿಯಲ್ಲಿ ಸದಾ ಬಿಂಬಿತಳಾಗಿರುತ್ತಾ, ತನ್ನ ಸ್ವರೂಪರೂಪಗಳಿಂದುಂಟಾದ, ಶ್ರೇಷ್ಠವಾದ, ಜ್ಞಾನಮಯವಾದ ಅಮೃತ ರಸಗಳಿಂದ ಯೋಗಿಗಳ ಪರಿಶುದ್ಧ ಮನಸ್ಸನ್ನು ತೃಪ್ತಿಗೊಳಿಸುವವಳು. (೩) ಸದಾ ವಿಕಾರವಾಗಲು ಬಯಸುವ ಪ್ರಕೃತಿಯೇ ಮೊದಲಾದ ಅಚಿತ್ ಪದಾರ್ಥಗಳನ್ನೂ ದೇವಾದಿ ಕಾರ್ಯವಸ್ತುಗಳನ್ನಾಗಿ ಆಗುವಂತೆ ಪ್ರಚೋದಿಸಿ, ಅವನ್ನೂ ತೃಪ್ತಿಪಡಿಸುವವಳು. (೪) ಪ್ರಾಣಿಗಳ ಇಂದ್ರಿಯಗಳನ್ನೂ ತೃಪ್ತಿಪಡಿಸುವವಳು — ದೀಪಕ್ಕೆ ಎಣ್ಣೆಯನ್ನೂ, ಕಡಲಿಗೆ ನದಿಗಳನ್ನೂ ಸೇರಿಸಿ ಉಪಕರಿಸುವಂತೆ, ಪ್ರಾಣವನ್ನು ಕೊಡುವ ಮೂಲಕ ಇಂದ್ರಿಯಗಳನ್ನೂ ಚೈತನ್ಯಯುಕ್ತವನ್ನಾಗಿಸುವವಳು. ಇದರಿಂದಲೇ ಯೋಗಿಗಳು ಇವಳನ್ನು ತರ್ಪಯನ್ತೀ ಎಂದು ಕರೆದಿದ್ದಾರೆಂದು ಲಕ್ಷ್ಮೀತಂತ್ರ ಹೇಳುತ್ತದೆ.

ದ್ವಿಸಪ್ತತ್ಯಾ ಸಹಸ್ರೇಣ ನಾಡೀನಾಂ ದೇಹಸಾಗರಂ
ತರ್ಪಯಾಮಿ ರಸೈರ್ನಿತ್ಯಂ ಪ್ರಾಣಾನಾಂ ಪ್ರೇರಣಾವಶಾತ್ ।
ಸೌಷುಮ್ನೇನಾಧ್ವನಾ ನಿತ್ಯಂ ಪರಂ ಭಾವಮುಪೇಯುಷಾಂ ॥
ಬಿಂಬಭಾವಮುಪೇತಾಹಂ ವಿಮಲೇ ಯೋಗದರ್ಪಣೇ ।
ಆತ್ಮಬಿಂಬ ಸಮುದ್ಭೂತೈಃ ಪರಮಾರ್ಥೈಃ ಸುಧಾರಸೈಃ ॥
ಚಿನ್ಮಯೈಸ್ತರ್ಪಯಾಮ್ಯಂತ ಯೋಗಿನಾಂ
ಸತ್ತ್ವಮುತ್ತಮಂ ।

ಪ್ರಕೃತ್ಯಾದಿ ವಿಶೇಷಾಂತಂ ಪರಿಣಾಮೋನ್ಮುಖಂ ಸದಾ
ಕಾರ್ಯಭಾವಂ ಸಮಾಪನ್ನಂ ಅಕ್ಷಿಣ್ವಂತೀ ನಿಜೈರ್ಬಲೈಃ ।
ಆಪಗಾಭಿರಿವಾಂಭೋಧಿಂ ಪ್ರಾಣಾಧಾನೇನ ತರ್ಪಯೇ ॥
ಸ್ನೇಹೇನೇವ ಸದಾ ದೀಪಂ ಪ್ರಾಣಿನಾಂ ಕರಣಾನಿ ಚ ।
ನಿಜಶಂವಿದ್ರಸೇನೈವ ತರ್ಪಯಾಮ್ಯಕ್ಷಯಾತ್ಮನಾ ॥
ತರ್ಪಯನ್ತೀತಿ ಮಾಂ ಪ್ರಾಹುಃ ಯೋಗಿನೋ
ಯೋಗಪಾರಗಾಃ ॥ (ಶ್ಲೋ ೧೦೫-೧೦೦.)

## ೯ ಪದ್ಮೇಸ್ಥಿತಾಂ

ಲಕ್ಷ್ಮೀದೇವಿಗೆ ಕಮಲೆಯೆಂದೂ, ಕಮಲಾಲಯೆ ಎಂದೂ ಪ್ರಸಿದ್ಧಿ ಬರುವುದಕ್ಕೆ ಈ ಶ್ರೀನಾಮವೇ ಮೂಲ ಕಾರಣ. ವಿದ್ಯಾರಣ್ಯರೂ ಪೃಥ್ವೀಧರಾಚಾರ್ಯರೂ "ಪದ್ಮದಲ್ಲಿ ಕುಳಿತಿರುವವಳು" ಎಂದು ವಿವರಿಸಿದ್ದಾರೆ. ಇದನ್ನೇ ಶ್ರೀರಂಗನಾಥ ಮುನಿಗಳು ಹೇಳುವ ಬಗೆ ವಿಲಕ್ಷಣವಾಗಿದೆ : "ಸ್ವ ಸೌಂದರ್ಯ ಸೌಕುಮಾರ್ಯ ಅನುಗುಣ ಸುಗಂಧಶೀತಲ ಸುಖಸ್ಪರ್ಶ ಪದ್ಮಾಸನಾಸೀನಾಂ" ಎಂದು ಲಕ್ಷ್ಮೀದೇವಿಗೆ ಕಮಲವೇ ಏಕೆ ಆಸನವೆಂಬುದಕ್ಕೆ ಉತ್ತರ ಹೇಳಿದಂತಿದೆ, ಇಲ್ಲಿ. ತನ್ನ ಸೌಂದರ್ಯಕ್ಕೂ, ಸೌಕುಮಾರ್ಯಕ್ಕೂ ಅನುಗುಣವಾದ ಆದ ಆಸನ ಇದೇ. ಕಮಲದ ಸುಗಂಧ, ಶೈತ್ಯ, ಸುಖಸ್ಪರ್ಶಾದಿಗುಣಗಳು ಲಕ್ಷ್ಮಿಯದೇ ಗುಣಗಳಂತೆಯೂ ಇದ್ದು ಒಪ್ಪುತ್ತವೆ ಎಂದು ಭಾವ.

ಲಕ್ಷ್ಮೀತಂತ್ರದ ನಿರುಕ್ತ ಬೇರೆಬಗೆಯದು. ಹೇಗೆಂದರೆ, "ತಾನೂ ನಡೆಯುತ್ತಾ, ಇತರ ವಸ್ತುಗಳನ್ನೂ ತನ್ನ ಮಾನದಿಂದ ಅಳೆಯುವುದು

ಕಾಲ. ಈ ಕಾಲ ತತ್ತ್ವವನ್ನೂ ಸದಾ ನಿರ್ವಹಿಸುವಳಾದ್ದರಿಂದ ಲಕ್ಷ್ಮಿಯು ಪದ್ಮಾಸನಾ ಎನಿಸುವಳು :"

ಪದ್ಯಮಾನಂ ಮಿನೋತೀತಿ ಕಾಲಂ ಪದ್ಮಂ ಪ್ರಚಕ್ಷತೇ ।
ಕಾಲಮಪ್ಯಖಿಲಂ ಶಶ್ವತ್ ಕಲಯನ್ತೀ ಸ್ಥಿತಾ ಸದಾ ॥

(ಶ್ಲೋ. ೧೧೧)

(ಪದ್ = ಗತೌ ಧಾತುವಿನಿಂದ, 'ಪದ್ಯಮಾನ'ವೆಂದರೆ, ಚಲಿಸುವ ವಸ್ತುಗಳು, ಕಾಲವಶವಾಗಿರತಕ್ಕವು ಇದನ್ನು ಮಿನೋತಿ = ಅಳೆಯುವುದು ಪದ್ಮ = ಕಾಲ. ಈ ಕಾಲವನ್ನೂ ನಡೆಯುವಂತೆ ಮಾಡಬಲ್ಲವಳು ಪದ್ಮಸ್ಥಿತಾಂ.)

## ೧೦ ಪದ್ಮವರ್ಣಾಂ

ಕಮಲದ ಬಣ್ಣವುಳ್ಳವಳೆಂಬುದು ಈ ಶ್ರೀನಾಮದ ಅರ್ಥ. ವಿದ್ಯಾರಣ್ಯ ಪೃಥ್ವೀಧರರು ಇದನ್ನೇ ಬರೆದಿದ್ದಾರೆ. ಶ್ರೀರಂಗನಾಥ ಮುನಿಗಳು ಕೊಂಚ ಅತಿಶಯವಾಗಿ ವಿವರಿಸಿದ್ದಾರೆ. "ಪದ್ಮೋದರಸಹೋದರಾಂ, ಅಶೇಷಜನವರ್ಣನೀಯಲಾವಣ್ಯಮಯದಿವ್ಯ ಶೋಭಾಂ," ಎಂದು. ಪದ್ಮವು ಹುಟ್ಟಿದ ನೀರಿನಲ್ಲೇ (ಕ್ಷೀರಾಬ್ಧಿಯಲ್ಲಿ) ಅವತರಿಸಿದವಳು ಎಂಬುದು ಒಂದು ಚಮತ್ಕಾರವಾದ್ದರಿಂದ, ಅದರ ಬಣ್ಣ ಇವಳಿಗೂ ಬಂದಿದೆ ಎಂದು ಸೂಚಿಸುವುದು ಈ ಅರ್ಥಕ್ರಮ. ಸಕಲ ಜನರಿಂದಲೂ ಕೊಂಡಾಡಲ್ಪಡುವ ಲಾವಣ್ಯಯುಕ್ತವಾದ ದಿವ್ಯ ಕಾಂತಿಯುಳ್ಳವಳೆಂಬುದು ಈ ವಾಚಕದ ಧ್ವನ್ಯರ್ಥ.

ಲಕ್ಷ್ಮೀತಂತ್ರವು ಅಪೂರ್ವಾರ್ಥವನ್ನೇ ವಿವರಿಸಿ, ವಿಲಕ್ಷಣ ಅನುಭವವನ್ನು ಇಲ್ಲಿ ತಂದುಕೊಡುತ್ತದೆ :

ಪುಂಪ್ರಧಾನೇಶ್ವರಾನ್ನಿತ್ಯಂ ವರ್ಣಯಾಮ್ಯಾತ್ಮತೇಜಸಾ ।

ಪದ್ಮಾಕಾರೈಶ್ಚ ವರ್ಣೈರ್ಮೇ ಭೂಷಿತಾ ತನುರುತ್ತಮೈಃ ॥
ಪದ್ಮವರ್ಣೇತಿ ಮಾಂ ಸ್ತುತ್ವಾ ಶಾಸ್ತ್ರವೈಶದ್ಯಮಾಪ್ನುಯಾತ್ ॥
(ಶ್ಲೋ ೧೧೩-೪)

ಪದ್ ಧಾತುವಿಗೆ 'ಹೊಂದುವುದು', 'ತಿಳಿಯುವುದು' ಎಂಬರ್ಥವೂ ಇರುವುದರಿಂದ, ಪದ್ಮಮಾನವಾದದ್ದು, ಅರಿಯಲ್ಪಡುವ ತತ್ತ್ವಗಳು ಚಿತ್, ಅಚಿತ್, ಈಶ್ವರರೆಂಬ ತತ್ವತ್ರಯಗಳು. ಇವು ಕೂಡಿ ಒಂದು ತಾವರೇ ಹೂವಿನಂತಿವೆ. ಹೇಗೆಂದರೆ, ಕಮಲದ ಕೋಶ, ಕಮಲದ ದಳ (ಎಸಳು)ಗಳು, ಇವುಗಳಿಗೆ ಆಶ್ರಯವಾಗಿ ಇದನ್ನು ಹಿಡಿದುಕೊಂಡಿರುವ ಕಮಲದ ದಂಟು —ಇವು ಮೂರು ಆ ತತ್ತ್ವಗಳಿಗೆ ಸಂಕೇತದಂತಿವೆ. ಇದಕ್ಕೇ ಇದನ್ನು ಪದ್ಮ ಎನ್ನುವುದು. ಈ ಮೂರು ತತ್ತ್ವಗಳನ್ನೂ ತನ್ನ ಕಾಂತಿ ಯಿಂದ ಬೆಳಗುತ್ತಾ, (ಸೂರ್ಯನು ತನ್ನ ಕಾಂತಿ ಕಿರಣಗಳಿಂದ ಕಮಲವನ್ನು ಹೊಸ ಬಣ್ಣದಿಂದ ಕಾಣುವಂತೆ ಮಾಡುವಂತೆ', ಬಣ್ಣತರುವವಳಾದುದ ರಿಂದ ಲಕ್ಷ್ಮಿಯನ್ನು ಪದ್ಮವರ್ಣಾ ಎನ್ನುತ್ತಾರೆ. ಹೀಗೆ ತಿಳಿದವರಿಗೆ ಶಾಸ್ತ್ರಗಳಲ್ಲಿ ಪಾಂಡಿತ್ಯ ಬರುವುದು ಎಂದು ಲಕ್ಷ್ಮೀತಂತ್ರದ ನಿರುಕ್ತಿ. ಇಂಥ ಲಕ್ಷ್ಮೀದೇವಿಯನ್ನು ಮಂತ್ರದ್ರಷ್ಟಾ ಆದ ಋಷಿಯು, ಆವಳನ್ನು ಪ್ರಸನ್ನ ಳಾಗಿಸುವ ಅಂಜಲಿ ಮುದ್ರಾದಿಗಳಿಂದ ಇಲ್ಲಿ ಅಭಿಮುಖಳಾಗುವಂತೆ ಪ್ರಾರ್ಥಿ ಸುವ ಸಂನ್ನಿವೇಶ ಮಂತ್ರದಲ್ಲಿದೆ.

ಐದನೆಯ ಮಂತ್ರ

ಚಂದ್ರಾಂ ಪ್ರಭಾಸಾಂ ಯಶಸಾ ಜ್ವಲಂತೀಂ
ಶ್ರಿಯಂ ಲೋಕೇ ದೇವಜುಷ್ಟಾಂ ಉದಾರಾಂ ।
ತಾಂ ಪದ್ಮನೇಮಿಂ ಶರಣಮಹಂ ಪ್ರಪದ್ಯೇ
ಅಲಕ್ಷ್ಮೀರ್ಮೇ ನಶ್ಯತಾಂ ತ್ವಾಂ ವೃಣೇ ॥೫॥

ಅರ್ಥ : "ಚಂದ್ರನಂತೆ ಪ್ರಕಾಶಿಸುವವಳೂ, (ಸಂತೋಷವನ್ನುಂಟು ಮಾಡುವವಳೂ), ಚಿನ್ನಾದಿ ಪ್ರಭಾಮಂಡಲದೊಡಗೂಡಿದವಳೂ, ಕೀರ್ತಿಯಿಂದ ಉಜ್ಜ್ವಲಳಾಗಿರುವವಳೂ (ಐಶ್ವರ್ಯ, ಸಂಪತ್ತು ಔದಾರ್ಯಾದಿ ಗುಣಭೂಷಿತಳಾಗಿರುವವಳೂ) ಇಂದ್ರಾದಿ ಸಕಲದೇವತೆಗಳಿಂದಲೂ ಸ್ತುತಿಸಲ್ಪಡುವವಳೂ, ಸರ್ವವ್ಯಾಪಿನಿಯಾಗಿರುವವಳೂ (ಸಕಲ ವರಗಳನ್ನೂ ಮುಕ್ತಹಸ್ತದಿಂದನುಗ್ರಹಿಸುವವಳೂ), ಕೈಗಳಲ್ಲಿ ಪದ್ಮಗಳನ್ನು ಧರಿಸಿದವಳೂ (ಕೈಗಳೇ ಪದ್ಮದಂತಿರುವವಳೂ) ಆದ ಸುಪ್ರಸಿದ್ಧ ಯಶೋಗುಣ ಭೂಷಿತೆಯಾದ ಲಕ್ಷ್ಮೀದೇವಿಯನ್ನು ಶರಣು ಹೊಂದುತ್ತೇನೆ, (ಎಲೈ ದೇವಿ !) ನನ್ನ ದೌರ್ಭಾಗ್ಯವೂ, ದಾರಿದ್ರ್ಯವೂ ತೊಲಗಲಿ. ನಿನ್ನನ್ನು ರಕ್ಷಣಾರ್ಥವಾಗಿ ಕರೆಯುತ್ತೇನೆ. (ಅನುಗ್ರಹಿಸು.)"

ವಿವರಣೆ : ಹಿಂದಿನ ಮಂತ್ರದಲ್ಲಿ ಆಹೂತಳಾದ ದೇವಿಯು ಸಾಧಕನೆದುರು ಕಾಣಿಸಿಕೊಂಡಾಗ, ಸಾಧಕನ ಪ್ರಾರ್ಥನೆ ಹೀಗಿರುತ್ತದೆ. ಆಶ್ರಯಣೀಯಳಾದ ದೇವಿಯ ವಿಶಿಷ್ಟವಾದ ಇನ್ನಿತರ ಗುಣಗಳು ಇಲ್ಲಿ ವರ್ಣಿತವಾಗಿರುವುದಲ್ಲದೆ, ವಾಚಾ ತನ್ನ ದಾರಿದ್ರ್ಯಾದಿ ಪೀಡೆಗಳು ತೊಲಗುವಂತೆ, ತನ್ನಲ್ಲಿ ನಿತ್ಯವಾಸ ಮಾಡಬೇಕೆಂದು ಪ್ರಾರ್ಥಿಸಿರುವ ಈ ಮಂತ್ರವು ಬಹು ವಿಶಿಷ್ಟವಾದುದು. ಗುರೂಪದೇಶದಿಂದ ಇದನ್ನು ಪಡೆದು ಮೂರು ಮಂಡಲಕಾಲ (ಒಂದು ಮಂಡಲ = ೪೮ ದಿನಗಳು,) ಶುಚಿಯಾಗಿ ಜಪಿಸುವವರ ಸಕಲ ವಿಧ ದಾರಿದ್ರ್ಯವೂ ತೊಲಗುವುದೆಂದು 'ಭಾಗಧೇಯ ಭೂಷಣ'ವೆಂಬ ಗ್ರಂಥ ಹೇಳುತ್ತದೆ. ಅನುಭವದಲ್ಲೂ ಇದನ್ನು ಕಾಣುತ್ತೇವೆ. ಆದ್ದರಿಂದ ಸಕಲಲೋಕಕ್ಕೂ ಉಪಕಾರಕವಾಗಿದೆ ಈ ಮಂತ್ರ.

## ೧ ಚಂದ್ರಾಂ

ಈ ಶ್ರೀನಾಮಕ್ಕೆ ಮೊದಲನೆಯ ಮಂತ್ರದಲ್ಲೇ ವಿವರಣೆ ಕೊಟ್ಟಾ

ದಿದೆ, ಆದರೂ ಲಕ್ಷ್ಮೀತಂತ್ರದಲ್ಲಿ ಮತ್ತಷ್ಟು ವಿವರಣೆಗಳಿರುವುದನ್ನು ಈಗ ಇಲ್ಲಿ ಗಮನಿಸೋಣ :

ಉದ್ಗತಃ ಪ್ರಥಮೋ ಯೋಽಂಶುಃ ಕ್ಷೀರಾಸಾಗರಮನ್ಥನೇ ।
ಚಂದ್ರಾಖ್ಯಃ ಸ ಮದೀಯೋಽಂಶುಃ ಉದ್ಗಚ್ಛನ್ಮಾತ್ಯಃ
ಪುರಃಸರಃ ॥

ಋಷಯೋ ಮತ್ಪ್ರಭಾವಜ್ಞಾಃಮಾಂ ತು ಚಂದ್ರಾಂ ಪ್ರಚಕ್ಷತೇ ।
ಯಃ ಸ ಚಂದ್ರೋ ಮದಂಶೂನಾಂ ಕೋಟಿ ಕೋಟ್ಯಂಶ-
ಕೋಟಿಜಃ ॥

(ಶ್ಲೋ-೧೧೪-೫)

ಕ್ಷೀರಸಮುದ್ರವನ್ನು ಕಡೆಯುವಾಗ ಲಕ್ಷ್ಮೀದೇವಿಯು ಹೊರಹೊರಡುವ ಮುನ್ನ ಅವಳ ಕಿರಣವೊಂದು ಮುಂಚೆ ಹೊರಬಂದುದೇ ಚಂದ್ರನೆನಿಸಿತು· ಈ ಮಹಿಮೆಯನ್ನರಿತ ಋಷಿಗಳು— ಈಕೆಯ ಒಂದು ಕಿರಣವೇ ಇಷ್ಟು ಆಹ್ಲಾದಕರವಾಗಿರಬೇಕಾದರೆ, ಇವಳ ನಿಜಸ್ವರೂಪ ಪೂರ್ತಿ ಮತ್ತೆಷ್ಟು ಸಂತೋಷ ಕರವಾಗಿರಲು ಸಾಕು ! —ಎಂದರಿತು ಇವಳನ್ನೇ ಪೂರ್ಣಾರ್ಥದಲ್ಲಿ ಚಂದ್ರಾ ಎಂದು ಕರೆದರು. ಹೀಗೆ ಇವಳಿಂದಲೇ ಚಂದ್ರನಿಗೂ ಆ ಹೆಸರು ಬಂದಿತೇ ಹೊರತು, ಚಂದ್ರನಿಂದ ಇವಳಿಗೆ ಬಂದ ಹೆಸರು ಇದಲ್ಲ. ಏಕೆಂದರೆ ಇವಳ ಕಾಂತಿಕಿರಣಗಳ ಒಂದು ಕೋಟಿಯಲ್ಲಿ ಒಂದಂಶದ ಕೋಟಿ ಕೋಟಿ ಅಂಶ ಭಾಗ ಮಾತ್ರ ಚಂದ್ರನಲ್ಲಿರುವುದೆಂದರೆ ಇವಳ ಕಾಂತಿಯ ಪ್ರಭಾವ ತಿಳಿದೀತು.

## ೨ ಪ್ರಭಾಸಾಂ

ಜ್ವಲಂತೀಂ ಎಂಬ ಹಿಂದಿನ ಶ್ರೀನಾಮದಲ್ಲೇ ಈ ಶ್ರೀನಾಮದ

ಅರ್ಥವೂ ಬಂದಿದೆ, ಒಂದು ರೀತಿಯಲ್ಲಿ ಪ್ರಕೃಷ್ಟವಾದ ಬೆಳಕುಳ್ಳವಳು ಎಂದು ಸಾಯಣರೂ ಪೃಥ್ವೀಧರಾಚಾರ್ಯರೂ ವಿವರಿಸಿದ್ದಾರೆ. ಎಲ್ಲ ಲೋಕಗಳಿಗೂ ಸಾವಿರ ಚಂದ್ರರಷ್ಟು ಪ್ರಕಾಶ ಕೊಡುವವಳು ಎಂದು ಶ್ರೀರಂಗನಾಥ ಮುನಿಗಳ ವ್ಯಾಖ್ಯೆ. ಲಕ್ಷ್ಮೀತಂತ್ರದಲ್ಲಿ ಹೀಗಿದೆ :

ಪ್ರಕೃಷ್ಯಮಾಣಾ ಭಾಸೋ ಮೇ ಸರ್ವಾವಸ್ಥಾಸು ಸರ್ವದಾ ।
ಯೇನೇಚ್ಛತಿ ತಿರೋಧಾತುಂ ತನ್ಮೇ ಭಾಸಾ ತಿರೋ ಹಿತಂ ॥
ಯಥಾ ಹಿ ಸ್ವಶಿರಚ್ಛಾಯಾ ಸ್ವಪದಾ ನೈವ ಲಂಘ್ಯತೇ ।
ಸಾ ಪದಾದಗ್ರತೋ ಯಾತಿ ಯೇನ ಲಂಘನ ಮಿಚ್ಛತಿ ॥
ನಿತ್ಯೋದಿತ ಚಿದಾನಂದಾ ಮತ್ಪ್ರಭಾಃ ಸತತೋಜ್ವಲಾಃ ।
ಶ್ರದ್ಧಾಂ ಸೋಮಮಪೋನ್ನಂ ಚ ವೀರ್ಯಂ ಹರಿರಿತಿ
ಕ್ರಮಾತ್ ॥
ಭೋಗ್ಯಶಕ್ತಿಪಭಾ ಏತಾ ಅಸ್ಯಂತೀ ಷಟ್ಸು ವಹ್ನಿಸು ।
ಪ್ರಭಾಸಾ ಮುನಿಭಿಃ ಪ್ರೋಕ್ತೋ ತಂತ್ರವೇದಾಂತ ಪಾರಗೈಃ ॥
(ಶ್ಲೋ. ೧೧೭–೧೨೦)

ಯಾವಾಗಲೂ, ಎಲ್ಲಾ ಅವಸ್ಥೆಗಳಲ್ಲೂ ಲಕ್ಷ್ಮೀದೇವಿಯ ಕಾಂತಿಕಿರಣಗಳು ತುಂಬಾ ಪ್ರಕಾಶಮಾನವಾಗಿಯೇ ಇರುತ್ತವೆ. "ಯಾವ ಬೇರೊಂದು ಪ್ರಕಾಶ ದಿಂದ ಯಾರೊಬ್ಬನು ನನ್ನ ಪ್ರಕಾಶ ಕಿರಣವನ್ನು ಮುಚ್ಚಲು ಯತ್ನಿಸು ವನೋ, ಅದೇ ನನ್ನ ಕಿರಣಗಳಿಂದ ಮರೆಯಾಗುತ್ತದೆ. ಹೇಗೆಂದರೆ, ಒಬ್ಬನು ತನ್ನ ತಲೆಯ ನೆರಳನ್ನು ತನ್ನ ಕಾಲಿನಿಂದ ದಾಟಲಾರನೋ ಹಾಗೆ! ಯಾವ ಕಾಲಿನಿಂದ ಆ ತಲೆಯ ನೆರಳನ್ನು ದಾಟಲಿಚ್ಛಿಸುವನೋ, ಆ ಕಾಲಿ ಗಿಂತ ಮುಂಚೆಯೇ ಆ ತಲೆಯ ನೆರಳು ಹೊರಡುವುದಷ್ಟೆ! ಹಾಗೇ ಇದೂ ಸಹ." ಎಂದು ಲಕ್ಷ್ಮೀದೇವಿಯೇ ವಿವರಿಸಿದ್ದಾಳೆ. ಪ್ರಭಾಃ ಅಸ್ಯತೀತಿ ಪ್ರಭಾಸಾ ಎಂಬ ಇನ್ನೊಂದು ನಿರುಕ್ತವನ್ನೂ ಇಲ್ಲಿ ಹೇಳಿದೆ. "ಕಿರಣಗಳನ್ನು (ಅಗ್ನಿಗಳಲ್ಲಿ) ಸೇರಿಸುವವಳಾದ್ದರಿಂದ ಪ್ರಭಾಸಾ" ಎಂದರ್ಥ, ಪಂಚಾಗ್ನಿ

ವಿದ್ಯೆಯೆಂಬ ಬ್ರಹ್ಮವಿದ್ಯೆಯೊಂದುಂಟು. (ವೇದಸಂಸ್ಕೃತಿಯ ಪರಿಚಯ, ಸಂಪುಟ ೧, ಪುಟ ೧ ರಿಂದ ೧೩ ರನ್ನು ನೋಡಿರಿ.) ಜ್ಞಾತೃಸ್ವರೂಪನಾದ ಜೀವಾತ್ಮನು ಕರ್ಮಫಲವನ್ನು ಅನುಭವಿಸಿ ಮುಗಿಸಿದ ನಂತರ ಮತ್ತೆ ಭೂಮಿಯಲ್ಲಿ ಜನಿಸುವ ಬಗೆಯನ್ನು ತಿಳಿಸುವುದು ಈ ವಿದ್ಯೆ. ಮತ್ತೆ ದೇಹಸಂಬಂಧವನ್ನು ಹೊಂದುವ ಮುನ್ನ ಇವನು ಐದು ಬಗೆಯ ಅಗ್ನಿ ಗಳಲ್ಲಿ ಪ್ರವೇಶಮಾಡಿ ಬರಬೇಕಾಗುತ್ತದೆಂದು ಉಪನಿಷತ್ತು ಹೇಳುತ್ತದೆ.

ಶ್ರದ್ಧೆಯಿಂದ — ಸೋಮ (ದ್ಯುಲೋಕಾಗ್ನಿ)
ಸೋಮನಿಂದ — ಮಳೆ (ಪರ್ಜನ್ಯಾಗ್ನಿ),
ಮಳೆಯಿಂದ — ಅನ್ನ (ಪೃಥ್ವಿಯೇ ಅಗ್ನಿ —ಪಾರ್ಥಿವಾಗ್ನಿ),
ಅನ್ನದಿಂದ — ಪುರುಷ (ಪುರುಷನ ರೇತಸ್ಸೇ ಅಗ್ನಿ),
ರೇತಸ್ಸಿನಿಂದ — ಸ್ತ್ರೀಯಲ್ಲಿ (ಸ್ತ್ರೀ ಎಂಬುದೇ ಅಗ್ನಿ)-ಶಿಶುವಾಗಿ ಜನನ

(ಇದು ಛಾಂದೋಗ್ಯೋಪನಿಷತ್ತಿನಲ್ಲಿ, V-3 ಯಲ್ಲಿ ಒಂದು ಆಖ್ಯಾನ ರೂಪದಲ್ಲಿ ಉಕ್ತವಾಗಿದೆ.)

ಈ ಐದಲ್ಲದೆ, ಲೋಕಪ್ರಸಿದ್ಧವಾದ ಅಗ್ನಿಯಲ್ಲಿ ಅರ್ಪಿಸಲ್ಪಡುವ ಹವಿಸ್ಸೆಂಬ ಪ್ರಕಾಶ ಕಿರಣವೂ ಒಂದುಂಟು. ಇದನ್ನು ಕೂಡಿಸಿದರೆ, ಒಟ್ಟು ಆರು ಕಿರಣಗಳನ್ನು (ಆಹುತಿಗಳನ್ನೂ) ಆ ಆ ಅಗ್ನಿಗಳಲ್ಲಿ ಸೇರಿಸುವವಳಾ ದುದರಿಂದ ಲಕ್ಷ್ಮಿಯು ಪ್ರಭಾಸಾ ಎನಿಸುವಳೆಂದು ಇಲ್ಲಿನ ವಿವರಣೆ. ಚೇತ ನನು ಕರ್ಮಭೋಗಾನಂತರ ಪುನಃ ದೇಹಾಂತರ ಪ್ರಾಪ್ತಿ ಹೊಂದುವುದೂ ಇವಳ ಪ್ರಭಾವದಿಂದಲೇ ಎಂದರ್ಥ.

## ೨ ಯಶಸಾ(ಂ) ಜ್ವಲಂತೀಂ

ಕೆಲವು ಪಾಠಗಳಲ್ಲಿ ಯಶಸಾಂ ಎಂದಿರುವುದು. ಕೀರ್ತಿಯುಳ್ಳವ

ಳೆಂದರ್ಥ. ಆತ್ಮಕಾಂತಿಯುಳ್ಳವಳೆಂದು ಭಾವ. 'ಯಶಸಾ ಜ್ವಲಂತೀಂ' ಎಂದರೂ ತನ್ನ ಕೀರ್ತಿಯಿಂದಲೇ ಬೆಳಗುವವಳು ಎಂದರ್ಥ. ವಿದ್ಯಾರಣ್ಯಾದಿಗಳು ಹೀಗೆಯೇ ಗ್ರಹಿಸಿರುತ್ತಾರೆ. ಶ್ರೀರಂಗನಾಥ ಮುನಿಗಳೂ ಹೀಗೆಯೇ ಬಿಡಿಸಿ ಗ್ರಹಿಸಿದ್ದರೂ ಯಶಸೆಂಬುದಕ್ಕೆ ವಿಲಕ್ಷಣವಾದ ಅರ್ಥ ಬರೆದಿದ್ದಾರೆ. "ದೇವಸ್ಯ ಸರ್ವೇಶ್ವರಸ್ಯ ಸಹಧರ್ಮ ಚಾರಿಣೀತ್ವೇನ, ಸರ್ವಲೋಕವಿದಿತೇನ ಗುಣತತ್ತ್ವ ಸೌಭಾಗ್ಯೇನ ಯಶಸಾ, ಜ್ವಲತೀಂ —ನಿರತಿಶಯ ಮಂಗಲ ವಿಭೂತ್ಯಾದಿಮತ್ತಯಾ ತಥಾವಿಧ ಗುಣವಿಭೂತ್ಯಾದಿ ಪ್ರದತಯಾ ಅನುಗ್ರಹೈಕ ಸ್ವರೂಪತಯಾ ಚ ದೀಪ್ಯಮಾನಾಂ" ಎಂದು. "ಸರ್ವೇಶ್ವರನಾಗಿ ಬೆಳಗುವ ಭಗವಂತನಿಗೆ ಸಹ ಧರ್ಮಚಾರಿಣಿಯಾಗಿರುವ ಪ್ರಯುಕ್ತ ಎಲ್ಲ ಲೋಕದಲ್ಲೂ ಪ್ರಸಿದ್ಧವಾದ ತನ್ನ ಗುಣ, ತತ್ತ್ವ, ಸೌಭಾಗ್ಯದಿಂದ, (ಇದೇ ಅವಳ ಯಶಸ್ಸು), ನಿರತಿಶಯಮಂಗಲವಾದ ವಿಭೂತ್ಯಾದಿಗಳನ್ನು, ಹೊಂದಿ, ಅಂಥ ಗುಣವಿಭೂತಿಗಳನ್ನು (ಭಕ್ತರಿಗೆ) ದಾನಮಾಡಿ ಅನುಗ್ರಹಿಸುವುದೊಂದನ್ನೇ ಸ್ವರೂಪವಾಗಿ ಉಳ್ಳದ್ದರಿಂದ ಬೆಳಗುವವಳು" ಎಂದರ್ಥ. ಪರಮಾತ್ಮನ ಪತ್ನಿಯಾಗಿ ಯಶಸ್ವಿನೀ; ಪರಮಾತ್ಮನ ನಿತ್ಯವಾಸಸ್ಥಾನವನ್ನು ಭಕ್ತರಿಗೂ ಕೊಡಿಸುವವಳಾಗಿ ಈ ಕೀರ್ತಿ ಮತ್ತಷ್ಟು ಬೆಳಗುತ್ತದೆ ಎಂದು ಭಾವ. ಲಕ್ಷ್ಮೀತಂತ್ರವೂ ವಿಚಿತ್ರವಾಗಿ ವಿವರಿಸಿದೆ.

ಯಶೋ ಯದುಜ್ವಲಂ ಲೋಕೇ ವಿದ್ಯಾದಾನಾದಿ ಸಂಭವಂ ।
ಮದೀಯಂ ಮದ್ಯಶಃ ತಚ್ಚ ನಾನಾರೂಪಂ ವಿಭಜ್ಯತೇ ॥
ಮಾಮೇವ ಭಾಜನಂ ವಿದ್ಧಿ ಯಶಸಸ್ತೇಜಸಃ ಶ್ರಿಯಃ ।
ಅತೋ ಯಶಸ್ವಿನೀಂ ತಾಂ ಮಾಂ ಯಶಸೇತಿ
ವಿದುರ್ಬುಧಾಃ ॥ (ಶ್ಲೋ. ೧೨೧-೧೨೨)

ವಿದ್ಯೆ, ದಾನ, ಮೊದಲಾದುವುಗಳಿಂದ ಸಂಭವಿಸುವ ಯಶಸ್ಸು ಲೋಕದಲ್ಲಿ ಬಹುವಿಧವಾಗಿ ಕಾಣತಕ್ಕದ್ದೆಲ್ಲಾ ಲಕ್ಷ್ಮಿಯ ಕೀರ್ತಿಯೇ. ಯಶಸ್ಸಿಗೂ, ಕಾಂತಿಗೂ, ಸೌಂದರ್ಯಕ್ಕೂ ಇವಳೇ ನಿತ್ಯವಾಸಸ್ಥಾನವಾಗಿರುವವಳು. ಆದ್ದ

ರಿಂದಲೇ ಜ್ಞಾನಿಗಳು ಇವಳನ್ನು ಯಶಸ್ಸು ಎನ್ನುವರು; (ಯಶಸ್ಸುಳ್ಳವ ಳೆಂದು ಭಾವ.)

ಜ್ವಲಂತೀ ಎಂದರೆ ಹಿಂದೆಯೇ ವಿವರಿಸಿದೆ. ಆದರೂ ಲಕ್ಷ್ಮೀತಂತ್ರ ಮುಂದುವರೆದು ಹೀಗೆನ್ನುತ್ತದೆ.

ಸ್ವರ್ಗ ಪರ್ಜನ್ಯ ಭೂ ಪುಂಸ್ತ್ರೀ ವೈಶ್ವಾನರ ವಿಭಾಗತಃ ।
ಆದದಾನಾ ಹವಿಃಪ್ರಾಪ್ತಂ ಶ್ರದ್ಧಾ ಸೋಮಾದಿ ಸಂಜ್ಞಿತಂ ॥
ಷೋಢಾತ್ಮಾನಂ ವಿಭಜ್ಯಾಹಂ ಅಗ್ನಿಭಾವಮುಪಾಗತಾ ।
ಜ್ವಲಂತೀ ಮುನಿಭಿರ್ಗೀತಾ ಭೋಕ್ತ್ರ್ಯ ಶಕ್ತಿಪ್ರಭೋಜ್ವಲಾ ॥
ಅಗ್ನೀಷೋಮವಿಭಾಗೇನ ವಿಶ್ವಮೇವಂ ಭಜಾಮ್ಯಹಂ ॥

(ಶ್ಲೋ. ೧೨೪–೧೨೬)

ಲಕ್ಷ್ಮಿಯು ತಾನೇ ಆ ಅಗ್ನಿಗಳ ರೂಪದಲ್ಲಿ (ಸ್ವರ್ಗ, ಪರ್ಜನ್ಯಾದಿ ಹಿಂದೆ ಹೇಳಲ್ಪಟ್ಟವುಗಳಲ್ಲಿ) ಇದ್ದುಕೊಂಡು, ಶ್ರದ್ಧೆ, ಸೋಮಾದಿ ಹವಿಸ್ಸು ಗಳನ್ನು ಸ್ವೀಕರಿಸುತ್ತಾ, ಭೋಕ್ತೃಶಕ್ತಿಗಳಾದ ಪ್ರಭೆಗಳಿಂದ ಬೆಳಗುವ ಅಗ್ನಿಗಳ ರೂಪದಲ್ಲಿರುವುದರಿಂದ, ಮುನಿಗಳು ಇವಳನ್ನು ಜ್ವಲಿಸುವಳೆಂದು ಕೊಂಡಾಡುತ್ತಾರೆ. ಇವಳೇ ಅಗ್ನಿಭಾವದಲ್ಲಿರುವುದರಿಂದ ಅಗ್ನಿ ವಿಶೇಷಣ ಇವಳಿಗೆ ಒಪ್ಪುತ್ತದೆಂದು ಭಾವ. ಹೀಗೆ ಅಗ್ನಿ, ಸೋಮಾದಿಗಳಲ್ಲಿರುವ ಬೆಳಕೆಲ್ಲ ಇವಳದೇ.

## ೪ ದೇವಜುಷ್ಟಾಂ

"ಇಂದ್ರಾದಿಸೇವಿತಾಂ" ಎಂದು ಪೃಥ್ವೀಧರರೂ, "ದೇವೈರಿಂದ್ರಾದ್ಯೈ ಸೇವಿತಾಂ, ಪ್ರೀತಾಂ ವಾ" ಎಂದು ವಿದ್ಯಾರಣ್ಯರೂ ವಿವರಿಸಿದ್ದಾರೆ. "ಇಂದ್ರಾದಿದೇವತೆಗಳಿಂದ ಸೇವಿಸಲ್ಪಡುವವಳು, ಪ್ರೀತಿಗೊಳಿಸಲ್ಪಡು

ವವಳು" ಎಂದರ್ಥ. ಇಂದ್ರಾದಿಗಳಲ್ಲದೆ, ಅನಂತ ಗರುಡಾದಿ ನಿತ್ಯಸೂರಿಗಳಿಂದಲೂ, ತಂತಮ್ಮ ಭಗವತ್ಕೈಂಕರ್ಯ ಲಾಭಾರ್ಥವಾಗಿ, ಅದರ ವೃದ್ಧಿಗಾಗಿ, ಆನಂದಪ್ರಾಪ್ತಿಗಾಗಿ, ಸೇವಿಸಲ್ಪಡುವವಳು ಎಂಬ ಹೆಚ್ಚಿನ ಅರ್ಥ ನಂಜೀಯರರ ಭಾಷ್ಯದಲ್ಲಿದೆ. ಲಕ್ಷ್ಮೀತಂತ್ರದ ವಿವರಣೆ ಬೇರೆ ರೀತಿಯಾಗಿದೆ,

ದೇವೇನ ಹರಿಣಾ ಜುಷ್ಟಾಂ ಸದಾ ದೇವೈಶ್ಚ ಸೇವಿತಾ ।
ದೇವಾಶ್ಚ ಮಾಮುಪಾಶ್ರಿತ್ಯ ವಿಷಯಾನ್ ಪ್ರತ್ಯವಸ್ಥಿತಾಃ ॥
ಪರಿಣಾಮ ವಿಶೇಷತ್ವಾತ್ ಪ್ರಕೃತೇಸ್ತೇಹ್ಯಚೇತನಾಃ ।
ಅತೋ ಮಚ್ಛಕ್ತಿಮಾದಾಯ ಶುದ್ಧಸಂವಿತ್
ಕ್ರಿಯಾಮಯೀಂ ॥
ವಿಷಯೇಷು ಪ್ರವರ್ತನ್ತೇ ಶ್ರೋತ್ರವಾಙ್ಮನ ಆದಯಃ ।
ವೃತ್ಯರ್ಥಂ ಸೇವಿತಾಂ ಅಕ್ಷೈಃ ದೇವಜುಷ್ಟಾಂ ತು ಮಾ ವಿದುಃ ॥
(ಶ್ಲೋ. ೧೨೭-೯.)

ಇಲ್ಲಿ ಮೂರರ್ಥಗಳು ಹೇಳಲ್ಪಟ್ಟಿವೆ. (೧) ದೇವೋತ್ತಮನಾದ ಶ್ರೀ ಹರಿಯೊಡನೆ ಕೂಡಿದ್ದು ಪ್ರೀತಿಯುಳ್ಳವಳು. (ಜುಷ–ಪ್ರೀತಿ, ಸೇವನಯೋಃ, ಧಾತು.) (೨) ದೇವತೆಗಳಿಂದ ಸದಾ ಸೇವಿಸಲ್ಪಡುವವಳು. (೩) ಪಂಚೇಂದ್ರಿಯಗಳಲ್ಲಿರುವ ದೇವತೆಗಳು ಇವಳನ್ನಾಶ್ರಯಿಸಿಯೇ ವಿಷಯಾನುಭವವನ್ನು ಹೊಂದುವರು. ಇಂದ್ರಿಯಗಳು ಪ್ರಕೃತಿವಿಕಾರವಾದುದರಿಂದ ಸ್ವಯಂ ಅನುಭವಶೂನ್ಯವಾದುವು. ಶುದ್ಧವಾದ ಜ್ಞಾನಕ್ರಿಯಾ ರೂಪದ ಇವಳ ಶಕ್ತಿಯನ್ನಾಶ್ರಯಿಸಿಯೇ ಅವು ವಿಷಯಾದಿಗಳಲ್ಲಿ ತೊಡಗುವುವು. ಹೀಗೆ ಇಂದ್ರಿಯಗಳೂ (ಅಲ್ಲಿರುವ ದೇವತೆಗಳೂ) ಇವಳ ಕೃಪೆಯಿಂದಲೇ ಅನುಭವ ಸಮರ್ಥವಾಗುವುದರಿಂದ ಲಕ್ಷ್ಮಿಯು ದೇವಜುಷ್ಟಳೆನಿಸುವಳು.

## ೫೨ ಉದಾರಾಂ

ವ್ಯಾಪಿನಿಯೆಂದು ಪೃಥ್ವೀಧರರೂ, ಪ್ರಗಲ್ಭೆಯೆಂದು ವಿದ್ಯಾರಣ್ಯರೂ ಈ ಶ್ರೀನಾಮಕ್ಕೆ ಅರ್ಥಮಾಡಿರುತ್ತಾರೆ. ಶ್ರೀರಂಗನಾಥ ಮುನಿಗಳು ದೇವತೆಗಳಿಗೂ ಸರ್ವಕಾಮಪ್ರದಳು ಎಂದು ವಿವರಿಸಿದ್ದಾರೆ. ಈ ಔದಾರ್ಯ ಗುಣವನ್ನು ಶ್ರೀ ಪರಾಶರಭಟ್ಟರು ಪರಮಭೋಗ್ಯರೀತಿಯಲ್ಲಿ ವಿವರಿಸಿರುವುದು ಪ್ರಸಿದ್ಧ. ಭಕ್ತರಿಗೆ ಬೇಕಾದ ಐಶ್ವರ್ಯವನ್ನೋ, ಕೈವಲ್ಯವನ್ನೋ, ಪರಮಪದವನ್ನೋ ಕೊಟ್ಟನುಗ್ರಹಿಸಿದರೂ, ಇವರಿಗೆ ಉಚಿತವಾದ ಇನ್ನೂ ಬೇರೆ ಏನನ್ನೂ ಕೊಡಲಾಗಲಿಲ್ಲವೆಂದು ಲಜ್ಜೆಪಡುವ ಸ್ವಭಾವವೇ ಇದು ಎಂದು ಆಚಾರ್ಯರ ವಿವರಣೆ. (ಶ್ರೀಗುಣರತ್ನಕೋಶ, ಶ್ಲೋ. ೫೮. ಮೂಲವನ್ನು ಹಿಂದೆಯೇ ಕೊಟ್ಟಿದೆ.) ಲಕ್ಷ್ಮೀತಂತ್ರವೂ ಇದನ್ನೇ ಬೇರೆ ರೀತಿಯಲ್ಲಿ ಹೇಳಿದೆ.

ಮತ್ತ ಏವೋದ್ಗತಾನೀಹ ವಿಜ್ಞಾನಾನಿ ಮಹರ್ಷಿಣಾಂ ।
ಶಕ್ತಯಶ್ಚ ಕ್ರಿಯಾಶ್ಚೈವ ಯಾಸ್ತಾ ಉಚ್ಚಾವ ಚಾ ನೃಣಾಂ ॥
ವಿಶೃಂಖಲೇಷ್ಟದಾಂ ಚಾಪಿ ಮಾಮುದಾರಾಂ ವಿದುರ್ಬುಧಾಃ ।

ಮಹರ್ಷಿಗಳ ಅಪೂರ್ವಜ್ಞಾನವೂ, ಮನುಷ್ಯರ ವಿವಿಧ ಶಕ್ತಿ, ಕ್ರಿಯಾಸಾಮರ್ಥ್ಯಾದಿಗಳೂ ಇವಳಿಂದಲೇ ಅವರಿಗೆ ಉಂಟಾದವಾದಕಾರಣ, ಅಡೆತಡೆಯಿಲ್ಲದೆ ಇಷ್ಟಾರ್ಥಗಳನ್ನನುಗ್ರಹಿಸುವ ಇವಳನ್ನು ವಿದ್ವಾಂಸರು ಉದಾರೆಯೆನ್ನುತ್ತಾರೆ.

## ೬೦ ಪದ್ಮನೇಮಿಂ

ಕೈಗಳಲ್ಲಿ ಪದ್ಮವನ್ನು ಧರಿಸಿದವಳೆಂದೂ, ಪದ್ಮಲತೆಯಂತಿರುವವ

ಳೆಂದೂ, ಪದ್ಮಾಕಾರದಲ್ಲಿರುವವಳೆಂದೂ ವಿದ್ಯಾರಣ್ಯರ ವಿವರಣೆ. ಶ್ರೀರಂಗನಾಥಮುನಿಗಳು ಬೇರೆ ಸಾಂಕೇತಿಕ ವಿವರಣೆ ನೀಡಿದ್ದಾರೆ. ಹೇಗೆಂದರೆ, "ಪದ್ಮಮೇವ ನೇಮಿಃ, ನಯನಸಾಧನಂ ಯಸ್ಯಾಃ ಸಾ ಪದ್ಮನೇಮಿಃ । ಕರತಲಕಲಿತೇನ ಪದ್ಮೇನ ಸಮಾಶ್ರಿತಾನಾಂ ಸರ್ವೇಷಾಂ ಸರ್ವಮನಿಷ್ಟಮಪಹಾಯ ಸರ್ವಕಾಲಂಸ್ವಚರಣಾಂಭೋಜಂ ಪ್ರಾಪಯಂತೀಂ ಇತ್ಯರ್ಥಃ ।" ತಾವರೆಹೂವು (ತನ್ನ ಬಳಿ ಭಕ್ತರನ್ನು) ಕರೆತರಲು ಯಾವಳಿಗೆ ಸಾಧನವೋ ಅವಳೇ ಪದ್ಮನೇಮಿ ಎನಿಸುವಳು ಕೈಯಲ್ಲಿ ಧರಿಸಿದ ಪದ್ಮದಿಂದ ಸಮಾಶ್ರಿತರ ಎಲ್ಲ ಅನಿಷ್ಟಗಳನ್ನೂ ಪರಿಹರಿಸಿ, ಸದಾಕಾಲವೂ ತನ್ನ ಪಾದಪದ್ಮಗಳಲ್ಲಿ ಅವರನ್ನು ತಂದು ಸೇರಿಸಿಕೊಳ್ಳುವವಳು." ಎಂದರ್ಥ. ಭಕ್ತರ ಕಷ್ಟನಿವಾರಣೆಯನ್ನು ತಾನು ಮಾಡುವಳೆಂಬುದಕ್ಕೂ, ಅವರಿಗೆ ತನ್ನ ಪಾದಾಶ್ರಯವುಂಟೆಂಬುದಕ್ಕೂ ಪದ್ಮವು ಸಂಕೇತವೆಂಬಂತಿದೆ ಈ ವಿವರಣೆ.

"ಪದ್ಮಾನ್, ಪ್ರಕೃತಿಪುರುಷಾನ್ ನಯತೀತಿ ಪದ್ಮನೇಮಿಃ" ಎಂಬ ಇನ್ನೊಂದು ಪ್ರಾಚೀನ ನಿರ್ವಚನವನ್ನು ಕೆಲವರು ಹೇಳುವುದುಂಟು. "ವಿಕಸಿತಾವಸ್ಥೆಯಲ್ಲಿರದ ಪ್ರಕೃತಿ, ಪುರುಷರೆಂಬ ಪದ್ಮಗಳನ್ನು ವಿಕಸಿಸುವಂತೆ ಮಾಡುವವಳು" ಎಂದರ್ಥ. ಇವಳ ಲೀಲೆಗೋಸ್ಕರವೇ ಭಗವಂತನು ಸೃಷ್ಟ್ಯಾದಿ ವ್ಯಾಪಾರಗಳಲ್ಲಿ ತೊಡಗುತ್ತಾನೆಂದು ಈ ಹಿಂದೆ ಹೇಳಿದಂತೆ ನೋಡಿದಾಗ, ಜಗತ್ತು ಲಕ್ಷ್ಮೀಕಟಾಕ್ಷಕ್ಕಾಗಿ ಕಾದಿರುವ ಮುಗ್ಧ ತಾವರೆಯಂತಿದೆ ಎಂಬ ಸೂಚನೆ ಈ ಅರ್ಥದ ಮೂಲಕ ಬರುತ್ತದೆ.

ಯಸ್ಯಾಃ ಕಟಾಕ್ಷಮೃದುವೀಕ್ಷಣದೀಕ್ಷಣೇನ
ಸದ್ಯಸ್ಸಮುಲ್ಲಸಿತಪಲ್ಲವಮುಲ್ಲಲಾಸ ।
ವಿಶ್ವಂ ವಿಪರ್ಯಯ ಸಮುತ್ಥವಿಪರ್ಯಯಂ ಪ್ರಾಕ್
ತಾಂ ದೇವದೇವ ಮಹಿಷೀಂ ಶ್ರಿಯಮಾಶ್ರಯಾಮಃ ॥

(ಶ್ರೀಸ್ತವ, ಶ್ಲೋ ೧೧)

ಎಂಬ ಶ್ರೀವತ್ಸ ಚಿಹ್ನ ಮಿಶ್ರರ ಶ್ಲೋಕಾರ್ಥ ಇಲ್ಲಿ ಅನುಸಂಧೇಯ.

ಹಿಂದೆಯೇ ಹೇಳಿದಂತೆ ಕಾಲವನ್ನೇ ಪದ್ಮವೆನ್ನುವುದಾದರೆ, (ಪದ್ಯ ಮಾನಂ ಮಿನೋತೀತಿ ಕಾಲಂ ಪದ್ಮಂ ಪ್ರಚಕ್ಷತೇ, ಲಕ್ಷ್ಮೀತಂತ್ರ), ನೇಮಿ ಎಂದರೆ ಈ ಚಕ್ರದ ಪರಿಧಿ, ಹೊರಮಿತಿ. ಹಾಗೆ ಕಾಲಕ್ಕೆ ಹೊರಗಿರುವವಳು ಪದ್ಮನೇಮಿಯೆಂದಾದರೆ, ಕಾಲಾತೀತಳಾದವಳು ಎಂದೊಂದರ್ಥವೂ ಸಿದ್ಧಿಸುವುದು. ಈ ಎರಡರ್ಥಗಳನ್ನೂ ಲಕ್ಷ್ಮೀತಂತ್ರ ಹೀಗೆ ವಿವರಿಸಿದೆ :

ಪ್ರಕೃತಿಂ ಪುರುಷಂ ಚೈವ ನಯಾಮಿ ಸ್ವೇನ ತೇಜಸಾ ।
ಕಾಲಾಚ್ಚಾಪಿ ಬಹಿರ್ಭೂತಾತ್ವಾ ಪದ್ಮನೇಮಿಂ ತತೋ ವಿದುಃ ॥
(ಶ್ಲೋ, ೧೩೫)

ವಿಶೇಷ : "ಇಂಥ ಲಕ್ಷ್ಮೀದೇವಿಯನ್ನು" ಎಂಬರ್ಥದಲ್ಲಿ "ತಾಂ" ಎಂದು ಮೂಲಮಂತ್ರದಲ್ಲಿ ಬಂದಿರುವ ಶಬ್ದವನ್ನು (ಸರ್ವನಾಮ), ಲಕ್ಷ್ಮೀತಂತ್ರವು ನಾಮವಾಚಕವಾಗಿಯೇ ಗ್ರಹಿಸಿ, ಈ ಶ್ರೀನಾಮಕ್ಕೂ ಹೀಗೆ ವ್ಯಾಖ್ಯಾನ ಮಾಡಿದೆ.

ತನೋಮಿ ಪಂಚಕೃತ್ಯಾನಿ ತಾಯೇ ಚ ಜಗದಾತ್ಮನಾ ।
ತಾಂ ಮಾಂ ತಾಮಿತಿ ತತ್ವಜ್ಞಾಃ ಪ್ರಾಹುರ್ವೇದಾನ್ತ
ಪಾರಗಾಃ ॥ (ಶ್ಲೋ. ೧೩೩)

೧) ಭಗವದ್ಭಕ್ತರು ದಿವಸವನ್ನು ಐದು ಭಾಗಮಾಡಿ, ಆ ಐದರಲ್ಲೂ ಕ್ರಮವಾಗಿ ನಡೆಸಬೇಕಾದ ದೈವಿಕ ಕಾರ್ಯಕ್ರಮಗಳನ್ನು ಪಂಚಕೃತ್ಯವೆನ್ನುವರು, (ಪಾಂಚರಾತ್ರ ತತ್ವದಂತೆ, ಬೆಳಿಗ್ಗೆ ಎದ್ದು ಶುದ್ಧನಾಗಿ ಮಾಡಬೇಕಾದ ಅಭಿಗಮನವೆಂಬ ದೇವಪೂಜೆ, ಮಾಧ್ಯಾಹ್ನಿಕ ಪೂಜೆಗೆ ಬೇಕಾದ ದ್ರವ್ಯಗಳನ್ನು ಶೇಖರಿಸುವ ಉಪಾದಾನ, ಮಾಧ್ಯಾಹ್ನಿಕ ಪೂಜೆಯಾದ ಇಜ್ಯಾ, ಇದಾದಮೇಲೆ ಮಾಡುವ ಸ್ವಾಧ್ಯಾಯ, ಕೊನೆಯಲ್ಲಿ ಯೋಗ, ಇವೇ ಪಂಚಕೃತ್ಯಗಳು.) ಇವನ್ನು ತನೋತಿ, (ತನು–ವಿಸ್ತಾರೇ ಧಾತುವಿನಂತೆ,) "ವಿಸ್ತರಿಸಿ ನಡೆಸಿಕೊಡುವವಳು" ಲಕ್ಷ್ಮೀದೇವಿಯಾದ್ದರಿಂದ ಅವಳಿಗೆ 'ತಾ' ಎಂದು ಹೆಸರು.

೨) "ತಾಯೃ–ಸಂತಾನ ಪಾಲನಯೋಃ" ಧಾತುವಿನಂತೆ, "ತಾನೇ

ಜಗದಾಕಾರದಲ್ಲಿ ಪರಿಣಮಿಸುವವಳು" (ಅದರ ಅಭಿಮಾನಿಯಾಗಿ ಲೋಕದಲ್ಲೆಲ್ಲ ವ್ಯಾಪಿಸಿರುವವಳು) ಎಂದೂ 'ತಾ' ಎನಿಸುವಳು. (ಮೂಲ ಪ್ರಕೃತಿಗೆ ಲಕ್ಷ್ಮೀದೇವಿಯು ಅಭಿಮಾನೀ ಎಂಬುದು ಪ್ರಸಿದ್ಧವಷ್ಟೆ.) ಹೀಗೆ ತಾಂ ಎಂದರೆ 'ತಾ' ಶಬ್ದವಾಚ್ಯಳಾದವಳನ್ನು ಎಂಬರ್ಥವನ್ನು ತಂತ್ರದಲ್ಲಿ ಹೇಳಿದೆ.

## ೭ ಮಂತ್ರೋಪಸಂಹಾರ, ಪ್ರಾರ್ಥನೆ

ಇಂಥ ದೇವಿಯನ್ನು ಉಪಾಸಕನು 'ಶರಣಂ ಪ್ರಪದ್ಯೇ' ಎಂದು ಮಾಚಿಕವಾಗಿ, ಕಾಯಿಕವಾಗಿ ಶರಣಾಗತಿ ಮಾಡಬೇಕಾದ್ದನ್ನು ಮಂತ್ರವು ವಿಧಿಸಿದೆ. ಅಹಂ ಎಂಬಲ್ಲಿ ಆಕಿಂಚನ್ಯ ಭಾವವನ್ನೂ (ನನ್ನಲ್ಲಿ ಯಾವ ಯೋಗ್ಯತೆಯೂ ಇಲ್ಲವೆಂಬ ಭಾವವನ್ನೂ) ಅನುಸಂಧಿಸಬೇಕೆಂದು ನಂಜೀಯರರ ಭಾಷ್ಯದ ವಿವರಣೆ.

ಈ ಶರಣಾಗತಿಯ ಉದ್ದೇಶ್ಯವೇನೆಂದರೆ— "ಅಲಕ್ಷ್ಮೀರ್ಮೇ ನಶ್ಯತಾಂ" —"ನನ್ನ ದೌರ್ಭಾಗ್ಯ, ದಾರಿದ್ರ್ಯ ತೊಲಗಲಿ" ಎಂಬುದು. ಈ ದೌರ್ಭಾಗ್ಯ ಯಾವುದೆಂದರೆ, ಭಗವಂತನ ನಿಗ್ರಹಕ್ಕೆ ಅರ್ಹನಾಗುವಂತಾದ ಅನೇಕ ಪಾಪಗಳನ್ನು ಸಂಪಾದಿಸಿರುವುದು. ಭಗವಂತನ ಕಟಾಕ್ಷ, ಕೃಪೆ ಆಕಸ್ಮಿಕವಾಗಿ ತಪ್ಪತಕ್ಕದ್ದಲ್ಲ. ಇದು ತಪ್ಪುವುದೇ ದೌರ್ಭಾಗ್ಯ. ಇದಕ್ಕೆ ಕಾರಣವಾದುದೆಲ್ಲ ಅಲಕ್ಷ್ಮಿಯೆನಿಸುವುದು.

ಇದು ಹೋಗಬೇಕಾದರೆ ಲಕ್ಷ್ಮೀಕಟಾಕ್ಷ ಪ್ರಾಪ್ತಿಯಾಗುವುದವಶ್ಯ. ತೈತ್ತಿರೀಯ ಬ್ರಾಹ್ಮಣದಲ್ಲಿ (3–7) "ಸಾ ಹಿ ಶ್ರೀರಮೃತಾ ಸತಾಂ" ಎಂದು ಹೇಳಿರುವಂತೆ, ಬ್ರಹ್ಮವಿದ್ಯಾರೂಪಿಣಿಯಾದ ಲಕ್ಷ್ಮಿಯೇ ಅಮೃತಳು, ಅಮೃತತ್ತ್ವ ಪ್ರಾಪ್ತಿಗೆ ಕಾರಣಳೂ ಹೌದು. ಸತ್ತ್ವಯುಕ್ತರಿಗೆ ಇವಳೇ ಐಶ್ವರ್ಯವೂ ಹೌದು. (ಅಲಕ್ಷ್ಮೀ ಎಂದರೆ, ಜ್ಯೇಷ್ಠಾಲಕ್ಷ್ಮೀ ಎಂದೂ

'ಮೂದೇವಿ' ಎಂದೂ ವ್ಯವಹರಿಸಲ್ಪಡುವ, (ಲಕ್ಷ್ಮೀದೇವಿಯ ಹಿರಿಯಕ್ಕ ನೆಂದು ಭಾವಿಸುವ) ದಾರಿದ್ರ್ಯಾಭಿಮಾನೀ ದೇವತೆಯೆಂದೂ ಗ್ರಹಿಸುವು ದುಂಟು. ಇವಳು ತೊಲಗಲಿ ಎಂಬಲ್ಲಿ ಮೇಲಿನ ಅರ್ಥವನ್ನೇ ರೂಪಕದಲ್ಲಿ ಹೇಳಿದಂತಾಗುವುದು.) ಬ್ರಹ್ಮಜ್ಞಾನವಿದ್ದಲ್ಲಿ ಅಜ್ಞಾನರೂಪ ದಾರಿದ್ರ್ಯ ಇರಲಾರದಷ್ಟೆ!

ಆದ್ದರಿಂದ 'ತ್ವಾಂ ವೃಣೇ' ಎಂದು ("ನಿನ್ನನ್ನು ಅಪೇಕ್ಷಿಸಿ ಆಹ್ವಾ ನಿಸುತ್ತೇನೆ, ತಾಯಿ!") ಬಾಯಿಬಿಟ್ಟೇ ಶರಣಾಗತಿಯನ್ನೂ ಮಂತ್ರವು ವಿಧಿಸಿರುವುದು ಮಾರ್ಮಿಕವಾಗಿದೆ. ಈ ಯಾಚನೆಯನ್ನು ಹೃದಯದಾಳ ದಿಂದ ಮಾಡುವ ಭಕ್ತನಿಗೆ ಇದು ಸಿದ್ಧಿಸದೇ ಇರುವುದು ಸಂಭವವೇ ಅಲ್ಲ. (ಈ ಮಂತ್ರದಲ್ಲಿ ಸಾಂಗಪ್ರಪತ್ತಿಯನ್ನು ಕಾಣಬಹುದೆಂದು ನಂಜೀಯರರ ವ್ಯಾಖ್ಯಾನ.)

### ಮಂತ್ರ ಆರು

ಆದಿತ್ಯವರ್ಣೇ! ತಪಸೋಽಧಿ ಜಾತಃ ವನಸ್ಪತಿಃ
ತವ ವೃಕ್ಷೋಽಥ ಬಿಲ್ವಃ।
ತಸ್ಯ ಫಲಾನಿ ತಪಸಾ ನುದನ್ತು
ಮಾಯಾನ್ತರಾಯಾಶ್ಚ ಬಾಹ್ಯಾ ಅಲಕ್ಷ್ಮೀಃ ॥೬॥

(ಅರ್ಥ): ಸೂರ್ಯನಂತೆ ಪ್ರಕಾಶಮಾನವಾದ ಬಣ್ಣವುಳ್ಳ ಲಕ್ಷ್ಮೀ ದೇವಿಯೇ! (ಅಥವಾ ಸೂರ್ಯನಲ್ಲಿರುವ ವೇದಮಯ ಶಬ್ದಸ್ವರೂಪ ಳಾಗಿರುವವಳೇ!) ನಿನ್ನ ಸಂಕಲ್ಪದಿಂದ, ಸರ್ವಮಂಗಲಾರ್ಥವಾಗಿ ಹುಟ್ಟಿದ ವನಸ್ಪತಿಯಾದ (ಹೂವಿಲ್ಲದೆಯೇ ಹಣ್ಣುಬಿಡತಕ್ಕ) ಯಾವುದೊಂದು ಬಿಲ್ವ ವೃಕ್ಷವುಂಟೋ, ಅದರ ಹಣ್ಣುಗಳು, ಹೋಮವೇ ಮೊದಲಾದ (ನನ್ನ)

ತಪ್ಪಸ್ಸಿನಿಂದ, (ನನ್ನ) ಅಜ್ಞಾನವನ್ನೂ, ವಿರೋಧಿಗಳನ್ನೂ (ಪಾಪಗಳನ್ನೂ), (ಲಕ್ಷ್ಮೀಸಂಬಂಧಕ್ಕೆ) ಬಾಹ್ಯವಾದ (ಹೊರಗಾದ) ದಾರಿದ್ರ್ಯವನ್ನೂ, ನಿವಾರಿಸಲಿ. ಅಥವಾ ಬಿಲ್ವಹಣ್ಣುಗಳು ಪಾಪವೆಲ್ಲರ ಅಂತರಿಂದ್ರಿಯವಾದ ಮನಸ್ಸಿನಲ್ಲಿರುವ ಅಜ್ಞಾನವನ್ನೂ, ಬಾಹ್ಯೇಂದ್ರಿಯಗಳಾದ ಕಣ್ಣು ಕಿವಿ ಮೂಗು ಮೊದಲಾದುವುಗಳ ದುಃಖ, ದಾರಿದ್ರ್ಯಗಳನ್ನೂ ನಾಶಮಾಡಲಿ.)

(ವಿಶೇಷ ವಿವರಣೆಗಳು) ಹಿಂದಿನ ಮಂತ್ರದಲ್ಲಿ ಅಲಕ್ಷ್ಮೀನಾಶಕ್ಕೆ ಲಕ್ಷ್ಮೀಶರಣಾಗತಿಮಾಡಿದ್ದಾಯಿತು. ಇಲ್ಲಿ ಲಕ್ಷ್ಮೀಸಂಬಂಧದ ಬಿಲ್ವಹಣ್ಣುಗಳೇ ಈ ಕೆಲಸ ಮಾಡಬಲ್ಲವೆಂಬ ಪ್ರಶಂಸೆಯೂ, ಮಾಡಲೆಂಬ ಪ್ರಾರ್ಥನೆಯೂ ಮೂಡಿಬಂದಿವೆ.

## ೧ ಆದಿತ್ಯವರ್ಣೇ

ಇಲ್ಲಿ ಮೊದಲು ಲಕ್ಷ್ಮೀದೇವಿಯನ್ನು ಆದಿತ್ಯವರ್ಣಳೆಂದು ಕೊಂಡಾಡಿದೆ. ಸೂರ್ಯನ ಬಣ್ಣದವಳೆಂಬುದು ಮೇಲೆಯೇ ಕಾಣುವ ಅರ್ಥ. ಭಗವಂತನನ್ನು ಪುರುಷಸೂಕ್ತದಲ್ಲಿ "ಆದಿತ್ಯವರ್ಣಂ ತಮಸಸ್ತು ಪಾರೇ" ಎಂದು ಇದೇ ವರ್ಣನೆಯಲ್ಲಿ ಕೊಂಡಾಡಿರುವುದಕ್ಕೆ ಇಲ್ಲಿ ಲಕ್ಷ್ಮೀವರ್ಣನೆಯು ಸರಿಸಾಟಿಯಾಗಿದೆ. ಹಿರಣ್ಯವರ್ಣದವಳೆಂದು ಇಲ್ಲೇ ಹೇಳಿರುವುದಕ್ಕೂ ಅನುಗುಣವಾಗಿದೆ. ಕಾಳಮೇಘದಂತಿರುವ ಭಗವಂತನೂ ಹಿರಣ್ಯವರ್ಣನೂ ಸೂರ್ಯವರ್ಣನೂ ಆಗುವುದೇ ಇವಳ ಸಹಯೋಗದಿಂದ ಎಂದಮೇಲೆ, ಇನ್ನು ಇವಳ ಸ್ವಯಂವರ್ಣದ ಮಹಿಮೆಯನ್ನು ಕುರಿತು ಹೇಳುವುದೇನಿದೆ!

ವರ್ಣ್ ಧಾತುವಿಗೆ (ಪ್ರೇರಣೇ)- ಪ್ರೇರಿಸುವುದೆಂಬರ್ಥವೂ ಉಂಟು. "ಸೂರ್ಯನನ್ನು (ಕರ್ಮಯೋಗದಲ್ಲಿ) ಪ್ರೇರಿಸುವವಳು" ಎಂಬರ್ಥ ಹೀಗೆ ಉಂಟಾಗುತ್ತದೆ "ವರ್ಣ— ವರ್ಣಕ್ರಿಯಾಯಾಂ" ಎಂದು ಗ್ರಹಿಸಿದರೆ "ಸೂರ್ಯನಿಗೆ ಬಣ್ಣಹಾಕುವವಳು" ಎಂದರ್ಥ ಆಗುವುದು. ಸೂರ್ಯ

ಮಂಡಲದಲ್ಲಿ ಶ್ರೀಮನ್ನಾರಾಯಣನೊಡನೆ ಶ್ರೀದೇವಿಯೂ ಇರುವವಳಾದುದರಿಂದ ಈ ಎರಡೂ ಅರ್ಥಗಳೂ ಸಿದ್ಧಿಸುವುವು.

ಆದಿತ್ಯಂ ವರ್ಣಯಾಮ್ಯೇಕಾ ತೇಜಸಾ ಯಶಸಾ ಶ್ರಿಯಾ ।

(ಶ್ಲೋ. ೧೩೬)

ಎಂದು ಇದನ್ನೇ ಲಕ್ಷ್ಮೀತಂತ್ರ ನಿರುಕ್ತಿ ಹೇಳುತ್ತದೆ.

ಈ ಎರಡರ್ಥಗಳಲ್ಲದೆ ಮೂರನೆಯದೊಂದನ್ನೂ ಅಲ್ಲಿ ಹೇಳಿದೆ:

ಆದಿತ್ಯಸ್ಥಾಃ ಚ ವರ್ಣಾತ್ಮಾ ಭೂತ್ವಾ ದಿವ್ಯಾ ತ್ರಯೀಮಯೀ ।
ಪ್ರಕಾಶಯನ್ತೀ ಸರ್ವಾರ್ಥಾನ್ ಅತೀತಾನಾಗತಾನಪಿ ॥
ಪಿತೃದೇವ ಮನುಷ್ಯಾಣಾಂ ಚಕ್ಷುರಸ್ಮಿ ಸನಾತನಂ ॥

(ಶ್ಲೋ. ೧೩೭)

ಸೂರ್ಯನಲ್ಲಿ ಸಕಲವೇದಗಳೂ ಇರುವುವೆಂದು ವೇದವೇ ಹೇಳುವುದುಂಟು.

ಋಗ್ಭಿಃ ಪೂರ್ವಾಹ್ಣೇ ದಿವಿ ದೇವ ಈಯತೇ ।
ಯಜುರ್ವೇದೇ ತಿಷ್ಠತಿ ಮಧ್ಯೇ ಅಹ್ನಃ ।
ಸಾಮವೇದೇನಾಸ್ತಮಯೇ ಮಹೀಯತೇ ।
ವೇದೈರಶೂನ್ಯ ಸ್ತ್ರಿಭಿರೇತಿ ಸೂರ್ಯಃ ॥

(ಇತ್ಯಾದಿ, ಕಾಠಕ, ತೈ. ಬ್ರಾ. XII–9–49)

"ಆಕಾಶಮಾರ್ಗದಲ್ಲಿ ಸಂಚರಿಸುವ ಸೂರ್ಯನು ಬೆಳಿಗ್ಗೆ ಋಗ್ವೇದಮಂತ್ರಗಳೊಡನೆಯೇ (ಆ ಮಂತ್ರಾಧಿದೇವತೆಯೊಡನೆಯೇ) ಸಂಚರಿಸುತ್ತಾನೆ. ಹಗಲಿನ ಮಧ್ಯದಲ್ಲಿ ಯಜುರ್ವೇದ ಮಧ್ಯದಲ್ಲಿಯೇ ನಿಲುತ್ತಾನೆ. ಅಸ್ತಮಾನಕಾಲದಲ್ಲಿ ಸಾಮವೇದದಿಂದ ಪೂಜಿತನಾಗಿರುತ್ತಾನೆ. ಹೀಗೆ ಸದಾ ವೇದಗಳೊಡಗೂಡಿಯೇ, (ಅವುಗಳಿಂದ ಶೂನ್ಯನಾಗದೆಯೇ) ಸೂರ್ಯನು ಸದಾ ಹೋಗುತ್ತಿರುತ್ತಾನೆ" ಎಂದು ಹೇಳಿರುವಲ್ಲಿ ಈ ಸಂಬಂಧ ಸ್ಪಷ್ಟಪಡುವುದು.

ಈಗ ಸೂರ್ಯನಲ್ಲಿರುವ ಈ ವೇದಮಂತ್ರಗಳ ವರ್ಣ (ಅಕ್ಷರ)

ಸ್ವರೂಪಳಾಗಿದ್ದುಕೊಂಡು, ತ್ರಿಕಾಲದಲ್ಲೂ ಪದಾರ್ಥಗಳನ್ನು ಪ್ರಕಾರಪಡಿಸುತ್ತಾ ಪಿತೃ, ದೇವ, ಮನುಷ್ಯಾದಿಗಳಿಗೆ ಪ್ರಾಚೀನನೇತ್ರಗಳಂತಿರುವವಳು ಲಕ್ಷ್ಮೀದೇವಿ ಎಂಬುದೇ ಈ ಮೂರನೆಯ ನಿರುಕ್ತ. (ಆದಿತ್ಯನಲ್ಲಿರುವ ವೇದ ವರ್ಣಸ್ವರೂಪಳೆಂದರ್ಥ.)

ಇನ್ನೊಂದು, ನಾಲ್ಕನೆಯ, ಅರ್ಥವನ್ನೂ ಲಕ್ಷ್ಮೀತಂತ್ರ ಹೇಳಿದೆ. ವರ್ಣಗಳಲ್ಲಿ ಆದಿ ಆದುದು ಪ್ರಣವ = ಓಂಕಾರ, ಇದೇ ವೇದಮಾತೆ, ಮಾತೃಕೆ. ಇದು ಪರಮ ಮಂಗಲಮಯವಾದ ವರ್ಣ.

'ಓಂ'ಕಾರಶ್ಚ 'ಅಥ'ಶಬ್ದಶ್ಚ ದ್ವಾವೇತೌ ಬ್ರಹ್ಮಣಃ ಪುರಾ।
ಕಂಠಂ ಭಿತ್ವಾ ಪ್ರನಿರ್ಯಾತೌ ತಸ್ಮಾನ್ಮಾಂಗಳಿಕಾ
ಉಭೌ ॥

ಎಂಬ ಋಷಿವಾಕ್ಯದಂತೆ ಓಂ ಎಂಬುದೂ, ಅಥ ಎಂಬುದೂ ಹಿಂದೆ ಬ್ರಹ್ಮದೇವನ ಕಂಠದಿಂದ ಮೊದಲು ಹೊರಟುಬಂದುವಾಗಿ ಮಂಗಳಮಯವಾದ ವಾಚಕಗಳೆಂದು ಪ್ರಸಿದ್ಧವಾಗಿವೆ. ಈ ಪ್ರಣವವು ಪರಮಾತ್ಮವಾಚಕವೆಂಬುದನ್ನು ಎಲ್ಲಾ ವೈದಿಕರೂ ಬಲ್ಲರು. (ಓಂ ಇತ್ಯೇಕಾಕ್ಷರಂ ಬ್ರಹ್ಮ, ಗೀತೆಯೂ ಹೇಳುತ್ತದೆ.) ಈ ಓಂಕಾರವೂ (ಆದಿವರ್ಣವೂ), ಸ್ವರೂಪವನ್ನು ನಿರೂಪಿಸಬಲ್ಲವಳಾದ ಲಕ್ಷ್ಮಿಯೂ ಯಾವ ಭಗವಂತನಿಗೆ ವಾಚಕಗಳೋ ಅವನು ಆದಿತ್ಯ; ಆದೌ ತ್ಯಃ, ಸಿದ್ಧಃ = ಆದಿತ್ಯಃ ಎಂಬುದು ಇಲ್ಲಿನ ನಿರ್ವಚನ. ಘಟವೆಂದರೆ, ಈ ಶಬ್ದವು ಘಟತ್ವವಿಶಿಷ್ಟವಾದ ಮಡಕೆಗೆ ವಾಚಕವಾಗುವಂತೆ, ಓಂಕಾರವೂ ಲಕ್ಷ್ಮಿಯನ್ನು ಬಿಟ್ಟಿರದೆ, ಅವಳಿಂದ ವಿಶಿಷ್ಟನಾದ ಸರ್ವೇಶ್ವರನಿಗೆ ವಾಚಕವಾಗಿ, ಇವಳಿಗೂ ವಾಚಕವಾಗುತ್ತದೆ. ಹೀಗೆ ಓಂಕಾರವು ಯಾವಳಿಗೆ ನಿರೂಪಕವೋ ಅವಳೂ ಆದಿತ್ಯವರ್ಣೆಯಾಗುತ್ತಾಳೆ. ಇದೇ ಅವಳಿಗೆ ಮೊದಲಿನ ಹೆಸರಾಗುವುದು.

ಆದಿಭೂತಶ್ಚ ವರ್ಣೋ ಮೇ ತಾರಃ ಪ್ರಥಮವಾಚಕಃ ।

(ಶ್ಲೋ. ೧೩೮)

ಇದರಲ್ಲಿ ಲಕ್ಷ್ಮೀಸಾಂನ್ನಿಧ್ಯ ಪ್ರಕಾರವನ್ನು ಲಕ್ಷ್ಮೀತಂತ್ರ ವರ್ಣಿಸುವ ಬಗೆ ಯೋಗಿಗಳಿಗೂ ಯೋಗಸಿದ್ಧರಿಗೂ ಪರಮ ಭೋಗ್ಯವಾಗಿದ್ದು ಸಾಮಾನ್ಯರಿಗೆ ಎಟುಕುವುದಲ್ಲವಾದುದರಿಂದ ಅದನ್ನು ಇಲ್ಲಿ ವಿವರಿಸಿ ಹೆಚ್ಚು ಉಪಯೋಗ ವಿಲ್ಲ.

## ೨ ಲಕ್ಷ್ಮಿಗೂ ಬಿಲ್ವಫಲಕ್ಕೂ ಸಂಬಂಧ !

ಈ ಮಂತ್ರದಲ್ಲಿ ಲಕ್ಷ್ಮೀಸಂಕಲ್ಪದಿಂದ, ಅಥವಾ ಅವಳ ತಪಸ್ಸಿನಿಂದ ಬಿಲ್ವವೃಕ್ಷವು ಹುಟ್ಟಿದುದಾಗಿ ಹೇಳಿದೆಯಷ್ಟೆ. ಹೂವಿಲ್ಲದೆಯೇ ಹಣ್ಣು ಬಿಡುವ ಮರಗಳಿಗೆ ವನಸ್ಪತಿಯೆನ್ನುವುದು ಪ್ರಸಿದ್ಧ. ಅಪುಷ್ಪಾ ಫಲ ವಂತೋ ಯೇ ತೇ ವನಸ್ಪತಯಃ ಸ್ಮೃತಾಃ ಎಂಬುದು ಪ್ರಮಾಣ. ಬಿಲ್ವವು ಲಕ್ಷ್ಮೀಸಂಕಲ್ಪದಿಂದ ಆ ದೇವಿಯ ಕೈಯಲ್ಲಿ ಹುಟ್ಟಿತೆಂಬ ವಾಮನಪುರಾಣ ವಚನವನ್ನು ಇಲ್ಲಿ ವಿದ್ಯಾರಣ್ಯ ಭಾಷ್ಯದಲ್ಲಿ ಉದಾಹರಿಸಲಾಗಿದೆ. "ಬಿಲ್ವೋ ಲಕ್ಷ್ಮ್ಯಾಃ ಕರೇsಭವತ್ ।" ಈ ವೃಕ್ಷದಲ್ಲಿ ಲಕ್ಷ್ಮಿಯು ಸದಾ ವಾಸಿಸುವಳೆಂಬ ಐತಿಹ್ಯವನ್ನು ಪೃಥ್ವೀಧರ ಭಾಷ್ಯವು ಪ್ರಮಾಣಗಳೊಡನೆ ಸೂಚಿಸಿದೆ. "ತಪಸೋsಧಿಜಾತಃ ವನಸ್ಪತಿಃ..." ಎಂದರೆ ಲಕ್ಷ್ಮೀದೇವಿಯು ತಪಶ್ಚರ ಣಾರ್ಥವಾಗಿ ಅವಳ ನಿವಾಸಯೋಗ್ಯವಾಗಿಯೇ ಈ ಮರ ಹುಟ್ಟಿತಂತೆ. "ಬಿಲ್ವಾಟವ್ಯಾಂ ಮಹಾಲಕ್ಷ್ಮೀ ರೂಪಾಸ್ತೇ ಬಿಲ್ವನಾಯಕಂ" ಎಂಬ ಭಾರ್ಗವಪುರಾಣವಚನವನ್ನೂ, "ತನುಮಧ್ಯಾ ಸ್ವಹಸ್ತಾತ್ತಂ ಬಿಲ್ವವೃಂ ಸಮುಪಾಶ್ರಿತಾ" ಎಂಬ ಭಾರ್ಗವತಂತ್ರವಾಕ್ಯವನ್ನೂ ಇಲ್ಲಿ ಉದಾಹರಿಸಿದೆ. ನೀವಾ ಎಂಬ ನದೀತಟದಲ್ಲಿರುವ ಬಿಲ್ವಾರಣ್ಯವೆಂಬ ಒಂದು ಇಡೀ ಕಾಡು ಹಿಂದೆ ಲಕ್ಷ್ಮೀ ತಪಶ್ಚರ್ಯೆಗಾಗಿ ಸೃಷ್ಟಿಸಲ್ಪಟ್ಟಿತೆಂದೂ, ಈ ಅರಣ್ಯದ ಬಿಲ್ವಫಲಗಳು ಇಂದಿಗೂ ದಾರಿದ್ರ್ಯನಾಶಕವೆಂದೂ ಬ್ರಹ್ಮಾಂಡಪುರಾಣಾದಿ

ಗಳನ್ನು ಐತಿಹ್ಯಗಳನ್ನೂ ವಾಕ್ಯಗಳನ್ನೂ ಸಾರಸ್ವತಸಿದ್ಧಿಯೆಂಬ ಗ್ರಂಥದಲ್ಲಿ ಹೇಳಿದೆ.

ಗ ತನುಮಧ್ಯಾ ಪುರಾ ಬಾಲಾ ನೀವಾತಟಮುಪಾಶ್ರಿತಾ ।
ಬಿಲ್ವಾರಣ್ಯೇ ತಪಶ್ಚಕ್ರೇ ಲಕ್ಷ್ಮೀರ್ಲೋಕ ಹಿತಾರ್ಥಿನೀ ॥
ಬಿಲ್ವನಾಥಪ್ರಿಯಾಯಾಸ್ತು ನಾರಾಯಣ್ಯಾಸ್ತಪೋಬಲಾತ್ ।
ಬಿಲ್ವಾರಣ್ಯಂ ಫಲತ್ಯದ್ಯ ಲೋಕಾಲಕ್ಷ್ಮೀ ನಿವೃತ್ತಯೇ ॥
ಉದ್ಯದಾದಿತ್ಯ ಸಂಕಾಶಾಂ ಬಿಲ್ವಕಾನನ ಮಧ್ಯಗಾಂ ।
ತನುಮಧ್ಯಾಂ ಶ್ರಿಯಂ ಧ್ಯಾಯೇತ್ ಅಲಕ್ಷ್ಮೀ ಪರಿಹಾರಿಣೀಂ ॥
ಇತ್ಯಾದಿ

ಬಿಲ್ವದಳದ ಮೂರು ಎಲೆಗಳಲ್ಲಿ ಋಗ್ಯಜುಸ್ಸಾಮವೇದಸಾರಗಳಡಗಿರುವುವೆಂದೂ, ತ್ರಿಮೂರ್ತಿಗಳ ವಾಸವುಂಟೆಂದೂ ತಿಳಿದು ದೇವಲೋಕದಲ್ಲಿ ಈ ವೃಕ್ಷವನ್ನು ನೆಟ್ಟರೆಂದೂ, ಲಕ್ಷ್ಮಿಯ ಸದಾವಾಸಕ್ಕಾಗಿ ಈ ವೃಕ್ಷವು ಕೈಲಾಸ, ವೈಕುಂಠ, ಶ್ವೇತದ್ವೀಪಾದಿಗಳಲ್ಲೂ ನೆಡಲ್ಪಟ್ಟಿತೆಂದೂ ಸ್ಕಾಂದ ಪುರಾಣದಲ್ಲಿ ಉಕ್ತವಾಗಿದೆ. ಈ ವೃಕ್ಷಪೂಜೆಯಿಂದಲೇ ಜ್ಞಾನ ಪ್ರಾಪ್ತಿಯೂ, ಐಶ್ವರ್ಯಪ್ರಾಪ್ತಿಯೂ ಆಗುವುದೆಂದಮೇಲೆ ಇದರಲ್ಲಿ ಲಕ್ಷ್ಮೀ ವಾಸವುಂಟೆಂಬುದರಲ್ಲೇನು ಸಂದೇಹ ?

ಆರೋಗ್ಯಶಾಸ್ತ್ರ (ಆಯುರ್ವೇದ)ದಲ್ಲಂತೂ ಬಿಲ್ವವನ್ನು ಎಷ್ಟು ಕೊಂಡಾಡಿರುವರೆಂಬುದನ್ನು ಈ ಸಂಬಂಧದ ಚೂರ್ಣ ಲೇಹ್ಯಾದಿಗಳ (ಕಷಾಯಾದಿಗಳ) ಹೆಸರಿನಿಂದಲೇ ತಿಳಿಯಬಹುದು. ಬಿಲ್ವದ ವಾಸನೆಯೇ ಆರೋಗ್ಯಕಾರಕವೆಂಬುದು ಪ್ರಸಿದ್ಧ. ಹಣ್ಣು, ಕಾಯಿ, ಎಲೆ ಮಾತ್ರವಲ್ಲದೆ, ತೊಗಟೆ ಬೇರು, ಮೊದಲಾದ ಎಲ್ಲ ಭಾಗಗಳೂ ಈ ವೃಕ್ಷದಲ್ಲಿ ಉಪಯುಕ್ತ ವಾಗಿದ್ದು ಮಾನವನಿಗೆ ಆರೋಗ್ಯಕ್ಕೆ ಕಾರಣವಾಗಿರುವುದರಿಂದ, ಲೌಕಿಕವಾಗಿ ನೋಡಿದರೂ ಈ ವೃಕ್ಷಕ್ಕೆ ತುಂಬಾ ಬೆಲೆಯಿದೆ. ಆರೋಗ್ಯವೇ ಐಶ್ವರ್ಯ ವೆಂದಮೇಲೆ ಇಲ್ಲಿ ಲಕ್ಷ್ಮೀನಿವಾಸಕ್ಕೇನು ಸಂದೇಹ ? ಎಂಥ ಹಳೆಯ ಘಾಯಕ್ಕೂ (ಹುಣ್ಣಿಗೂ) ಬಿಲ್ವದ ಚಕ್ಕೆಯ, ಬೇರಿನ, ಪುಡಿಯನ್ನು ಔಷಧ

ವನ್ನಾಗಿ ಹೇಳುವುದುಂಟು. ಶೀತವಾತವ್ಯಾಧಿಗಳೂ, ಬೇರುಬಿಟ್ಟ ಆಳರೋಗಗಳೂ ಬಿಲ್ವಸಂಬಂಧದ ಔಷಧಗಳಿಂದ ನಿರ್ಮೂಲವಾಗುವುವು. ಅದಕ್ಕೇ ಬಿಲ್ವದ ಹಣ್ಣು ಶ್ರೀಫಲವೆಂದೂ ಈ ವೃಕ್ಷವು ಶ್ರೀವೃಕ್ಷವೆಂದೂ ಪ್ರಸಿದ್ಧವಾಗಿವೆ. ಸರ್ವಾಂಗೋಪಯುಕ್ತವಾದ ಈ ವೃಕ್ಷಕ್ಕಿಂತ ಮುಖ್ಯವಾದುದು ಆಯುರ್ವೇದದಲ್ಲಿ ಇನ್ನೊಂದಿರಲಾರದು! ಇದಕ್ಕೆಲ್ಲ ಕಾರಣ ಅದರ ಲಕ್ಷ್ಮೀಸಂಬಂಧವೇ. ಐಶ್ವರ್ಯಕಾಮನು ಬಿಲ್ವಫಲಗಳಿಂದಲೂ ಹೋಮ ಮಾಡಬೇಕೆಂದು ಬೋಧಾಯನರೂ ವಿಧಿಸಿರುತ್ತಾರೆ.

ಶ್ರೀಕಾಮೋ ಜುಹುಯಾದಗ್ನೌ ಪದ್ಮೈಃ
ಬಿಲ್ವೈಃ ತಥಾ ಫಲೈಃ ॥

ವೈದಿಕ ಯಜ್ಞಗಳಲ್ಲೂ ಬಿಲ್ವದ ಉಪಯೋಗವುಂಟು. ಕಾಡಿಗೇ ಈ ವೃಕ್ಷ ದೊರೆ ಎನಿಸಿ 'ವನಸ್ಪತಿ' ಎನಿಸಿತೆಂದು ಹೇಳುವ ವೈದಿಕರೂ ಉಂಟು! ಬಿಲ್ವ ಯೂಪವು ಶ್ರೇಷ್ಠವೆಂದೂ, ಸೂರ್ಯನೂ ಮೊದಲು ಎಲ್ಲಿಂದ ಉದಿಸಿದನೋ ಅಲ್ಲಿಂದಲೇ ಬಿಲ್ವವು ಉದಿಸಿತೆಂದೂ, ಸೂರ್ಯಬಿಲ್ವಗಳಲ್ಲಿ ತಾದಾತ್ಮ್ಯವನ್ನು ವೇದ ಹೇಳುತ್ತದೆ.

...ಬೈಲ್ವೋ ಯೂಪೋ ಭವತಿ ಅಸೌ ವಾ ಆದಿತ್ಯೋ ಯತೋಽಜಾಯತ ತತೋ ಬಿಲ್ವ ಉದತಿಷ್ಠತ್ ।

(ತೈ. ಸಂ. ||–1–49)

ಈ ಮಂತ್ರಭಾಷ್ಯದಲ್ಲಿ ಶ್ರೀಸಾಯಣರು, "ಶ್ರೀಸೂಕ್ತೇನ ಬಿಲ್ವೋತ್ಪತ್ತಿರಾಮ್ನಾಯತೇ", "ಶ್ರೀಸೂಕ್ತದ ಮೂಲಕ ಬಿಲ್ವದ ಉತ್ಪತ್ತಿಯನ್ನು ವೇದವೇ ಹೇಳಿದೆ" ಎಂದು ಆರಂಭಿಸಿ, ಪ್ರಕೃತ ಮಂತ್ರಭಾಗದೊಡನೇ ಶ್ರೀಸೂಕ್ತದ ಈ ಪ್ರಸ್ತುತ ಮಂತ್ರಕ್ಕೂ ವಿವರಣೆ ನೀಡಿದ್ದಾರೆ. "ಹೇ ಆದಿತ್ಯವರ್ಣೇ, ಲಕ್ಷ್ಮಿ, ಪ್ರಥಮಮುತ್ಪನ್ನಸ್ಯ ಆದಿತ್ಯಸ್ಯ ತಪಸಃ ಸಂತಾಪರೂಪಾತ್ ಪ್ರಕಾಶಾತ್ ಅಧ್ಯೂರ್ಧ್ವಂ ತವ ಪ್ರಿಯೋ ಬಿಲ್ವವೃಕ್ಷೋ ಜಾತ ಇತಿ । ತತಃ ಸೌರ್ಯಾವಶಾಯಾ ಬೈಲ್ವೇ ಯೂಪೇ ಸತಿ ಸೂರ್ಯಬಿಲ್ವಯೋಃ

ಸಹೋದರತ್ವಾತ್ ಸಯೋನಿತ್ವಂ।..." (ಅರ್ಥ) "ಎಲೈ ಆದಿತ್ಯವರ್ಣೆಯಾದ ಲಕ್ಷ್ಮಿಯೇ! ಮೊದಲು ಹುಟ್ಟಿದ ಸೂರ್ಯನ ತಪಸ್ಸಂತಾಪರೂಪಪ್ರಕಾಶದ ದೆಸೆಯಿಂದ, ಆಮೇಲೆ ನಿನಗೆ ಪ್ರಿಯವಾದ ಬಿಲ್ವವೃಕ್ಷವು ಹುಟ್ಟಿತು. ಹೀಗೆ ಸೂರ್ಯಸಂಬಂಧವುಳ್ಳ ಬಿಲ್ವದ ಯೂಪವು ಹುಟ್ಟಿ ಬರಲಾಗಿ, ಸೂರ್ಯ ಬಿಲ್ವರು ಒಂದೇ ಕಡೆ ಹುಟ್ಟಿ ಸೋದರರಾದರು."

ಇಲ್ಲಿ ಲಕ್ಷ್ಮೀ, ಬಿಲ್ವ, ಸೂರ್ಯ ಮೂವರಿಗೂ ಸಂಬಂಧ ಹೇಳಿರುವುದು ಗಮನೀಯ. ಬಿಲ್ವದಲ್ಲಿ ಸೂರ್ಯನಿವಾಸವಿದೆಯೆಂದೂ ಇಲ್ಲಿ ಧ್ವನಿತವಾಗುವುದು. ಯಜ್ಞಯಾಗಗಳಲ್ಲಿ ಬೈಲ್ವ ಸ್ರುಕ್‌ಸ್ರುವಗಳನ್ನು (ಸೌಟು, ಪಾತ್ರೆ) ಉಪಯೋಗಿಸುವುದು ಶ್ರೇಷ್ಠ, ಲಕ್ಷ್ಮೀಕಾರಕ, ಪ್ರಾಪಕ ಎಂದು ವೈದಿಕರು ತಿಳಿಯುತ್ತಾರೆ. (ಹೀಗೆ ಲಕ್ಷ್ಮಿಗೂ ಬಿಲ್ವವೃಕ್ಷಕ್ಕೂ ಅನಾದಿಯಾದ ವೈದಿಕ ಸಂಬಂಧವಿದೆಯಾಗಿ, ವೃಕ್ಷಪೂಜೆ, ವೃಕ್ಷದಲ್ಲಿ ದೇವತಾಸಾಂನ್ನಿಧ್ಯಭಾವಗಳು 'ಅನಾರ್ಯರಿಂದ' 'ಆರ್ಯ'ರಿಗೆ ಬಂದುದೆಂದು ಹೇಳುವವರು ಮೂರ್ಖರೇ ಆಗುತ್ತಾರೆ.)

### ಏಳನೆಯ ಮಂತ್ರ

ಉಪೈತು ಮಾಂ ದೇವಸಖಃ
ಕೀರ್ತಿಶ್ಚ ಮಣಿನಾ ಸಹ।
ಪ್ರಾದುರ್ಭೂತೋಽಸ್ಮಿ ರಾಷ್ಟ್ರೇಽಸ್ಮಿನ್
ಕೀರ್ತಿಂ ಋದ್ಧಿಃ(ಂ)ದದಾತು ಮೇ ॥೭॥

ಅರ್ಥ: 'ಕೀರ್ತಿ'ಶಬ್ದವಾಚ್ಯಳಾದ ಲಕ್ಷ್ಮಿಯೂ, 'ದೇವಸಖ'ನೆಂದು ಖ್ಯಾತನಾಗಿ, ಅಗ್ನಿಸಖನಾದ ವಾಯುವೂ, ಆಧಾರವಹ್ನಿಯೊಡನೆ (ಮಣಿಯೊಡನೆ) ಕೂಡಿ, ನನ್ನನ್ನು ಹೊಂದುವಂತಾಗಲಿ. (ಅಥವಾ, ದೇವಸಖನೆಂದರೆ, ಮಹಾದೇವನಾದ ಶಿವನ ಸ್ನೇಹಿತನಾದ ಕುಬೇರನೂ, ಮಣಿಯೆಂಬ ಚಿಂತಾಮಣಿಯೊಡನೆಯೂ, ಅಥವಾ ಅವನ ಕೋಶಾಧ್ಯಕ್ಷನಾದ ಮಣಿಭದ್ರನೊಡನೆಯೂ, ಈ ಸಂಬಂಧದ ಯಶಸ್ಸಿನೊಡನೆಯೂ — ಐಶ್ವರ್ಯದೊಡ

ನೆಯೂ— ನನ್ನನ್ನು ಹೊಂದಲಿ.) ಎಲೆ ದೇವಿ! ನಿನ್ನ ಅನುಗ್ರಹ ಸಂಪಾದಿಸಲೆಂದೇ, ಕರ್ಮಭೂಮಿಯಾದ ಈ ರಾಷ್ಟ್ರದಲ್ಲಿ (ಭಾರತ ದೇಶ ದಲ್ಲಿ) ಜನಿಸಿದ್ದೇನೆ. ಸಮೃದ್ಧಿಯುಳ್ಳ ಎಲೈ ದೇವಿಯೇ! ನನಗೆ ಕೀರ್ತಿ ಯನ್ನೂ ಐಶ್ವರ್ಯವನ್ನೂ ಅನುಗ್ರಹಿಸು."

ವಿಶೇಷ ವಿವರಣೆಗಳು : ಇಲ್ಲಿ ಸಾಮಾನ್ಯ ಅರ್ಥವೊಂದೂ, ಯೋಗ ಪ್ರಕ್ರಿಯಾರ್ಥವೊಂದೂ ಹೇಳಲ್ಪಟ್ಟಿವೆ. ಎರಡನೆಯ ಅರ್ಥವನ್ನು ಆಮೇಲೆ (ಲಕ್ಷ್ಮೀತಂತ್ರದಲ್ಲಿ) ನೋಡೋಣ. ಮೊದಲು ಸಾಮಾನ್ಯಾರ್ಥವನ್ನೇ ನೋಡೋಣ.

## ೧ ದೇವಸಖನಾರು ?

ಕುಬೇರನನ್ನು ಶಿವಸಖನೆಂದು ಕೋಶಗಳು ಹೇಳುತ್ತವೆ. ಕುಬೇರಃ ತ್ರ್ಯಂಬಕಸಖಃ —ಎಂದು. ಕುಬೇರನೂ ಭೂತೇಶ, ಶಿವನೂ ಭೂತ ಗಣಾಧಿಪತಿ. ಕುಬೇರದಿಕ್ಕೂ, ಶಿವನ ಕೈಲಾಸವೂ ಒಂದೇ ಕಡೆ ಇರುವುವು. ಶಿವಸಖನಾದ ಈ ಕುಬೇರನು ಶಿವಕೃಪೆಯಿಂದಲೇ ಐಶ್ವರ್ಯಪಡೆದು ಲಕ್ಷ್ಮೀ ಸಾಂನಿಧ್ಯವು ನಿರಂತರವಾಗಿ ಆಗುವಂತೆ ವರಪಡೆದನಂತೆ. ಆದ್ದರಿಂದಲೇ ಕುಬೇರ ಕೃಪೆಯಿಂದ ಲಕ್ಷ್ಮೀಪ್ರಾಪ್ತಿಯುಂಟು.

ಕುಬೇರಸ್ತಪಸಾ ಪೂರ್ವಂ ತೋಷಯಾಮಾಸ ಶಂಕರಂ ।
ಶಿವಾರ್ಥಂ ತು ಮಹಾಲಕ್ಷ್ಮೀಃ ಕುಬೇರಸ್ಯ ವಶೇ ಸ್ಥಿತಾ ॥
ತಸ್ಮಾಲ್ಲಕ್ಷ್ಮೀಪ್ರದಾನಾಯ ಕುಬೇರೋಽಧಿಕೃತೋಽಭವತ್ ॥

ಎಂದು ಈಶಾನಸಂಹಿತೆಯಲ್ಲಿ ಹೇಳಿದೆ. ಇಂಥ ಕುಬೇರನು ತನ್ನಲ್ಲಿ ತನ್ನ ಸರ್ವಸ್ವವಾದ ಮಣಿಯೊಡನೆಯೂ ಮಣಿಭದ್ರನೊಡನೆಯೂ ನಿತ್ಯವಾಸ ಮಾಡಿದರೆ, ಲಕ್ಷ್ಮಿಯೂ ತನ್ನಲ್ಲಿ ನಿತ್ಯವಾಸಮಾಡಿದಂತಾಗುವುದೆಂದು ಈ

ಪ್ರಾರ್ಥನೆ ಮಾಡಿದೆ. ಮಹಾಲಕ್ಷ್ಮಿಯ ಅಂಶವು ಚಿಂತಾಮಣಿ ರತ್ನ ದಲ್ಲುಂಟೆಂಬುದು ಪ್ರಸಿದ್ಧ. ಕೀರ್ತಿಯೂ ಲಕ್ಷ್ಮೀಅಂಶವಾಗಿ, ಲಕ್ಷ್ಮೀವಾಚಕ ವಾಗಿದೆ. ಈ ಭಾರತ ದೇಶದಲ್ಲಿ ಹುಟ್ಟುವರಿಗೆ ಲಕ್ಷ್ಮೀಕಟಾಕ್ಷವು ಸುಲಭ ವಾದುದರಿಂದಲೇ ಸಾಧಕನು ಇಲ್ಲಿ ಹುಟ್ಟಿದುದಾಗಿ ಹೇಳಿರುವುದೂ ಗಮ ನೀಯ. ಹಿಂದೊಂದು ಕಾಲದಲ್ಲಿ ಈ ದೇಶ ಎಷ್ಟೊಂದು ಧನ, ಧಾನ್ಯ, ಪಶು, ವನ, ಗಿರಿ ಸಂಪತ್ತುಗಳಿಂದಲೂ, ಬುದ್ಧಿ, ಆರೋಗ್ಯ, ಯಶಸ್ಸು, ದಿವ್ಯಜ್ಞಾನ, ಮುಂತಾದುವುಗಳಿಂದಲೂ ತುಂಬಿತ್ತೆಂಬುದಕ್ಕೆ ಈ ಮಂತ್ರವೇ ಸಾಕ್ಷಿ. ಇಂದು ಹೀಗಿಲ್ಲವೆಂದರೆ ಲಕ್ಷ್ಮೀಸಾಂನ್ನಿಧ್ಯಕ್ಕೆ ಇಂದಿನ ಭಾರತೀಯರು ಬಾಹಿರ ರೆಂದು ಹೇಳದೇ ವಿಧಿಯಿಲ್ಲ. ದೇವಪತಿಯಾದ ಇಂದ್ರನಿಗೇ ಆಗಾಗ ಮದದಿಂದ ದಾರಿದ್ರ್ಯಪ್ರಾಪ್ತಿ ಎಂದು ಕೇಳುತ್ತೇವೆ. ನಡುವೆ ಒಂದು ಇತಿ ಹಾಸಕಾಲದಲ್ಲಿ ಭಾರತೀಯರೂ ಮದಾಂಧರಾಗಿ, ಅನೈಕಮತ್ಯ, ಪರಸ್ಪರ ಕಲಹ, ದುರಾಚಾರ, ವೇದನಿಂದೆ, ವೈದಿಕದ್ವೇಷ, ಬ್ರಾಹ್ಮಣಬ್ರಾಹ್ಮಣ್ಯ ದ್ವೇಷಾದಿಗಳಿಂದ ಲಕ್ಷ್ಮೀಕಟಾಕ್ಷ ಬಾಹಿರರಾಗಿ, ಇಂದಿಗೂ ಅದೇ ಸ್ಥಿತಿ ಮುಂದುವರೆಯುತ್ತಿರುವುದು ಸರ್ವವಿದಿತ. ಇದೂ ಹೋಗಲಿ. "ಪ್ರಾದುರ್ಭೂ ತೋಽಸ್ಮಿ ರಾಷ್ಟ್ರೇಽಸ್ಮಿನ್" ಎಂಬ ರೀತಿಯ ದೇಶಾಭಿಮಾನವೂ ಇಂದು ಬಹುಜನರಲ್ಲಿ ಕಮ್ಮಿಯಾಗುತ್ತಿದೆ. ಬಾಬರ್, ಅಕ್ಬರ್, ಔರಂಗಜೇಬನ ಕಾಲದಲ್ಲಿ ಅವರು ಕೊಟ್ಟ ಹಣದಿಂದ ನಮ್ಮ ದೇವಾಲಯಗಳನ್ನು ನಿರ್ನಾಮ ಮಾಡಿದವರೂ 'ನಮ್ಮವ'ರೇ ಅಲ್ಲವೇ ? ಹೊರಗಿಂದ ಬಂದವರು ಹಿಡಿ ಯಷ್ಟು ! ಅವರೊಡನೆ ಸೇರಿಕೊಂಡ ದೇಶದ್ರೋಹಿಗಳೇ ಬಹಳ ! ಬ್ರಿಟಿ ಷರ ಕಾಲದಲ್ಲಿ ನಡೆದದ್ದೂ ಇದೆ. ದೇಶಾಭಿಮಾನವೇ ಇಲ್ಲದ ಭ್ರಷ್ಟರಿಗೆ ಲಕ್ಷ್ಮೀಕೃಪೆಯೆಂತು ? ಎಂದು ಮಂತ್ರ ಕೇಳುವಂತಿದೆ.

## ೨ ಲಕ್ಷ್ಮೀತಂತ್ರದ ವಿವರಣೆಯ ಸಾರಸ್ಯ

ಇಲ್ಲಿ ದೇವಸಖ, ಕೀರ್ತಿ, ಮಣಿ ಇತ್ಯಾದಿ ಪದಗಳಿಗೆ ಲಕ್ಷ್ಮೀತಂತ್ರವು ಬೇರೆಯೇ ಅರ್ಥವನ್ನು ವಿವರಿಸಿದೆ :

ಕಿರನ್ತೀ ಕಿರಣಾನ್ ಲೋಕೇ ಕಿರನ್ತೀ ಚೋತ್ತರೋತ್ತರಂ।
ವಾಯುನಾ ದೇವಮಿತ್ರೇಣ ಮಣಿನಾಧಾರವಹ್ನಿನಾ ॥
ಶನೈರ್ವಿಶ್ರಮ್ಯ ವಿಶ್ರಮ್ಯ ಪತ್ರೇಷು ಜಲಜನ್ಮನಾಂ ।
ದ್ವಾದಶಾನಾಂ ತತಶ್ಚೋರ್ಧ್ವಂ ಭಜಾಮಿ ದ್ವಾದಶಾಂತಿಮಂ ॥
ಕೀರ್ತಯನ್ತಿ ತತಃ ಕೀರ್ತಿಂ ಮುನಯೋ ಮಾಂ
ಮನೀಷಿಣಃ ।
ಪಂಚಾಕ್ಷರೋ ಹ್ಯಯಂ ಮಂತ್ರಃ ಯೋಗವೈಮಲ್ಯ
ದಾಯಕಃ ॥ (ಶ್ಲೋ. ೧೪೩–೧೪೫)

ಯೋಗಿಗಳ ದೇಹವೆಲ್ಲದರಲ್ಲೂ ತನ್ನ ಕಾಂತಿ ಕಿರಣಗಳನ್ನು ವ್ಯಾಪಿಸುವಂತೆ ಮಾಡುವವಳೂ, ಅಗ್ನಿಸಖನಾದ ವಾಯುವಿನಿಂದಲೂ, ಮಣಿ ಎಂದು ಖ್ಯಾತವಾದ ಮೂಲಾಧಾರವಹ್ನಿಯಿಂದಲೂ, ಉತ್ತರೋತ್ತರವಾಗಿರುವ ಹನ್ನೆರಡು ಪದ್ಮದಳಗಳಲ್ಲಿ ಮೆಲ್ಲಮೆಲ್ಲನೆ ಸಂಚರಿಸುವವಳೂ, (ಈ ಪದ್ಮಗಳು, ಯೋಗಿ ದೇಹದ ಚಕ್ರಗಳು.) ಎಲ್ಲಕ್ಕೂ ಮೇಲಾದ ಹನ್ನೆರಡನೆಯದನ್ನು ಹೊಂದುವವಳೂ ಆದ ತನ್ನನ್ನು ಜ್ಞಾನಿಗಳಾದ ಮುನಿಗಳು ಈ ಕಾರಣಕ್ಕಾಗಿಯೇ 'ಕೀರ್ತಿ' ಎಂದು ಕೊಂಡಾಡುವದಾಗಿಯೂ, "ಓಂ ಕೀರ್ತ್ಯೈ ನಮಃ" ಎಂಬ ಈ ಐದಕ್ಷರದ ಮಂತ್ರವು ಯೋಗಿಗಳ ಮನಸ್ಸನ್ನು ವಿಮಲಗೊಳಿಸುವುದೆಂದೂ ಲಕ್ಷ್ಮೀದೇವಿಯು ವಿವರಿಸಿದ್ದಾಳೆ. ಪದ್ಮೋದ್ಭವೆಯಾದ ದೇವಿಯು ಪದ್ಮದಷ್ಟೇ ಸುಕುಮಾರ ಶರೀರವುಳ್ಳವಳಾಗಿರುತ್ತಾ, ಪುಷ್ಪದಿಂದ ಪುಷ್ಪಕ್ಕೆ ಸಂಚರಿಸುವ ಸೊಬಗು, ಗಾಳಿಯಿಂದ ಬೀಸಿಕೊಂಡು ಬರುವ ಹೂವಿನಂತೆ, ಮೋಹಕವಾಗಿರುವ ಸಂನ್ನಿವೇಶವನ್ನು ಯೋಗದ ಭಾಷೆಯಲ್ಲಿ ವಿವರಿಸುವ ಈ ನಿಷ್ಪತ್ತಿ ಬಹುಮಾರ್ಮಿಕವಾದದ್ದು. ಇವಳ ಕೀರ್ತಿಗೆ ಇನ್ನೇನು ಬೇಕು ?

"ಕೀರ್ತಿಂ ಋದ್ಧಿಂ" ಎಂಬಲ್ಲಿಯೂ, ಇವನ್ನೂ ಲಕ್ಷ್ಮೀವಾಚಕಗಳೆಂದೇ ಇಲ್ಲಿ ಗ್ರಹಿಸಿದೆ. 'ಋದ್ಧಿ' ಶಬ್ದಕ್ಕೆ "ಅರ್ಥಯಾಪ್ನೋತಿ ಋದ್ಧಿಃ" ಎಂಬಂತೆ.

"ವಿಷ್ಣುವನ್ನು ಸಂತೋಷಗೊಳಿಸುವೆನಾದುದರಿಂದ ಋದ್ಧಿ ಎಂದು ಕರೆಯು ಲ್ಪಡುತ್ತೇನೆ" ಎಂಬರ್ಥ ಹೇಳಿದೆ.

ಋದ್ಧಾಸ್ಮ್ಯಹಂ ಗುಣೈರ್ವಿಷ್ಣೋ ರ್ಧಯಾಮಿ ಚ
ಯೋಗಿನಃ ।
ಪತ್ರೇಷು ಯೋಗಪದ್ಮಾನಾಂ ಆಧಾರಾಂತರಚಾರಿಣಾಂ ॥
ಉತ್ತರೋತ್ತರವೃದ್ಧ್ಯಾಮಿ ಭಜನ್ತೀ ವಿಸ್ತೃತಿಂ ಪರಾಂ ।
ಋದ್ಧಿಂ ವೃದ್ಧಾಸ್ತತಃ ಪ್ರಾಹುಃ ಯೋಗಿನೋ
ಯೋಗದೀಪಿನೀಂ ॥ (ಶ್ಲೋ, ೧೪೬-೧೪೭)

ಗುಣಗಳಲ್ಲಿ ಶ್ರೀ ವಿಷ್ಣುವಿಗಿಂತ ಸಮೃದ್ಧಿಯುಳ್ಳವಳಾದುದರಿಂದಲೂ. ಅವನನ್ನು ಸಂತೋಷಗೊಳಿಸುವುದರಿಂದಲೂ, ಯೋಗಿಗಳ ಮೂಲಾಧಾರ ಪದ್ಮದ ದಳಗಳಲ್ಲಿ, ಮೇಲೆ ಮೇಲಕ್ಕೆ ಹೋಗುತ್ತಾ ವಿಕಸಿತಳಾಗಿ, ಸಮೃದ್ಧ ಕಾಂತಿಯಿಂದ ಕೂಡಿದವಳಾಗಿ ಆಗುವುದರಿಂದಲೂ ಹಿರಿಯರು ಯೋಗವರ್ಧಕ ಳಾದ ತನ್ನನ್ನು ಋದ್ಧಿಯೆಂದು ಕರೆಯುವರೆಂದು ಭಾವ.

ಎಂಟನೆಯ ಮಂತ್ರ

ಕ್ಷುತ್ಪಿಪಾಸಾಂ ಮಲಾಂ ಜ್ಯೇಷ್ಠಾಂ ಅಲಕ್ಷ್ಮೀಂ ನಾಶಯಾಮ್ಯಹಂ ।
ಅಭೂತಿಮಸಮೃದ್ಧಿಂ ಚ ಸರ್ವಾನ್ ನಿರ್ಣುದ ಮೇ
ಗೃಹಾತ್ ॥೮॥

(ಅರ್ಥ) : "(ಎಲೈ ಅಗ್ನಿಯೇ, ಅಥವಾ ಭಗವಂತನೇ !), ಹಸಿವು, ಬಾಯಾರಿಕೆಗಳ ಸ್ವರೂಪದಲ್ಲಿರುವವಳೂ, (ದೋಷರೂಪ) ಕೊಳೆಯಾಗಿರು ವವಳೂ, ಆದ ದರಿದ್ರದೇವತೆಯನ್ನು, ಲಕ್ಷ್ಮಿಗಿಂತ ಮುಂಚೆ ಹುಟ್ಟಿದವ ಳನ್ನೂ, ನಾಶಪಡಿಸುತ್ತೇನೆ. ನನ್ನ ಮನೆಯಿಂದ ಅನಭಿವೃದ್ಧಿಯನ್ನೂ, ಬಡತನವನ್ನೂ, ಇಂಥ ಎಲ್ಲವನ್ನೂ ನನ್ನ ಮನೆಯಿಂದ ಆಚೆ ಓಡಿಸು."

# ೧ ಜ್ಯೇಷ್ಠಾಲಕ್ಷ್ಮಿಯ ಸ್ವರೂಪ

(ವಿವರಣೆಗಳು) : ಲಕ್ಷ್ಮೀ ಅನುಗ್ರಹವಿದ್ದಲ್ಲಿ ದಾರಿದ್ರ್ಯದೇವತೆಗೆ ಅವಕಾಶವಿರುವುದಿಲ್ಲ. ಹಸಿವು, ಬಾಯಾರಿಕೆಗಳು ದಾರಿದ್ರ್ಯದೇವತೆಯ ಲಕ್ಷಣಗಳು. ಮನಸ್ಸಿನ ಮಾಲಿನ್ಯ, ದೇಹ, ವಾಕ್ಕುಗಳ ಕೊಳೆಗೂ ದಾರಿದ್ರ್ಯ ದೇವತೆಯೇ ಅಧೀಶ್ವರೀ. ಇವಳಿರುವಲ್ಲಿ ವ್ಯಕ್ತಿಯ ಅಧ್ಯಾತ್ಮ ಅಭಿವೃದ್ಧಿ ಗಾಗಲೀ, ಬಾಹ್ಯಾರ್ಥದ ಪ್ರಗತಿಗಾಗಲೀ ಅವಕಾಶವಿರುವುದಿಲ್ಲ. ಅಗ್ನಿಯು ಇವಳನ್ನು ತೊಲಗಿಸಿ, ಲಕ್ಷ್ಮೀಸಾನ್ನಿಧ್ಯವು ಸದಾ ಸಾಧಕನ ಮನೆಯಲ್ಲಿರು ವಂತೆ ಮಾಡಬೇಕೆಂದು ಮಂತ್ರದಲ್ಲಿ ಪ್ರಾರ್ಥಿಸಿದೆ. ವಿದ್ಯಾರಣ್ಯರೂ, ಪೃಥ್ವೀಧರರೂ ಹೀಗೆಯೇ ವಿವರಿಸಿದ್ದಾರೆ,

ಶ್ರೀರಂಗನಾಥಮುನಿಗಳು ಪಿಪಾಸೆಯೆಂದರೆ, ಬಾಯಾರಿಕೆ ಮಾತ್ರ ವಲ್ಲದೆ, ವಿಷಯಸ್ಪೃಹಾಂ, ಇಂದ್ರಿಯ ಭೋಗಗಳ ಆಸೆಯೆಂದು ಹೆಚ್ಚಿನ ವಿವರಣೆ ನೀಡಿದ್ದಾರೆ. ಇದು, ದರ್ಶನಕ್ಕೂ ಅಯೋಗ್ಯಳಾದ ಅಲಕ್ಷ್ಮಿಯು ಬೇರುಬಿಟ್ಟ ಗುರುತಾಗುವುದು. ಇದೆಲ್ಲ ಹೋಗಲು ಲಕ್ಷ್ಮೀಕಟಾಕ್ಷ ಬೇಕಾ ದುದು ಯುಕ್ತವಾಗಿದೆ.

ಈ ಮಂತ್ರದ ಭಾವಾರ್ಥವನ್ನೇ ವಿವರಿಸುವಂತೆ 'ಲಕ್ಷ್ಮೀಯಾಮಳ' ವೆಂಬ ಗ್ರಂಥದಲ್ಲಿ ಈ ಕೆಳಗಿನ ಅದ್ಭುತ ಶ್ಲೋಕವಿದೆ.

ಅಜ್ಞಾನಪಾತಕತಮಸ್ತತಿ ತೀವ್ರರಶ್ಮಿಂ
ದೌರ್ಭಾಗ್ಯ ಭೂಧರ ವಿದಾರಣ ವಜ್ರಮೀಡೇ ।
ರೋಗಾರ್ತಿಘೋರ ಫಣಿಮರ್ದನ ಪಕ್ಷಿರಾಜಂ
ಲಕ್ಷ್ಮೀಪದದ್ವಯಮನರ್ಥಹರಂ ಸುಖಾರ್ಥೀ ॥

ಅಜ್ಞಾನ, ಪಾಪವೆಂಬುವು ಘೋರ ಕತ್ತಲೆಯಂತೆ. (ಇದೇ ದಾರಿದ್ರ್ಯ ದೇವತೆಯ ಗುರುತು.) ಇವಕ್ಕೆ ಲಕ್ಷ್ಮೀದೇವಿಯ ಪಾದಗಳು ಸೂರ್ಯ ಕಿರಣ ಪ್ರಾಯವಾಗಿದ್ದು, ನಿವಾರಕವಾಗಿವೆ. ದೌರ್ಭಾಗ್ಯವೆಂಬುದು ಅಚಲ ವಾದ ಪರ್ವತದಂತಿದ್ದರೆ, ಲಕ್ಷ್ಮೀದೇವಿಯ ಪಾದಗಳು ಇದನ್ನು ಸೀಳಿಹಾಕುವ

ವಜ್ರಾಯುಧದಂತಿವೆ. ರೋಗ, ದುಃಖಗಳೆಂಬುದು ಹಾವಿನಂತಿದ್ದರೆ ಇವನ್ನು ಮರ್ದನ ಮಾಡುವ ಗರುಡನಂತಿವೆ, ಲಕ್ಷ್ಮೀದೇವಿಯ ಪಾದಗಳು ಸುಖಾರ್ಥಿಯಾದ ಸಾಧಕನು ಇವನ್ನು ಶರಣು ಹೋಗುತ್ತಾನೆಂದು ಶ್ಲೋಕದ ಭಾವ.

## ೨ ರಾಷ್ಟ್ರಕ್ಕೇ ಹಿಡಿದ ಜ್ಯೇಷ್ಠಾಲಕ್ಷ್ಮಿ !

ವ್ಯಕ್ತಿಗೆ ಇದನ್ನೆಲ್ಲ ಅನ್ವಯಿಸುವುದು ತಿಳಿದೇ ಇದೆ. ಈ ಹಿಂದಿನ ಮಂತ್ರದಲ್ಲಿ ರಾಷ್ಟ್ರದ ಪ್ರಸ್ತಾಪ ಬಂದಿರುವುದರಿಂದ, ರಾಷ್ಟ್ರಕ್ಕೆ ಮೂದೇವಿ ಮೆಟ್ಟಿಕೊಳ್ಳುವುದೆಂದರೇನೆಂದು ಜ್ಞಾನಿಗಳು ವಿಚಾರಿಸಬೇಕು. ಇಡೀ ರಾಷ್ಟ್ರವೇ ಅನಕ್ಷರತೆ, ಅಜ್ಞಾನ, ಮೂಢನಂಬಿಕೆಗಳು, ವಿಚಾರಶೂನ್ಯತೆ ಮುಂತಾದ ಮೂದೇವಿಯ 'ಕೃಪೆ'ಯಲ್ಲಿ ಬಿದ್ದರೆ, ಆ ರಾಷ್ಟ್ರದಲ್ಲಿ ಸರಿ–ತಪ್ಪು ತಿಳುವಳಿಕೆ ಹೇಗೆ ಇದ್ದೀತು ? ಇದಿಲ್ಲದೆ ಪುಣ್ಯಪಾಪ ವಿವೇಕವೆಂತು ? ಈ ವಿವೇಕವಿಲ್ಲದವರಿಗೆ ತನ್ನ ಹಿತ, ಪರಹಿತಗಳು ಗೊತ್ತಾಗುವುದೆಂತು ? ಈ ವ್ಯತ್ಯಾಸ ತಿಳಿಯದೆ ಆ ಸಮಾಜ, ಸಂಸ್ಕಾರ ಸಂಪನ್ನವೂ, ಸುಖಮಯವೂ, ಸಂಪತ್ ಸಮೃದ್ಧವೂ ಆಗುವುದೆಂತು ? ಸಂಪತ್ತಿಲ್ಲದೆ, ದೇಹ ಮನಸ್ಸುಗಳ ಆರೋಗ್ಯವಾಗಿರುವುದು ಹೇಗೆ ಶಕ್ಯ ? ಮಾನಸಿಕ ಸ್ವಾಸ್ಥ್ಯವಿಲ್ಲದ ದೇಶ ಭಯಮುಕ್ತಿ ಹೊಂದುವುದು ಹೇಗೆ ? ಧೈರ್ಯ ಯುಕ್ತವೂ ಮೌಲ್ಯಾಧಾರಿತವೂ ಆಗದ ಸಮಾಜ, ದಾಸ್ಯದಿಂದ, ಸಂಕಟದಿಂದ ಹೇಗೆ ಪಾರಾದೀತು ? ಇದನ್ನೆಲ್ಲ ವಿಚಾರಿಸಿದರೆ, ಪ್ರಾಯಃ ನಮ್ಮ ದೇಶದ ಕಳೆದ ಸಾವಿರವರ್ಷಗಳ ರಾಷ್ಟ್ರದ ಇತಿಹಾಸವನ್ನೇ ನೆನೆದು ಹೇಳಿದಂತಿದೆ ಈ ಸೂಕ್ತಿ. ಈ ಮಂತ್ರವನ್ನು ದಿನಜೀವನದ ಸ್ಫೂರ್ತಿಯಾಗುವಂತೆ ಪಠಿಸಿ, ಮಂತ್ರಾರ್ಥವನ್ನು ಕಾರ್ಯರೂಪಕ್ಕಿಳಿಸುವ ಪ್ರವೃತ್ತಿ ನಮ್ಮಲ್ಲಿ ಈ ವರೆಗೆ ಬಾರದಿದ್ದುದರಿಂದಲೇ ಈ ವರೆಗೆ ನಮಗೆ ಲಕ್ಷ್ಮೀ ಕೃಪೆ ಒದಗಲಿಲ್ಲ ! ಇಂದಾದರೂ

ಪರಿಸ್ಥಿತಿ ಬಹಳ ಬದಲಾಗಿಲ್ಲ. ಅಜ್ಞಾನ, ರೋಗ, ಆಲಸ್ಯ, ದೇಶಾಭಿಮಾನ ಶೂನ್ಯತೆ, ವಂಚನೆ, ಪರಪೀಡೆ ಮುಂತಾದ ಮೂದೇವಿಯ ಲಕ್ಷಣಗಳೇ ಇನ್ನೂ ತಾಂಡವವಾಡುತ್ತಿವೆ ! ಲಕ್ಷ್ಮೀಕಟಾಕ್ಷಕ್ಕೆ ಇಡೀ ಸಮಾಜವೇ ಅರ್ಥ ತಿಳಿದು ಹಾತೊರೆದರೆ ಮಾತ್ರ ಮಂತ್ರದ ಪ್ರಾರ್ಥನೆಯು ಸಿದ್ಧಿಸುವುದು. ಒಂದು ಕಾಲದಲ್ಲಿ ಲಕ್ಷ್ಮೀಕಟಾಕ್ಷ ಶೂನ್ಯರಾಗಿದ್ದು, ಈಗ ನಾಲ್ಕುನೂರು ವರ್ಷಗಳ ತನಕ ಆದಿಮಾನವ, ಅಡವಿಮಾನವರಂತೆ ಟೊಂಗೆಗಳ ಮೇಲೆ ವಾಸಿಸುತ್ತಿದ್ದ ಜನಾಂಗಗಳು ಇಂದು ಸಮೃದ್ಧವಾಗಿ, ನಮ್ಮನ್ನಾಳಿ, ಜಗತ್ತನ್ನೇ ತಮ್ಮ ವಶದಲ್ಲಿಟ್ಟುಕೊಂಡಿರುವುದಕ್ಕೇನು ಕಾರಣವೆಂದರೆ, ಲಕ್ಷ್ಮೀ ನಿವಾಸಕ್ಕೆ ಬೇಕಾದ ಲಕ್ಷಣಗಳು —ದುಡಿಮೆ, ಮಾನವಪ್ರೇಮ, ಜ್ಞಾನ ಪ್ರೇಮ, ಸತ್ಯಾನ್ವೇಷಣೆ, —ಮುಂತಾದವು ಅದರಲ್ಲಿವೆ ! ಅವರು ಬಿಟ್ಟದ್ದೆಲ್ಲಾ ನಮ್ಮಲ್ಲಿ ಬಂದು ಸೇರಿಕೊಂಡಿದೆ !! ಇದು ಸರಿಹೋಗಲು ಪ್ರಕೃತ ಮಂತ್ರಾರ್ಥವನ್ನು ಇಡೀ ರಾಷ್ಟ್ರವೇ ಅನುಸಂಧಿಸಿ, ಕಾರ್ಯರೂಪಕ್ಕೆ ತರಬೇಕು ಮಾತ್ರ. "ಪ್ರಾದುರ್ಭೂತೋಽಸ್ಮಿ ರಾಷ್ಟ್ರೇಽಸ್ಮಿನ್" ಎಂಬ ಪ್ರಜ್ಞೆ ಎಲ್ಲರಲ್ಲೂ ಮೂಡಿ ಬರಬೇಕು. "We are not yet a Society, we are only a mob" ಎಂಬಂತೆ, ನಾವು ಒಂದು ರಾಷ್ಟ್ರವೆಂಬ ಪ್ರಜ್ಞೆಯೇ ಮೂಡದೆ, ಪರಸ್ಪರ ಕ್ಷುಲ್ಲಕ ಕಚ್ಚಾಟಗಳಲ್ಲಿ ತೊಡಗಿ, ರಾಷ್ಟ್ರಘಾತಕ ಪ್ರವೃತ್ತಿ ಬೆಳೆದ ಸಮಾಜ 'ದೊಂಬಿ'ಯಲ್ಲದೆ ಮತ್ತೇನು ? ಈ ಮೂದೇವಿ ತೊಲಗಿ ಲಕ್ಷ್ಮೀವಾಸ ನಮಗೆ ಆಗಲು ಬೇಕಾದ ಸ್ಫೂರ್ತಿ ಈ ಮಂತ್ರದಲ್ಲಿರುವುದು ವಿವೇಕಿಗಳ ಕಣ್ಣಿಗೆ ಬೀಳಬೇಕಾಗಿದೆ.

### ಒಂಬತ್ತನೆಯ ಮಂತ್ರ

ಗಂಧದ್ವಾರಾಂ ದುರಾಧರ್ಷಾಂ
ನಿತ್ಯಪುಷ್ಟಾಂ ಕರೀಷಿಣೀಂ ।
ಈಶ್ವರೀಂ ಸರ್ವಭೂತಾನಾಂ
ತಾಮಿಹೋಪಹ್ವಯೇ ಶ್ರಿಯಂ ॥೯॥

ಅರ್ಥ : ಗಂಧಕ್ಕೆ ಕಾರಣಳಾದಿರುವವಳೂ, (ಅಥವಾ, ಗಂಧಗುಣವೇ ಲಕ್ಷಣವಾಗಿಯುಳ್ಳವಳೂ), ಯಾರಿಂದಲೂ ಜಯಿಸಲಸಾಧ್ಯಳಾದವಳೂ, ಸದಾ (ಗುಣ) ಪುಷ್ಟಳಾದಿರುವವಳೂ, ಆನೆಗಳಿಗೆ (ಗಜವನ್ನೂ ಐಶ್ವರ್ಯದಲ್ಲಿ ಗಣಿಸುವಾಗ, ಲಕ್ಷ್ಮೀಚಿಹ್ನವೆಂದು ಭಾವಿಸುವಾಗ,) ಒಡೆಯಳಾಗಿರುತ್ತಾ, ಗಜವಾಹನದಲ್ಲಿ ಸಂಚರಿಸುವವಳೂ, (ಅಥವಾ, ಕರೀಷವೆಂದರೆ, ಗೋವು ಯುವತಿಯಾಗಿರುವವಳೂ) ಎಲ್ಲ ಪ್ರಾಣಿಗಳಿಗೂ ಒಡೆತಿಯಾಗಿರುವವಳೂ ಆದ ನಿನ್ನನ್ನು (ಲಕ್ಷ್ಮೀದೇವಿಯನ್ನು), ಎಲೈ ಶ್ರೀದೇವಿಯೇ ಕರೆಯುತ್ತೇನೆ.

ವಿವರಣೆ : ಈ ಋಕ್ಕನ್ನು ಸಾಮಾನ್ಯವಾಗಿ ದೇವರಿಗೆ ಗಂಧ ಸಮರ್ಪಿಸುವಾಗ ದಿನಾ ಪೂಜೆಯಲ್ಲಿ ಉಪಯೋಗಿಸುತ್ತೇವೆ. ಇಲ್ಲಿ ಅನೇಕ ಮರ್ಮಗಳಿವೆ.

## ೧ ಗಂಧದ್ವಾರಾ

ಶ್ರೀಸಾಯಣರು "ಗಂಧಃ, ಘ್ರಾಣಗ್ರಾಹ್ಯೋಗುಣಃ, ದ್ವಾರಂ, ಲಕ್ಷಣಂ ಯಸ್ಯಾಃ ತಾಂ" ಎಂದು. (ಅಂದರೆ, "ಮೂಗಿನಲ್ಲಿ ಹಿಡಿಯಲ್ಪಡುವ ಗುಣವಾವುದೋ ಆ ಗಂಧವನ್ನು ಯಾವಳು ಲಕ್ಷಣವಾಗಿ ಉಳ್ಳವಳೋ ಅವಳನ್ನು") ಅರ್ಥಮಾಡಿದ್ದಾರೆ. ಗಂಧವು ಪಂಚಭೂತಗಳಲ್ಲಿ ಪೃಥ್ವೀತತ್ತ್ವದ ಗುಣ. ಪೃಥ್ವಿಯು ಲಕ್ಷ್ಮಿಯ ಅಂಶವಾದ್ದರಿಂದ, ಲಕ್ಷ್ಮಿಯು ಈ ತತ್ತ್ವಕ್ಕೆ ಅಧೀಶ್ವರಿಯಾದುದರಿಂದ, ಇದರ ಗುಣವನ್ನು ಅವಳದ್ದೆಂದೇ ಹೇಳಿದೆ. (ಪೃಥ್ವೀ ಎಂದರೆ ಭೂಮಿ. ಭೂದೇವಿಯೂ ಲಕ್ಷ್ಮೀ ಅಂಶಳಾದುದರಿಂದ ಈ ಬಗೆಯ ವ್ಯವಹಾರವುಂಟು.) ಇದನ್ನೇ ಪೃಥ್ವೀಧರ ಭಾಷ್ಯವೂ ಅನುಮೋದಿಸಿದೆ.

ಶ್ರೀರಂಗನಾಥ ಮುನಿಗಳ ಅರ್ಥಪ್ರಕಾರ ಬೇರೆ. ಲಕ್ಷ್ಮೀಪೂಜೆಗೆ

ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯಗಳೆಲ್ಲವೂ ಸಾಧನಗಳೂ, ಉಪಕರಣಗಳೂ ಆಗಿರುವುದರಿಂದ ಇಲ್ಲಿ ಗಂಧಶಬ್ದವು ಇವೆಲ್ಲಕ್ಕೂ ಉಪಲಕ್ಷಣವಾಗಿರುತ್ತಾ, ಇವುಗಳ ಮೂಲಕ ಸಮಾರಾಧ್ಯಳನ್ನು ಇಲ್ಲಿ ಗಂಧದ್ವಾರಾಂ ಎಂದು ಕರೆದಿದೆ ಎಂದು ಅವರ ವಿವರಣೆ. ಲಕ್ಷ್ಮೀತಂತ್ರದಲ್ಲಿಯಾದರೂ ಇನ್ನೂ ವಿಶಿಷ್ಟವಾದ ವಿವರಣೆಯಿದೆ.

ಗಂಧಾದಯಃ ಪೃಥಿವ್ಯಾದ್ಯಾಃ ದ್ವಾರಾಣಿ ಮಮ ವೇದನೇ ।
ಸರ್ವೇಷಾಂ ಪುಣ್ಯಗಂಧಾನಾಂ ದ್ವಾರಭೂತಾಸ್ಮಿ ಶಾಶ್ವತೀ ॥
ಗಂಧದ್ವಾರೇತಿ ಮಾಂ ಪ್ರಾಹುಃ ವಿಪ್ರಾ ವೇದಾನ್ತಪಾರಗಾಃ ॥
(ಶ್ಲೋ. ೧೪೮)

ಲಕ್ಷ್ಮೀದೇವಿಯನ್ನು ಅರಿಯುವಲ್ಲಿ (ಸಾಕ್ಷಾತ್ಕರಿಸುವಲ್ಲಿ), ಗಂಧ ಮೊದಲಾದ ಗುಣಗಳೂ, ಇವಕ್ಕೆ ಆಧಾರವಾದ ಪೃಥ್ವೀ ಮೊದಲಾದ ತತ್ತ್ವಗಳೂ ಕಾರಣಗಳಾಗುತ್ತವೆ. ಸುಗಂಧಗಳಿಗೆಲ್ಲಾ— ಪುಣ್ಯಗಂಧಗಳಿಗೆಲ್ಲಾ— ನಿತ್ಯಕಾರಣಳಾಗಿರುವವಳೂ ಅವಳೇ. ವೇದಾನ್ತವನ್ನರಿತ ಜ್ಞಾನಿಗಳು ಇದಕ್ಕಾಗಿಯೇ ಇವಳನ್ನು ಗಂಧದ್ವಾರಾ ಎನ್ನುತ್ತಾರೆ ಎಂದು ಅರ್ಥ.

ಭಗವಂತನು, ಉಪನಿಷತ್ತುಗಳ ಪ್ರಕಾರ ಸರ್ವಗಂಧನಾದ ಮೇಲೆ, ಲಕ್ಷ್ಮಿಯು ಗಂಧದ್ವಾರಾ ಆಗಿರಲೇಬೇಕಾದುದು ನ್ಯಾಯವಾಗಿದೆ. ದೇವರಿಗರ್ಪಿಸುವ ಗಂಧ, ಪುಷ್ಪಾದಿಗಳಲ್ಲೆಲ್ಲ ಇವಳ ಸಾಂನ್ನಿಧ್ಯವಿರುವುದರಿಂದಲೇ, ಇವನ್ನು ಅವನಿಗೆ ಸಮರ್ಪಿಸುವವರೆಲ್ಲರಿಗೂ, ಲಕ್ಷ್ಮೀನಾರಾಯಣರಿಗೆ ಕಲ್ಯಾಣೋತ್ಸವಮಾಡಿಸಿದ ಪುಣ್ಯ ಬರುವುದು ! ಭಗವತ್ಪೂಜಾವಿಧಿಯಲ್ಲೂ, ಈ ಶ್ರದ್ಧೆಯಲ್ಲೂ, ಕ್ರಿಯೆಯಲ್ಲೂ, ಎಲ್ಲೆಲ್ಲೂ ಶ್ರೀಸಾಂನ್ನಿಧ್ಯವಿದ್ದೇ ಇದೆ.

## ೨ ದುರಾಧರ್ಷಾಂ

ಇಂಥ ಮಹಿಮೆಯುಳ್ಳವಳನ್ನು ಯಾರೂ ಎದುರಿಸಲಾರರು, ಅಪಹರಿಸ ಲಾರರು, ಬೇರ್ಪಡಿಸಲಾರರೆಂದು ತೋರಿಸಲು, ಈ ವಿಶೇಷಣ ಬಂದಿದೆ. ವಿದ್ಯಾರಣ್ಯರೂ ಪೃಥ್ವೀಧರರೂ ಹೀಗೇ ಅರ್ಥೈಸಿದ್ದಾರೆ. ಯಾರು ಶುಚಿ ಯಾಗಿಲ್ಲವೋ, ಶ್ರದ್ಧಾರಹಿತರೋ, ಇಂದ್ರಿಯನಿಗ್ರಹವಿಲ್ಲದವರೋ ಅವರಿಗೆ ಲಕ್ಷ್ಮೀಕಟಾಕ್ಷವಿಲ್ಲವೆಂಬರ್ಥದಲ್ಲಿ— ಅಪ್ರಯತ್ನೈಃ ಅಮಂಗಲೈಃ ಪೂರ್ವೋಕ್ತ ಉಪಾಯರಹಿತೈಶ್ಚ ಪ್ರಾಪ್ತುಮಶಕ್ಯಾಂ — ಎಂದು ಶ್ರೀರಂಗನಾಥ ಮುನಿ ಗಳು ವಿವರಿಸಿದ್ದಾರೆ. ಬಲಾತ್ಕಾರದಿಂದ ಲಕ್ಷ್ಮೀವಂತರಾಗುವುದು ಅಸಾಧ್ಯ ವೆಂದರ್ಥ. ಇತಿಹಾಸಪುರಾಣಗಳಲ್ಲಿ ಅಮಂಗಲಸ್ವರೂಪರಾದ ರಾವಣ, ಹಿರಣ್ಯ, ಶಿಶುಪಾಲ, ಕಂಸ, ಜರಾಸಂಧಾದಿಗಳು ಬಲಾತ್ಕಾರವಾಗಿ ಐಶ್ವರ್ಯ ಸಂಪನ್ನರಾಗಲು ಯತ್ನಿಸಿದರೂ ಕೊನೆಗೆ ಮಣ್ಣುಮುಕ್ಕಿದರೇ ಹೊರತು, ಅವರ ಸ್ಮರಣೆಯೇ ಇಂದಿಗೂ ಅಮಂಗಲವಾಗಿರುವುದು ಹೀಗೆಯೇ. ಶುಚಿ ರ್ಭೂತರಾಗಿ, ಇಂದ್ರಿಯನಿಗ್ರಹ ಯುಕ್ತರಾದ ಪರಮ ಸಾತ್ತ್ವಿಕ ಋಷಿಗಳೂ, ಸಂತರೂ, ಆಚಾರ್ಯರೂ ಪ್ರಾತಃ ಸ್ಮರಣೀಯರಾಗಿ, ಇಂದಿಗೂ ಅಜ ರಾಮರವಾಗಿ ಯಶಃಕಾಯರಾಗಿರುವುದೂ ಲಕ್ಷ್ಮೀಕಟಾಕ್ಷದಿಂದಲೇ. ರಾವಣ ನಿಗೆ ಬಾರದ ಶ್ರೀಮಂತಿಕೆ ವಿಭೀಷಣನಿಗೆ ದೊರೆತು "ಅಂತರಿಕ್ಷಗತಃ ಶ್ರೀಮಾನ್" ಎಂದು ಅವನನ್ನು ಶ್ರೀ ರಾಮಾಯಣ ಕೊಂಡಾಡುವ ಮರ್ಮ ವನ್ನರಿಯಬೇಕು.

ಲಕ್ಷ್ಮೀತಂತ್ರವೂ ಈ ಅರ್ಥವನ್ನೇ ವಿವರಿಸಿದೆ :

ದುರಾಧರ್ಷಾಸ್ಮಿ ಸರ್ವೇಷಾಂ ದೈತ್ಯದಾನವರಕ್ಷಸಾಂ ।
ಶುದ್ಧಾಸಂವಿತ್‌ಕ್ರಿಯಾ ಚಾಹಂ ನಾಹಾರ್ಯೈರಪಿ ಬಾಧಿತುಂ ॥
ಸರ್ವೇಷಾಂ ಆತ್ಮಭೂತಾಯಾಃ ಮಮ ಸಂವಿತ್
ಕ್ರಿಯಾತ್ಮನಃ ।
ಜ್ಞಾತೃತ್ವಮಪಿ ಕರ್ತೃತ್ವಂ ಯೋ ನಾಮಾಪನಿನೀಷತಿ ॥

ಜ್ಞಾತಾ ಕರ್ತಾ ನಿಷೇಧಸ್ಯ ಸ ನಿರ್ವಕ್ಷ್ಯತಿ ತತ್ ಕಥಂ ।
ಶಕ್ತೋ ಧರ್ಷಯಿತುಂ ಕಶ್ಚಿತ್ ನೈವ ಸಂವಿದ್ಗತಿಂ ಮಮ ॥
ತದಭಾವಾ ವಿಚಿಂತ್ಯೈವಂ ಹ್ಯಭಾವೇ ಸಂವಿದೇವ ಸಾ ।
ದುರಾಧರ್ಷೇತಿ ಮಾಂ ಪ್ರಾಹುಃ ಸಾಂಖ್ಯ ಜ್ಞಾನವಿಚಕ್ಷಣಾಃ ॥

(ಶ್ಲೋ. ೧೪೯–೫೨)

ದೈತ್ಯದಾನವರಾಕ್ಷಸರ ಕೈಗೆ ಎಟುಕದವಳೂ, ಅವರಿಂದ ಅಪಮಾನಕ್ಕೊಳಗಾಗಲಾರದವಳೂ ಲಕ್ಷ್ಮೀದೇವಿ. ಜ್ಞಾನಕ್ರಿಯಾರೂಪಿಣಿಯಾದ ಇವಳನ್ನು ಯಾರೂ 'ಇಲ್ಲ' ಮಾಡಲಾರರು. ಜ್ಞಾನಕ್ರಿಯಾರೂಪಿಣಿಯಾಗಿ, ಸರ್ವಾತ್ಮಭೂತಳಾಗಿರುವ (ಎಲ್ಲ ಜನ್ತುಗಳಲ್ಲೂ ವ್ಯಾಪಿಸಿರುವ) ಇವಳ ಜ್ಞಾತೃತ್ತ್ವವನ್ನೂ, ಕರ್ತೃತ್ತ್ವವನ್ನೂ ಯಾವನು ಬಾಧಿಸಲು ('ಇಲ್ಲ' ಮಾಡಲು) ಯತ್ನಿಸುವನೋ, ಅವನಿಗೆ (ಜೀವಾತ್ಮನಿಗುಚಿತವಾದ) ಜ್ಞಾತೃತ್ತ್ವ ಕರ್ತೃತ್ತ್ವಗಳು ಸಿದ್ಧಿಸುವುದೆಂತು ? ಅಚೇತನಗಳೆನಿಸಿದ ಕಲ್ಲುಮುಳ್ಳುಗಳಂತೆಯೇ ಅವನೂ ಬದುಕಿಯೂ ಸತ್ತವನೇ ಆಗುತ್ತಾನೆ. ಹೀಗೆ ಈ ವ್ಯರ್ಥಪ್ರಯತ್ನಗಳೂ ಲಕ್ಷ್ಮೀದೇವಿಯ ಜ್ಞಾತೃತ್ತ್ವ ಕರ್ತೃತ್ತ್ವಗಳನ್ನೇ ಸ್ಥಾಪಿಸುತ್ತವೆ, ಮಾತ್ರ. ಆದುದರಿಂದ ಜ್ಞಾನಿಗಳು ಇವಳನ್ನು ದುರಾಧರ್ಷಾ ಎನ್ನುತ್ತಾರೆ.

ಎಂದರೆ, "ದೇವರಿಲ್ಲ" ಎಂದು ವಾದಿಸುವ ನಾಸ್ತಿಕನೂ ಸಹ "ಲಕ್ಷ್ಮಿ ಇಲ್ಲ" ಎಂದು ವಾದಿಸಲು ಹಿಂಜರಿಯುತ್ತಾರೆ. ಅಸುರರೆಲ್ಲರ ಚರಿತ್ರೆಯಲ್ಲಿ ಇದನ್ನು ಕಾಣುತ್ತೇವೆ. ಇಂದಿನ 'ಅಸುರ'ರೂ, ಚಾರ್ವಾಕರೂ, ಅಧಿಕಾರ ಭೋಗಲೋಲುಪರೂ ಹೀಗೆ ಲಕ್ಷ್ಮಿಯನ್ನು ಬಿಡಲಾದರ 'ಕರ್ಮ'ದಲ್ಲಿ ಸಿಕ್ಕುಬಿದ್ದು, ಲಕ್ಷ್ಮಿಯು 'ಜಾತ್ಯತೀತ' (Secular) ದೇವಿಯಾಗಿರುವುದು ಈ ವಿಪರ್ಯಾಸದಿಂದಲೇ ! ಮತಾಂತರ ಹೊಂದಿ ಮುಸಲ್ಮಾನ, ಕ್ರೈಸ್ತರಾದವರೂ ಲಕ್ಷ್ಮಿಯನ್ನು ಬಿಡದಿರಲು ಇದೇ ಕಾರಣ. ನಾಸ್ತಿಕನೂ 'ಲಕ್ಷ್ಮಿ' ಯನ್ನು ಬಯಸಿ ಆಸ್ತಿಕನೇ ಆಗುವುದು ಅವನಿಗೇ ತಿಳಿಯದಂತೇ !

## ೩ ನಿತ್ಯಪುಷ್ಟಾಂ

ಪೃಥ್ವಿಯೂ ಲಕ್ಷ್ಮಿಯ ಅಂಶವೆಂದಮೇಲೆ, ಈ ಭೂದೇವಿಯು ಸಸ್ಯವನಸ್ಪತಿಗಳಿಂದಲೂ, ನಾನಾ ಜಾತಿಯ ಪಶುಪಕ್ಷಿ ಪ್ರಾಣಿಗಳಿಂದಲೂ, ಖನಿಜಾದಿ ಧಾತುಗಳಿಂದಲೂ, ನದೀ ಪರ್ವತಾದಿಗಳಿಂದಲೂ ಪುಷ್ಟವಾಗಿರುವುದೇ ಈ ಲಕ್ಷ್ಮೀ ಅಂಶದಿಂದ ಲಕ್ಷ್ಮಿ ಇರುವಲ್ಲಿ ಅಪುಷ್ಟಿಗೆ ಕಾರಣವಿಲ್ಲ ಎಂಬರ್ಥವನ್ನು ವಿದ್ಯಾರಣ್ಯ ಪೃಥ್ವೀಧರ ಭಾಷ್ಯಗಳಲ್ಲಿ ಕಾಣುತ್ತೇವೆ. ಸರ್ವದೇಶಕಾಲಾವಸ್ಥೆಗಳಲ್ಲೂ, ಎಲ್ಲಾ ವಸ್ತುಗಳಲ್ಲೂ ಸದಾ ಪುಷ್ಟಳಾಗಿರುವವಳೂ, ವ್ಯಾಪಕಳಾಗಿರುವವಳು ಎಂದು ಶ್ರೀರಂಗನಾಥ ಮುನಿಗಳ ವಿವರಣೆ.

ಲಕ್ಷ್ಮೀತಂತ್ರವು ಇಲ್ಲಿ ಬೇರ ಅರ್ಥವನ್ನು ಹೀಗೆ ಸೊಗಸಾಗಿ ವಿವರಿಸಿದೆ.

ನಿತ್ಯೇನ ವಿಷ್ಣುನಾ ಪುಷ್ಟಾ ನಿತ್ಯಂ ಪುಷ್ಟಾ ಚ ಸದ್ಗುಣೈಃ ।
ವಿಷಯೈರ್ಮೇ ವಿನಾ ಪುಷ್ಟಾ ನಿತ್ಯಂ ಸಂವಿತ್ ಪರಾ ತನುಃ ॥
ಸೈವ ಪುಷ್ಣಾತಿ ವಿಷಯಾನ್ ಅಜಡಾಭಿರ್ಜಡಾತ್ಮನಃ ।
ನಿತ್ಯಪುಷ್ಟಾಂ ತು ಮಾಂ ಪ್ರಾಹುಃ ನಿತ್ಯಾಃ ಸಂವಿದ್ವಿಚಕ್ಷಣಾಃ ॥
(ಶ್ಲೋ. ೧೩೪–೫)

ನಿತ್ಯನಾದ ಶ್ರೀ ವಿಷ್ಣುವಿನೊಡನಿರುತ್ತಾ (ಎಂದೂ ಅವನನ್ನಗಲಿರದೆ,) ಈ ವಿಷ್ಣುಸಂಬಂಧದಿಂದಲೇ ಪುಷ್ಟಳಾಗಿ (ಪೂರ್ಣಳಾಗಿ)ರುವವಳು ಲಕ್ಷ್ಮೀ. ಅಥವಾ ಪುಷ್ಟಿಶಬ್ದವು ಗುಣಪೂರ್ತಿಯನ್ನು ಸೂಚಿಸಿ, ಸದಾ ಸದ್ಗುಣಪೂರ್ಣಳು ಲಕ್ಷ್ಮಿ ಎಂದೂ ಅರ್ಥವಾಗುವುದು. ಜ್ಞಾನಮೂರ್ತಿಯಾದ ಇವಳ ದಿವ್ಯಮಂಗಳ ವಿಗ್ರಹವು (ಶರೀರವು) ವಿಷಯಾನುಭವವಿಲ್ಲದೆಯೇ ಪೂರ್ಣವಾಗಿರುವುದು. ಜಡವಾದ (ಪ್ರಾಕೃತ) ವಿಷಯಗಳನ್ನೂ, ಅಜಡವಾದ ತನ್ನ ಸೌಂದರ್ಯಾದಿ ಗುಣಗಳಿಂದ ಇವಳ ಶರೀರವೇ ಪೋಷಿಸುವುದು ! ಇದಕ್ಕಾಗಿಯೇ ವಿಚಕ್ಷಣರು (ಜ್ಞಾನಿಗಳು) ಇವಳನ್ನು ನಿತ್ಯಪುಷ್ಟಾ ಎನ್ನುತ್ತಾರೆ.

## ೪ ಕರೀಷಿಣೀಂ

ಗೋಮಯ (ಗೋವಿನ ಸಗಣಿ)ಯಲ್ಲಿ ಲಕ್ಷ್ಮೀವಾಸವಿದೆಯೆಂದು ಹಿರಿಯರು ಹೇಳುತ್ತಾರೆ. ಗೋವಿನಲ್ಲೂ ಲಕ್ಷ್ಮೀವಾಸವುಂಟು. ಗವ್ಯಗಳಾದ ಹಾಲು, ಮೊಸರು, ಬೆಣ್ಣೆ, ತುಪ್ಪಗಳಲ್ಲೂ ಇವಳ ನಿತ್ಯವಾಸವುಂಟು. ನಂದ ಗೋಕುಲವು ನಿತ್ಯ ಶ್ರೀಸಮೃದ್ಧವಾದುದೇ ಹೀಗೆ. ಎಂಜಲು ಸ್ಥಳಗಳೂ, ವಸ್ತುಗಳೂ, ಅಶುಚಿಯಾದ ದ್ರವ್ಯಪದಾರ್ಥಗಳೂ ಲಕ್ಷ್ಮೀಸಂಬಂಧವಿಲ್ಲದೆ ಹೇಗೆ ಶುದ್ಧಿಯಾಗುವುವು ? ಈ ಗೋಮಯವು ಭೂಮಿಯಲ್ಲೆಲ್ಲ ವ್ಯಾಪಿಸಿರಬೇಕಾದರೆ, ಭೂಮಿಯಲ್ಲೆಲ್ಲ ಸಮೃದ್ಧಿಯಿರಬೇಕಷ್ಟೇ ! ಇದನ್ನೇ ವಿದ್ಯಾರಣ್ಯ ಪೃಥ್ವೀಧರ ಭಾಷ್ಯಗಳು ವಿವರಿಸಿವೆ.

ಕರಿಸ್ ಎಂಬ ಗಜವಾಚಕಶಬ್ದವೂ 'ಈಶ್–ಐಶ್ವರ್ಯೇ' ಎಂಬ ಧಾತುವೂ 'ಇಣ್–ಗತೌ' ಎಂಬುದೂ ಕೂಡಿ ಕರೀಷಿಣೀ ಎಂಬ ಶಬ್ದವನ್ನು ಗ್ರಹಿಸುವುದಾದಾಗ, ಆನೆಗಳಿಗೆ ಒಡೆತಿಯಾದವಳು ಲಕ್ಷ್ಮೀದೇವೀ ಎಂದಾಗಿ ಗಜಲಕ್ಷ್ಮೀ ಸ್ವರೂಪವನ್ನು ವಿವರಿಸಿದಂತಾಗುತ್ತದೆ,

'ಕೃ' ಧಾತುವಿನಿಂದ 'ಕರಿ' ಶಬ್ದವನ್ನು ಗ್ರಹಿಸಿ, ಇವೇ ಉಳಿದೆರಡು ಧಾತುಗಳನ್ನೂ ಕೂಡಿಸಿದರೆ, ಕರಿಣಃ ಎಂದಾದಾಗ, ತ್ರಿಕರಣಗಳಲ್ಲೂ ಶುದ್ಧರಾದ, ಪ್ರಪನ್ನರಾದ ಸಾತ್ತ್ವಿಕರನ್ನು ಈ ಶಬ್ದ ಹೇಳುತ್ತದೆ. ಇದಕ್ಕೆ– 'ಇಷುಇಚ್ಛಾಯಾಂ' ಎಂಬ ಧಾತು ಕೂಡಿದರೆ, ಕರೀಷಿಣೀ ಎಂಬುವಳು "ಈ ಬಗೆಯ ಭಕ್ತರನ್ನು (ಅನುಗ್ರಹಿಸಲು) ಸದಾ ಇಚ್ಛಿಸುವವಳು" ಎಂದರ್ಥ ಕೊಡುವವಳಾಗುತ್ತಾಳೆ. ಇಂಥ ಭಕ್ತಸಮೃದ್ಧಿಯುಳ್ಳವಳೇ ಲಕ್ಷ್ಮೀದೇವಿ.

ಲಕ್ಷ್ಮೀತಂತ್ರ ಇದನ್ನು ಹೀಗೆ ವಿವರಿಸಿದೆ :

ಕರಿಣೋ ನಾಮ ಕರ್ತಾರಃ ತ್ರಿಶುದ್ಧಾಃ ತ್ರಿಕ್ರಿಯಾಪರಾಃ ।
ತಾನಿಚ್ಛಾಮಿ ಸದಾ ದ್ರಷ್ಟುಂ ಮನಸಾ ಯಾಮಿ ತಾನ್ ಸದಾ ॥
ಹಿಮಶೈಲೇಂದ್ರಸಂಕಾಶಾಃ ಗಜೇಂದ್ರಾ, ಮಮ ವಾಹನಾಃ ।

ತೈರೀಶ್ವರಾ ಸದಾ ಯಾಮಿ ಕರ್ತ್ರೀ ಜಾಂತವತೀ ಸದಾ ॥
ಕರೀಷಣೀತಿ ಮಾಂ ತೇನ ತತ್ತ್ವಜ್ಞಾಃ ಸಂಪ್ರಚಕ್ಷತೇ ॥
(ಶ್ಲೋ. ೧೫೬-೧೫೮)

ತ್ರಿಕರಣಗಳಲ್ಲೂ (ಮನಸ್ಸು, ವಾಕ್ಕು, ಶರೀರಗಳಲ್ಲೂ) ಶುದ್ಧರಾಗಿ, ಪ್ರವೃತ್ತಿ, ನಿವೃತ್ತಿ, ಪ್ರವೃತ್ತಿ-ನಿವೃತ್ತಿಗಳೆಂಬ ಮೂರು ಕ್ರಿಯೆಗಳಲ್ಲೂ ನಿರತರಾದವರೇ 'ಕರಿ'ಗಳು. ಇಂಥವರನ್ನು ಸದಾ ಕಾಣಲು ಬಯಸುವವಳು ಲಕ್ಷ್ಮೀದೇವಿ. ಮನಸ್ಸಿನಿಂದಲೇ ಅವರನ್ನು ಹೊಂದುವವಳೂ ಲಕ್ಷ್ಮೀದೇವಿ —ಎಂಬುದು ಮೊದಲನೆಯ ಅರ್ಥ. ಎರಡನೆಯದಾಗಿ, ಹಿಮಾಲಯ ಪರ್ವದಂಥ ಆನೆಗಳು (ಕರಿಗಳು) ಇವಳಿಗೆ ತುಂಬಾ ಪ್ರಿಯವಾದ ವಾಹನ ಗಳು. ಇವುಗಳಿಗೆ ಈಶ್ವರಿಯಾಗಿ, ಇವುಗಳ ಮೇಲೆ ಸದಾ ಸಂಚರಿಸು ವವಳು ಈ ದೇವಿ. ಸಕಲ ಜಗತ್ತೂ ಇವಳಲ್ಲೇ ಅಂತರ್ಗತವಾಗಿದೆ. ತತ್ತ್ವಜ್ಞರು ಇದಕ್ಕಾಗಿಯೇ ಇವಳನ್ನು ಕರೀಷಣೀ ಎನ್ನುತ್ತಾರೆ.

## ೫. ಈಶ್ವರೀಂ, ಸರ್ವಭೂತಾನಾಂ

ಸಕಲ ಪ್ರಾಣಿಗಳಿಗೂ ಒಡೆತಿ, ಅಧಿಷ್ಠಾತ್ರೀ, ಭೂರೂಪದಲ್ಲಿರು ವವಳೆಂದು ಸಾಯಣರೂ, ಪೃಥ್ವೀಧರರೂ ಈ ಶ್ರೀನಾಮವನ್ನು ವಿವರಿಸಿ ದ್ದಾರೆ. ಶ್ರೀರಂಗನಾಥಮುನಿಗಳು ಇನ್ನೂ ವಿಶೇಷವಾಗಿ, ಬ್ರಹ್ಮ, ಶಿವ, ಇಂದ್ರಾದಿದೇವತೆಗಳಿಗೂ, ಅಸುರ, ಸಿದ್ಧ, ಗಂಧರ್ವ, ಮನುಷ್ಯಾದಿ ಗಳೆಲ್ಲರಿಗೂ ನಿಯಂತ್ರಿಯೂ, ಸ್ವಾಮಿನಿಯೂ, ಆಗಿರುವವಳೆಂದು ಅರ್ಥೈಸಿದ್ದಾರೆ. ಅಥವಾ 'ಅಶೂವ್ಯಾಪ್ತೌ' ಧಾತುವಿಗೆ 'ಈ ಚ್ಚೋಪಧಾಯಾಃ' ಎಂಬಂತೆ ಅಕಾರಸ್ಥಾನದಲ್ಲಿ ಈಕಾರದ, ಮತ್ತು ವರಚ್‌ಪ್ರತ್ಯ ಯದ ದೆಸೆಯಿಂದ ಈಶ್ವರ ಶಬ್ದವು ವ್ಯಾಪಿತ್ವವಾಚಿಯಾಗಿ— ಸರ್ವವ್ಯಾಪ

ಕಳು ಎಂಬರ್ಥವನ್ನು ಕೊಡುತ್ತದೆ. "ಯಥಾ ಸರ್ವಗತೋ ವಿಷ್ಣುಃ, ತಥೈವೇಯಂ" ಎಂಬ ವಿಷ್ಣುಪುರಾಣವಚನವು ಇಲ್ಲಿ ಸ್ಮರಣೀಯ.

ಲಕ್ಷ್ಮೀತಂತ್ರವು ಇಲ್ಲಿ ನಾಲ್ಕು ಬಗೆಯಲ್ಲಿ ಅರ್ಥವನ್ನು ವಿವರಿಸುತ್ತದೆ. (೧) ಭೂತರಾಶಿಗಳಿಗೆ ಒಡತಿಯಾಗಿರುವವಳು (೨) ಈಶನಾದ ಭಗವಂತನೊಡನೆ ಸದಾ ಇರುತ್ತಾ ವರಗಳನ್ನು ಕೊಡುವವಳು. (೩) ಜಗತ್ತಿಗೆ ಈಶಾನೆಯಾಗಿಯೂ, ಧ್ಯಾನಮಾಡತಕ್ಕವಳಾಗಿಯೂ ಇರುವವಳು. (೪) ಐಶ್ವರ್ಯವೃದ್ಧಿಯನ್ನನುಗ್ರಹಿಸುವವಳು. ಸದಾ ವರ್ಧಿಸುವವಳು; ಪಾಪವಿನಾಶಕಾರಳು— ಎಂದು.

ಭೂತಾನಾಂ ಈಶ್ವರಾಜಾಸ್ಮಿ ಪ್ರಿಯೇಣೇಶೇನ ಸರ್ವದಾ ।
ವರದಾ, ಭುವನೇಶಾನಾ ವನಿತಾ ಚ ಸದಾಖಿಲೈಃ ॥
ವೃದ್ಧಿದಾ, ವರ್ಧಮಾನಾ ಚ ಕ್ಷಪಣೀ ಚ ಸದಾಂಹಸಾಂ ।
ಈಶ್ವರೀತ್ಯೇವ ಮೇ ನಾಮ ತೇನ ವೇದೇ ನಿರೂಪಿತಂ ॥

ಮುಂದಿನ ಶ್ರೀ ಶಬ್ದಾರ್ಥವನ್ನು ಆಗಲೇ ವಿವರಿಸಿದೆ. ಇಂಥ ದೇವಿಯನ್ನು ಸಾಧಕನು ತನ್ನಲ್ಲಿ ನಿತ್ಯವಾಸ ಮಾಡುವಂತೆ ಪ್ರಾರ್ಥಿಸಿ ಕರೆಯುವುದು ಮಂತ್ರದ ಉದ್ದೇಶ್ಯ.

### ಹತ್ತನೆಯ ಮಂತ್ರ

ಮನಸಃ ಕಾಮಮಾಕೂತಿಂ ವಾಚಃ ಸತ್ಯಮಶೀಮಹಿ ।
ಪಶೂನಾಂ ರೂಪಮನ್ನಸ್ಯ ಮಯಿ ಶ್ರೀಃ ಶ್ರಯತಾಂ
ಯಶಃ ॥೧೦॥

ಅರ್ಥ : (೧) ಮನಸ್ಸಿನ ಇಷ್ಟಾರ್ಥವನ್ನೂ, ಸಂತೋಷವನ್ನೂ, ವಾಕ್ಕಿನ ಸತ್ಯಾರ್ಥವನ್ನೂ, ಪಶುರೂಪಸಂಪತ್ತನ್ನೂ, ಅನ್ನರೂಪದ್ರವ್ಯವನ್ನೂ, ನಾವು ಪಡೆಯುವಂತಾಗಲಿ. ಐಶ್ವರ್ಯವೂ, ಕೀರ್ತಿಯೂ (ಲಕ್ಷ್ಮೀ ಕಟಾಕ್ಷದಿಂದ) ನನ್ನನ್ನು ಆಶ್ರಯಿಸುವಂತಾಗಲಿ— (ಅಥವಾ)-

(೨) ಮನಸ್ಸಿನಿಂದ ಬಯಸಲ್ಪಡುವವಳೂ, ವಾಕ್ಯಗಳ ಅರ್ಥರೂಪ

ಳಾಗಿರುವವಳೂ (ವಾಚಃ ಆಕೂತಿಂ), ಚಿದಚಿತ್ತುಗಳೆಂಬ ಸತ್ಯಕ್ಕೆ ಆಶ್ರಯು ಳಾಗಿರುವವಳೂ (ಸತ್ಯಂ). ಆದ ಲಕ್ಷ್ಮೀದೇವಿಯನ್ನು ನಾವು ಹೊಂದು ವಂತಾಗಲಿ. ಪಶುಗಳಿಂದ ನಮ್ಮ (ನಿಜ) ಜ್ಞಾನಸ್ವರೂಪವನ್ನೂ, ಭೋಗ್ಯ ವಸ್ತುಗಳಾದ ಅನ್ನಾದಿಗಳ ಸಂಬಂಧದ ಕೀರ್ತಿಯನ್ನೂ (ಧನಿಕತ್ವ, ದಾತೃತ್ವ ಇತ್ಯಾದಿ) ಲಕ್ಷ್ಮೀದೇವಿಯು ನಮಗೆ ಅನುಗ್ರಹಿಸಲಿ.

ವಿವರಣೆ : ಇದೂ ಸಾಧಕನ ಪ್ರಾರ್ಥನಾರೂಪ ಮಂತ್ರವೇ. ಮೊದಲಿನ ಅರ್ಥ (ವಿದ್ಯಾರಣ್ಯ, ಪೃಥ್ವೀಧರರಂತೆ) ಸ್ಪಷ್ಟವಾಗಿದೆಯಾಗಿ ಹೆಚ್ಚಿನ ವಿವರಣೆ ಅಗತ್ಯವಿರುವುದಿಲ್ಲ. ಎರಡನೆಯದರಲ್ಲಿ ಎಲ್ಲ ವಿಶೇಷಣ ಗಳಾಗಿ ಲಕ್ಷ್ಮೀ ವರ್ಣಪರವಾಗುತ್ತವೆ.

## ೧ ಲಕ್ಷ್ಮೀತಂತ್ರದ ವಿಶೇಷ ವಿವರಣೆ

'ಮನಸಃ ಕಾಮಂ' —'ಮನಸ್ಸಿನ ಇಷ್ಟಾರ್ಥವನ್ನು', ಎಂದರೆ ಏನು ? ಎಂಬ ಪ್ರಶ್ನೆಗೆ ತಂತ್ರದಲ್ಲಿ ಅದ್ಭುತ ಉತ್ತರವಿದೆ.

ಭೌಮಾಂತರಿಕ್ಷ ದಿವ್ಯಾಖ್ಯಾ ಯೇ ಚಾಪ್ಯಪ್ರಾಕೃತಾಃ ಪರೇ ।
ಸದಾನಂದಮಯಾಸ್ತ್ವೇತೇ ಸರ್ವೇ ಕಾಮಾ ಮಯಿ ಶ್ರಿತಾಃ ॥
(ಶ್ಲೋ. ೧೬೨)

ಭೂಮಿ, ಅಂತರಿಕ್ಷ, ದಿವ್ಯಲೋಕಗಳೆಂಬ ಮೂರು ಲೋಕಗಳಲ್ಲೂ, ಇನ್ನೂ ಅಪ್ರಾಕೃತವಾದ ಬೇರೆ ಲೋಕಗಳಲ್ಲೂ ಯಾವ ಯಾವ ಬಗೆಯ ಆನಂದ ಗಳುಂಟೋ, ಇವುಗಳ ಬಗೆಗಿನ ಆಸೆಯೆಂಬುದೆಲ್ಲ ಲಕ್ಷ್ಮೀಕಟಾಕ್ಷದಿಂದಲೇ ಮನುಷ್ಯದೇವಾದಿಗಳಿಗೆ ಸಿದ್ಧಿಸುವುವು. ಇವೆಲ್ಲ ಅವಳನ್ನೇ ಆಶ್ರಯಿಸಿವೆ.

ಮನೋರಥಾನಾಂ ಸರ್ವೇಷಾಂ ಪರಾಹಂ ವಿಭ್ರಮಸ್ಥಲೀ ।
ವಿಷ್ಣೋಶ್ಚ ಮನಸಃ ಕಾಮಃ ಸಾಹಂ ಸರ್ವಾತಿಶಾಯಿನೀ ॥
(ಶ್ಲೋ. ೧೬೩)

ಉತ್ತಮವಾದ ಮನೋರಥಗಳಿಗೆ ಇವಳು ಆಟದಬಯಲಾಗಿರುವಳು. (ಹೆಚ್ಚೇನು ?) ಸರ್ವೇಶ್ವರನಾದ ಶ್ರೀ ವಿಷ್ಣುವಿನ ಮನಸ್ಸಿನ ಬಯಕೆಯೂ ಇವಳೇ ಆಗಿ ಸರ್ವಾತಿಶಾಯಿನಿ ಆಗಿದ್ದಾಳೆಂದ ಮೇಲೆ, ಇದಕ್ಕಾಗಿಯೇ ದೇವತೆಗಳು ಇವಳನ್ನು ಹೀಗೆ ಸ್ತುತಿಸಿದರು.

'ವಾಚಃ ಆಕೂತಿಂ' —'ವಾಕ್ಕಿನ ಉದ್ದೇಶವನ್ನು' ಎಂಬುದಕ್ಕೆ ಲಕ್ಷ್ಮೀ ತಂತ್ರದ ವಿವರಣೆ ಹೀಗಿದೆ :

ಲೌಕಿಕ್ಯೋऽಪ್ಯಥ ವೈದಿಕ್ಯಃ ತಥಾ ಬಾಹ್ಯಾಗಮೋದ್ಭವಾಃ ।
ನಿರ್ಘೋಷಾ ಘೋಷವತ್ಯಶ್ಚ ಯಾ ವಾಚಃ ಪರಿಕೀರ್ತಿತಾಃ ॥
ಮಾಮಭಿಪ್ರೇತ್ಯ ಸರ್ವಾಸಾಂ ತಾಸಾಂ ಉಚ್ಚಾರಣಕ್ರಿಯಾ ।
ಮಾಮಭಿಪ್ರಯತೇ ಸರ್ವೋ ಜನಃ ಸರ್ವಾತ್ಮನಾ ಸ್ಥಿತಾಂ ॥
ತೇನ ತೇನ ಪ್ರಕಾರೇಣ ವಾಚಾಮುಚ್ಚಾರಣಕ್ರಮೇ ।
ಆಕೂತಿರ್ವಚಸಾಂ ತೇನ ವೇದಜ್ಞೈರಸ್ಮಿ ಭಾವಿತಾ ॥
(ಶ್ಲೋ. ೧೬೫-೧೬೭)

ಲೋಕರೀತಿಯ, ವೈದಿಕರೀತಿಯ, ವೇದಬಾಹ್ಯ ಆಗಮಗಳ ರೀತಿಯ, ಪ್ರಕಟ ಮತ್ತು ಅಪ್ರಕಟವಾದ ಯಾವ ಬಗೆಯ ಮಾತುಗಳುಂಟೋ ಇವೆಲ್ಲ ಲಕ್ಷ್ಮೀಸ್ತುತಿಪರವಾದುವೇ. ಆ ಆ ಮಾತುಗಳನ್ನುಚ್ಚರಿಸುವಾಗ ಜನರು ಲಕ್ಷ್ಮೀದೇವಿಯನ್ನು ಕುರಿತೇ ಆಡುತ್ತಾರಾಗಿ, ಎಲ್ಲವಾಕ್ಕುಗಳ ಗುರಿಯೂ, ಉದ್ದೇಶ್ಯವು ಇವಳೇ ಆಗಿದ್ದಾಳೆ ಅದಕ್ಕಾಗಿಯೇ ವೇದವನ್ನು ಬಲ್ಲವರು ಇವಳನ್ನು 'ವಾಚಃ ಆಕೂತಿಂ' ಎಂದು ಸ್ತುತಿಸುತ್ತಾರೆ.

'ಸತ್ಯಂ' ಎಂಬುದಕ್ಕೆ ಲಕ್ಷ್ಮೀತಂತ್ರದ ವಿವರಣೆ ಹೀಗಿದೆ :

ಸಚ್ಚ ತ್ಯಚ್ಚ ಜಗತ್ ದ್ವೇಧಾ ಯತ್ಪ್ರಮಾಣೇನ ದೃಶ್ಯತೇ ।
ತತ್‌ಸರ್ವಂ ಅಹಮಸ್ಮೀತಿ ಸತ್ಯಂ ಮಾಮೃಷಯೋऽ
ಬ್ರುವನ್ ॥ (೧೬೮)

ಎಂದೂ ಅಳಿಯದಾದುದರಿಂದ ಸತ್ ಎಂದು ಕರೆಯಲ್ಪಡುವ ಜೀವವರ್ಗ ರೂಪದಲ್ಲಿಯೂ, ಯಾವಾಗಲೂ ಒಂದು ಅವಸ್ಥೆಯಲ್ಲಿರಲಾರದೇ ತ್ಯತ್ ಎಂದು ಕರೆಯಲ್ಪಡುವ ಅಚೇತನ (ಜಡ) ರೂಪದಲ್ಲಿಯೂ ಈ ಜಗತ್ತು ಕಾಣಬರುವುದು ಪ್ರಮಾಣಯುಕ್ತವಾಗಿದೆಯಷ್ಟೆ. ಇದೆಲ್ಲವೂ ತಾನೇ ಆಗಿರುವುದರಿಂದ ಲಕ್ಷ್ಮೀದೇವಿಯೇ ಸತ್ಯಂ ಎನಿಸಿದ್ದಾಳೆ. ಹಾಗೇಯೇ ಋಷಿಗಳಿಂದ ಕೊಂಡಾಡಲ್ಪಟ್ಟಿದ್ದಾಳೆ,

ಪಶೂನಾಂ ರೂಪಂ ಎಂಬುದಕ್ಕೆ ಹೀಗೆಯೇ ವಿಚಿತ್ರ ವಿವರಣೆ ಇಲ್ಲುಂಟು !

ಪಶ್ಯನ್ತಿ ಪಶವೋ ಜೀವಾಃ ವಿಧಾಭಿಃ ತಿಸೃಭಿಃ ಸ್ಥಿತಾಃ ।
ತೇಷಾಂ ರೂಪಂ ತು ಯಚ್ಛಕ್ರ ! ಚೈತನ್ಯಂ ಹೇಯವರ್ಜಿತಂ ॥
ತದ್ರೂಪಮಹಮೇವಾಸ್ಮಿ ಚಿದ್ಘನಾನಂದ ರೂಪಿಣೀ ।
ಮಚ್ಛಕ್ತಿಲೇಶಾಸ್ತೇ ಸರ್ವೇ ಜೀವಾಃ ಚಿಚ್ಛಕ್ತಿ ಸಂಜ್ಞಕಾಃ ॥
ಆಗ್ನೇಯೀ ಯಾ ಹಿ ಮಚ್ಛಕ್ತಿಃ ಸಾ ಹಿ ಜಾತಾ ತಥಾ ತಥಾ ।
ಪಶೂನಾಂ ರೂಪಮಿತ್ಯೇವಂ ಸಾಂಖ್ಯಾ ಮಾಂ ಸಂಪ್ರಚಕ್ಷತೇ ॥
(ಶ್ಲೋ. ೧೭೯–೨೧.)

ನೋಡುವ ಶಕ್ತಿಯುಳ್ಳ ಮೂರು ಬಗೆಯ ಜೀವಾತ್ಮರೇ (ಬದ್ಧ, ಮುಕ್ತ, ನಿತ್ಯರು) ಪಶುಗಳೆನಿಸುತ್ತಾರೆ. ಜ್ಞಾನಾನಂದಮಯಳಾದ ದೇವಿಯು, ನಿರ್ದೋಷವಾದ ಅವರ ಸ್ವರೂಪವಾದ ಅರಿವಿನಲ್ಲಿರುತ್ತಾಳೆ. ಆ ರೂಪದಲ್ಲೇ ಇರುತ್ತಾಳೆ. ಚಿತ್‌ಶಕ್ತಿ ಸ್ವರೂಪರಾದ ಜೀವರು ದೇವಿಯ ಸ್ವರೂಪದ ಒಂದಂಶ ಮಾತ್ರರೇ. ಅಗ್ನಿಯಂಥ ಪ್ರಜ್ಞಾದೇವತೆಯಲ್ಲಿರುವ ಚಿತ್

ಶಕ್ತಿಯೂ ಇವಳಿಂದಲೇ ಉದಿಸಿಬಂದದ್ದು. ತಿಳಿದವರು ಇವಳನ್ನು ಇದಕ್ಕಾಗಿಯೇ ಪಶೂನಾಂ ರೂಪಂ ಎಂದು ಕೊಂಡಾಡುವರು.

ಅನ್ನಸ್ಯಯಶಃ ಎಂಬುದಕ್ಕೆ ವಿವರಣೆ ಹೀಗಿದೆ :

ತ್ರೈಗುಣ್ಯಂ ಷಾಡ್ಗುಣ್ಯೋತ್ಥಂ ಚ ದ್ವಿಧಾನ್ನಂ ಪರಿಕೀರ್ತಿತಂ ।
ತ್ರೈಗುಣ್ಯಂ ಅನುಬದ್ಧಾನಾಂ ಇತರೇಷಾಂ ಅಥೇತರತ್ ॥
ದ್ವಿವಿಧಸ್ಯಾಪಿಚಾನ್ನಸ್ಯ ಯದ್ಯಶೋ ರೂಪಮುತ್ತಮಂ ।
ತದಹಂ ಸರ್ವಭೂತಾತ್ಮಾ ತತ್ತ್ವಜ್ಞೈಃ ಪರಿಕೀರ್ತಿತಾ ॥
ಪ್ರಾಕೃತಾಪ್ರಾಕೃತಾಭೋಗಾ ಮಚ್ಛಕ್ತಿ ಪ್ರವಿಜೃಂಭಿತಾಃ ।
ಸೋಮಶಕ್ತಿರ್ಮದೀಯಾ ಯಾ ಸಾಹಿ ಜಾತಾ ತಥಾತಥಾ ॥
ಅನ್ನಸ್ಯ ಯಶ ಇತ್ಯೇವಂ ಮಾಂ ವಿದುಃ ತತ್ತ್ವಚಿನ್ತಕಾಃ ॥

(ಶ್ಲೋ. ೧೭೪–೧೭೭)

ಅನ್ನವೆಂದರೆ ತಿನ್ನಲ್ಪಡುವುದು. (ಅದ್ಯತೇ ಇತಿ ಅನ್ನಂ). ಇದು ಎರಡು ಬಗೆಯದು. ಪುಣ್ಯಪಾಪ ಕರ್ಮಫಲರೂಪದ, ತ್ರಿಗುಣಸಂಬಂಧದ್ದು ಒಂದು ಬಗೆ. ಇನ್ನು ಎರಡನೆಯ ಬಗೆಯದು ಕರ್ಮಬಂಧ ಮುಕ್ತವಾದ ಜೀವಾತ್ಮನು ಪರಮಪದದಲ್ಲಿ ಅನುಭವಿಸುವ ದಿವ್ಯಾನ್ನವಾಗಿದ್ದು, ಷಡ್ಗುಣ ಪೂರ್ಣವಾದ ಪರಮಾತ್ಮಸ್ವರೂಪದ್ದು. ಈ ಎರಡೂ ಅನ್ನಪ್ರಕಾರಗಳೂ ಲಕ್ಷ್ಮೀಶಕ್ತಿಯುಕ್ತವಾದುವೇ. ಪಶುಗಳಿಗೆ ರೂಪವುಂಟಾಗಬೇಕಾದಲ್ಲಿ ಅವುಗಳಲ್ಲಿ ಅಗ್ನಿಸಂಬಂಧದ ಶಕ್ತಿಯೊಂದಿರಬೇಕೆಂದು ವೇದದ ಮರ್ಮವಿದೆ. ಈ ಆಗ್ನೇಯೀ ಶಕ್ತಿಯೂ ಲಕ್ಷ್ಮೀಯದೇ. ಹಾಗೇ ಅನ್ನವು 'ಯಶಸ್ವಿ' ಯಾಗಬೇಕಾದಲ್ಲಿ ಅದರಲ್ಲಿ ಸೋಮಾಂಶವಿರಬೇಕಾದುದು ವೈದಿಕ ಮರ್ಮ. ಈ ಸೋಮಶಕ್ತಿಯೂ ಲಕ್ಷ್ಮೀಸಂಬಂಧದ್ದೇ. ಹೀಗೆ ಇಷ್ಟುಪ್ರಭಾವ ಸಂಪನ್ನೆಯಾದ ಲಕ್ಷ್ಮೀದೇವಿಯು ತನ್ನಲ್ಲಿ ನಿತ್ಯವಾಸ ಮಾಡಲೆಂದು ಸಾಧಕನ ಪ್ರಾರ್ಥನೆ. (ಶ್ರೀಃ ಶ್ರಯತಾಂ ಎಂಬಲ್ಲಿ ಮಂತ್ರವು ಶ್ರೀ ಶಬ್ದದ ಒಂದು ನಿಷ್ಪತ್ತಿಯನ್ನೂ ಹೇಳಿದೆ. ಇದನ್ನು ಈ ಹಿಂದೆ ವಿವರಿಸಿಯಾಗಿದೆ.)

### ಹನ್ನೊಂದನೆಯ ಮಂತ್ರ

ಕರ್ದಮೇನ ಪ್ರಜಾ ಭೂತಾ ಮಯಿ ಸಂಭವ ಕರ್ದಮ ।
ಶ್ರಿಯಂ ವಾಸಯ ಮೇ ಕುಲೇ ಮಾತರಂ
ಪದ್ಮಮಾಲಿನೀಂ ॥ ೧೧

ಅರ್ಥ : ಎಲೈ ಕರ್ದಮ ಪ್ರಜಾಪತಿಯೇ. ನಿನ್ನ ಮಗಳಾಗಿ ಅಂಗೀಕರಿಸಲ್ಪಟ್ಟವಳು ಲಕ್ಷ್ಮೀದೇವಿ. ಎಲ್ಲಾ ಜಗತ್ತಿಗೂ ತಾಯಿಯಾಗಿರುವವಳೂ, ಪದ್ಮಮಾಲೆಯನ್ನು ಧರಿಸಿರುವವಳೂ ಆದ ಶ್ರೀದೇವಿಯನ್ನು ನನ್ನಲ್ಲಿ ಸಂಭವಿಸುವಂತೆ ಮಾಡು; ನನ್ನ ಮನೆಯಲ್ಲಿ ಆಕೆಯು (ನಿತ್ಯ) ವಾಸಮಾಡುವಂತೆ ಮಾಡು.

## ೧ ಕರ್ದಮನ ಮಗಳು ಲಕ್ಷ್ಮೀ

ವಿವರಣೆ : "ಕರ್ದಮೇನ ಪ್ರಜಾಭೂತಾ" ಎಂಬುದಕ್ಕೆ, "ಪ್ರಜಾತ್ವೇನ,...ಯಾ ಪುತ್ರೀತ್ವೇನ ಸ್ವೀಕೃತಾ" ಎಂದು ಶ್ರೀರಂಗನಾಥಮುನಿಗಳ ವಿವರಣೆಯಂತೆ ಈ ಮೇಲಿನ ಅರ್ಥ ಬರೆಯಲಾಗಿದೆ. ಕರ್ದಮರಿಗೆ ಲಕ್ಷ್ಮಿಯು ಯಾವಾಗ ಮಗಳಾದಳೆಂದರೆ,

ಅವತೀರ್ಣಾ ಜಗತ್ಯರ್ಥಂ ಕರ್ದಮಸ್ಯಗೃಹೇ ರಮಾ ।
ಯಾ ತಾಮೇಕಾದಶೇ ಲಕ್ಷ್ಮೀಂ ತನ್ಮುಖೇನಾರ್ಥಯತ್ಯಸೌ ॥

ಎಂಬ ಪ್ರಮಾಣವಾಕ್ಯವನ್ನು ಅಲ್ಲಿ ತೋರಿಸಿದೆ. ಜಗತ್ತಿನ ಉದ್ಧಾರಕ್ಕಾಗಿ ಕರ್ದಮಪುತ್ರಿಯಾಗಿ ರಮಾದೇವಿಯು ಅವತರಿಸಿದಳೆಂದು ಅರ್ಥ.

ಕ್ಷೀರೋದಾರ್ಣವ ಸಂಭೂತಾಂ ಶ್ರಿಯಂ ಜಗ್ರಾಹ
ಕರ್ದಮಃ ।
ಪ್ರಜಾತ್ವೇನ ತಥಾ ಲಕ್ಷ್ಮೀಂ ತದಾ ಪ್ರಭೃತಿ ಕರ್ದಮಿ ॥

ಎಂಬ ಇನ್ನೊಂದು ಪ್ರಮಾಣವಚನವೂ ಈ ಆಚಾರ್ಯಭಾಷ್ಯದ ಕೆಲವು ಪ್ರತಿಗಳಲ್ಲುಂಟು. (ಶ್ರೀ. ಉ. ವೇ. ಉತ್ತಮೂರು ವೀರರಾಘವಾಚಾರ್ಯಸ್ವಾಮಿಗಳ ಸಂಪಾದಿತ ಪ್ರತಿಯಲ್ಲಿ ಇದು ಇಲ್ಲ.) ಸಮುದ್ರಮಥನ ಕಾಲದಲ್ಲಿ ಲಕ್ಷ್ಮೀದೇವಿಯು ಅವತರಿಸಿದಳಷ್ಟೆ ! ಭಗವಂತನನ್ನು ಲಕ್ಷ್ಮಿಯು ಒಲಿದು ವಿವಾಹವಾದಾಗ ಕನ್ಯಾದಾನ ಮಾಡುವುದಕ್ಕೆ ಒಬ್ಬರು ಬೇಕಲ್ಲ ! ಈ ಕೆಲಸಮಾಡಿದವರು ಕರ್ದಮ ಪ್ರಜಾಪತಿಯಾದುದರಿಂದ, ಪುತ್ರೀಭಾವದಲ್ಲಿ ಲಕ್ಷ್ಮಿಯನ್ನು ಅವರು ಭಾವಿಸಿದ್ದರಿಂದ ಅವಳು ಅಂದಿನಿಂದ ಕರ್ದಮೀ ಎನಿಸಿದಳು ಎಂದು ಶ್ಲೋಕದ ಭಾವ.

ಭಗವಂತನು ಪುತ್ರಪ್ರಾಯರಾದ ಜೀವಾತ್ಮರನ್ನೇ ದಶರಥ, ವಸುದೇವಾದಿಗಳನ್ನೇ ತನ್ನ ತಂದೆಯೆಂದು ಅವತಾರ ಕಾಲಗಳಲ್ಲಿ ಸ್ವೀಕರಿಸಿದಂತೆ, ಲಕ್ಷ್ಮಿಯೂ ತನ್ನ ಅವತಾರ ಕಾಲದಲ್ಲಿ ಹೀಗೊಂದು ತಂದೆಯನ್ನು ಆರಿಸಿಕೊಂಡುದು ಆಶ್ಚರ್ಯವೂ ಅಲ್ಲ, ಅಯುಕ್ತವೂ ಅಲ್ಲ.

ಶ್ರೀ ವಿದ್ಯಾರಣ್ಯರು ಇಲ್ಲಿ ಬೇರೆ ಬಗೆಯಾಗಿ ಅರ್ಥೈಸಿರುತ್ತಾರೆ. "ಕರ್ದಮಾಖ್ಯ ಪುತ್ರೇಣ, ಪ್ರಜಾಭೂತಾ, ಪ್ರಕೃಷ್ಟಂ ಪ್ರಜಾ, ಅಪತ್ಯಂ ಯಸ್ಯಾಃ ಸಾ, ಸಪುತ್ರೇತ್ಯರ್ಥಃ." ಎಂದು. 'ಕರ್ದಮ'ನೆಂಬ ಉತ್ತಮ ಪುತ್ರನು ಯಾವಳಿಗೋ ಅವಳು, ಲಕ್ಷ್ಮೀದೇವಿ" ಎಂದು. ಪೃಥ್ವೀಧರರೂ ಇದನ್ನನುಮೋದಿಸಿ, ಕರ್ದಮರನ್ನು ಶ್ರೀಪುತ್ರರೆಂದು ಕರೆದಿದ್ದಾರೆ. ಹೀಗಾದಾಗ ಮಂತ್ರಾರ್ಥವು ಹೀಗಾಗುವುದು.

"ಶ್ರೀದೇವಿಯು ಕರ್ದಮನೆಂಬ ಮಗನನ್ನು ಪಡೆದು ಪುತ್ರವತಿಯೆಂದು ಪ್ರಖ್ಯಾತಳಾಗಿದ್ದಾಳೆ. ಇಷ್ಟು ಪ್ರೀತಿಯ ಪುತ್ರನಾದ ಎಲೈ ಕರ್ದಮನೇ ! ನಿನ್ನ ಜನನಿಯಾದ, ಪದ್ಮಮಾಲಾಧರಳಾದ ಲಕ್ಷ್ಮಿಯು ನನ್ನ ಮನೆಯಲ್ಲಿ ಸದಾ ವಾಸಿಸುವಂತೆ ಮಾಡು"

ಮಕ್ಕಳಿಲ್ಲದವರಿಗೆ ಸತ್ಸಂತಾನವನ್ನು ಅನುಗ್ರಹಿಸುವ ಮಂತ್ರವಿದು ಎಂದು ಹೆಚ್ಚಿನ ವಿವರಣೆಯನ್ನೂ ಇಲ್ಲಿ ಮಾಡಲಾಗಿದೆ.

## ೨ ಮಾತರಂ

ಲಕ್ಷ್ಮೀದೇವಿಯು ಎಲ್ಲಾ ಜಗತ್ತಿಗೂ ತಾಯಿಯೆಂಬುದು ಪ್ರಸಿದ್ಧ. ಆದರೆ ಲಕ್ಷ್ಮೀತಂತ್ರವು ಈ ಶ್ರೀನಾಮಕ್ಕೆ ಬೇರೆ ಅದ್ಭುತರೀತಿಯಲ್ಲಿ ವ್ಯಾಖ್ಯಾನ ಮಾಡಿದೆ.

ಮಿಮೇ ಷಡಧ್ವನೋ ವ್ಯಗ್ರಾ ಮೀಯೇ ಮಾನೈಸ್ತಥಾಖಿಲೈಃ।
ಮಿತಿಶ್ಚ ಸರ್ವಮಾನಾನಾಂ ಮಾತಿ ಚಾಂತರ್ಮಮಾಖಿಲಂ ॥
ತಾರಯಾಮಿ ಜಗತ್ಸರ್ವಂ ಅಪಾರಂ ಭವಸಾಗರಂ।
ಉತ್ತೀರ್ಣಾ ಸರ್ವದೋಷಾಬ್ಧೇಃ ಪ್ಲವೇ ಭೂತೇಷು
ಚೇತಸಾ ॥
ಪ್ಲಾವಯಾಮಿ ಜಗದ್ವಿಶ್ವಂ ಪಯಸಾ ಮೇಘತಾಂ ಗತಾ।
ಪ್ರಿಯಂ ಹಿತಂ ಚ ಸರ್ವೇಷಾಂ ಚಿಂತಯಾಮಿ ಕರೋಮಿ ಚ ॥
ತೇನ ಮಾಂ ಸರ್ವಭೂತಾನಾಂ ಮಾತರಂ ಯೋಗಿನೋ
ವಿದುಃ। (ಶ್ಲೋ ೧೭೭-೧೭೯.)

ಆರು ಮತಗಳು ಪ್ರಸಿದ್ಧವಷ್ಟೆ. (ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಪೂರ್ವಮೀಮಾಂಸಾ, ಉತ್ತರಮೀಮಾಂಸಾ ಎಂಬುವೇ ಈ ಆರು ಆಸ್ತಿಕ ಮತಗಳು.) ಈ ಆರನ್ನೂ ಅಳೆಯುವವಳು ಲಕ್ಷ್ಮಿಯು. ಎಲ್ಲಾ ಪ್ರಮಾಣಗಳ ಬೆಳಕಾಗಿರುವವಳೂ ಅವಳೇ. ಸಕಲವಸ್ತುಗಳೂ ಇವಳಲ್ಲಿ ಅಳೆಯಲ್ಪಟ್ಟಿರುವುವು. ಮಾತರಂ ಎಂಬಲ್ಲಿನ ಮಾ ವಾಚಕಕ್ಕೆ ಇದಷ್ಟೂ ಅರ್ಥವುಂಟು. (ಮಾ = ಮಾನೇ, ಧಾತು.)

ಮುಂದೆ "ತೄ—ಪ್ಲವನ, ತಾರಣಯೋಃ" ಎಂಬ ಧಾತುವಿನಿಂದ 'ತೃ' ಶಬ್ದಾರ್ಥವನ್ನು ವಿವರಿಸಿದೆ. ೧) ಜಗತ್ತನ್ನು (ಜಗತ್ತಿನ ಜೀವಾತ್ಮರನ್ನು) ಭವ (ಪುನರ್ಜನ್ಮವೆಂಬ) ಸಾಗರದಿಂದ ಧಾಟಿಸುವವಳು ಲಕ್ಷ್ಮೀ. ೨) ದೋಷಸಾಗರವನ್ನು ಧಾಟಿ, ಸರ್ವಥಾ, ಸದಾ, ನಿರ್ದೋಷಳಾಗಿರುವವಳು, ೩) ಚೇತನರಲ್ಲಿ ತನ್ನ ಅಂಶದಿಂದ ತೇಲುತ್ತಿರುವವಳು.

೪) ಮೇಘರೂಪದಲ್ಲಿದ್ದು ಇಡೀ ವಿಶ್ವವನ್ನೇ ನೀರಿನಿಂದ (ಜೀವನಾಧಾರ ವಸ್ತುವಿನಿಂದ) ತೇಲಿಸುವವಳು. ೫) ಎಲ್ಲರಿಗೂ ಪ್ರಿಯವೂ, ಹಿತವೂ ಆದುದನ್ನು ಚಿಂತಿಸುವವಳು, ಮಾಡುವವಳು, ಆದ್ದರಿಂದ ಇವಳನ್ನು ಯೋಗಿಗಳು ಮಾತಾ ಎಂದು ಕರೆಯುತ್ತಾರೆ.

## ೩ ಪದ್ಮಮಾಲಿನೀಂ

"ಪದ್ಮೇಸ್ಥಿತಾಂ" ಎಂದೂ, "ಪದ್ಮವರ್ಣಾಂ" ಎಂದೂ, "ಪದ್ಮನೇಮಿಂ" ಎಂದೂ, ಈ ಹಿಂದೆ ಬಂದಿರುವ ಅಮೋಘ ವಿವರಣೆಗಳ ಸಾಲಿಗೆ ಈ ವಿಶೇಷಣ ಸೇರುತ್ತದೆ. ಲಕ್ಷ್ಮಿಗೂ ತಾವರೆಗೂ ಒಂದು ಬಗೆಯ ಗೂಢ ಸಂಬಂಧವಿರುವುದನ್ನು ಈ ಶ್ರೀನಾಮಗಳು ನೆನಪಿಸುತ್ತವೆ. ಕಾಲವನ್ನೇ ಪದ್ಮವೆಂದು ಹಿಂದೆ ನಿಷ್ಪತ್ತಿಯಲ್ಲಿ ತೋರಿಸಿ ಆಗಿದೆ. (ಪದ್ಮಮಾನಂ ಮಿನೋತೀತಿ ಕಾಲಂ ಪದ್ಮಂ ಪ್ರಚಕ್ಷತೇ ।) ತಾನೂ ನಡೆಯುತ್ತಾ, ನಡೆಯುವುದೆಲ್ಲವನ್ನೂ ಅಳೆಯುವುದು ಕಾಲದ ಸ್ವಭಾವ. ಇಂಥ ಕಾಲವೆಂಬ ಅಚೇತನವಸ್ತುವೂ, ಪ್ರಕೃತಿ ಪುರುಷರೆಂಬ ಇನ್ನೆರಡು ತತ್ತ್ವಗಳೂ ಇವಳಿಗೆ ಭೂಷಣಗಳಾಗಿ, ಮಾಲೆಯಂತೆ ಅವನ್ನು ಲಕ್ಷ್ಮಿಯು ಧರಿಸಿರುವುದರಿಂದ ಇವಳು ಪದ್ಮಮಾಲಿನೀ ಎನಿಸಿದ್ದಾಳೆಂದು ಲಕ್ಷ್ಮೀತಂತ್ರವು ಒಂದು ರೀತಿಯ ವಿವರಣೆ ನೀಡಿದೆ.

ಪ್ರಕೃತಿಂ ಪುರುಷಂ ಚೈವ ಕಾಲಂ ಚೈವ ಸನಾತನಂ ।
ಧಾರಯಾಮಿ ಸ್ವರೂಪೇಣ ತತೋऽಹಂ ಪದ್ಮಮಾಲಿನೀ ॥

(ಶ್ಲೋ ೧೮ )

ಮನುಷ್ಯ ಶರೀರದಲ್ಲಿ (ಯೋಗಿ ಶರೀರದಲ್ಲಿ) ಮೂವತ್ತೆರಡು ಆಧಾರ ಪದ್ಮಗಳುಂಟೆಂದು ಯೋಗಶಾಸ್ತ್ರದಲ್ಲಿ ಪ್ರಸಿದ್ಧ. ಈ ಪದ್ಮಗಳ ಮಾಲೆ

ಯಿಂದ ಭೂಷಿತಳಾಗಿರುವವಳು ಲಕ್ಷ್ಮಿಯೆಂದು ಇಲ್ಲೀ ಇನ್ನೊಂದು ನಿರ್ವಚನವನ್ನೂ ಹೇಳಿದೆ.

ಆಧಾರಾಖ್ಯಾನಿ ಪದ್ಮಾನಿ ದ್ವಾತ್ರಿಂಶತ್ ಸಂಸ್ಥಿತಾನಿ ವೈ ।
ಪದ್ಮಾನಾಂ ಮಾಲಯಾ ವ್ಯಾಪ್ತಾ ತತೋಽಹಂ ಪದ್ಮಮಾಲಿನೀ ॥
(ಅದೇ, ಶ್ಲೋ. ೧೮೬)

## ಹನ್ನೆರಡನೆಯ ಮಂತ್ರ

ಆಪಃ ಸೃಜನ್ತು ಸ್ನಿಗ್ಧಾನಿ ಚಿಕ್ಲೀತ ! ವಸ ಮೇ ಗೃಹೇ ।
ನಿ ಚ ದೇವೀಂ ಮಾತರಂ ಶ್ರಿಯಂ ವಾಸಯ ಮೇ
ಕುಲೇ ॥೧೨॥

ಅರ್ಥ : ಎಲೈ (ಲಕ್ಷ್ಮೀಪುತ್ರನಾದ) ಚಿಕ್ಲೀತನೆಂಬ ಋಷಿಯೇ ! ನೀರಿಗೆ ಅಭಿಮಾನಿ ದೇವತೆಗಳು ಸ್ನೇಹಯುಕ್ತ ಕಾರ್ಯಗಳನ್ನು ಉತ್ಪಾದಿಸಲಿ. ನೀನೂ ನನ್ನ ಮನೆಯಲ್ಲಿ ವಾಸಮಾಡು; ಮತ್ತು (ನಿನಗೂ, ನಮ್ಮೆಲ್ಲರಿಗೂ) ತಾಯಿಯೂ, ಕಾಂತಿಯುಕ್ತಳೂ, ಕ್ರೀಡಾವಿಲಾಸಿನಿಯೂ ಆದ ಶ್ರೀದೇವಿಯನ್ನು ನನ್ನ ಮನೆಯಲ್ಲಿ ವಾಸಮಾಡುವಂತೆ, ಖಂಡಿತವಾಗಿ, ಮಾಡು. (ಇದು ವಿದ್ಯಾರಣ್ಯಭಾಷ್ಯಾನುಸಾರಿ.)

ಅಥವಾ

ಎಲೈ ಚಿಕ್ಲೀತನೆಂಬ ಭಗವದನ್ತಃ ಪುರ ದ್ವಾರರಕ್ಷಕನೇ ! ಭಗವಂತನಿಗೆ ವಾಸಸ್ಥಾನಗಳಂತಿರುವ ತುಪ್ಪ, ಎಣ್ಣೆ, ಜೇನು ಮೊದಲಾದ ವಸ್ತುಗಳಿಗೆ ಕಾರಣ ಭೂತಗಳಾದ ಯಾವ ಅಪ್ ದ್ರವ್ಯವುಂಟೋ ಅದರ ಕಾರ್ಯರೂಪಗಳಾದ ತುಪ್ಪ ಮೊದಲಾದುವು ನನ್ನ ಮನೆಯಲ್ಲಿ ಉತ್ಪಾದಿಸಲ್ಪಡಲಿ. (ಲಕ್ಷ್ಮೀಭಕ್ತನಾದ) ನನ್ನ ಮನೆಯಲ್ಲಿ (ಭಗವಂತನ ಮನೆಯ ಬಾಗಿಲಿನಲ್ಲಿನಂತೆ) ನಿತ್ಯವೂ ಸಂನಿಹಿತನಾಗಿರು. ಹಾಗೇ ಅಖಿಲಲೋಕಕ್ಕೂ, ನನಗೂ; ತಾಯಿಯೂ, ಪ್ರಕಾಶಮಯಳೂ ಆದ ತಾಯಿ ಲಕ್ಷ್ಮೀದೇವಿ

ಯನ್ನು ನನ್ನ ಕುಲದಲ್ಲಿ — ಮಕ್ಕಳು, ಮೊದಲಾದವರ, ಸಂತತಿಯೆಲ್ಲದಕ್ಕೂ ನಿತ್ಯೈಶ್ವರ್ಯಪ್ರಾಪ್ತಿಗಾಗಿ — ಸದಾ ವಾಸಿಸುವಂತೆ ಮಾಡು. (ಇದು ಶ್ರೀ ರಂಗನಾಥ ಮುನಿಗಳೆಂಬ ನಂಜೀಯರರ ಭಾಷ್ಯಾನುಸಾರ.)

## ೧ ಚಿಕ್ಲೀತನಾರು ?

ವಿವರಣೆ : ವಿದ್ಯಾರಣ್ಯರು ಚಿಕ್ಲೀತನೆಂಬುವನನ್ನು ಋಷಿಯನ್ನಾಗಿ, ಈ ಮಂತ್ರದ್ರಷ್ಟಾವನ್ನಾಗಿಯೂ, ಲಕ್ಷ್ಮೀದೇವಿಯ ಪುತ್ರನನ್ನಾಗಿಯೂ ವಿವರಿಸಿದ್ದಾರೆ. ಇಡೀ ಜೀವಕೋಟಿಯೇ ಲಕ್ಷ್ಮೀಪುತ್ರಸ್ಥಾನದಲ್ಲಿರುವಾಗ ಈ ಚಿಕ್ಲೀತನನ್ನು ಇಲ್ಲಿ ಮಾತ್ರ ಹೀಗೆ ನಿರೂಪಿಸಿರುವ ಬಗ್ಗೆ ಯಾವ ವಿವರಣೆಯೂ, ಪುರಾಣಾದಿಗಳಲ್ಲಿ ಕಂಡುಬರುವುದಿಲ್ಲ.

ನಂಜೀಯರು ಚಿಕ್ಲೀತನನ್ನು ಲಕ್ಷ್ಮೀದೇವಿಯ ಅಂತಃಪುರದ್ವಾರ ರಕ್ಷಕನನ್ನಾಗಿ ಉದಾಹರಿಸಿರುವ ಪುರಾಣ ವಾಕ್ಯವೊಂದನ್ನು ಎತ್ತಿ ತೋರಿಸಿದ್ದಾರೆ.

ಪದ್ಮೋ ಗದೋ ನಿಧಿಃ ಶಂಖಃ ಚತುರ್ದಂಷ್ಟ್ರೋ ಗಜಸ್ತಥಾ ।
ಕಲ್ಯಾಣಸರ್ಪ ಪಂಚಾಸ್ಯಾಃ ಚಿಕ್ಲೀತೋ ಗೃಹರಕ್ಷಕಾಃ ॥

ಎಂಬುದು ಆ ವಾಕ್ಯ. "ಪದ್ಮ, ಗದ, ಶಂಖನಿಧಿ, ನಾಲ್ಕುದಂತದ ಆನೆ, ಕಲ್ಯಾಣಸರ್ಪ, ಪಂಚಾನನ (ಸಿಂಹ), ಮತ್ತು ಚಿಕ್ಲೀತ ಇವರು (ಲಕ್ಷ್ಮೀ) ಆಲಯದ ರಕ್ಷಕರು." ಎಂದರ್ಥ.

ಸೂಕ್ತಾರ್ಥಸಂಗ್ರಹವೆಂಬ ಗ್ರಂಥದಲ್ಲಿ ಚಿಕ್ಲೀತನೆಂದರೆ ಮನ್ಮಥನೆಂದೂ, ಇವನು ವಿಷ್ಣುಪುತ್ರನಾಗಿ ಪ್ರಸಿದ್ಧನಾದುದರಿಂದ ಇಲ್ಲಿ ಲಕ್ಷ್ಮೀಪುತ್ರನೆಂದು ಹೇಳಬಹುದಾಗಿದೆಯೆಂದೂ ವಿವರಿಸಿದೆ.

ಶ್ರೀ ದೇವ್ಯಾಸ್ತನಯೋ-ಜಜ್ಞೇ ಚಿಕ್ಲೀತೋ ನಾಮ ಮನ್ಮಥಃ ।

ಇವನಿಗೆ ಈ ಮಂತ್ರದಲ್ಲಿ ಕೆಲಸವೇನೆಂದರೆ, ಇವನು ಆಪ್, ಅನ್ನಗಳಿಂದ ವಿಕಾರಮಯವಾದ ಚಿತ್ತದಲ್ಲಿ ಜನಿಸಿ ಮನ್ಮಥನೆನಿಸಿರುವುದರಿಂದ, ಸಂಸಾರ ಹೇತುವೂ, ಸಂಸಾರದಲ್ಲಿ ಸರ್ವಾರ್ಥಸಾಧಕನೂ ಆಗಿದ್ದು, ಭೋಗಪ್ರದ ನಾಗಿರುತ್ತಾನೆ.

## ೨ "ನೀರು ಸೃಜಿಸಲಿ" ಎಂದರೇನು ?

ಸಮಸ್ತ ಸೃಷ್ಟಿಗೂ ವೇದೋಕ್ತವಾದ 'ಆಪ'ವು ಮೂಲದ್ರವ್ಯ ವೆನಿಸಿದೆ. ಈ ಆಪವು ಜೀವ-ಜಡಗಳ ಮೂಲನಿಧಿಯೂ, ಮೂಲಸ್ವರೂ ಪವೂ ಆಗಿದ್ದು, ಭಗವಂತನಿಗೆ ವಾಸಸ್ಥಾನವೂ, ಭಗವಂತನಲ್ಲಿ ಆಶ್ರಿತವೂ ಆಗಿದೆಯೆಂದು ವೇದ, ಇತಿಹಾಸ, ಪುರಾಣ, ಧರ್ಮಶಾಸ್ತ್ರಗಳೆಲ್ಲದರಲ್ಲಿ ಪ್ರಸಿದ್ಧ. (ನಮ್ಮ ಮಾಲೆಯ ಇಡೀ ಆರನೇ ಸಂಪುಟವು ಉದಕತತ್ತ್ವದ ವಿವರಣಪರವಾಗಿದ್ದು, ವಾಚಕರು ಅದನ್ನು ಪೂರ್ತಿ ಓದಿದರೆ ಈ ತತ್ತ್ವದ ಮರ್ಮ ತಿಳಿದೀತು.)

ಯದಗ್ರೇ ಆಪ ಏವಾಸನ್ ಅದ್ಭ್ಯಃ ಸರ್ವಮಭೂಜ್ಜಗತ್ ।
ನಾರಾಸ್ತಾ ಅಯನಂ ಯಸ್ಯ ಸ ಹಿ ನಾರಾಯಣಃ ಪರಃ ॥

ಎಂದು ಶ್ಲೋಕಾರ್ಥ ಸಂಗ್ರಹವು ಇದನ್ನು ಹೇಳುತ್ತಿದೆ. ಆಪ ಎಂದರೂ ಉದಕ ಎಂದರೂ, ನಾರ ಎಂದರೂ, ಜಲ ಎಂದರೂ ಪರ್ಯಾಯ ಶಬ್ದಗಳಾಗಿ, ಏಕಾರ್ಥ ಹೊಂದಿವೆ. (ಉದಕಕ್ಕೆ ೧೯೦ ಪರ್ಯಾಯಗಳು ವೇದದಲ್ಲಿ ಉಂಟೆಂದು ನಮ್ಮ ಆರನೆಯ ಸಂಪುಟದಲ್ಲಿ ನಿರೂಪಿತವಾಗಿರುವುದು ಗಮ್ಯ ನೀಯ.) ಮೇಲಿನ ಶ್ಲೋಕದಲ್ಲಿ ಆಪ, ನಾರಾಃ, ಎಂಬುವು ಈ ಪೈಕಿ ಎರಡು. ಜಲವೆಂದರೂ,

ಜೀವಂ ಜೀವರಸಂ ದಿವ್ಯಂ ಅಮೃತಂ ಜಲಮುಚ್ಯತೇ ।
ಜಾಯತೇ ಲೀಯತೇ ಯತ್ರ ಜಗತ್ತಜ್ಜಲಮೀರಿತಂ ॥

ಎಂದು ಸೂಕ್ತಾರ್ಥಸಂಗ್ರಹ ಹೇಳುವಂತೆ, ಜೀವವೂ, ಜೀವವರ್ಗ ಪ್ರವಾಹವೂ, ದಿವ್ಯ ಅಮೃತಮಯ ಜಲವೆಂದು ಪ್ರಸಿದ್ಧ. ಜ-ಲ ಎಂಬೆರಡು ಅಕ್ಷರಗಳಿಗೆ, ಜ = ಜಾಯತೇ, ಲ = ಲೀಯತೇ ಎಂಬಂತೆ, ಯಾವುದರಲ್ಲಿ ಜಗತ್ತು ಹುಟ್ಟುವುದೋ, ಯಾವುದರಲ್ಲಿ ಜಗತ್ತು ಲಯವಾಗುವುದೋ ಆ ಮೂಲದ್ರವ್ಯವೇ ಜಲವೆನಿಸಿದೆ ಎಂದು ಇಲ್ಲಿರುವ ವಿವರಣೆ, ಛಾಂದೋಗ್ಯದ ಶಾಂಡಿಲ್ಯವಿದ್ಯೆಗೆ ಅನುಗುಣವಾಗಿದೆ.

ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ

(ಛಾಂ III-14-1 )

ಎಂಬ ವಾಕ್ಯವೇ ಶಾಂಡಿಲ್ಯ ವಿದ್ಯೆಯ ಮೂಲ. "ಇದೆಲ್ಲವೂ ಬ್ರಹ್ಮವಸ್ತುವೇ. ಇದರಲ್ಲಿ ಎಲ್ಲವೂ ಹುಟ್ಟಿ, ಲಯವಾಗುತ್ತದೆಯಾಗಿ. ಇದನ್ನು ಜಲವೆಂದು ಉಪಾಸಿಸತಕ್ಕದು." ಎಂಬಲ್ಲಿ ಸೃಷ್ಟವಾದ ಇಡೀ ಜಗತ್ತನ್ನೇ ಜಲವೆಂದು ಈ ಕಾರಣಕ್ಕಾಗಿಯೇ ಕರೆದು, ಕಾರ್ಯೋಪಾಸನೆಯು ಕಾರಣೋಪಾಸನೆಯೂ ಆಗುವುವೆಂದು ನಿರೂಪಿಸಿದೆ. ಶ್ರೀಹರಿಗೆ ಜಲವು ಆಯನ, ವಾಸಸ್ಥಾನವಾಗಿದೆಯೆಂದು ಇತಿಹಾಸಪುರಾಣಗಳಲ್ಲಿ ಹೇಳುವುದೂ ಈ ಮರ್ಮದಿಂದಲೇ. ಭಗವಂತನಿಗೆ ವಾಸಸ್ಥಾನವೆಂದರೆ, ಅವನ ಶಕ್ತಿಯಾದ ಲಕ್ಷ್ಮಿಗೂ ಜಲವು ವಾಸಸ್ಥಾನವೆಂಬುದನ್ನು ಪ್ರತ್ಯೇಕವಾಗಿ ಹೇಳುವ ಅವಶ್ಯವಿಲ್ಲವಷ್ಟೆ !

ಈ ಜಲತತ್ತ್ವದಲ್ಲಿ ಅಂಟುವ (ಸ್ನೇಹದ) ಗುಣವಿರುವುದರಿಂದಲೇ, ನೀರಿನ ಪರಮಾಣುಗಳು ಒಂದಕ್ಕೊಂದಕ್ಕೆ ಅಂಟಿಕೊಂಡು ಜಗತ್ತೆಂಬ ಪ್ರವಾಹಭಾವಕ್ಕೆ, ಪರಸ್ಪರ ಸಂಬಂಧಕ್ಕೆ (mutual relatedness) ಕಾರಣವಾಗಿರುತ್ತದೆ. ಈ ಗುಣವು ಹೋದಾಗ ಪ್ರಳಯ; ಈ ಗುಣವು ಸಮೃದ್ಧವಾಗಿದ್ದಾಗ ಸೃಷ್ಟಿ ಎಂಬುದು ಇಲ್ಲಿನ ಮರ್ಮ.

ಅಪ್ಸು ಪ್ರತಿಷ್ಠಿತಃ ಸ್ನೇಹಃ ತೇನೈವ ಪರಮಾಣವಃ ।

ಜಗದ್ಭಾವಾಯ ಸಂಬದ್ಧಾಃ ತತ್ ಹಾನೌ ಸ್ಯಾಜ್ಜಗಲ್ಲಯಃ ॥

ಎಂಬುದಾಗಿ ಇದನ್ನು ಸೂಕ್ತಾರ್ಥಸಂಗ್ರಹದಲ್ಲಿ ವಿವರಿಸಿದೆ. ಆದುದರಿಂದ

ಜಗತ್ತಿನಲ್ಲಿ ಭೋಗಸುಖಾದಿಗಳನ್ನು ಬಯಸುವ ಸಾಧಕನು ಅಪ್-ಸ್ವರೂಪಿಣಿಯಾದ ಲಕ್ಷ್ಮೀದೇವಿಯನ್ನು ಪ್ರಾರ್ಥಿಸುವುದು, ಈ ಭೋಗದ್ರವ್ಯಾದಿಗಳು ತನ್ನನ್ನು ಬಿಟ್ಟಿರದೆ ಅಂಟಿಕೊಂಡಿರಲಿ ಎಂದು. ಮೋಕ್ಷಕಾಮನ ಬಯಕೆ ಇದಲ್ಲವಾದರೂ. ಲಕ್ಷ್ಮೀದೇವಿಯು ಭಿನ್ನಾಭಿರುಚಿಯ ಎಲ್ಲ ಸಾಧಕರನ್ನೂ ಅನುಗ್ರಹಿಸುವಳಾದುದರಿಂದ ಪ್ರಕೃತಮಂತ್ರದಲ್ಲಿ ಇಹಲೋಕದ ಸೌಖ್ಯಕ್ಕಾಗಿಯೂ, ಭೋಗಸುಖ ವಸ್ತುಗಳ ಪ್ರಾಪ್ತಿಗಾಗಿಯೂ ಪ್ರಾರ್ಥಿಸಿರುವುದೂ ಬಹುಜನರ ಮನಸ್ಸಿನ ಆಸೆಯನ್ನರಿತೇ. "ಆಪಃ ಸೃಜನ್ತು ಸ್ನಿಗ್ಧಾನಿ" ಎಂದರೆ, ಈ ಮರ್ಮ ತಿಳಿಯಬೇಕು. ಲಕ್ಷಕೋಟಿ ಜನರಲ್ಲಿ ಯಾವನೋ ಒಬ್ಬನು ಮಾತ್ರ ಶ್ರೋತ್ರಿಯನೂ, ಕಾಮಾದಿಗಳಿಂದ ಗೆಲ್ಲಲ್ಪಡದವನೂ (ಅಕಾಮಹತನೂ) ಇರಬಹುದು. ಇವನಿಗೆ ಬೇಡವಾದ ಐಹಿಕಸಂಪತ್ತು ಬಹುಜನರಿಗೆ ಬೇಕಾದುದು ಅವರವರ ಕಾಮದಿಂದಲೇ. ಆದುದರಿಂದ, ಈ ಮಂತ್ರದಲ್ಲಿ ಕಾಮ ದೇವನನ್ನೇ ಉದ್ದೇಶಿಸಿ, ಚಿಕ್ಲೀತನೆಂದು ಕರೆದು, ತನಗೆ ಈ ಲಕ್ಷ್ಮೀಕಟಾಕ್ಷದ್ವಾರಾ ಐಹಿಕ ಸಂಪತ್ತು ದೃಢವಾಗಿ ಸಿಗುವಂತೆ ಮಾಡಬೇಕೆಂದು ಪ್ರಾರ್ಥಿಸಿರುವುದು ಲೋಕಾರೂಢಿಯ ಪ್ರಾರ್ಥನೆಯೇ ಮಾತ್ರ.

ಹದಿನಾಲ್ಕನೆಯ ಮಂತ್ರ

ಆರ್ದ್ರಾಂ ಪುಷ್ಕರಿಣೀಂ ಪುಷ್ಟಿಂ (ಯಷ್ಟಿಂ)
ಪಿಂಗಲಾಂ ಪದ್ಮಮಾಲಿನೀಂ ।
ಚಂದ್ರಾಂ ಹಿರಣ್ಮಯೀಂ ಲಕ್ಷ್ಮೀಂ
ಜಾತವೇದೋ ಮ ಆವಹ ॥೧೪॥

ಅರ್ಥ : ಎಲೈ ಜಾತವೇದನೇ! (ಪರಮಾತ್ಮನೇ! ಅಥವಾ ಅಗ್ನಿಯೇ!) ಕರುಣೆಯಿಂದ ಒದ್ದೆಯಾದ ಹೃದಯವುಳ್ಳವಳೂ, ಭಕ್ತರನ್ನು ಪೋಷಿಸು [illegible] ವವಳೂ) ಪುಷ್ಟಿತತ್ತ್ವಕ್ಕೆ ಅಧಿಷ್ಠಾತ್ರಿಯೂ. ಅಥವಾ ಎಲ್ಲ ಭಕ್ತರಿಗೂ

ಊರುಗೋಲಿನಂತೆ ಆಸರೆಯಾಗಿರುವವಳೂ, ಗೌರವರ್ಣಯುಕ್ತ ಶರೀರದವಳೂ, ಪದ್ಮಗಳ ಮಾಲಿಕೆಯನ್ನು ಧರಿಸಿರುವವಳೂ, ಆನಂದಸ್ವರೂಪಿಣಿಯೂ, ಸರ್ವಾಭರಣಯುಕ್ತಳೂ (ಸ್ವರ್ಣಮಯಳೂ) ಆದ ಲಕ್ಷ್ಮೀದೇವಿಯನ್ನು (ನನ್ನ ಅನುಗ್ರಹಾರ್ಥವಾಗಿ) ನನ್ನಲ್ಲಿಗೆ ಬರಮಾಡು.

ವಿವರಣೆ: ಈ ಮಂತ್ರದಲ್ಲಿ ಬಂದಿರುವ ಅನೇಕ ಲಕ್ಷ್ಮೀವಿಶೇಷಣಗಳಿಗೆ ಹಿಂದೆಯೇ ಅರ್ಥ ವಿವರಿಸಿದೆ. ಲಕ್ಷ್ಮೀತಂತ್ರದಲ್ಲಿನ ಕೆಲವೊಂದು ವಿಶೇಷ ವಿವರಣೆಗಳನ್ನು ಮಾತ್ರ ಇಲ್ಲಿ ನೋಡಬಹುದು.

## ೧ ಪುಷ್ಕರಿಣೀಂ

ಪೋಷಂ ಕರೋಮಿ ಸರ್ವೇಷಾಂ ರೂಪೇಣ ಯಶಸಾ ಶ್ರಿಯಾ।
ಪುಷ್ಕರಂ ಚ ನಯಾಮ್ಯೇಕಾ ಕಾಲಾಖ್ಯಂ ಪದ್ಮರೂಪಕಂ ॥
ತೇನ ಪುಷ್ಕರಿಣೀತ್ಯೇವಂ ಋಷಯೋ ಮಾಂ ಪ್ರಚಕ್ಷತೇ ॥

೧) ಎಲ್ಲರಿಗೂ ರೂಪ, ಐಶ್ವರ್ಯ, ಕೀರ್ತಿಗಳನ್ನಿತ್ತು ಪೋಷಿಸಿ ಬೆಳೆಸುವಳಾಗಿ, ಲಕ್ಷ್ಮಿಯು ಪುಷ್ಕರಿಣೀ ಎನಿಸಿದ್ದಾಳೆ.

೨) ಅಥವಾ ಪುಷ್ಕರವೆಂದರೆ ಪದ್ಮ. ಇದು ಕಾಲತತ್ತ್ವಕ್ಕೆ ಸಂಕೇತ. (ವಿವರಣೆ ಹಿಂದೆಯೇ ನೀಡಿದೆ). ಈ ಕಾಲವನ್ನು ನಿಯಮಿಸುವವಳು ಲಕ್ಷ್ಮಿಯಾಗಿ ಪುಷ್ಕರಿಣೀ ಎನಿಸುತ್ತಾಳೆ.

## ೨ ಆರ್ದ್ರಾಂ

ಶೀತಲಗುಣಾಂ ಎಂದು ವಿದ್ಯಾರಣ್ಯರ ವಿವರಣೆ. ಸಂಸಾರದಲ್ಲಿ

ಜಗತ್ತಿನಲ್ಲಿ ಭೋಗಸುಖಾದಿಗಳನ್ನು ಬಯಸುವ ಸಾಧಕನು ಅಪ್-ಸ್ವರೂಪಿಣಿಯಾದ ಲಕ್ಷ್ಮೀದೇವಿಯನ್ನು ಪ್ರಾರ್ಥಿಸುವುದು, ಈ ಭೋಗದ್ರವ್ಯಾದಿಗಳು ತನ್ನನ್ನು ಬಿಟ್ಟಿರದೆ ಅಂಟಿಕೊಂಡಿರಲಿ ಎಂದು. ಮೋಕ್ಷಕಾಮನ ಬಯಕೆ ಇದಲ್ಲವಾದರೂ, ಲಕ್ಷ್ಮೀದೇವಿಯು ಭಿನ್ನಾಭಿರುಚಿಯ ಎಲ್ಲ ಸಾಧಕರನ್ನೂ ಅನುಗ್ರಹಿಸುವವಳಾದುದರಿಂದ ಪ್ರಕೃತಮಂತ್ರದಲ್ಲಿ ಇಹಲೋಕದ ಸೌಖ್ಯಕ್ಕಾಗಿಯೂ, ಭೋಗಸುಖ ವಸ್ತುಗಳ ಪ್ರಾಪ್ತಿಗಾಗಿಯೂ ಪ್ರಾರ್ಥಿಸಿರುವುದೂ ಬಹುಜನರ ಮನಸ್ಸಿನ ಆಸೆಯನ್ನರಿತೇ. "ಆಪಃ ಸೃಜನ್ತು ಸ್ನಿಗ್ಧಾನಿ" ಎಂದರೆ, ಈ ಮರ್ಮ ತಿಳಿಯಬೇಕು. ಲಕ್ಷಕೋಟಿ ಜನರಲ್ಲಿ ಯಾವನೋ ಒಬ್ಬನು ಮಾತ್ರ ಶ್ರೋತ್ರಿಯನೂ, ಕಾಮಾದಿಗಳಿಂದ ಗೆಲ್ಲಲ್ಪಡದವನೂ (ಅಕಾಮಹತನೂ) ಇರಬಹುದು. ಇವನಿಗೆ ಬೇಡವಾದ ಐಹಿಕಸಂಪತ್ತು ಬಹುಜನರಿಗೆ ಬೇಕಾದುದು ಅವರವರ ಕಾಮದಿಂದಲೇ. ಆದುದರಿಂದ, ಈ ಮಂತ್ರದಲ್ಲಿ ಕಾಮ ದೇವನನ್ನೇ ಉದ್ದೇಶಿಸಿ, ಚಿಕ್ಲೀತನೆಂದು ಕರೆದು, ತನಗೆ ಈ ಲಕ್ಷ್ಮೀಕಟಾಕ್ಷದ್ವಾರಾ ಐಹಿಕ ಸಂಪತ್ತು ದೃಢವಾಗಿ ಸಿಗುವಂತೆ ಮಾಡಬೇಕೆಂದು ಪ್ರಾರ್ಥಿಸಿರುವುದು ಲೋಕಾರೂಢಿಯ ಪ್ರಾರ್ಥನೆಯೇ ಮಾತ್ರ.

### ಹದಿಮೂರನೆಯ ಮಂತ್ರ

ಆರ್ದ್ರಾಂ ಪುಷ್ಕರಿಣೀಂ ಪುಷ್ಟಿಂ (ಯಷ್ಟಿಂ)
ಪಿಂಗಳಾಂ ಪದ್ಮಮಾಲಿನೀಂ ।
ಚಂದ್ರಾಂ ಹಿರಣ್ಮಯೀಂ ಲಕ್ಷ್ಮೀಂ
ಜಾತವೇದೋ ಮಮಾವಹ ॥೧೩॥

ಅರ್ಥ : ಎಲೈ ಜಾತವೇದನೇ! (ಪರಮಾತ್ಮನೇ! ಅಥವಾ ಅಗ್ನಿಯೇ!) ಕರುಣೆಯಿಂದ ಒದ್ದೆಯಾದ ಹೃದಯವುಳ್ಳವಳೂ, ಭಕ್ತರನ್ನು ಪೋಷಿಸುತವಳೂ (ಅಥವಾ ಆನೆಗಳ ಸೊಂಡಿಲಿನ ತುದಿಯಿಂದ ಜಲಸಿಕ್ತಳಾಗಿರುವವಳೂ) ಪುಷ್ಟಿತತ್ತ್ವಕ್ಕೆ ಅಧೀಶ್ವರಿಯೂ, ಅಥವಾ ಎಲ್ಲ ಭಕ್ತರಿಗೂ

ಊರುಗೋಲಿನಂತೆ ಆಸರೆಯಾಗಿರುವವಳೂ, ಗೌರವರ್ಣಯುಕ್ತ ಶರೀರದವಳೂ, ಪದ್ಮಗಳ ಮಾಲಿಕೆಯನ್ನು ಧರಿಸಿರುವವಳೂ, ಆನಂದಸ್ವರೂಪಿಣಿಯೂ, ಸರ್ವಾಭರಣಯುಕ್ತಳೂ (ಸ್ವರ್ಣಮಯಳೂ) ಆದ ಲಕ್ಷ್ಮೀದೇವಿಯನ್ನು (ನನ್ನ ಅನುಗ್ರಹಾರ್ಥವಾಗಿ) ನನ್ನಲ್ಲಿಗೆ ಬರಮಾಡು.

ವಿವರಣೆ: ಈ ಮಂತ್ರದಲ್ಲಿ ಬಂದಿರುವ ಅನೇಕ ಲಕ್ಷ್ಮೀವಿಶೇಷಣಗಳಿಗೆ ಹಿಂದೆಯೇ ಅರ್ಥ ವಿವರಿಸಿದೆ. ಲಕ್ಷ್ಮೀತಂತ್ರದಲ್ಲಿನ ಕೆಲವೊಂದು ವಿಶೇಷ ವಿವರಣೆಗಳನ್ನು ಮಾತ್ರ ಇಲ್ಲಿ ನೋಡಬಹುದು.

## ೧ ಪುಷ್ಕರಿಣೀಂ

ಪೋಷಂ ಕರೋಮಿ ಸರ್ವೇಷಾಂ ರೂಪೇಣ ಯಶಸಾ ಶ್ರಿಯಾ।
ಪುಷ್ಕರಂ ಚ ನಯಾಮ್ಯೇಕಾ ಕಾಲಾಖ್ಯಂ ಪದ್ಮರೂಪಕಂ ॥
ತೇನ ಪುಷ್ಕರಿಣೀತ್ಯೇವಂ ಋಷಯೋ ಮಾಂ ಪ್ರಚಕ್ಷತೇ ॥

೧) ಎಲ್ಲರಿಗೂ ರೂಪ, ಐಶ್ವರ್ಯ, ಕೀರ್ತಿಗಳನ್ನಿತ್ತು ಪೋಷಿಸಿ ಬೆಳೆಸುವಳಾಗಿ, ಲಕ್ಷ್ಮೀಯು ಪುಷ್ಕರಿಣೀ ಎನಿಸಿದ್ದಾಳೆ.

೨) ಅಥವಾ ಪುಷ್ಕರವೆಂದರೆ ಪದ್ಮ. ಇದು ಕಾಲತತ್ತ್ವಕ್ಕೆ ಸಂಕೇತ. (ವಿವರಣೆ ಹಿಂದೆಯೇ ನೀಡಿದೆ). ಈ ಕಾಲವನ್ನು ನಿಯಮಿಸುವವಳು ಲಕ್ಷ್ಮೀಯಾಗಿ ಪುಷ್ಕರಿಣೀ ಎನಿಸುತ್ತಾಳೆ.

## ೨ ಆರ್ದ್ರಾಂ

ಶೀತಲಗುಣಾಂ ಎಂದು ವಿದ್ಯಾರಣ್ಯರ ವಿವರಣೆ. ಸಂಸಾರದಲ್ಲಿ

ಬೆಂದು ನೊಂದ ಜೀವಾತ್ಮರಿಗೆ ತಂಪಾಗುವಂತಹ ಗುಣಗಳುಳ್ಳವಳು ಎಂದರ್ಥ. ಇದನ್ನೇ ಇನ್ನಷ್ಟು ಬೆಳಗುವಂತಿದೆ ನಂಜೀಯರ ಭಾಷ್ಯ. "ದಯಾರ್ದ್ರ ಹೃದಯತಯಾ, ತಾಪತ್ರಯ ತಪ್ತಾನ್ ಪ್ರಾಣಿನೋ ದೃಷ್ಟ್ವಾ, ದೂಯಮಾನ ಚೇತಸ್ತಯಾ ತಾನ್ ಸ್ವ ಕಟಾಕ್ಷಾ-ಮೃತೈರಭಿವರ್ಷಯನ್ತೀಂ ।" ಎಂದರೆ, "ದಯೆಯಿಂದ ಒದ್ದೆಯಾದ ಹೃದಯವುಳ್ಳವಳಾಗಿ, ತಾಪತ್ರಯದಿಂದ ಬೆಂದ ಪ್ರಾಣಿಗಳನ್ನು ಕಂಡು ಮನನೊಂದು, ಅವುಗಳನ್ನು ತನ್ನ ದಿವ್ಯಕಟಾಕ್ಷಾಮೃತದಿಂದ ತಂಪುಗೊಳಿಸುವಂತೆ, ಮಳೆಗರೆಯುವಂತೆ ಅನುಗ್ರಹ ಮಾಡುವವಳು" ಎಂದರ್ಥ. ಲಕ್ಷ್ಮೀದೇವಿಯು ಕರುಣಾಸ್ವರೂಪಿಣಿಯೆಂದೂ, ವಾತ್ಸಲ್ಯಮಯಳೆಂದೂ ಹೇಳುವುದನ್ನು ಈ ವಿಶೇಷಣ ಸಮರ್ಥಿಸುತ್ತದೆ. ಮಕ್ಕಳನ್ನು ದಂಡಿಸುವುದೇ ಗೊತ್ತಿಲ್ಲದ ಕೇವಲ ಅನುಗ್ರಹಮಯಳೆಂದು —ಅನುಗ್ರಹಮಯೀಂ ವಂದೇ ನಿತ್ಯಮಜ್ಞಾತನಿಗ್ರಹಾಂ —ಪೂರ್ವಾಚಾರ್ಯರು ವರ್ಣಿಸಿರುವುದು ಈ ಗುಣವನ್ನೇ.

## ೩ ಪುಷ್ಟಿಂ, (ಯಷ್ಟಿಂ)

ಪುಷ್ಟಿಯನ್ನೀಯುವವಳು, ಪೋಷಕಳು ಎಂಬುದು ಮೊದಲನೇ ಅರ್ಥ (ವಿದ್ಯಾರಣ್ಯ ಭಾಷ್ಯ). ಎರಡನೆಯ ಪಾಠ ನಂಜೀಯರದೂ ಆಗಿ ಲಕ್ಷ್ಮೀತಂತ್ರಾನುಮೋದಿತವೂ, ವಿವೃತವೂ ಆಗಿದೆ. ಯಷ್ಟಿ ಎಂದರೆ ಕೋಲು. ಬಳ್ಳಿಗಳಿಗೆ ಆಧಾರವಾಗಿರುವ ವಸ್ತು. ಲಕ್ಷ್ಮಿಗೆ ಇದು ಹೇಗೆ ಸಂಗತವೆಂದರೆ ಲಕ್ಷ್ಮೀತಂತ್ರದಲ್ಲಿ ಹೀಗೆ ವಿವರಿಸಿದೆ :

ಇಷ್ಟಾಸ್ಮಿ ಸರ್ವ ದೇವಾನಾಂ ಸಂಗತಾ ಹರಿಣಾ ಸದಾ ।
ದಾತ್ರೀ ಚ ಸರ್ವಕಾಮಾನಾಂ ಅಖಿಲಸ್ಯಾವಲಂಬನಂ ॥

ಯಾಮಾಲಂಬ್ಯಾವತಿಷ್ಠಂತೇ ಪ್ರಧಾನ ಪುರುಷಾದಯಃ ।
ಯಷ್ಟಿರಿತ್ಯೇವಮ್ ಋಷಯಃ ತಾಂ ತತಃ ಸಂಪ್ರಚಕ್ಷತೇ ॥
(ಶ್ಲೋ. ೧೯೦-೯೧)

೧) ಎಲ್ಲಾ ದೇವತೆಗಳಿಗೂ ಇಷ್ಟವಾಗಿರುವವಳು, ಪ್ರಿಯಳಾಗಿರುವವಳು. ೨) ಭಗವಂತನೊಡನೆ ಸದಾ ಸೇರಿಯೇ ಇರುವವಳು. ೩) ಎಲ್ಲರಿಗೂ ಎಲ್ಲಾ ಆಸೆಗಳನ್ನೂ ಅನುಗ್ರಹಿಸುವವಳು ೪) ಎಲ್ಲರಿಗೂ ಅವಲಂಬನ (ಆಸರೆ)ಯಾಗಿರುವವಳು (೫) ವಿಶೇಷವಾಗಿ ಪ್ರಕೃತಿ-ಪುರುಷರಿಗೆ ಆಶ್ರಯವಾಗಿರುವವಳು— ಎಂಬೀ ಕಾರಣಗಳಿಂದ ಋಷಿಗಳು ಲಕ್ಷ್ಮಿಯನ್ನು ಯಷ್ಟಿ ಎಂದು ಕರೆಯುತ್ತಾರೆ.

ಯಜ = ಪ್ರಾಪಣೇ ಎಂಬ ಧಾತುವಿನಿಂದ ಯಷ್ಟಿಶಬ್ದವನ್ನು ಗ್ರಹಿಸಿದರೆ, ಎಲ್ಲರೂ ಇಷ್ಟಾರ್ಥವನ್ನೂ ಹೊಂದುವಂತೆ ಮಾಡುವವ ಳೆಂದಾಗಿ, ೧) ನೆಯ, ೩) ನೆಯ, ೪) ನೆಯ ಅರ್ಥಗಳು ಹೊಂದು ತ್ತವೆ. ಇದಕ್ಕೆ ಗತ್ಯರ್ಥವನ್ನು ಹೇಳುವಾಗ ೨) ನೆಯದು ಹೊಂದು ತ್ತದೆ.

ಎಲ್ಲರಿಗೂ ಆಲಂಬನವಾದ (ಕೋಲಿನಂತೆ) ಇರುವಳೆಂಬುದನ್ನು ಸಾತ್ತ್ವತಸಂಹಿತೆಯಲ್ಲೂ ಹೇಳಿದೆ:

ಯಾಮಾಲಂಬ್ಯ ಸುಖೇನೇಮಾಂ ದುಸ್ತರಂ ತ್ರಿಗು-
ಣೋದಧಿಂ ।
ನಿಸ್ತರಂತ್ಯಚಿರೇಣೈವ ವ್ಯಕ್ತಧ್ಯಾನಪರಾಯಣಾಃ ॥

"(ಭಗವಂತನ) ದರ್ಶನ ಸಮಾನಾಕಾರವೆಂದು ಪ್ರಸಿದ್ಧವಾದ ಧ್ಯಾನದಲ್ಲಿ ಮುಳುಗಿದ ಮಹಾಮಹಿಮರು ಯಾವಳನ್ನು ಆಶ್ರಯಿಸಿ, ಸತ್ತ್ವರಜಸ್ತಮ ಪ್ರಚುರವಾದ ಈ ದಾಟಲಸಾಧ್ಯವಾದ ಸಂಸಾರಸಾಗರವನ್ನು ಬೇಗನೇ ದಾಟುವರೋ, ಅಷ್ಟು ಮಹಿಮಾನ್ವಿತಳು ಈ ಲಕ್ಷ್ಮೀದೇವಿ" ಎಂಬಲ್ಲಿ ಆಲಂಬನಗುಣವನ್ನು ವಿವರಿಸಿದೆ.

## ೪ ಪಿಂಗಲಾಂ

ಗೌರವರ್ಣಯುಕ್ತಳೆಂಬುದು ಅರ್ಥ. ಲಕ್ಷ್ಮೀತಂತ್ರ ಇದನ್ನು ಹೀಗೆ ವಿವರಿಸಿದೆ :

ಪಿಂಗಳಾಸ್ಮಿ ಸ್ವಯಾ ಭಾಸಾ ಪ್ರತಪ್ತಕನಕಾಭಯಾ ।
ಪಿಂಗಾಯ ಚಾಪ್ಯದಾಂ ಪೂರ್ವಂ ಯಕ್ಷೇಶಾಯ
ಮಹಾಶ್ರಿಯಂ ॥
ಯಕ್ಷೇಶೋ ಮಾಂ ಪುರಾ ಶಕ್ರ ! ಪಿಂಗಳೇತ್ಯೇವ-
ಮೂಚಿವಾನ್ ॥ (ಶ್ಲೋ. ೧೯೨)

೧) ಲಕ್ಷ್ಮೀದೇವಿಯ ಮೈಬಣ್ಣ ಕರಗಿಸಿದ ಚಿನ್ನದಂತಿದೆ. ಅದರಿಂದ ಪಿಂಗಳಾ ಎನ್ನುತ್ತಾರೆ. ೨) ಯಕ್ಷಪತಿಯಾದ ಕುಬೇರನಿಗೆ ಪಿಂಗನೆನ್ನುತ್ತಾರೆ. ಇವನಿಗೆ ಆದಿಯಲ್ಲಿ ಐಶ್ವರ್ಯವನ್ನು ಕೊಟ್ಟವಳಾದ್ದರಿಂದಲೂ (ಲಾ = ದಾನೇ) ಇವಳನ್ನು ಪಿಂಗಳಾ ಎನ್ನುವುದುಂಟು. ಕುಬೇರನೇ ಇವಳಿಗಿಟ್ಟ ಹೆಸರಿದು.

### ಹದಿನಾಲ್ಕನೆಯ ಮಂತ್ರ

ಆರ್ದ್ರಾಂ ಪುಷ್ಕರಿಣೀಂ ತುಷ್ಟಿಂ (ಪುಷ್ಟಿಂ) ಸುವರ್ಣಾಂ
ಹೇಮಮಾಲಿನೀಂ ।
ಸೂರ್ಯಾಂ ಹಿರಣ್ಮಯೀಂ ಲಕ್ಷ್ಮೀಂ ಜಾತವೇದೋ
ಮಮಾವಹ ॥೧೪॥

ಅರ್ಥ : ಎಲೈ ಅಗ್ನಿಯೇ ! (ಅಥವಾ ಭಗವಂತನೇ !) ದಯಾಪೂರ್ಣ ಹೃದಯಳೂ, ಕಮಲಪುಷ್ಪಧರಳೂ, ತೃಪ್ತಿಯನ್ನು ಅನುಗ್ರಹಿಸುವವಳೂ, ಸ್ವರ್ಣಮಯಳೂ (ಅಥವಾ ಒಳ್ಳೆಯ ವೇದಶಬ್ದಸ್ವರೂಪಳೂ) ಚಿನ್ನದ

ಪುಷ್ಪದ ಹಾರವನ್ನು ಧರಿಸಿರುವವಳೂ, ಸೂರ್ಯನಂತೆ ಬೆಳಗುವವಳೂ, (ಅಥವಾ ನಮಗೆಲ್ಲಾ ಒಡೆಯಳೂ), ಶೋಭನ ವರ್ಣಮಯಳೂ ಆದ ಲಕ್ಷ್ಮೀದೇವಿಯನ್ನು ನನ್ನಲ್ಲಿಗೆ ಬರಮಾಡು.

ವಿವರಣೆ : ಈ ಹಿಂದಿನ ಮಂತ್ರಕ್ಕೂ ಇದಕ್ಕೂ ಎಲ್ಲೋ ಒಂದೆರಡು ಶಬ್ದಗಳಲ್ಲಿ ಮಾತ್ರ ಬೇಧವಿರುವುದು ಗಮನೀಯ. 'ಪುಷ್ಟಿಂ' ಎಂಬ ಪಾಠಕ್ಕೂ, 'ಆರ್ದ್ರಾಂ', 'ಪುಷ್ಕರಿಣೀಂ', 'ಹಿರಣ್ಮಯೀಂ' 'ಲಕ್ಷ್ಮೀಂ' ಎಂಬೆಲ್ಲ ಶ್ರೀನಾಮಗಳಿಗೂ ಆಗಲೇ ಅರ್ಥ ಹೇಳಿಯಾಗಿದೆ. 'ತುಷ್ಟಿಂ' ಎಂಬುದಕ್ಕೆ ಲಕ್ಷ್ಮೀತಂತ್ರವು ಹೀಗೆ ವಿವರಣೆ ಕೊಟ್ಟಿದೆ.

## ೧ ತುಷ್ಟಿಂ

ತೋಷಯಾಮಿ ಗುಣೈರ್ವಿಷ್ಣುಂ ತುಷ್ಯಾಮಿ ಚ ಹರೇರ್ಗುಣೈಃ ।
ಮಯಿ ತುಷ್ಟಿಃ ಸಮಸ್ತಾನಾಂ ಈಡಿತಾಯಾಂ ಸ್ವಕರ್ಮಭಿಃ ॥
ತುಷ್ಟಿರ್ನಿರೂಪಿತಾ ತೇನ ಸಾಹಂ ಯೋಗಾಬ್ಧಿಪಾರಗೈಃ ॥
(ಶ್ಲೋ, ೧೫೫)

ಶ್ರೀ ವಿಷ್ಣುವನ್ನು ತನ್ನ ಗುಣಗಳಿಂದ ತೃಪ್ತಿಪಡಿಸುವವಳೂ, ಶ್ರೀಹರಿಯ ದಿವ್ಯಗುಣಗಳಿಂದ ತಾನೂ ತೃಪ್ತಿಪಡುವವಳೂ, ಎಲ್ಲ ಮನುಷ್ಯರು ಸ್ವಕರ್ಮಾನುಷ್ಠಾನ ಮಾಡುವುದರ ಮೂಲಕ ಯಾವ ನನ್ನಲ್ಲಿ ತೃಪ್ತಿಪಡುವರೋ ಆ ಕಾರಣದ ಮೂಲಕ ನನ್ನನ್ನು ಯೋಗಶಾಸ್ತ್ರ ತಿಳಿದವರು ತುಷ್ಟಿ ಎಂದು ನಿರೂಪಿಸಿದ್ದಾರೆ.

ಮನುಷ್ಯರು ತಮ್ಮ ತಮ್ಮ ವರ್ಣಾಶ್ರಮಗಳಿಗುಚಿತವಾದ ವೃತ್ತಿಯ ಮೂಲಕವೇ ಮಾತ್ರ ಭಗವಂತನನ್ನು ತೃಪ್ತಿ ಪಡಿಸುವರೆಂದೂ, ಬೇರೆ ಮಾರ್ಗ ಇದಕ್ಕಿಲ್ಲವೆಂದೂ ಸ್ಮೃತಿಕಾರರು ಹೇಳಿರುವುದೂ ಸ್ಮರಣೀಯ.

ವರ್ಣಾಶ್ರಮಾಚಾರವತಾ ಪುರುಷೇಣ ಪರಃ ಪುಮಾನ್ ।
ವಿಷ್ಣುರಾಧ್ಯತೇ ಪನ್ಥಾ ನಾನ್ಯಃ ತತ್ತ್ವೋಪಕಾರಕಃ ॥

## ೨ ಸುವರ್ಣಾಂ

ಸುವರ್ಣಯಾಮಿ ಸಂಸಿದ್ಧಾನಪರಂ ಪರಮೇವ ವಾ ।
ಅನಿದಂ ಪ್ರಥಮಾ ವರ್ಣಾಃ ಶೋಭನಾ ಮಮ ವಾಚಕಾಃ ॥
ನಿತ್ಯಾ ಸರಸ್ವತೀ ಭೂತ್ವಾ ಶೋಭನಂ ವರ್ಣಯಾಮ್ಯಹಂ ।
ಸುವರ್ಣೇತಿ ತತೋ ವಿಪ್ರೈಃ ತತ್ತ್ವಜ್ಞೈಃ ಪರಿಕೀರ್ತಿತಾ ॥
ಶ್ಲೋ. ೧೯೭-೮ )

ಎಂಬುದು 'ಸುವರ್ಣಾಂ' ನಾಮಕ್ಕೆ ಲಕ್ಷ್ಮೀತಂತ್ರದ ವಿವರಣೆ ೧) ಯೋಗ ಸಿದ್ಧಿಪಡೆದವರನ್ನೂ, ಉಳಿದವರನ್ನೂ, ಶ್ರೀವಿಷ್ಣುವನ್ನೂ ಒಳ್ಳೆಯ ಬಣ್ಣ ಹೊಂದುವಂತೆ ಮಾಡುವವಳು. ೨) ಯೋಗಸಿದ್ಧರನ್ನು ಸುವಃ ನಯಾಮಿ —ಎಂಬಂತೆ ಪರಮಪದಕ್ಕೆ ಕೊಂಡೊಯ್ಯುವಳು, ಉಳಿದವರನ್ನು ಸ್ವರ್ಗಾದಿ ಭೋಗಲೋಕ ಗತಿಗೆ ಕಳುಹುವವಳು ೩) ಅನಾದಿಯಾದ, ಸುಂದರವಾದ ಶಬ್ದಗಳನ್ನು ತನ್ನ ಶ್ರೀನಾಮಗಳಾಗಿ ಹೊಂದಿರುವವಳು ೪) ನಿತ್ಯವಾದ ವೇದವಾಕ್ಕಿನರೂಪದಲ್ಲಿ ಭಗವಂತನನ್ನು ಚೆನ್ನಾಗಿ ಕೊಂಡಾಡುವಳು. ಈ ಕಾರಣಗಳಿಂದ ತತ್ತ್ವಜ್ಞರಾದ ವಿಪ್ರರು ಲಕ್ಷ್ಮಿಯನ್ನು ಸುವರ್ಣಾ ಎಂದು ಕೀರ್ತಿಸುತ್ತಾರೆ,

## ೩ ಹೇಮಮಾಲಿನೀಂ

ಹೇಮಾನಂ ಪರ್ವತಂ ದಿವ್ಯಂ ಚಂದ್ರಾರ್ಕಗ್ರಹ ಪೂರಿತಂ ।

ಧಾರಯಾಮಿ ಧರಾ ಭೂತ್ವಾ ವೇಧಸಃ ಸ್ಥಿತಿ ಸಿದ್ಧಯೇ ॥
ತುಷ್ಟಾವ ಮಾಂ ಪುರಾ ತೇನ ವಿರಿಂಚೋ ಹೇಮಮಾಲಿನೀಂ ॥

(ಶ್ಲೋ. ೯೯–೧೦೦)

ಎಂಬುದು ತಂತ್ರದಲ್ಲಿನ ವಿವರಣೆ. ಹೇಮವೆಂಬುದು ಒಂದು ಪರ್ವತದ ಹೆಸರು. ಚಂದ್ರಸೂರ್ಯಾದಿ ಗ್ರಹಗಳು ಅದರಲ್ಲಿ ತುಂಬಿವೆ. ಭೂದೇವಿಯ ರೂಪದಲ್ಲಿ ಲಕ್ಷ್ಮಿಯು ಅದನ್ನು ಧರಿಸಿದ್ದಾಳೆ. ಬ್ರಹ್ಮದೇವನಿಗೆ ಸ್ಥಿತಿ ತಂದು ಕೊಡುವುದು ಇದರ ಉದ್ದೇಶ್ಯ. ಇದರಿಂದ ಬ್ರಹ್ಮನು ಕೃತಜ್ಞತೆಯಿಂದ ಲಕ್ಷ್ಮಿಯನ್ನು ಈ ಶ್ರೀನಾಮದ ಮೂಲಕ ಸ್ತುತಿಸುವರು.

## ೪. ಸೂರ್ಯಾಂ

'ಷೂಜ್'— 'ಪ್ರಾಣಿ ಪ್ರಸವೇ' ಧಾತುವಿನಂತೆ, ಸೂ ಎಂಬುದು ಸಕಲ ಪ್ರಾಣಿಗಳನ್ನೂ ಸೃಷ್ಟಿಸುವವಳು ಎಂಬರ್ಥವನ್ನು ಕೊಡುತ್ತದೆ. ಇದರ ಮೇಲಿನ ರೇಫವು (ರಕಾರವು), ಆ ಪ್ರಾಣಿಗಳನ್ನು (ಭೋಗ ಮೋಕ್ಷಗಳಿಂದ) ರಮಿಸುವಂತೆ ಮಾಡುವವಳು ಎಂಬರ್ಥವನ್ನು ಕೊಡುವುದು. (ಕೂಡಿಸಿದರೆ ಸೂರ್ಯಾ ಶಬ್ದ.) ಲಕ್ಷ್ಮಿಯು ಇದನ್ನು ಭಗವಂತನ ಮೂಲಕ ಮಾಡಿಸುವವಳಾದುದರಿಂದ ಈ ವಿಶೇಷಣವು ಅವಳಿಗೆ ಒಪ್ಪುವುದು. ನಿತ್ಯಸೂರಿಗಳಿಗೆ ಭಗವಂತ್ಕೈಂಕರ್ಯವನ್ನು ಅನುಗ್ರಹಿಸುವವಳಾದುದರಿಂದ (ಯಾ = ಪ್ರಾಪಣೇ) ಅವರಿಗೆ ಹಿತಸ್ವರೂಪಳಾಗಿರುವವಳು ಎಂದೂ ಅರ್ಥವುಂಟು ಈ ಎಲ್ಲವನ್ನು ಕೂಡಿಸಿ ಲಕ್ಷ್ಮೀತಂತ್ರವು ಹೀಗೆ ವಿವರಿಸುತ್ತದೆ

ಹಿತಾಯ ಸರ್ವಜೀವಾನಾಂ ಪ್ರಸೂಯೇ ತತ್ತ್ವ ಪದ್ಧತಿಂ ।
ರಮಯಾಮಿ ಪುನಸ್ತತ್ರ ಭುಕ್ತ್ಯಾ ಮುಕ್ತ್ಯಾ ಯಥಾರ್ಹತಃ ॥
ನಿಯಚ್ಛಾಮಿ ತಥಾಕಾಲೈಃ ಸಜೀವಾಂ ತತ್ತ್ವ ಪದ್ಧತಿಂ ।

ಸೂರಿಭ್ಯಶ್ಚ ಹಿತಾ ನಿತ್ಯಂ ಸೂರ್ಯರೂಪಾರ್ಕಮಂಡಲೇ ॥
ಸೂರ್ಯೇತಿ ಸೂರಿಭಿಃ ಪ್ರೋಕ್ತಾ ತತೋಽಹಂ ತತ್ತ್ವ
ತತ್ತ್ವಚಿನ್ತಕೈಃ। (ಶ್ಲೋ. ೨೧೧-೩)

ಇಲ್ಲಿಗೆ ಲಕ್ಷ್ಮೀತಂತ್ರದ ಪ್ರಕಾರ ಶ್ರೀಸೂಕ್ತದಲ್ಲಿನ ೫೩ ಶ್ರೀನಾಮಗಳ ವ್ಯಾಖ್ಯಾನ ಮುಗಿಯುತ್ತದೆ. ಈಗ ಐವತ್ತಮೂರು ನಾಮಗಳನ್ನು ಅರ್ಚನೆಯಲ್ಲಿ ಉಪಯೋಗಿಸಲು ಈ ನಾಮಾವಳಿಯನ್ನು ಕೊಡಲಾಗುವದು:

## ೫ ಶ್ರೀಸೂಕ್ತಾಂತರ್ಗತ ಲಕ್ಷ್ಮೀ ನಾಮಾವಳಿಃ

ಓಂ ಹಿರಣ್ಯವರ್ಣಾಯೈ ನಮಃ, ಹರಿಣ್ಯೈ ನಮಃ, ಸುವರ್ಣಸ್ರಜೇ ನಮಃ, ರಜತಸ್ರಜೇ ನಮಃ, ಚಂದ್ರಾಯೈ ನಮಃ, ಹಿರಣ್ಮಯ್ಯೈ ನಮಃ, ಲಕ್ಷ್ಮ್ಯೈ ನಮಃ, ಅನಪಗಾಮಿನ್ಯೈ ನಮಃ, ಅಶ್ವಪೂರ್ವಾಯೈ ನಮಃ, ರಥಮಧ್ಯಾಯೈ ನಮಃ, (೧೦) ಹಸ್ತಿನಾದಪ್ರಬೋಧಿನ್ಯೈ ನಮಃ, ಶ್ರಿಯೈ ನಮಃ, ಮಾಯೈ ನಮಃ, ದೇವ್ಯೈ ನಮಃ, ಕಾಯೈ ನಮಃ, ಸೋಽಸ್ಮಿತಾಯೈ ನಮಃ, ಹಿರಣ್ಯಪ್ರಾಕಾರಾಯೈ ನಮಃ, ಆರ್ದ್ರಾಯೈ ನಮಃ, ಜ್ವಲಂತ್ಯೈ ನಮಃ, ತೃಪ್ತಾಯೈ ನಮಃ, (೨೦) ತರ್ಪಯನ್ತ್ಯೈ ನಮಃ, ಪದ್ಮೇಸ್ಥಿತಾಯೈ ನಮಃ, ಪದ್ಮವರ್ಣಾಯೈ ನಮಃ, ಚಂದ್ರಾಯೈ ನಮಃ, ಪ್ರಭಾಸಾಯೈ ನಮಃ, ಯಶಸಾಯೈ ನಮಃ, ಜ್ವಲನ್ತ್ಯೈ ನಮಃ, ದೇವಜುಷ್ಟಾಯೈ ನಮಃ, ಉದಾರಾಯೈ ನಮಃ, ತಾಯೈ ನಮಃ, (೩೦) ಪದ್ಮನೇಮ್ಯೈ ನಮಃ, ಆದಿತ್ಯ ವರ್ಣಾಯೈ ನಮಃ,

ಕೀರ್ತ್ಯೈ ನಮಃ, ಋದ್ಧ್ಯೈ ನಮಃ, ಗಂಧದ್ವಾರಾಯೈ ನಮಃ, ದುರಾಧರ್ಷಾಯೈ ನಮಃ, ನಿತ್ಯಪುಷ್ಟಾಯೈ ನಮಃ, ಕರೀಷಿಣ್ಯೈ ನಮಃ, ಈಶ್ವರ್ಯೈ ನಮಃ, ಮನಸಃ ಕಾಮಾಯೈ ನಮಃ, (೪೦) ವಾಚಃ ಆಕೂತ್ಯೈ ನಮಃ, ಸತ್ಯಾಯೈ ನಮಃ, ಪಶೂನಾಂ ರೂಪಾಯೈ ನಮಃ, ಅನ್ನಸ್ಯ ಯಶಸೇ ನಮಃ, ಪಾತ್ರ್ಯೈ ನಮಃ, ಪದ್ಮಮಾಲಿನ್ಯೈ ನಮಃ, ಪುಷ್ಕರಿಣ್ಯೈ ನಮಃ, ಯಷ್ಟಯೇ ನಮಃ, ಪಿಂಗಳಾಯೈ ನಮಃ, ತುಷ್ಟಯೇ ನಮಃ, (೫೦), ಸುವರ್ಣಾಯೈ ನಮಃ, ಹೇಮಮಾಲಿನ್ಯೈ ನಮಃ, ಸೂರ್ಯಾಯೈ ನಮಃ ॥

(ಒಂದೊಂದು ಶ್ರೀನಾಮದೊಡನೆಯೂ ಪ್ರಣವವನ್ನು ಸೇರಿಸಿಕೊಂಡು ಪಠಿಸಬೇಕು.)

## ಹದಿನೈದನೆಯ ಮಂತ್ರ

ತಾಂ ಮ ಆವಹ ಜಾತವೇದೋ
ಲಕ್ಷ್ಮೀಮನಪಗಾಮಿನೀಂ।
ಯಸ್ಯಾಂ ಹಿರಣ್ಯಂ ಪ್ರಭೂತಂ ಗಾವೋ
ದಾಸ್ಯೋಽಶ್ವಾನ್ ವಿಂದೇಯಂ ಪುರುಷಾನಹಂ ॥ (೧೫)

ಅರ್ಥ : ಎಲೈ ಅಗ್ನಿಯೇ! (ಅಥವಾ ಭಗವಂತನೇ!) ಯಾವ ದೇವಿಯ ಬಳಿಯಲ್ಲಿ ಬೇಕಾದಷ್ಟು ಹೊನ್ನನ್ನೂ, ಗೋವುಗಳನ್ನೂ, ದಾಸದಾಸಿಯರನ್ನು ಕುದುರೆಗಳನ್ನು ನಾನು ಹೊಂದುವಂತಾಗುವುದೋ, ಆ ಲಕ್ಷ್ಮೀದೇವಿಯನ್ನು ನನ್ನನ್ನು ಬಿಟ್ಟಗಲದಂತೆ ನನ್ನಲ್ಲಿಗೆ ಕರೆದು ತಾ.

ವಿವರಣೆ : ಎರಡನೆಯ (ಈ ಹಿಂದಿನ) ಮಂತ್ರಕ್ಕೂ ಇದಕ್ಕೂ ಬಹಳ ಸಾಮ್ಯವಿರುವುದು ಗಮನೀಯ. ಸಾಧಕನು ಲಕ್ಷ್ಮೀ ಪ್ರಾರ್ಥನಾರೂಪ ಈ ಸೂಕ್ತ ಪಠಣದಿಂದ ತನಗೆ ಬೇಕಾದುದೇನೆಂಬುದನ್ನು ಇಲ್ಲಿ ಬಾಯಿಬಿಟ್ಟು ಕೇಳಿಕೊಳ್ಳುವಂತಿದೆ.

ಇಲ್ಲಿಗೆ, ಶ್ರೀಸೂಕ್ತ, ಮತ್ತು ಅದರ ವಿವರಣೆ ಮುಗಿದವು.

ವಿ ಸೂ : ಈ ಕೆಳಗಿನ ಮಂತ್ರಗಳನ್ನೂ ಶ್ರೀಸೂಕ್ತದ ಕೊನೆಯಲ್ಲಿ ಜಪಿಸುವ ವಾಡಿಕೆಯುಂಟು

ಪದ್ಮಪ್ರಿಯೇ ಪದ್ಮಿನಿ ಪದ್ಮಹಸ್ತೇ
ಪದ್ಮಾಲಯೇ ಪದ್ಮದಳಾಯತಾಕ್ಷಿ।
ವಿಶ್ವಪ್ರಿಯೇ ವಿಷ್ಣುಮನೋನುಕೂಲೇ
ತ್ವತ್ಪಾದಪದ್ಮಂ ಮಯಿ ಸಂನಿಧತ್ಸ್ವ ॥೧॥
ಶ್ರಿಯೈ ಜಾತಃ ಶ್ರಿಯ ಆನಿರ್ಯಾಯ
ಶ್ರಿಯಂ ವಯೋ ಜನಿತೃಭ್ಯೋ ದಧಾತು।
ಶ್ರಿಯಂ ವಸಾನಾ ಅಮೃತತ್ವಮಾಯನ್
(ಭವನ್ತಿ) ಭಜನ್ತಿ ಸದ್ಯಃ ಸವಿಧಾ ಮಿತದ್ಯೂನ್ ॥
ಶ್ರಿಯ ಏವೈನಂ ತಚ್ಛ್ರಿಯಮಾದಧಾತಿ
ಸಂತತಮೃಚಾ ವಷಟ್‌ಕೃತ್ಯಂ ಸಂಧತ್ತಂ
ಸಂಧಿಯತೇ ಪ್ರಜಯಾ ಪಶುಭಿಃ ॥ ಯ ಏವಂ ವೇದ ॥

## "ಲಕ್ಷ್ಮೀಗಾಯತ್ರೀ"

॥ಓಂ॥ ಮಹಾದೇವ್ಯೈ ಚ ವಿದ್ಮಹೇ, ವಿಷ್ಣುಪತ್ನ್ಯೈ ಚ ಧೀಮಹಿ।
ತನ್ನೋ ಲಕ್ಷ್ಮೀಃ ಪ್ರಚೋದಯಾತ್ ॥
ಹರಿಃ ಓಂ ॥ ಶ್ರೀಕೃಷ್ಣಾರ್ಪಣಮಸ್ತು ॥

## ಮಂತ್ರಗಳ ಅರ್ಥ

೧) ಪದ್ಮಪ್ರಿಯೇ... ಕಮಲಪುಷ್ಪಗಳಲ್ಲಿ ಆಸಕ್ತಿಯುಳ್ಳವಳೂ,

ಸ್ತ್ರೀ ಜಾತಿಯಲ್ಲಿ ಉತ್ತಮವಾದ ಪದ್ಮಿನೀವರ್ಗಕ್ಕೆ ಸೇರಿದವಳೂ, ಕಮಲ ಪುಷ್ಪಗಳನ್ನು ಕೈಯಲ್ಲಿ ಧರಿಸಿದವಳೂ, ಪದ್ಮದಲ್ಲಿ ಆಸೀನಳಾಗಿರುವವಳೂ, ತಾವರೆಯ ಎಸಳುಗಳಂತೆ ನೀಳಕಂಗಳುಳ್ಳವಳೂ, ವಿಶ್ವದ ಎಲ್ಲರಲ್ಲಿಯೂ ಪ್ರೀತಿಯುಳ್ಳವಳೂ, ಶ್ರೀಮಹಾವಿಷ್ಣುವಿನ ಸಂಕಲ್ಪಕ್ಕೆ ಅನುಕೂಲವಾಗಿರುವವಳೂ ಆದ ಶ್ರೀ ಮಹಾಲಕ್ಷ್ಮಿಯೇ! ಕಮಲಪುಷ್ಪದಂಥ ನಿನ್ನ ಶ್ರೀಪಾದಗಳನ್ನು ನನ್ನ ಶಿರಸ್ಸಿನಲ್ಲಿ ಅನುಗ್ರಹಿಸು.

೨) ಶ್ರಿಯೈ ಜಾತಃ .. ಭಗವಂತನ ಕೈಂಕರ್ಯವೆಂಬ ಐಶ್ವರ್ಯವನ್ನು ಅನುಭವಿಸುವದಕ್ಕಾಗಿ ನಾನು ಜನಿಸಿದ್ದೇನೆ. ನನ್ನನ್ನು ಮರೆಸುವ ಅಚೇತನಾಂಶವು ನೀಗಲ್ಪಟ್ಟು ನಾನು ಸ್ವರೂಪದೊಡನೆ ಅವಿರ್ಭವಿಸಲು ಕಾರಣವಾದ ಉಪಾಯಗಳನ್ನು ಅನುಷ್ಠಿಸಲು ಬೇಕಾದ, ಸ್ಥಿರವಾದ ಐಶ್ವರ್ಯವೂ, ಆಯುಸ್ಸೂ ಮುಂತಾದುವನ್ನು ಶ್ರೀದೇವಿಯೇ ನನಗೆ ಏರ್ಪಡಿಸುವಂತಾಗಲಿ. ಲಕ್ಷ್ಮೀಧ್ಯಾನದಲ್ಲಿಯೇ ಬಾಳುವವರು, ಜನನ ಮರಣಾದಿಗಳನ್ನು ನೀಗಿ ಅಮರತ್ತ್ವವನ್ನು ಪಡೆಯುವರು. ಅವರು ಪರಮಪದನಾಥನ ಬಳಿ ಸೇರಿದೊಡನೆಯೇ ಆ ಪರಮಾತ್ಮನ ವಿಶೇಷ ಕಟಾಕ್ಷದಿಂದ ಪಾಪಗಳು, ಮುಪ್ಪು, ಮರಣ, ಶೋಕ, ಹಸಿವು, ಬಾಯಾರಿಕೆ ಎಂಬ ದೋಷಗಳಿಲ್ಲದ ಪರಿಶುದ್ಧ ಸ್ಥಿತಿಯನ್ನು, ಬಯಸಿದ್ದನ್ನು ಪಡೆಯುವ ಸಂಕಲ್ಪಶಕ್ತಿಯನ್ನೂ ಪಡೆಯುವರು.

೩) ಶ್ರಿಯ ಏವೈನಂ... ಆ ಪರಮಾತ್ಮನು ಈ ಲಕ್ಷ್ಮಿ ಉಪಾಸಕರಿಗೆ ನಿರಂತರವಾಗಿ ಈ ಕೈಂಕರ್ಯವೆಂಬ ಐಶ್ವರ್ಯವನ್ನೇ ಅನುಗ್ರಹಿಸುವನು.

೪) ಸಂತತಂ ಋಚಾ... ಈ ಋಗ್ವೇದ ಖಿಲಮಂತ್ರಗಳಿಂದ ಸದಾ ವಶೀಕರಿಸಲ್ಪಡುವ ದಿವ್ಯ ದಂಪತಿಗಳನ್ನು ಇಲ್ಲಿ ಹೇಳಿದಂತೆ ಉಪಾಸಿಸುವವನು ಪುತ್ರಪೌತ್ರಾದಿಗಳೊಡನೆಯೂ, ಪಶು, ಕುದುರೆ, ಐಶ್ವರ್ಯ ಮೊದಲಾದವುಗಳೊಡನೆ ಚೆನ್ನಾಗಿ ಬಾಳುವನು.

೫) ಲಕ್ಷ್ಮೀಗಾಯತ್ರಿ— ಓಂ ಮಹಾದೇವ್ಯೈ... ಶ್ರೀ ಮಹಾಲಕ್ಷ್ಮಿಯ ಅನುಗ್ರಹ ಪಡೆಯಲು ಉಪಾಸನೆಗಳನ್ನು ಮಾಡೋಣ. ಭಕ್ತ

ರಿಗೆ ಚತುರ್ವಿಧ ಪುರುಷಾರ್ಥಗಳನ್ನು ಅನುಗ್ರಹಿಸುವ ಯಾಗದಲ್ಲಿ ದೀಕ್ಷಿತನಾದ ಶ್ರೀಮನ್ನಾರಾಯಣನೊಡನೆ ಎಡೆಬಿಡದಿದ್ದು ಈ ಅನುಗ್ರಹದಲ್ಲಿ ಪಾಲ್ಗೊಳ್ಳುವ ಅವನ ದಿವ್ಯಮಹಿಷಿಯನ್ನು ಧ್ಯಾನಿಸೋಣ. ಅವರ ಧ್ಯಾನದಲ್ಲಿ ಈ ಭಕ್ತನಾದ ನನ್ನನ್ನು ಶ್ರೀ ಲಕ್ಷ್ಮಿಯೇ ಪ್ರಚೋದಿಸಲಿ.

ಇಲ್ಲಿಗೆ :
ಒಂಭತ್ತನೆಯ ಸಂಪುಟ ಮುಗಿಯಿತು.

ಯದಕ್ಷರಪದಭ್ರಷ್ಟಂ ಮಾತ್ರಾ ಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ನಾರಾಯಣ ನಮೋಽಸ್ತು ತೇ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥

# ವೇದ ಸಂಸ್ಕೃತಿಯ ಪರಿಚಯ

ಸಂಪುಟ ೧೦

(ಭೂಸೂಕ್ತಗಳು, ನೀಳಾ, ಆಂಭೃಣೀ, ವಾಕ್, ಶ್ರದ್ಧಾ ಮೇಧಾದಿ ಸೂಕ್ತಗಳು)

ಗ್ರಂಥಕಾರರು :

ಪ್ರೊ. ಕೆ. ಎಸ್. ನಾರಾಯಣಾಚಾರ್ಯ

ವೇದವಿದ್ಯಾ ಪ್ರಕಾಶನ

"ನಾಲೋಲ" ರೇಲ್ವೆ ಗೂಡ್ಸ್ ಷೆಡ್ ಹಿಂದೆ

ಕಲ್ಯಾಣ ನಗರ,

ಧಾರವಾಡ-೫೮೦,೦೦೭

## ಶ್ರೀ ಲಕ್ಷ್ಮೀಧ್ಯಾನ ಶ್ಲೋಕ

ಲಕ್ಷ್ಮೀಂ ಕ್ಷೀರಸಮುದ್ರರಾಜತನಯಾಂ
ಶ್ರೀರಂಗಧಾಮೇಶ್ವರೀಂ
ದಾಸೀಭೂತಸಮಸ್ತದೇವವನಿತಾಂ
ಲೋಕೈಕದೀಪಾಂಕುರಾಂ ।
ಶ್ರೀಮನ್ಮಂದಕಟಾಕ್ಷಲಬ್ಧವಿಭವತ್
ಬ್ರಹ್ಮೇಂದ್ರಗಂಗಾಧರಾಂ
ತ್ವಾಂ ತ್ರೈಲೋಕ್ಯ ಕುಟುಂಬಿನೀಂ ಸರಸಿಜಾಂ
ವಂದೇ ಮುಕುಂದ ಪ್ರಿಯಾಂ ॥

## ಪ್ರವೇಶ

# ಭೂಸೂಕ್ತ-ವಿವರಣೆ

ಸಂಕಲ್ಪಕಲ್ಪಲತಿಕಾಮವಧಿಂ ಕ್ಷಮಾಯಾಃ
ಸ್ವೇಚ್ಛಾವರಾಹಮಹಿಷೀಂ ಸುಲಭಾನುಕಂಪಾಂ ।
ವಿಶ್ವಸ್ಯ ಮಾತರಮಕಿಂಚನ ಕಾಮಧೇನುಂ
ವಿಶ್ವಂಭರಾಂ ಅಶರಣಃ ಶರಣಂ ಪ್ರಪದ್ಯೇ ॥

ಶ್ರೀ ವೇದಾನ್ತ ದೇಶಿಕರ ಭೂಸ್ತುತಿಯ ಆದಿಯಲ್ಲಿ ಬರುವ ಈ ಶ್ಲೋಕದ ಅರ್ಥ ಹೀಗಿದೆ. "ಭಕ್ತರಿಗೆ ಬಯಸಿದ ಫಲಗಳನ್ನು ತಾನು ಅನುಗ್ರಹಿಸಲು ಬಯಸಿದೊಡನೆಯೇ ಕಲ್ಪಲತೆಯಂತೆ ಆಗುವವಳೂ, ಕ್ಷಮಾಗುಣಕ್ಕೆ ಎಲ್ಲೆಯಂತಿರುವವಳೂ, ಭಗವಂತನು ಸ್ವೇಚ್ಛೆಯಿಂದೆತ್ತಿದ ವರಾಹಾವತಾರ ದಲ್ಲಿ ಅವನ ಪ್ರಧಾನಮಹಿಷಿಯಾಗಿರುವವಳೂ, ಸುಲಭವಾಗಿ ಕೃಪೆದೋರು ವವಳೂ, ಅಂಕಿಚನರಿಗೆ ಕಾಮಧೇನುವಿನಂತೆ ಇಷ್ಟಾರ್ಥಫಲಗಳನ್ನೆಲ್ಲ ಕೊಡುವವಳೂ, ಇಡೀ ಜಗತ್ತಿಗೇ ತಾಯಿಯಾದವಳೂ, ಆದ ಭೂದೇವಿ ಯನ್ನು (ವಿಶ್ವವನ್ನೇ ಹೊತ್ತು ನಿಂತಿರುವವಳನ್ನು) ಬೇರೆ ಶರಣಿಲ್ಲದ ನಾನು ಶರಣು ಹೊಕ್ಕಿದ್ದೇನೆ"

ಮಾನವನಿಗೆ ಕಷ್ಟಕಾಲದಲ್ಲಿ ಕನಿಕರಿಸುವವಳು ಮೊದಲು ತಾಯಿ ಯೆಂಬುದು ಎಲ್ಲರ ಅನುಭವದಲ್ಲಿಯೂ ಇದೆ. ಎದ್ದರೂ, ಬಿದ್ದರೂ, ನೋವಾದರೂ, ಗೋಳಾದರೂ ಮೊದಲು ಅದಕ್ಕಾಗಿಯೇ ಎಲ್ಲರೂ— ನಾಸ್ತಿಕರೂ ಸಹ— "ಅಮ್ಮಾ!" ಎನ್ನುತ್ತಾರೆಂಬುದನ್ನು ಕಾಣುತ್ತೇವೆ. ವೇದವೂ ತಾಯಿಯನ್ನೇ, ತಂದೆ, ಆಚಾರ್ಯಾದಿ ಪೂಜ್ಯರೆಲ್ಲರಿಗಿಂತ ಅಗ್ರದಲ್ಲಿ

ನಿಲ್ಲಿಸಿ ದೇವರೆಂದು ತಿಳಿಯಬೇಕೆಂದು ವಿಧಿಸಿದೆ. ಒಂಭತ್ತು ತಿಂಗಳು ತನ್ನ ಗರ್ಭದಲ್ಲಿ ಶಿಶುವನ್ನು ಧರಿಸಿ, ಶಿಶುವಿಗೆ ಶೀತ ಉಷ್ಣ, ಪಿತ್ಥಾದಿದೋಷಗಳು ಎಲ್ಲಿ ತಟ್ಟುವವೋ ! —ಎಂದಂಜಿ, ಅನವರತವೂ ಇದರ ರಕ್ಷೆಗಾಗಿ ತಾನು ಬಗೆ ಬಗೆಯ ನಿಷ್ಠೆಗಳಲ್ಲಿ ನಿಯಮಗಳಲ್ಲಿರುತ್ತಾ, ಸ್ವಾರ್ಥತ್ಯಾಗದೀಕ್ಷಿತಳಾದ ತಾಯಿಗಿಂತ ಇನ್ನು ಪ್ರತ್ಯಕ್ಷ ದೈವ ಬೇರೊಂದುಂಟೇ ? ಈ ನಿತ್ಯಾನುಭವದ ಹಿನ್ನೆಲೆಯಲ್ಲಿಯೇ. ಜಗತ್ತಿನಲ್ಲಿ ದೇವರೊಬ್ಬನಿರುವುದಾದರೆ ಅವನು ತಾಯಿಯೇ ಆಗಿರಬೇಕೆಂದು ಗ್ರಹಿಸಿ, ಅನಾದಿಕಾಲದಿಂದಲೂ ವಿಶ್ವದ ಎಲ್ಲ ಕಡೆಗಳಲ್ಲೂ ದೇವರನ್ನು ತಾಯಿಯೆಂದು ಪೂಜಿಸುವ ಪದ್ಧತಿ ಏರ್ಪಟ್ಟಿತ್ತೆಂಬುದನ್ನು ವಿಶ್ವದ ಗತಕಾಲದ ಧರ್ಮಗಳ ಇತಿಹಾಸದಲ್ಲಿಯೂ, ಇಂದಿನ ಅನೇಕ ಧರ್ಮಗಳಲ್ಲಿಯೂ ಕಾಣುತ್ತೇವೆ ಊರಿದ್ದಮೇಲೆ ಊರಿಗೊಬ್ಬಳು ತಾಯಿ. ಕೋಟೆಗೊಬ್ಬಳು ತಾಯಿ, ನಗರಕ್ಕೊಬ್ಬಳು ತಾಯಿ, ಎಂದು ಅಲ್ಲಲ್ಲೇ ಈ ವಿಶ್ವಮಾತೃ ಶಕ್ತಿಯನ್ನೇ ರೂಪಾಂತರಗಳಲ್ಲಿ ಬಗೆಬಗೆಯ ನಿಕಟಸಂಬಂಧಗಳಲ್ಲಿ ಮಾನವ ಜನಾಂಗ ಕಾಣ ಹೊರಟು ಧನ್ಯತೆಗೆ ಆಶಿಸಿದ್ದು ಪ್ರಸಿದ್ಧವಿದೆ. ಕ್ರೈಸ್ತಮತ ಉದಯವಾಗಲು ಪೂರ್ವದಲ್ಲೂ ಸಹ ಪರ್ಷಿಯಾ, ಈಜಿಪ್ಟ್, ಸುಮೇರಿಯಾ, ಗ್ರೀಸ್, ರೋಂ ಮುಂತಾದ ಭಾಗಗಳಲ್ಲೂ ಪ್ರಚಲಿತವಿದ್ದದ್ದು ಮಾತೃಪೂಜೆಯೇ. (ಜನಸಾಮಾನ್ಯರ ಕೈಯಲ್ಲಿ ಸಿಕ್ಕು —ಇಂದಿನಂತೆ ಅಂದೂ, ಎಂದೆಂದೂ— ಈ ಮಾತಲ ಪೂಜೆಯೂ ಅನೇಕ ವಿಕೃತಿಗೊಳಗಾಗಿದ್ದರೂ, ವಿಕಾರಗಳಷ್ಟೇ ನಿಂದ್ಯವೇ ಹೊರತು, ಮಾತೃಪೂಜೆಯೇ ಅಲ್ಲ !) ಕೊನೆಗೆ ಕ್ರೈಸ್ತರಲ್ಲೂ ಅದು ಉಳಿದೇ ಉಳಿಯಿತು ! ಬಹುಪಾಲು ಕ್ರೈಸ್ತರ ಆರಾಧ್ಯದೈವವಾದ ಕ್ರಿಸ್ತನ ತಾಯಿಯನ್ನೇ ಆ ವಿಶ್ವಮಾತೃವಿನ ಸ್ಥಾನದಲ್ಲಿ ಅವರು ಕೂರಿಸಬೇಕಾಗಿ ಬಂದಿತೆಂದರೆ. ಈ ಭಾವನೆ ಎಷ್ಟು ಪ್ರಭಾವಶಾಲಿಯಾಗಿರಬೇಡ ! ಈ ತಾಯಿಗೆ ಎಲ್ಲೆಲ್ಲಿ ಯಾವ ಯಾವ ಹೆಸರುಗಳೇ ಇರಲಿ, ಅದು ಮುಖ್ಯವಲ್ಲ. ಮಾನವತೆ ದೇವರನ್ನು ತಾಯಿಯೆಂದು ಕಂಡದ್ದೇ ಇಲ್ಲಿ ಮುಖ್ಯ.

ಹೀಗೆ ವಿಶ್ವದ ಎಲ್ಲ ಮಾನವರಿಗೂ ಜಾತಿ, ಮತ, ಪಂಥ, ವರ್ಣ, ಜನಾಂಗಗಳ ಭೇದವಿಲ್ಲದೆ ಇಂದಿಗೂ ತಾಯಿಯಾಗಿ ಕಾಣುತ್ತಿರುವವಳು,

ತಾಯಿಯ ಎಲ್ಲ ಲಕ್ಷಣಗಳನ್ನೂ ಪೂರ್ಣವಾಗಿ ಹೊಂದಿರುವವಳು, ದೈವೀ ಲಕ್ಷಣಗಳನ್ನು ಪೂರ್ಣವಾಗಿ ಹೊಂದಿ ಅನಂತ ಮಹಿಮಾನ್ವಿತಳೂ, ಕ್ರೀಡಾಪರಳೂ, ಬೆಳಗುವವಳೂ, ಕ್ಷಮಾವಾತ್ಸಲ್ಯಾದಿ ಕಲ್ಯಾಣ ಗುಣಪೂರ್ಣಳೂ, ಮಾನವನಿಗೆ ಅನ್ನ, ವಸ್ತ್ರ, ನೆಳಲು, ವಸತಿ, ಆಶ್ರಯಗಳನ್ನು ನೀಡುವವಳೂ, ಕೊನೆಗೆ ಸತ್ತಮೇಲೂ ತನ್ನ ಮಡಿಲಲ್ಲೇ ಅವನನ್ನು ಸ್ವಾಗತಿಸುವವಳೂ ಭೂಮಿತಾಯಿಯೇ. ತಂದೆಯಾದ ದೇವರಿಗೆ ಎಲ್ಲ ಬಗೆಯಲ್ಲಿ ಸರಿ ಹೊಂದುವ ದಾಂಪತ್ಯ ಲಕ್ಷಣವುಳ್ಳ ಇವಳನ್ನು ನಮ್ಮ ಪೂರ್ವಜರು 'ದೊಡ್ಡವಳು', ಮಹೀ ಎಂದು ಕರೆದರು. ದೇವರು ಕಣ್ಣಿಗೆ ಕಾಣದಿದ್ದರೂ ಇವಳು ಸದಾ ಕಣ್ಣಿಗೇ ಕಾಣುತ್ತಿದ್ದು, ಇವಳ ಅನಂತ ಕಲ್ಯಾಣಗುಣಗಳೂ ಸದಾ ಅನುಭವಕ್ಕೆ ಬರುತ್ತಿದ್ದು, ಒಂದು ಕ್ಷಣವೂ ಇವನ್ನು ಮರೆಯಲಾರದಂತೆ ಆಗಿರುವುದರಿಂದ, ದೇವರಿಗಿಂತ ನಮಗೆ ಹತ್ತಿರದ ದೈವೀ ಶಕ್ತಿ ಈ ಭೂಮಿತಾಯಿಯೇ. ಕಾಣುವ ಹೊರರೂಪವೊಂದಿದ್ದರೂ, ಇದನ್ನೂ ಮೀರಿದ ಒಂದು ಅಚಿಂತ್ಯ ದಿವ್ಯರೂಪವೂ ಇವಳಿಗುಂಟು. ಭೂತತ್ತ್ವಕ್ಕೆ —'ಇರುವಿಕೆ' ಎಂಬುದಕ್ಕೆ— ಅಭಿಮಾನೀ ದೇವತೆ ಇವಳೆಂದು ಋಷಿಗಳು ಕಂಡರು. ಈ ಭೂಃ ಹೇಳಿದ ಮೇಲೆಯೇ, ಆಮೇಲೆ ಭುವಃ, ಸುವಃ ಮೊದಲಾದ ವ್ಯಾಹೃತಿಗಳನ್ನು ವೈದಿಕರು ಪಠಿಸಲು ಸಾಧ್ಯವಾಗುವುದೆಂಬುದನ್ನು ಸ್ಮರಿಸಿದರೆ, ಮೊದಲು ನಿಲ್ಲಲು ನೆಲೆ ಕೊಡುವವಳು ಈ ಭೂದೇವಿಯೇ ಎಂಬುದು ಅರಿವಿಗೆ ಬರುತ್ತದೆ.

ನಿಲ್ಲಲು ನೆಲೆ ಎಂದರೆ. ಕಾಲ ಮೇಲೆ ನಿಲ್ಲುವ ಬಾಹ್ಯಾರ್ಥದ ನೆಲೆಯಾದರೂ ಆಗಬಹುದು; ಆಧ್ಯಾತ್ಮಿಕ ನೆಲೆ, ಮಾನಸಿಕ ನೆಲೆ, ಆರ್ಥಿಕ ನೆಲೆ, ಐಶ್ವರ್ಯದ ನೆಲೆ, ಸಾಮಾಜಿಕ ನೆಲೆ ಮೊದಲಾದ ಅನಂತವಿಧ ನೆಲೆಗಳಲ್ಲಿ ಯಾವುದೂ, ಎಲ್ಲವೂ ಆಗಬಹುದು. ಆದ್ದರಿಂದಲೇ ಭೂ (ಸತ್ತಾಯಾಂ) ವಾಚಕವೇ ಬಹುವಿಶಿಷ್ಟವಾದುದು ಇದು ಹಿಂದೆ ಪ್ರಣವವನ್ನಂಟಿಕೊಂಡೇ ಓಂ ಭೂಃ ಇತ್ಯಾದಿರೂಪದಲ್ಲಿ ಬರುವುದರಿಂದ, ಪ್ರಣವವು ವಿಷ್ಣುವಾಚಕವಾದುದರಿಂದ, ಇವಳನ್ನೂ ಭಗವಂತನನ್ನೂ ಎಡೆಬಿಡದ ದಿವ್ಯದಂಪತಿಗಳೆಂದು ವೈದಿಕರು ಕರೆಯುವರು. ಓಂಕಾರವು 'ಭೂ' ಶಬ್ದದ ಹಿಂದೆ

ಬಂದು, ಅದು ಇದರ ಸ್ತುತಿಪರವೂ ಆಗುವುದು. ಪ್ರಣವವು ಸಕಲ ವೇದ ಸಾರವಾದ್ದರಿಂದ, ಹೀಗೆ ಸಕಲವೇದವೂ ಭೂಸ್ತುತಿಯೇ ಎಂದು ಗ್ರಹಿಸು ವುದರಲ್ಲಿ ದೊಡ್ಡ ಮರ್ಮವಿದೆ.

ದೇವರನ್ನು ಶ್ರೀ, ಭೂ, ನೀಳಾನಾಯಕನೆಂದು ವರ್ಣಿಸುವುದನ್ನು ವಿವರಿಸುವಾಗ, ಈ ತತ್ತ್ವಗಳು ಸಾಂಕೇತಿಕವಾಗಿ ಹೀಗೆ ಕಾಣಬರುತ್ತವೆ. ಶ್ರೀ ಎಂಬುವಳು ಭಗವಂತನ ವೈಭವದ (Glory) ಸ್ವರೂಪಿಣಿ, ಭೂ ಎಂಬುವಳು ಮಹತಿಯ (Greatness) ಸ್ವರೂಪಿಣಿ, ನೀಳಾ ಎಂಬುವಳು ಕರುಣೆಯ (Grace) ಸ್ವರೂಪಿಣಿ. ಇಂಗ್ಲೀಷಿನಲ್ಲಿ ಹೀಗೆ ಹೇಳಿದರೆ ಬಹುಜನರಿಗೆ (ಅತಿರೇಕದ ವಿಚಾರವಾದಿಗಳಿಗೆ ಸಹ) ಸುಲಭವಾಗಿ ತಿಳಿದೀತು. God is Glorious, Great and Gracious. ಈ ವಾಚಕಗಳು ವಿಶೇಷಣ ಗಳಾದ (adjectives) ಹೊರತು ದೇವರು ಎಂಥವನೆಂಬುದನ್ನು ತಿಳಿಯಲು ಅಸಾಧ್ಯವಾದುದರಿಂದಲೇ, ಈ ಗುಣಸ್ವರೂಪಿಣಿಯರನ್ನು ಅವನನ್ನು ಬಿಟ್ಟಿರದ ಪತ್ನಿಯರೆನ್ನುವುದು. ಪತ್ನಿಯೆಂದೊಡನೆಯೇ ಮಾನವನ ಬುದ್ಧಿಗೆ ರಕ್ತಮಾಂಸ ಸಂಬಂಧದ ಗಂಡು ಹೆಣ್ಣು ಸಂಬಂಧವೇ ತಲೆಯಲ್ಲಿ ಮೊದಲು ಬರುವುದು ಅವಿವೇಕದಿಂದ, ಅಸಂಸ್ಕೃತಿಯಿಂದ ಮಾತ್ರ ! ಇವನ್ನು ಗೆದು ಮೇಲೇರಿ ದಿವ್ಯಾರ್ಥವನ್ನು ಕಾಣುವ ಬುದ್ಧಿಗೆ ಮಾತ್ರ ದೇವರು ಎಟುಕಿ ಯಾನು.

ನಾವು ನಿಂತಿರುವ, ಎಲ್ಲರ ಕಣ್ಣಿಗೆ ಕಾಣುವ ನಮಗೆ ಎಲ್ಲವೂ ಆಗಿ ರುವ ಈ ಭೂಮಿಯನ್ನೇ ಇನ್ನೂ ತಾಯಿಯೆಂದು ಕಾಣದ ಅನಾಗರಿಕ ರಾಕ್ಷಸ ಸಂತಾನವೊಂದೂ ಇಂದೂ ಈ ಭೂಮಿಯಲ್ಲಿದೆ ಎಂದಾಗ ಈ ರಾಕ್ಷಸರಿಗೆ ದೇವರು ಎಂದಿಗೆ, ಎಲ್ಲಿ, ಹೇಗೆ ಕಾಣಬೇಕು ! ವಿಜ್ಞಾನದ ಹೆಸರಿನಲ್ಲಿ ಭೂಮಿಯೊಳಗೇ ಬಾಂಬುಗಳನ್ನು ಹಾಕಿ ಪರೀಕ್ಷಿಸುವವರು ಮಾನ- ವರೋ, ರಾಕ್ಷಸರೋ? ಬಗೆ ಬಗೆಯ ಯಾತನೆಗಳನ್ನು ಭೂಮಿಗೆ ಇತ್ತು, ಪ್ರಕೃತಿಯ ಧರ್ಮವನ್ನೇ ಬದಲಿಸಲು ಹೊರಟಿರುವವರಾರು ? ಹಗಲು- ರಾತ್ರಿ, ಎಚ್ಚರ–ವಿಶ್ರಾಂತಿ, ಋತುಗಳು, ಪ್ರಕೃತಿಯನ್ನಾಶ್ರಯಿಸಿದ ವಾತಾ ವರಣ, ನದಿಗಳು, ಬೆಟ್ಟಗಳು ಇವುಗಳ ಸ್ವರೂಪವನ್ನೇ ಬದಲಿಸಲು

ಹೊರಟ ದೈತ್ಯಶಕ್ತಿಗಳಿಗೆ ಯಾವುದು ತಾನೇ ಪೂಜ್ಯ? ಹೆಸರಿಗೆ ಯಾವ ಮತವನ್ನು ಇವರು ಆಶ್ರಯಿಸಿದರೆ ತಾನೆ ಏನು ಭಾಗ್ಯ? ಈ ನಿರ್ಭಾಗ್ಯರ ನೇತೃತ್ವದಲ್ಲಿ ನಿಂತ ಇಂದಿನ ಮಾನವತೆ, ಗಗನಸಂಚಾರ ದೂರವಲ್ಲದ ಇಂದಿನ ಶೋಚನೀಯ ಸ್ಥಿತಿಯಲ್ಲಿ ಮತ್ತೆ ಭೂಸ್ತುತಿಯಿಂದಲೇ ತನ್ನ ಭವ್ಯ ಸ್ವರೂಪ ಪ್ರಾಪ್ತಿಗೆ ಯತ್ನಿಸಬೇಕಾಗಿದೆ.

ಈ ದೃಷ್ಟಿಯಿಂದ ನೋಡಿದಾಗ, ಈಗ ವೈದಿಕರಲ್ಲಿ ಪ್ರಸಿದ್ಧವಾಗಿರುವ "ಭೂಮಿರ್ಭೂರ್ಣವ್ನಾ ... " ಇತ್ಯಾದಿ (ತೈ. ಸಂ. I-5-3) ತೊಡಗುವ ಭೂಸೂಕ್ತಕ್ಕಿಂತ, ವೈದಿಕರಲ್ಲಿ ಅಷ್ಟು ಪ್ರಸಿದ್ಧವಲ್ಲದ ಇನ್ನೊಂದು ಭೂಸೂಕ್ತವು ( ಅಥರ್ವವೇದ ಸಂಹಿತಾ, XII-1 ) ನಮ್ಮ ಗಮನಕ್ಕೆ ಮೊದಲು ಬೀಳತಕ್ಕದ್ದಿದೆ. ಕಾವ್ಯಾತ್ಮಕ ಭಾಷೆಯಿಂದಲೂ, ಭವ್ಯಭಾವನೆಗಳಿಂದಲೂ, ಗೌರವ ಬುದ್ಧಿಯಿಂದಲೂ, ಗಂಭೀರ ವಿಚಾರಲಹರಿಗಳಿಂದಲೂ ಕೂಡಿ ೬೩ ಮಂತ್ರಗಳಲ್ಲಿ ಉಕ್ಕಿ ಹರಿದಿರುವ ಈ ದಿವ್ಯಸೂಕ್ತದಲ್ಲಿ ನಮ್ಮ ಪೂರ್ವಜರು ನಾವಿರುವ ಈ ಭೂಮಿಯನ್ನು ಎಷ್ಟೊಂದು ಪೂಜ್ಯಬುದ್ಧಿಯಿಂದ, ಕೃತಜ್ಞತಾ ಭಾವದಿಂದ, ಧನ್ಯತೆಯಿಂದ, ಮುಗ್ಧಶಿಶುವಿನ ದೃಷ್ಟಿಯಿಂದ, ಆದರೂ ಇಂದಿನ ಜಗತ್ತಿನ ಬಾಲಿಶ ಸ್ವಭಾವಕ್ಕೆಟುಕದ ಗಂಭೀರ ಗೌರವ ದೃಷ್ಟಿಯಿಂದ, ವಿಚಾರಗಳಿಂದ ಕಂಡರೆಂಬುದನ್ನು ಕಾಣಬಹುದಾಗಿದೆ. ಇಂದಿನ ಭಾರತೀಯರಂತೂ ತಾವು ಪಾಶ್ಚಾತ್ಯರ ದೃಷ್ಟಿಯಲ್ಲಿ ಕೀಳುತನಕ್ಕಿಂತ ಕೀಳು ಮಟ್ಟದಲ್ಲಿರುವರೆಂದು ತಿಳಿದು ಮಾನಸಿಕ ದಾಸ್ಯವನ್ನು ಇನ್ನೂ ಬಿಡಲಾರದೆ, ಅವರ ಉದ್ದಂಡರಕ್ಕಸೀ ಭಾವಗಳನ್ನೇ ನಾಗರೀಕತೆಯ ಅಳತೆಗೋಲನ್ನಾಗಿ ಗಣಿಸಿರುವುದರಿಂದ, ಮೊದಲು ಈ ' ನಮ್ಮವರ ' ದಾಸ್ಯ ವಿಮುಕ್ತಿಗೆ ಈ ಸೂಕ್ತವು ತುಂಬಾ ಉಪಯುಕ್ತವಾಗಿದೆ. (೧) ಈ ಮಂತ್ರಗಳಲ್ಲಿರುವ ಭಾವ ಮಹೋನ್ನತವೇ? ತುಚ್ಛವೇ? ಎಂಬುದನ್ನು ಅವರು ಮೊದಲು ಕಾಣಲಿ. (೨) ಆಮೇಲೆ ಈ ಬಗೆಯ ಭಾವ ದುರ್ಬೀನು ಹಾಕಿ ನೋಡಿದರೂ ಪಾಶ್ಚಾತ್ಯ ಸಂಸ್ಕೃತಿಯಲ್ಲಿರುವುದೇ ? ಎಂಬುದನ್ನು ಕಾಣಲಿ. ಈ ತಾರತಮ್ಯ ತಿಳಿದ ಮೇಲೆಯೇ ಬೌದ್ಧಿಕ ದಾಸ್ಯವು ತೊರೆದು ಅವರಿಗೂ 'ನಿಲ್ಲಲು ನೆಲೆ' ಸಿಗುವುದರಿಂದ, ಈ ವಿಷಯದಲ್ಲೂ ಭೂ

ದೇವಿಗೇ ಶರಣುಹೋಗಬೇಕಾಗಿದೆ. ಈಗ ಅಥರ್ವವೇದೋಕ್ತ ಭೂ (ಪೃಥ್ವೀ) ಸೂಕ್ತವನ್ನು ಅಭ್ಯಸಿಸೋಣ.

## ಮೊದಲನೆಯ ಅಧ್ಯಾಯ

# ಅಥರ್ವವೇದೋಕ್ತ ಭೂಸೂಕ್ತ(XII-1)

ಸತ್ಯಂ ಬೃಹದೃತಮುಗ್ರಂ ದೀಕ್ಷಾ ತಪೋ
ಬ್ರಹ್ಮ ಯಜ್ಞಃ ಪೃಥಿವೀಂ ಧಾರಯನ್ತಿ ।
ಸಾ ನೋ ಭೂತಸ್ಯ ಭವ್ಯಸ್ಯ ಪತ್ನ್ಯುರುಂ
ಲೋಕಂ ಪೃಥಿವೀ ನಃ ಕೃಣೋತು ॥ ೧ ॥

ಅರ್ಥ : ದೊಡ್ಡದಾದ ಸತ್ಯವೂ, ಮೀರಲಾರದಷ್ಟು ಉಗ್ರವಾದ ಋತವೂ, ದೀಕ್ಷೆಯೂ, ತಪಸ್ಸೂ, ದೇವರೂ ( ಅಥವಾ ವೇದಗಳೂ ), ಯಜ್ಞತತ್ತ್ವವೂ ಪೃಥಿವಿಯನ್ನು ಧರಿಸಿವೆ. ಹಿಂದಾದ, ಮುಂದಾಗುವ ಎಲ್ಲ (ಇತಿಹಾಸ) ಕ್ಕೂ ಎಡೆಬಿಡದ ಸಂಬಂಧವುಳ್ಳವಳೂ, (ಭಗವಂತನಿಗೆ) ಪತ್ನಿಯೂ ಆದ ಈ ಭೂದೇವಿಯು ನಮಗೆ ಇರಲು ವಿಶಾಲ ಲೋಕವನ್ನು ಉಂಟುಮಾಡಲಿ.

## ೧. ಭೂಮಿಯನ್ನು ಧರಿಸಿರುವವರಾರು?

ವಿವರಣೆ ; ಭೂಮಿಯನ್ನು ಧರಿಸಿರುವವರಾರು ? ಎಂಬ ಪ್ರಶ್ನೆಗೆ ಅನುಭಾವಿಕ (Intuitional) ಉತ್ತರವನ್ನು ಇಲ್ಲಿ ಮಂತ್ರ ನೀಡಿದೆ. ಭೌತ

ವಿಜ್ಞಾನಿಗಳಿಗೆ ಇದು ಅರ್ಥವಾಗುವುದು ಕಠಿಣ. ಭೂಮಿ ನಿಂತಿರುವುದು ಸೂರ್ಯನ ಆಕರ್ಷಕ ಶಕ್ತಿಯಿಂದ ಎಂದು ಅವರು ಹೇಳುತ್ತಾರೆ. ಇದು ಹೇಗೆ ? (How ?) ಎಂಬುದಕ್ಕಷ್ಟೇ ಉತ್ತರ ಮಾತ್ರ ! ಏಕೆ (Why?) ಎಂಬುದಕ್ಕೆ ವಿಜ್ಞಾನಿಗಳಲ್ಲಿ ಉತ್ತರವಿರಲಾರದು. ಭೂಮಿ ಎಂಬುದೇಕೆ ಇರಬೇಕು? ಇದು ಇಲ್ಲದಿದ್ದರೆ ಯಾರಿಗೆ ಹೇಗೆ ನಷ್ಟ? ವಿಶ್ವಗತಿಯಲ್ಲಿ ಅರ್ಥವಿದೆಯೇ? ಇದ್ದರೆ ಅದರ ದಿಕ್ಕಿನಲ್ಲಿ, ಗತಿಯಲ್ಲಿ ಯಾವ ಪುರುಷಾರ್ಥ ಸಾಧನೆ ಅಡಗಿದೆ? ಮೊದಲಾದ ಪ್ರಶ್ನೆಗಳನ್ನು ವಿಜ್ಞಾನಿಗಳು, ನಕ್ಕು, ತಳ್ಳಿ ಹಾಕಿ ಬಿಡುವರು ! ಅವರು ತಳ್ಳಿದರೂ, ನಕ್ಕರೂ, ಪ್ರಶ್ನೆ ಉಳಿಯುತ್ತದೆ! ಅವರ ಅಂಗಡಿಯಲ್ಲಿ ದೊರಕದುದನ್ನು ಬೇರೊಂದು ಅಧ್ಯಾತ್ಮದ ಅಂಗಡಿಯಲ್ಲಿ ಕೊಳ್ಳಬಯಸುವವರಿಗೆ ಇಲ್ಲಿ ಉತ್ತರದ ಪ್ರಯತ್ನವಿದೆ.

ವೇದದ ಉತ್ತರದ ಭಾಷೆಯಲ್ಲಿ, ಅಂಜು, ಅಳುಕು, ಮುಸಕು, ಕತ್ತಲೆ ಇಲ್ಲದ ಧೀರಭಾವವನ್ನು ಮೊದಲು ಕಾಣಬೇಕು ! ಸತ್ಯವನ್ನು ಕಾಣದವನ ಭಾಷೆ ಇದಲ್ಲ !!

ಈ ಭೂಮಿಯು ವಿಶಾಲ ಸತ್ಯದ ಅಂಶವಾಗಿರುವುದರಿಂದಲೇ ಆ ಸತ್ಯ ಇದನ್ನು ಧರಿಸಿದೆ. ಸತ್ಯವೆಂದರೆ Dead Truth, matter of fact, ಕೇವಲ ಐತಿಹಾಸಿಕಾರ್ಥದ ಸತ್ಯ, ಗಣಿತಜ್ಞನು ಭಾವಿಸುವ abstract truth, ಅಗೋಚರವಾದುದೊಂದಲ್ಲ. ವಿಶ್ವದೆಲ್ಲಿರುವ ಎಲ್ಲವೂ ಅದರಲ್ಲಿ ಬರುತ್ತದೆ. ವಿಶ್ವವಿದೆಯೆಂಬುದೆಷ್ಟು ಸತ್ಯವೋ, ಅದೇಕೆ ಇದೆಯೆಂಬುದೂ ಅಷ್ಟೇ ಸತ್ಯ. ಭೌತವಿಜ್ಞಾನಿಗಳ (mechanistic views), ಕೇವಲ ಭೌತ-ಕಾರ್ಯ-ಕಾರಣ ದೃಷ್ಟಿಕೋನದಿಂದ ನೋಡಿದಾಗ ಜಗತ್ತು ಅರ್ಥಶೂನ್ಯ ಆಕಸ್ಮಿಕ ಘಟನೆ ಎಂದು ಕಾಣುವುದೆಂದು ಬರ್ಟ್ರೆಂಡ್ ರಸ್ಸೆಲ್ ಮುಂತಾದವರ ವಾದ. ಬಿಡಿಬಿಡಿಯಾಗಿ ನೋಡಿದರೆ ವಿಶ್ವದಲ್ಲಿ ಯಾವ ಘಟನೆಗೂ ಅರ್ಥವಿಲ್ಲದಿಲ್ಲ. "ಜಗತ್ತಿಗೆ ಅರ್ಥವಿಲ್ಲ" ಎಂದು ವಾದಿಸುವವನೂ ಹಾಗೆ ಹೇಳುವುದಕ್ಕೆ ಒಂದರ್ಥವಿಟ್ಟೇ ಹೇಳುತ್ತಾನೆ. ಹೀಗೆ ತಿಳಿಯುವುದರಲ್ಲಿ (ನಮಗೆ ಕಾಣದ) ಯಾವುದೋ ಒಳಿತೊಂದು (Some good) ಇದೆ

ಯೊಂದು ಅವನು ಭಾವಿಸಿಯೇ ಹಾಗೆ ಹೇಳುತ್ತಾನೆ. (ಆ ಒಳಿತು ಅವನ ದೃಷ್ಟಿಯಿಂದ ಸಿದ್ಧಿಸುವುದೋ ಬಿಡುವುದೋ ಎಂಬುದು ಬೇರೆ ಪ್ರಶ್ನೆ.) ಬಿಡಿಬಿಡಿ ಕ್ರಿಯೆಗಳಿಗೆ ಅರ್ಥವಿರುವುದಾದರೆ, ಇವುಗಳನ್ನೆಲ್ಲ ಕೂಡಿಸಿದ ಜಗತ್ಪ್ರವಾಹದ ಇಡೀ ಕ್ರಿಯೆಗೆ ಅರ್ಥವಿಲ್ಲವೆಂದು ಹೇಳುವುದು ಹಾಸ್ಯಾಸ್ಪದ ವಾಗುವುದು. ಆ ಅರ್ಥವನ್ನು ಒಂದೇ ಮಾತಿನಲ್ಲಿ ಹೇಳಲು ಆಗದಿರ ಬಹುದು. (It may be very complex and too great for a single expression). ಹೇಳಿದರೂ ಬಹುಜನರಿಗೆ ತಿಳಿಯದಿರಬಹುದು. ಯಾಜ್ಞವಲ್ಕ್ಯರು ಜಗತ್ತಿನ ಪ್ರವಾಹಕ್ಕೆ ಅರ್ಥವಿದೆಯೆಂದೂ, ಕತ್ತಲೆಯಿಂದ ಬೆಳಕಿಗೂ, ಅವ್ಯವಸ್ಥೆಯಿಂದ ವ್ಯವಸ್ಥೆಗೂ, ಮೃತ್ಯುವಿನಿಂದ ಅಮೃತಕ್ಕೂ ಜೀವರಾಶಿಯನ್ನು ಕರೆದೊಯ್ಯುವುದೇ ಆ ಅರ್ಥವೆಂದೂ ಕಂಡುಕೊಂಡು ಸಾರಿದರು. ಈ ಪ್ರವಾಹದ ಒಂದೊಂದು ಪ್ರಕಟ-ಅಪ್ರಕಟ ಅಂಶವೂ ಸತ್ಯ ಶಬ್ದದ ವ್ಯಾಪ್ತಿಯಲ್ಲೇ ಬರುವುದು.

ಹಾಗೆ ನೋಡಿದರೆ ಸತ್ಯವಲ್ಲದೆ, ವಿಶ್ವದ ನಿಯಮಾವಳಿ ಎನಿಸಿದ ಋತವೂ ಈ ಭೂಮಿ ನಿಲ್ಲುವುದಕ್ಕೆ, ಬೀಳದಿರುವುದಕ್ಕೆ ಕಾರಣ. ವಿಶ್ವನಿರ್ಮಾಣ ನಿಪುಣನು ನಿಯಮದಿಂದಲೇ ಇದನ್ನು ನಿಲ್ಲಿಸಿದ್ದಾನೆ. ಹಿರಣ್ಯಾಕ್ಷನಂಥ ಎಷ್ಟೋ ದೈತ್ಯರು ಈ ಭೂಮಿಯನ್ನೇ ನಿಲ್ಲಲು ನೆಲೆಯಿಲ್ಲದಂತೆ ಮಾಡಲು ಯತ್ನಿಸಿ ಹತಾಶರಾಗಿ, ತಾವೇ ಇಲ್ಲವಾದುದೂ ಈ ಅನುಲ್ಲಂಘನೀಯ ಋತದ ದೆಸೆಯಿಂದಲೇ. ಇಂದಿನ ದೈತ್ಯರಿಗೆ ಕಾದಿರುವುದೂ ಇದೇ ಪಾಠ. ಎಷ್ಟು ಸೂರ್ಯರೋ ! ಎಷ್ಟು ಬರುವುದಿವೆಯೋ ! —ಈ ಎಲ್ಲಕ್ಕೂ ಅನ್ವಯವಾಗುವ ಸೃಷ್ಟಿ (Creativity)ಯ ಹಿಂದೆ ಅಡಗಿರುವ ನೀಲನ ಕಾಶೆಯಂತಿರುವ (Blue printನ ಹಾಗಿರುವ) ನಿಯಮಾವಳಿಯೇ ಋತ. ಇದೇ ದೇವರು ಅಥವಾ ದೇವರು ಇದರ ರಕ್ಷಕ (ಋತಂ ಬ್ರಹ್ಮ, ಋತಸ್ಯ ಗೋಪ್ತಾ) ಎಂದು ವೇದ ಹೇಳುತ್ತದೆ

ದೇವರ ಸಂಕಲ್ಪ ರೂಪ ದೀಕ್ಷೆ; ಸತ್ಪುರುಷರ ತಪಸ್ಸಿನ ಫಲ; ವಿಪ್ರರು ಸದಾ ಮಾಡುವ ವೇದಪಾರಾಯಣದ ಫಲ, ಅರ್ಪಣೆ (Self sacrifice) ರೂಪದ ಯಜ್ಞ; ಒಂದು ಇನ್ನೊಂದರಲ್ಲಿ ಬೆರೆತು, ಜೀರ್ಣವಾಗಿ, ಅಂತರ್ಗತ

ವಾಗಿ. ಹೊಸತನ ಹುಟ್ಟುವ, ಸೃಷ್ಟಿಕ್ರಿಯೆಯಾದ ಯಜ್ಞ— ಇದೆಲ್ಲ ಈ ಭೂಮಿಯನ್ನು (ಅದರಲ್ಲಿರುವ ಅಮೌಲ್ಯವಾದ ಸಂಸ್ಕೃತಿ, ವಿಚಾರ, ಭಾವನೆ, ಮೌಲ್ಯಗಳು ಎಲ್ಲವನ್ನೂ) ನಿಲ್ಲಿಸಿವೆ ಎಂಬ ಮಾತಿನಲ್ಲಿ ಮೌಲ್ಯಾತ್ಮಕವಾದ ಸತ್ಯವಿದೆ. (Truth of Values). ಮೌಲ್ಯಗಳೇ ಕಲ್ಪಿತವೆನ್ನುವರಿಗೆ ನೆಲೆ ಎಲ್ಲಿ ?

ಭೂಮಿಗೆ ಮಾನವನು ಭಾರವಾಗಬಾರದೆಂಬ ಮಾತು ಎಲ್ಲರಿಗೂ ತಿಳಿದರೂ ವಿಜ್ಞಾನಿಗಳಿಗೆ ತಿಳಿಯಲಾರದು ! ಭಾರವೆಂದರೆ mass, weight ಎಂಬಂತೆ ಭೌತ ಅಳತೆಯಲ್ಲಿ ಬರುವುದೇ ಅವರ ತಲೆಯಲ್ಲಿ ಬರುತ್ತದೆ. ಜಗತ್ತಿನ ವಿನಾಶಕಾರೀಶಕ್ತಿಗಳು ಭಾರವೆಂದರೆ ತಿಳಿಯಲಾರದೆ ? ಇವುಗಳ ದೆಸೆಯಿಂದ ಭೂಮಿಯನ್ನು ರಕ್ಷಿಸುವವರು ಯಾರೆಂದರೆ :

ಗೋಭಿಃ ವಿಪ್ರೈಶ್ಚ ವೇದೈಶ್ಚ ಸತೀಭಿಃ ಸತ್ಯವಾದಿಭಿಃ ।
ದಾತೃಭಿಃ ಧರ್ಮಶೀಲೈಶ್ಚ ಸಪ್ತಭಿಃ ಧಾರ್ಯತೇ ಮಹೀ ॥

ಎಂದು ಹಿರಿಯರು ಹೇಳುವುದುಂಟು. ಗೋವುಗಳು (ಬೆಳಕಿಂಬ ಜ್ಞಾನ, ಕಿರಣಗಳು) ಬ್ರಹ್ಮಜ್ಞಾನಿಗಳು. ಜ್ಞಾನಭಂಡಾರ, ಪತಿವ್ರತೆಯರ ಧರ್ಮ ಸತ್ಯವಾದಿಗಳ ಸತ್ಯ, ದಾನಿಗಳ ದಾನಮಹಿಮೆ, ಧರ್ಮಶೀಲರಲ್ಲಿರುವ ಧಾರ್ಮಿಕತೆ— ಈ ಏಳೂ ಭೂಮಿಯನ್ನು ಹೊತ್ತಿವೆ ಎಂಬುದು (Value statement ) ಮೌಲ್ಯಪೂರ್ಣ ವಾಕ್ಯಾಗಿದೆ. ಇದೆಲ್ಲ ಹೋದ ಮೇಲೆ ಭೂಮಿಯೂ ಭೂಮಿಯಾಗಿ ಉಳಿಯುವುದೋ ಇಲ್ಲವೋ, ಅಥವಾ ದುಷ್ಟರ ಕಾಲ್ಚೆಂಡಾಗಿ, ಭೋಗಸಾಧನವಾಗಿ, ಅರ್ಥಶೂನ್ಯವಾಗಿ ಸಾಂಸ್ಕೃತಿಕ ಮಾನವ ನಿಗೆ ನೆಲೆಯೇ ಇಲ್ಲದಾಗುವುದೋ, ತಿಳಿಯಲಾರದೇ? ಈ ಕಳಕಳಿಯ ಹಿನ್ನೆಲೆ ಯಲ್ಲಿ ಋಷಿಯು ಭೂಮಿಯನ್ನು ಮಹೋಪಕಾರಕಳನ್ನಾಗಿಯೂ ವಿಶ್ವದ ತಪಸ್ಸಿನಿಂದ ನಿಂತಿರುವಂತೆಯೂ ಕಂಡಿರುವುದರಲ್ಲಿ ಅವಿಚಾಲ್ಯವಾದ ಸತ್ಯದ ಅರಿವಿದೆ.ನಮ್ಮ ಮೊದಲ ಕರ್ತವ್ಯವೆಂದರೆ, ಇದನ್ನು ತಿಳಿಯದ 'ಜ್ಞಾನಿ'ಗಳಿಗೆ ತಿಳಿಸಿ ಕೊಡುವುದು. ಏಕೆಂದರೆ ವಿಶ್ವದ ಕಲ್ಯಾಣವೇ ಅದರಲ್ಲಡಗಿದೆ, ಮಾನ ವನೂ, ಸಕಲ ಜೀವರಾಶಿಗಳೂ ಪೂರ್ಣತ್ವವನ್ನೂ, ಅಮೃತತ್ತ್ವವನ್ನೂ

ಪಡೆಯಲೆಂದೆ. ದೇವರು ಸೃಷ್ಟಿ ಕ್ರಿಯೆಯಲ್ಲಿ ತೊಡಗಿ, ಭೂಮಿಯನ್ನು ನಮಗೆ ಸಾಧನಕ್ಷೇತ್ರವನ್ನಾಗಿ ಅನುಗ್ರಹಿಸಿರುವುದರಿಂದ ವಿಶ್ವದ ಇತಿಹಾಸವೇ, ದೇವರ ಮಂಗಲಮಯ ಸಂಕಲ್ಪವೇ ಭೂಮಿಯ ಮೂರ್ತಸ್ವರೂಪವಾಗಿರುವುದ ರಿಂದ, ಇದು ಮುಂದೆಯೂ ಮಾನವನ ಸಾಧನೆಗೆ ನೆಲೆಯಾಗಿ, ವಿಶಾಲ ವಾಗಿ, ನಿಷ್ಕಂಟಕವಾಗಿ, ದೈತ್ಯೋಪದ್ರವವಿಲ್ಲದೆ, ನಮಗೆ ಅನುಕೂಲ ವಾಗಿರಬೇಕೆಂಬ ಸೂಕ್ತದ ಪ್ರಾರ್ಥನೆ ಇಂದೂ ಬಹಳ ಸಂಗತವಾಗಿದೆ.

## ೨. ಸಮಾನಳಾಗಿ ಆಶ್ರಣೀಯಳು

ಅಸಂಬಾಧಂ (ಮ) ಬಧ್ಯತೋ ಮಾನವಾನಾಂ
ಯಸ್ಯಾ ಉದ್ವತಃ ಪ್ರವತಃ ಸಮಂ ಬಹು !
ನಾನಾವೀರ್ಯಾ ಓಷಧೀರ್ಯಾ ಬಿಭರ್ತಿ
ಪೃಥಿವೀ ನಃ ಪ್ರಥತಾಂ ರಾಧ್ಯತಾಂ ನಃ ॥೨॥

ಅರ್ಥ : ಯಾವಳು ಮಾನವರ (ಮಧ್ಯದಲ್ಲಿ) ಬಂಧನದಲ್ಲಿ ಪೀಡಿಸಲ್ಪಡು ವುದಿಲ್ಲವೋ, ಆದರೆ ತನ್ನ ಗತಿಯಲ್ಲಿ, ಮೇಲೂ, ಮುಂದೂ ಎಲ್ಲರಿಗೂ ಆದಷ್ಟೂ ಸಮಳಾಗಿರುವಳೋ, ಯಾವಳು ವಿವಿಧ ಶಕ್ತಿಗಳನ್ನುಳ್ಳ ಔಷಧಿ ವನಸ್ಪತಿಗಳಿಗೆ ಆಶ್ರಯಳಾದಿದ್ದು ಅದನ್ನು ಭರಿಸುವಳೋ ಆ ಭೂಮಿಯು ನಮಗಾಗಿ ವಿಸ್ತೃತಳೂ, ಸಮೃದ್ಧಳೂ ಆಗಿರಲಿ.

ವಿವರಣೆ : ಭೂಮಿಯ ಕ್ಷಮಾಗುಣವನ್ನೂ ಸರ್ವಪ್ರಾಣಿಗಳಿಗೂ ಅವಳು ಸಮನಾಗಿಯೇ ಆಶ್ರಯಳಾಗಿರುವುದನ್ನೂ, ಉಪಕಾರಕಳಾಗಿರುವು ದನ್ನು ಸ್ಮರಿಸಿ, ಭೂಸಮೃದ್ಧಿಯನ್ನು ಇಲ್ಲಿ ಪ್ರಾರ್ಥಿಸಿದೆ.

## ೩. ನೀರನ್ನನುಗ್ರಹಿಸಿ ಧರಿಸಿರುವವಳು

ಯಸ್ಯಾಂ ಸಮುದ್ರ ಉತ ಸಿಂಧುರಾಪೋ
ಯಸ್ಯಾಮನ್ನಂ ಕೃಷ್ಟಯಃ ಸಂಬಭೂವುಃ ।
ಯಸ್ಯಾಮಿದಂ ಜಿನ್ವತಿ ಪ್ರಾಣದೇಜತ್
ಸಾ ನೋ ಭೂಮಿಃ ಪೂರ್ವಪೇಯೇ ದಧಾತು ॥೩॥

ಅರ್ಥ : ಯಾವಳಲ್ಲಿ ಸಮುದ್ರವೂ ನದಿಗಳೂ ಇವೆಯೋ, ಯಾವಳಲ್ಲಿ ಅನ್ನವೂ ವ್ಯವಸಾಯವೂ (ಉಳುವುದು ಮೊದಲಾದ ವ್ಯಾಪಾರಗಳು) ಮೊದಲಿಗೆ ಏರ್ಪಟ್ಟವೋ, (ಈ ಮೂಲಕ) ಬದುಕಿ, ಉಸಿರಾಡುವ ಪ್ರಾಣಿ ವರ್ಗವೆಲ್ಲ ಯಾವಳಲ್ಲಿ ಎಚ್ಚೆತ್ತಿರುವುದೋ ಆ ಭೂಮಿಯು ಮೊದಲು ನಮಗೆ ಪೇಯವನ್ನು—ನೀರನ್ನು— ಕೊಟ್ಟು ಧರಿಸಲಿ.

ವಿವರಣೆ : ಭೂಮಿಯಿದ್ದರೆ ಸಮುದ್ರ, ನೀರು, ನದಿಯುಂಟು. ಇವಿದ್ದರೆ ವ್ಯವಸಾಯ. ಸಮುದ್ರದ ನೀರು ನೇರವಾಗಿ ವ್ಯವಸಾಯಕ್ಕೆ ಉಪಯೋಗವಿಲ್ಲವಾದರೂ, ಮಳೆಯಾಗಲು ಈ ನೀರೇ ಆಧಾರ. ಇದೇ ಮೋಡದಲ್ಲಿ ಹೀರಲ್ಪಟ್ಟು ಸುರಿಯುವುದಷ್ಟೇ. ಅಂದರೆ ಜೀವನಾಧಾರ ವಾದ ಇದರಿಂದಲೇ ಸಕಲ ಪ್ರಾಣಿಗಳೂ ಪ್ರಾಣಧಾರಣೆ ಸಾಧ್ಯ. ಭೂಮಿ ಮೊದಲು ನೀರನ್ನಿತ್ತು ಅನುಗ್ರಹಿಸಿದರೆ, ಮುಂದೆ ಅನ್ನದ ಮಾತು. ಪೃಥ್ವೀ ತತ್ತ್ವವು ಅಪ್‌ತತ್ತ್ವಧಾರಕವೂ ಆದಿರುವುದರಿಂದಲೇ ಜೀವಿಗಳಿಗೆ ತಾಯಿಯಂತೆ ಸರ್ವಧಾರಕಳಾಗಿರುವುದು.

## ೪. ದಿಕ್ಕುಗಳಿಗೂ ಆಶ್ರಯಳು

ಯಸ್ಯಾಶ್ಚತಸ್ರಃ ಪ್ರದಿಶಃ ಪೃಥಿವ್ಯಾ
ಯಸ್ಯಾಮನ್ನಂ ಕೃಷ್ಟಯಃ ಸಂಬಭೂವುಃ ।
ಯಾ ಬಿಭರ್ತಿ ಬಹುಧಾ ಪ್ರಾಣದೇಜತ್
ಸಾನೋ ಭೂಮಿಃ ಗೋಷ್ವಪ್ಯನ್ನೇ ದಧಾತು ॥೪॥

ಅರ್ಥ : ಯಾವ ಭೂಮಿಗೆ ಈ ನಾಲ್ಕು ದಿಕ್ಕುಗಳೂ ಸೇರಿವೆಯೋ, ಯಾವಳಲ್ಲಿ (ಮೊದಲು) ವ್ಯವಸಾಯ, (ತನ್ಮೂಲಕ) ಅನ್ನಗಳು ಏರ್ಪಟ್ಟವೋ, ಯಾವಳು ಬದುಕಿ ಚಲಿಸುವ ಪ್ರಾಣಿವರ್ಗವೆಲ್ಲವನೂ ಧರಿಸಿರುವಳೋ, ಆ ಭೂಮಿಯು ನಮ್ಮ ಗೋವುಗಳಿಗೂ ವಿವಿಧ ಅನ್ನಗಳನ್ನು ಅನುಗ್ರಹಿಸಲಿ.

ವಿವರಣೆ: ಭೂಮಿಯು ಅಪ್‌ತತ್ತ್ವಕ್ಕೆ ಆಧಾರಳೆಂದು ಹಿಂದೆ ಹೇಳಿದರೆ ಇಲ್ಲಿ ಆಕಾಶತತ್ತ್ವಕ್ಕೂ ಆಧಾರಳಾಗಿ, ದಿಕ್ಕುಗಳನ್ನೂ ಧರಿಸಿರುವಳೆಂದು ಇಲ್ಲಿ ಹೇಳಿದೆ. ನಮ್ಮ ಗೋವುಗಳಿಗೂ ಅನ್ನವನ್ನು ಅವಳು ನಿರಂತರವಾಗಿ ಕೊಡುವಂತಾಗಲೆಂದು ಮಾಡಿರುವ ಪ್ರಾರ್ಥನೆಯಲ್ಲಿ ವೇದದ ಹೃದಯವೇ ಅಡಗಿದೆ.

## ೫ ದೇವತೆಗಳು ಅಸುರರನ್ನು ಗೆದ್ದದ್ದೇ ಇಲ್ಲಿ !

ಯಸ್ಯಾಂ ಪೂರ್ವೇಪೂರ್ವಜನಾಃ ವಿಚಕ್ರಿರೇ
ಯಸ್ಯಾಂ ದೇವಾ ಅಸುರಾನಭ್ಯಜಯರ್ನ ।
ಗವಾಮಶ್ವಾನಾಂ ವಯಸಶ್ಚ ವಿಷ್ಠಾಂ
ಭಗಂ ವರ್ಜಃ ಪೃಥಿವೀ ನೋ ದಧಾತು ॥೫॥

ಅರ್ಥ : ಯಾವಳಲ್ಲಿ ನಮ್ಮ ಪೂರ್ವಿಕರು ಹರಡಿಕೊಂಡರೋ, ಯಾವಳ ಮೇಲೆ ದೇವತೆಗಳು ಯುದ್ಧದಲ್ಲಿ ಅಸುರರನ್ನು ಜಯಿಸಿದರೋ, ಗೋವು-ಗಳಿಗೂ, ಕುದುರೆಗಳಿಗೂ ಯಾವಳು ವಾಸಸ್ಥಾನವೋ ಆ ಭೂಮಿಯು ನಮಗೆ ಐಶ್ವರ್ಯವನ್ನು, ವರ್ಚಸ್ಸನ್ನು (ಕೀರ್ತಿಯನ್ನು) ಅನುಗ್ರಹಿಸಲಿ.

ವಿವರಣೆ : ಭೂಮಿಯಲ್ಲಿ ಹಿಂದೆ ವ್ಯಾಪಿಸಿದ್ದವರೆಲ್ಲ, ಯಾವ ಯಾವ ಸಂತಾನ, ಬುಡಕಟ್ಟುಗಳವರಾಗಿದ್ದರೂ ಅವರೆಲ್ಲ ವಿಶಾಲಾರ್ಥದಲ್ಲಿ ನಮ್ಮ ಪೂರ್ವಿಕರೇ, ಏಕೆಂದರೆ ಈ ಒಂದೇ ಭೂಮಿಯಲ್ಲೇ ಅವರೆಲ್ಲ ಇದ್ದದ್ದು. ಮಾನವರಿಗೆ ಮಾತ್ರ ಪೃಥ್ವಿಯು ಕರ್ಮಭೂಮಿಯಲ್ಲ. ದೇವತೆಗಳಿಗೂ ಅವಳು ಕರ್ಮ ಭೂಮಿಯೇ. ಇಂದು ನಡೆಯುವ, ನೆನ್ನೆ ನಡೆದ, ನಾಳೆ ನಡೆಯುವ ನಿರಂತರ ದೇವಾಸುರ ಯುದ್ಧಕ್ಕೆ ಈ ಭೂಮಿಯೇ ಕ್ಷೇತ್ರ. ಸ್ವರ್ಗಾದಿಲೋಕಗಳು ಕೇವಲ ಅನುಭವ ಲೋಕಗಳು; ಫಲರೂಪವುಳ್ಳವು. ಆ ಫಲಗಳಿಗೆ ಸಾಧನೆ ದೇವತೆಗಳಿಗೂ ಇಲ್ಲೇ ಆಗತಕ್ಕದ್ದು. ಇಲ್ಲಿ ಗೆಲ್ಲದ ದೇವತೆಗಳು ಸ್ವರ್ಗಕ್ಕೇರುವುದೆಂತು? ಆದ್ದರಿಂದ ಸ್ವರ್ಗಸಾಧನೆ ಇಲ್ಲೇ ಎಂದೂ, ದೇವಾಸುರ ಯುದ್ಧಕ್ಕೆ ಸಹ ಭೂಮಿಯೇ ಆಶ್ರಯಳೆಂದೂ ಹೇಳಿದೆ. ಗೋವು ಬ್ರಹ್ಮಶಕ್ತಿಗೂ, ಕುದುರೆಯು ಕ್ಷತ್ರಶಕ್ತಿಗೂ ಸಂಕೇತವಾಗಿದ್ದು ಬ್ರಾಹ್ಮಣ, ಕ್ಷತ್ರಿಯರ ಸಂಪತ್ತಾಗಿವೆ. ಪಕ್ಷಿಗಳು ಮನುಷ್ಯರ ಹಂಗಿಲ್ಲದೆ ಬದುಕುವ ಸ್ವತಂತ್ರ ಜೀವಿಗಳು ಇವೆಲ್ಲಕ್ಕೂ ನಿವಾಸಸ್ಥಾನಳಾದ ಭೂಮಿಯು ಐಶ್ವರ್ಯ ಪ್ರದಳು. ಇದರಿಂದಲೇ ಕೀರ್ತಿಯೂ ಸಹ ಉಂಟಾಗಲು ಶಕ್ಯ. ಭೂಮಿಯು ಜೀವನವನ್ನು ಸಮೃದ್ಧವೂ, ಯಶೋಮಯವೂ ಮಾಡಬಲ್ಲಳು.

## ೬. ಅಗ್ನಿಗೂ ಧಾರಕಳು

ವಿಶ್ವಂಭರಾ ವಸುಧಾನೀ ಪ್ರತಿಷ್ಠಾ
ಹಿರಣ್ಯವಕ್ಷಾ ಜಗತೋ ನಿವೇಶನೀ

ವೈಶ್ವಾನರಂ ಬಿಭ್ರತೀ ಭೂಮಿಃ ಅಗ್ನಿಂ
ಇಂದ್ರಋಷಭಾ ದ್ರವಿಣೇ ನೋ ದಧಾತು॥ ೬॥

ಅರ್ಥ : ಎಲ್ಲವನ್ನು (ಎಲ್ಲರನ್ನೂ) ಹೊಂದಿರುವವಳೂ, (ಕಾಪಾಡುವವಳೂ, ಧರಿಸುವವಳೂ), ಧನಕನಕಾದಿಗಳನ್ನು (ಗರ್ಭದಲ್ಲಿ) ಹೊಂದಿರುವವಳೂ ಭದ್ರವಾಗಿ ನಿಂತಿರುವವಳೂ, ಚಿನ್ನದಂತೆ ಮೋಹಕವಾದ ವಕ್ಷಃಸ್ಥಲವನ್ನುಳ್ಳವಳೂ, ಚಲಿಸುವ (ಜೀವಿಸುವ) ಎಲ್ಲ ಪ್ರಾಣಿಗಳಿಗೂ ವಾಸಸ್ಥಾನವಾಗಿರ್ರುವವಳೂ, ವೈಶ್ವಾನರನನ್ನು (ಅಗ್ನಿಯನ್ನು) ಧರಿಸಿರುವವಳು. ಆದ ಭೂದೇವಿಯು, ಇಂದ್ರನಂಥ ದೇವಶ್ರೇಷ್ಠರನ್ನು ಪುತ್ರರನ್ನಾಗಿ ಪಡೆದಿರುವವಳು (ಇಂದ್ರ ಋಷಭಾ) ಅಥವಾ ಇಂದ್ರಾದಿದೇವತೆಗಳಿಗೂ ಇಷ್ಟಾರ್ಥಸುರಿಸುವವಳೂ, ಆಗಿದ್ದು ನಮಗೆ ಐಶ್ವರ್ಯವನ್ನನು ಗ್ರಹಿಸಲಿ.

ವಿವರಣೆ : ಭೂಮಿಯು ಅಪತತ್ತ್ವಕ್ಕೂ, ಆಕಾಶಕ್ಕೂ ಸಹ ಆಧಾರವಾದಂತೆ ಅಗ್ನಿಗೂ ಆಧಾರಳೆಂಬುದನ್ನು ಇಲ್ಲಿ ಹೇಳಿದೆ ವಿಶ್ವಂಭರಾ. ವಸುಧಾನೀ, ಪ್ರತಿಷ್ಠಾ ಮೊದಲಾದ ಭೂನಾಮಗಳೂ ಇಲ್ಲಿ ವಿಶೇಷಣಗಳಾಗಿ ಬಂದಿವೆ. (ಇಂದ್ರ–ಋಷಭಾ ಎಂಬುವುದಕ್ಕೆ ವ್ಹಿಟ್ನಿ ಮಹಾಶಯನು (Wbose bull is Indra" ಎಂದು ಭಾಷಾಂತರ ಮಾಡಿದ್ದಾನೆ! ಹಾಗೆಂದರೆ ಏನೆಂದು ಅವನಿಗಾದರೂ ತಿಳಿದಿದೆಯೋ ! ದೇವರೇ ಬಲ್ಲ. ಋಷಭ ಶಬ್ದಕ್ಕೆ ಒಂದು ಜಾತಿಯಲ್ಲಿ ಶ್ರೇಷ್ಠವಸ್ತುವೆಂದು ಪ್ರಯೋಗವುಂಟು, ಪುರುಷರ್ಷಭ, ದೇವರ್ಷಭ ಇತ್ಯಾದಿ. ಅಥವಾ ವರ್ಷಕ– ಸುರಿಸುವುದು–ಎಂಬರ್ಥವೂ ಉಂಟು. ಈ ರೀತಿಯಲ್ಲೇ ಮೇಲೆ ಅರ್ಥಮಾಡಿದೆ. ಈ ಇಡೀ ಸೂಕ್ತಕ್ಕೆ ಸಾಯಣ ಭಾಷ್ಯವು ನಷ್ಟವಾದಿರುವುದೂ, ಬೇರಾವುದೂ ದೊರೆಯದಿರುವುದೂ ದುರದೃಷ್ಟಕರ.

## ೭. ದೇವತೆಗಳಿಂದ ರಕ್ಷಿಸಲ್ಪಡುವವಳು

ಯಾಂ ರಕ್ಷನ್ತ್ಯಸ್ವಪ್ನಾ ವಿಶ್ವದಾನೀಂ
ದೇವಾ ಭೂಮಿಂ ಪೃಥಿವೀಂ ಅಪ್ರಮಾದಂ
ಸಾ ನೋ ಮಧು ಪ್ರಿಯಂ ದುಹಾಂ
ಅಥೋ ಉಕ್ಷತು ವರ್ಚಸಾ ॥೨॥

ಅರ್ಥ : ವಿಶ್ವೋಪಕಾರಕಳೂ, ಹಂಚಿಕೊಂಡಿರುವವಳು ಆದ ಯಾವ ಭೂದೇವಿಯನ್ನು ದೇವತೆಗಳೂ ಸಹ ನಿದ್ರೆಯಿಲ್ಲದ (ಅಸ್ವಪ್ನರಾಗಿ) ಎಚ್ಚರಿಕೆಯಿಂದ ರಕ್ಷಿಸುವರೋ ಆ ದೇವಿಯು ನಮಗೆ ಜೇನನ್ನೂ, ಪ್ರಿಯವಾದುದನ್ನೂ ಅನುಗ್ರಹಿಸಲಿ. ವರ್ಚಸನ್ನು ನಮ್ಮ ಮೇಲೆ ಎರಚಲಿ.

ವಿವರಣೆ; ಭೂದೇವಿಯ ಸ್ವರೂಪವೇ ದಾನಶೀಲವಾದದ್ದು. ಅವಳ ಜೀವರಾಶಿಗೆ ಮಾಡಲಾಗದ ಉಪಕಾರವಾವುದೂ ಇಲ್ಲ. ದೇವತೆಗಳ ಕೆಲಸವೂ ಇದೇ. ತಮ್ಮ ಕೆಲಸದಲ್ಲಿ ಇಷ್ಟುನೆರವಾಗುವವಳನ್ನು, ತಮಗಿಂತ ಜೀವರಕ್ಷಣೆಯಲ್ಲಿ ಹೆಚ್ಚು ನಿಷ್ಠಳಾದ ಇವಳನ್ನು, ದೇವತೆಗಳು ಕಣ್ಣುಮುಚ್ಚದೆ ರಕ್ಷಿಸುವುದು ಆಶ್ಚರ್ಯವಲ್ಲ. ಭೂಮಿಯನ್ನು ಹಾಳುಮಾಡಲು ದೀಕ್ಷಿತರಾದ ದುಷ್ಟರ ಪ್ರಯತ್ನಗಳು ಏಕೆ ಫಲಪ್ರದವಾಗಲಿಲ್ಲ ? ಎಂಬ ಪ್ರಶ್ನೆಗೆ ಇಲ್ಲಿ ಉತ್ತರವಿದೆ. ಇಹಪರದಲ್ಲೂ ಸುಖವಾದುವನ್ನು ಜೇನಿನಂಥ ಮಧುರ ಇಷ್ಟಾರ್ಥಗಳನ್ನು ಮಾತ್ರವಲ್ಲದೆ, ಚೇತನರ ವರ್ಚಸ್ಸಿನ ಬೆಳವಣಿಗೆಗೂ ಉಪಯುಕ್ತ ಪೋಷಕಾಂಶಗಳನ್ನು ಅನುಗ್ರಹಿಸುವ ಈ ದೇವಿಯು ಆಸದೃಶಳು.

## ೮ ಭಗವಂತನಿಂದ ಉದ್ಧರಿಸಲ್ಪಟ್ಟವಳು

ಯಾರ್ಣವೇಧಿ ಸಲಿಲಮಗ್ರ ಆಸೀತ್
ಯಾಂ ಯಾಯಾಭಿರನ್ವಚರ್ರ ಮನೀಷಿಣಃ

ಯಸ್ಯಾ ಹೃದಯಂ ಪರಮೇ ವ್ಯೋಮನ್
ಸತ್ಯೇನಾವೃತಂ ಅಮೃತಂ ಪೃಥಿವ್ಯಾಃ
ಸಾ ನೋ ಭೂಮಿಸ್ತ್ವಿಷಿಂ ಬಲಂ
ರಾಷ್ಟ್ರೇ ದಧಾತೂತ್ತಮೇ ॥೮॥

ಅರ್ಥ : ಯಾವಳು (ಅನಾದಿಕಾಲದಲ್ಲಿ, ಅಥವಾ ಅಸುರಾಕ್ರಾಂತವಾದ ಕಾಲದಲ್ಲಿ) ಸಮುದ್ರದ ಜಲದಿಂದ ಕೊಚ್ಚಿ ಜಲಮಯವೇ ಆಗಿದ್ದಳೋ, ಯಾವಳನ್ನು ಬುದ್ಧಿವಂತರು (ದೇವತೆಗಳು, ಋಷಿಗಳು, ನಿತ್ಯಸೂರಿಗಳೂ,) ದೈವೀ ಜ್ಞಾನಬಲದಿಂದ ಶಕ್ತಿಯಿಂದ ಬಹುವಾಗಿ ಹುಡುಕಿದರೋ, ಯಾವಳ ಅಮೃತ ಹೃದಯವು ಪರಮಪದವೆನಿಸಿದ ವೈಕುಂಠದಲ್ಲಿ ಸತ್ಯದಿಂದ ಆವರಿಸಲ್ಪಟ್ಟು, ಕೆಡದಂತೆ ರಕ್ಷಿಸಲ್ಪಟ್ಟಿದೆಯೋ, ಆ ಭೂದೇವಿಯು ನಮಗೆ ಬುದ್ಧಿಬಲವನ್ನು, ತೇಜಸ್ಸನ್ನು, ನಮ್ಮ ರಾಷ್ಟ್ರದಲ್ಲಿ ಅನುಗ್ರಹಿಸಲಿ.

ವಿವರಣೆ : ದೇವತೆಗಳು ಕಣ್ಣೆವೆಯಿಕ್ಕದೆ ಜಾಗರೂಕರಾಗಿ ಭೂಮಿಯನ್ನು ರಕ್ಷಿಸುವರೆಂದು ಹಿಂದೆ ಹೇಳಿತು. ಅದರೇನು ? ಹಿರಣ್ಯಾಕ್ಷನಂಥ ದುರಾಸೆಯ ಅಸುರರು ಇಡೀ ಭೂಮಿಯನ್ನೇ ಅಪಹರಿಸಿ, ಭೂಮಿಯು ನೀರಿನಲ್ಲಿ ಮುಳುಗಿ, ಭೂತತ್ತ್ವವೇ ಕಾಣದಂತೆ ಮಾಡಿದರು ! ಭೂಮಿಯು ಅರ್ಣವವೆನಿಸಿದ ಸಮುದ್ರ ಮೇಲೆ ತೇಲುತ್ತಿದ್ದಾಗ, ಸಾಗರ ಇದನ್ನು ನುಗಬಾರದೆಂಬ ದೈವೀ ನಿಯಮವು ಅನುಲ್ಲಂಘನೀಯವಾಗಿದೆ. ಸಮುದ್ರವು ಭೂದೇವಿಯುಟ್ಟ ಸೀರೆಯೆಂದು (ಸಮುದ್ರವಸನೇ ಎಂಬ ಶ್ರೀನಾಮಗಳಲ್ಲಿ) ಹೇಳುವುದುಂಟು. ಆದರೆ ಈ ನಿಯಮವನ್ನೇ ಅತಿಕ್ರಮಿಸುವ ಅಸುರರಿಗೆ ಏನೆನ್ನಬೇಕು ? ಜಲವು ಭೂತತ್ತ್ವವನ್ನು ನುಂಗಿ, ಭೂಮಿಯೆಲ್ಲ ಜಲಮಯವಾಗುವಂತೆ ಆದ ಕಾಲಗಳು ಹಲವುಂಟು. ಆಗೆಲ್ಲ ತುಂಬ ಆಪತ್ತಿನಲ್ಲಿದ್ದ ಭೂಮಿಯನ್ನು ಪಾರುಮಾಡಿದವನು ದೇವರು. ಇವನೇ ಪ್ರಧಾನ ಮನೀಷೀ. ಸತ್ಯಸಂಕಲ್ಪನೂ, ಸರ್ವಜ್ಞನೂ ಆದವನು. ಇವನ ಅನುಚರರಾದ ದೇವತೆಗಳೂ ಈ ಸಂಕಲ್ಪಕ್ಕೆ ಬದ್ಧರಾಗಿ ಗೌಣಾರ್ಥದಲ್ಲಿ ಮನೀಷಿಗಳಾಗುತ್ತಾರೆ. ಮುಳುಗಿದ್ದ ಭೂಮಿಯನ್ನು ಹುಡುಕಿ ಮೇಲೆತ್ತುವುದು,

ಭೂಮಿಯ ಭೂತತ್ತ್ವ ಸ್ಥಾಪಿಸುವುದು ಸಾಮಾನ್ಯ ಕೆಲಸವಲ್ಲ. ಎಲ್ಲರ ಇರುವಿಕೆಗೆ ಆಧಾರಳಾದವಳಿಗೇ ಆಧಾರವಿಲ್ಲವಾಗುವುದೆಂದರೇನು ? ಭಗವಂತನು ವರಾಹಾವತಾರ ಮಾಡಿದ ಹಿನ್ನೆಲೆ ಇಲ್ಲಿರುವಂತಿದೆ. ಭೂಮಿಯನ್ನು ತಾನೇ ಶೇಷರೂಪದಲ್ಲಿ ತನ್ನ ಶಿರಸ್ಸಿನಲ್ಲಿ ಧರಿಸಿದನೆಂದೂ ಪುರಾಣಗಳು ಹೇಳುತ್ತವೆ. ಇವಳ ಹೃದಯ ಅಮೃತವಾಗಿದ್ದು ವೈಕುಂಠದಲ್ಲಿ ಪ್ರತಿಷ್ಠಿತವಾಗಿರುವ ಮರ್ಮ ಇದೇ. ಇವಳ ಪ್ರೇಮಕ್ಕಾಗಿ ದೇವರು ಏನನ್ನೂ ಇವಳಿಗಾಗಿ ಮಾಡಲು ಸಿದ್ಧ. ಭಗವಂತನಿಗೆ ಇವಳಲ್ಲಿರುವ ಪ್ರೀತಿ ಅಷ್ಟು ಸತ್ಯ; ಅಮರ. ಇವಳ ಹೃದಯವೇ ಅವನಲ್ಲಿದೆ. ಇಂಥ ದೇವಿಯು ನಮಗೆ ರಾಷ್ಟ್ರಸಮೃದ್ಧಿಗೆ ಬೇಕಾದ ಬುದ್ಧಿ, ಬಲ, ತೇಜಸ್ಸು ಕೊಡಲೆಂಬ ಪ್ರಾರ್ಥನೆ ಅಮೋಘ ಶ್ರೀಸೂಕ್ತದಲ್ಲಿ ರಾಷ್ಟ್ರೀಯ ಭಾವನೆಯಿರುವಂತೆ ಇಲ್ಲೂ ಇರುವುದು ವಿವೇಕಿಗಳ ಕಣ್ಣಿಗೆ ಬೀಳಬೇಕು. ಭೂದೇವಿಯ ಪ್ರೇಮವಿಲ್ಲದವನಿಗೆ ರಾಷ್ಟ್ರೀಯ ಪ್ರಜ್ಞೆ ಬಂದುದೆಂದರೆ, ಹಿರಣ್ಯಾಕ್ಷನಿಗೆ ಅದು ಬಂದಂತೆ ! ಇಂಥ ಅಸುರರಿಗೆ ಬರುವ ಭೂಪ್ರೇಮ, ದುರ್ಯೋಧನಾದಿಗಳ ಸ್ವಾರ್ಥ, ಹಿಂಸಾತ್ಮಕವಾಗಿದ್ದು ರಾಷ್ಟ್ರಘಾತಕವಾಗುತ್ತದೆ ಮಾತ್ರ.

## ೯. ನದಿಗಳಿಗೆ ಆಶ್ರಯಳು

ಯಸ್ಯಾಂ ಆಪಃ ಪರಿಚರಾಃ ಸಮಾನೀಃ
ಅಹೋರಾತ್ರೇ ಅಪ್ರಮಾದಂ ಕ್ಷರನ್ತಿ ।
ಸಾ ನೋ ಭೂಮಿಃ ಭೂರಿಧಾರಾ ಪಯೋ
ದುಹಾಮಥೋ ಉಕ್ಷತು ವರ್ಚಸಾ ॥೯॥

ಅರ್ಥ : ಯಾವಳಲ್ಲಿ ಬಗೆಬಗೆಯಿಂದ ಹರಿಯುವ ನೀರುಗಳು (ನದಿಗಳು) ಎಲ್ಲರಿಗೂ ಸಮಾನವಾಗಿರುತ್ತವೆಯೋ, ಮತ್ತು ಹಗಲೂ ರಾತ್ರಿಯೂ ಎಚ್ಚರ

ತಪ್ಪದೆ ಸಂಚರಿಸುತ್ತವೆಯೋ, ಅಂಥ ಬಹುಧಾರಾ ತೀರ್ಥ ಪ್ರವಾಹವುಳ್ಳ ಭೂಮಿಯು ನಮಗೆ ಕಾಮಧೇನುವಿನಂತೆ ಹಾಲ್ಗರೆಯಲಿ ಮತ್ತು ವರ್ಚಸ್ಸನ್ನು ಸುರಿಸಲಿ.

ವಿವರಣೆ : ಭೂಮಿಯ ಗುಣವೇ ಭೂಮಿಯನಾಶ್ರಯಿಸಿದ ಬಗೆ ಬಗೆಯ ನದಿಗಳಿಗೂ ಬಂದಿದೆ ! —ಎಲ್ಲರಿಗೂ ತಾವು ಸಮನಾಗಿರುವುದೇ ಆ ದಿವ್ಯ ಗುಣ. ಹಗಲೂ ರಾತ್ರಿಯೂ ಸಂಚರಿಸುವ ನದಿಗಳು ವಿಶ್ವೋಪ ಕಾರಕಗಳು. ಈ ತೀರ್ಥಗಳು ನಿರಂತರವಾಗಿ ಮಾನವರಿಗೆ ಎಲ್ಲೆಡೆಯೂ ದೊರೆಯುವಂತಾಗಲಿ ಎಂಬ ಪ್ರಾರ್ಥನೆಯಲ್ಲಿ ವಿಶ್ವದೃಷ್ಟಿ ಅಡಗಿದೆ, ನಮ್ಮ ದೇಶದಲ್ಲಿ ಮಾತ್ರವಲ್ಲದೆ ಎಲ್ಲೆಲ್ಲಿ ಹರಿಯುವ ನದಿಗಳೂ ತೀರ್ಥಗಳೇ. ಆ ದೇಶಗಳಲ್ಲಿ ಹಾಗೆ ಕೊಂಡಾಡುವವರು ಇಲ್ಲದೇ ಇರಬಹುದು. ಆದರೆ ನದಿಗಳು ತಮ್ಮ ಗುಣವನ್ನು ಬಿಡುವುದಿಲ್ಲ. ಈ ಸಮಾನತೆಯ ಗುಣ ನದಿಗಳಿಗೆ ಭೂಮಿಯಿಂದ ಬಂದದ್ದಾಹುದರಿಂದ ಈ ಕೀರ್ತಿಯು ಭೂಮಿ ಯದೇ. ನದಿಗಳೇ ಒಣಗುತ್ತಿರುವ, ಕಶ್ಮಲಗಳ ಚರಂಡಿಗಳಂತಾಗುತ್ತಿರುವ ಇಂದು ಈ ಪ್ರಾರ್ಥನೆ ಅಮೋಘವಾಗಿದೆ.

## ೧೦ ತ್ರಿವಿಕ್ರಮಾವತಾರಕ್ಕೂ ಆಧಾರಳು !

ಯಾಮಶ್ವಿನಾ ವಮಿಮಾತಾಂ
ವಿಷ್ಣುರ್ಯಸ್ಯಾಂ ವಿಚಕ್ರಮೇ ।
ಇಂದ್ರೋ ಯಾಂ ಚಕ್ರ ಆತ್ಮನೇ
-ನಮಿತ್ರಾಂ ಶಚೀಪತಿಃ ॥
ಸಾ ನೋ ಭೂಮಿರ್ವಿಸೃಜತಾಂ
ಮಾತಾ ಪುತ್ರಾಯ ಮೇ ಪಯಃ ॥೧೦॥

ಅರ್ಥ : ಯಾವಳನ್ನು ಅಶ್ವಿಗಳು ಅಳೆದರೋ, ಯಾವಳ ಮೇಲೆಯೇ ಭಗವಂತನು ತ್ರಿವಿಕ್ರಮಾವತಾರ ಮಾಡಿ (ಭೂಮಿಯನ್ನಲ್ಲದೆ) ಮೇಲಿನ ಲೋಕಗಳನ್ನು ಅಳೆದನೋ, ಯಾವಳನ್ನು ತನಗಾಗಿ ಶತ್ರುರಹಿತಳನ್ನಾಗಿ ಶಚೀಪತಿಯಾದ ಇಂದ್ರನೂ ಮಾಡಿಕೊಂಡನೋ, ಆ ಭೂಮಿಯು, ತಾಯಿಯು, ಮಗನಾದ ನನಗೆ ಹಾಲನ್ನು, ಜೀವನಾಧಾರವಾದ ನೀರನ್ನು ಅನುಗ್ರಹಿಸಲಿ.

ವಿವರಣೆ : ಭೂಮಿಯು ಅಗ್ನಿ, ವಾಯು. ಆಕಾಶಾದಿ ಇತರ ಭೂತಗಳಿಗೂ ಆಧಾರಳೆಂದರೆ ಆಶ್ಚರ್ಯವಲ್ಲ. ಭಗವಂತನ ತ್ರಿವಿಕ್ರಮಾವತಾರಕ್ಕೂ ಇವಳೇ ರಂಗಭೂಮಿಯಾದಳು. ಭೂಮಿಯೇ ಇರದಿದ್ದರೆ ಈ ಅವತಾರ ಎಲ್ಲಾಗುತ್ತಿತ್ತು ? ಅಶ್ವಿನಿಗಳೂ ಹಗಲೂ ರಾತ್ರಿ ಅಸುರರೊಡನೆ ಕಾದುತ್ತಾ ಸೂರ್ಯೋದಯಕ್ಕೆ ನೆರವಾಗಿ, ವೇಗಶಾಲಿಗಳಾದ ಹೇಸರಗತ್ತೆಗಳ ಮೇಲೆ ಇಲ್ಲಿ ಸುತ್ತಿದ್ದೂ ಸುತ್ತಿದ್ದೇ. ಇಂದ್ರನು ಅಸುರಸಂತಾನವನ್ನೆಲ್ಲ ನಿಗ್ರಹಿಸಿದ್ದೇ ಇಲ್ಲಿ ಎಂದ ಮೇಲೆ ದೇವಾಸುರ ಯುದ್ಧಕ್ಕೂ ಭೂಮಿಯೇ ಆಶ್ರಯ. ಕರ್ಮಭೂಮಿಯಾದ ಈ ಲೋಕ ಪುಣ್ಯಲೋಕವಾದದ್ದು ದೇವರ ಪಾದದ ಸಂಬಂಧದಿಂದ. ಪಾವನವಾದದ್ದು ಅಸುರ ನಿಗ್ರಹದಿಂದ. ಹೀಗೆ ದೇವರಿಗೂ ಆಶ್ರಯಳೆಂದರೆ ಭೂಮಿಯ ಹಿರಿತನ ಎಂಥದು ! ಭೂಮಿಯನ್ನು ಇಲ್ಲಿ ಅಥರ್ವ ಋಷಿಯು ತಾಯಿ ಎಂದು ಕರೆದು, ತನ್ನನ್ನು ಮಗನನ್ನಾಗಿ ಭಾವಿಸಿರುವ ಸಂಬಂಧವೂ ಬೋಧಪ್ರದವಾಗಿದೆ.

## ೧೧ ಗಿರಿ, ವನ, ಪರ್ವತಗಳಿಗೆ ಆಶ್ರಯಳು

ಗಿರಯಸ್ತೇ ಪರ್ವತಾ ಹಿಮವನ್ತೋ
ಽರಣ್ಯಂ ತೇ ಪೃಥಿವಿ ಸ್ಯೋನಮಸ್ತು ।

ಬಭ್ರುಂ ಕೃಷ್ಣಾಂ ರೋಹಿಣೀಂ ವಿಶ್ವರೂಪಾಂ
ಧ್ರುವಾಂ ಭೂಮಿಂ ಪೃಥಿವೀಂ ಇಂದ್ರಗುಪ್ತಾಂ ॥
ಅಜೀತೋಽಹತೋ ಅಕ್ಷತೋಧ್ಯಷ್ಠಾಂ
ಪೃಥಿವೀಮಹಂ ॥೧೦॥

ಅರ್ಥ : ಎಲೈ ಭೂದೇವಿಯೇ ! ನಿನ್ನ ಮೇಲಿರುವ ಹಿಮಾಚ್ಛಾದಿತ ಗಳಾದ ಪರ್ವತಗಳೂ, ಬೆಟ್ಟಗಳೂ, ಕಾಡುಗಳೂ, ಕಾಡುಭೂಮಿಪ ದೇಶ ಗಳೂ ಮಂಗಳಕರಗಳಾದಿರಲಿ. ಕಂದು ಬಣ್ಣವುಳ್ಳದ್ದೂ, ಕಪ್ಪಾದದ್ದೂ ಕೆಂಪಾದದ್ದೂ, ನಾನಾ ಆಕಾರಬಣ್ಣವುಳ್ಳದ್ದೂ, ಶಾಶ್ವತವಾದದ್ದೂ. ಇಂದ್ರ ನಿಂದ ರಕ್ಷಿಸಲ್ಪಡುತ್ತಿರುವುದೂ ಆದ ಈ ಭೂಮಿಯಲ್ಲಿ ( ದುಷ್ಟರಿಂದ ) ಗೆಲ್ಲಲ್ಪಡದೆಯೂ, ಕೊಲ್ಲಲ್ಪಡದೆಯೂ, ವ್ರಣಗಳಿಲ್ಲದೆಯೂ ಇರುವ ನಾನು ಆಶ್ರಯಿಸಿ ನಿಂತಿದ್ದೇನೆ.

ವಿವರಣೆ : ಭೂಮಿಯ ಮೇಲಿರುವ ಪರ್ವತಗಳೂ, ಅರಣ್ಯಗಳೂ ಮಾನವನ ಹಿತಕ್ಕಾಗಿಯೇ ಏರ್ಪಟ್ಟಿದೆಯೆಂಬುನ್ನು, ಇಂದು ಅವನ್ನು ಮಿತಿ ಯಿಲ್ಲದ ದಾಹದಿಂದ ನಾಶಪಡಿಸುತ್ತಿರುವ ದುಷ್ಟಮಾನವರಿಗೆ, ಈಗೀಗ ತಿಳಿ ಯುತ್ತಿದೆ. ಇವು ನಾಶವಾಗದೇ ಉಳಿಯಬೇಕೆಂಬ ಪ್ರಾರ್ಥನೆ ತುಂಬ ಸಂಗತವಾಗಿದೆ. ಒಂದೊಂದುಕಡೆ ಒಂದೊಂದು ಬಣ್ಣವುಳ್ಳ ಭೂಮಿಯ ವೈವಿಧ್ಯ, ವೈಚಿತ್ರ್ಯಗಳೂ ಮೋಹಕವಾಗಿವೆ. ಇದನ್ನೆಲ್ಲ ರಕ್ಷಿಸುವ ಇಂದ್ರನೂ ಇದ್ದಾನೆ. ಅದಕ್ಕೇ ಇಷ್ಟೆಲ್ಲಾ ಹಿಂಸೆಗಳಲ್ಲೂ ಭೂಮಿ ಶಾಶ್ವತವಾಗಿರು ವುದು; ಮಾನವನಿಗೆ ವಾಸಸ್ಥಾನವಾಗಿರುವುದು; ಶತ್ರುಕಾಟವಿಲ್ಲದೆ ಮೃತ್ಯು ಭೀತಿಯಿಲ್ಲದೆ, ರೋಗವಿಲ್ಲದೆ ಮಾನವನು ಇಲ್ಲಿ ಬಾಳುವುದು ಮುಖ್ಯ. ಈ ಬಾಳಿಗೆ ಭೂಮಿಯೇ ಆಧಾರವೆಂದು ಬೇಗ ಇಂದು ತಿಳಿಯುವು ದವಶ್ಯ.

## ೧೨ ನಮ್ಮ ತಾಯಿ

ಯತ್ತೇ ಮಧ್ಯಂ ಪೃಥಿವಿ ಯಚ್ಚ ನಭ್ಯಂ
ಯಾಸ್ತ ಊರ್ಜಸ್ತನ್ವಃ ಸಂಬಭೂವುಃ ।
ತಾಸು ನೋ ಧೇಹ್ಯಭಿ ನಃ ಪವಸ್ವ
ಮಾತಾ ಭೂಮಿಃ ಪುತ್ರೋ ಅಹಂ ಪೃಥಿವ್ಯಾಃ ॥
ಪರ್ಜನ್ಯಃ ಪಿತಾ ಸ ಉ ನಃ ಪಿಪರ್ತು ॥೧೨॥

ಅರ್ಥ: ಎಲೈ ಭೂಮಿಯೇ, ಯಾವುದು ನಿನ್ನ ಮಧ್ಯವೋ, ನಾಭಿಯೋ, ಯಾವ ಐಶ್ವರ್ಯಗಳು ನಿನ್ನ ಶರೀರದಲ್ಲಿ ಉಂಟಾದವೋ, ಅಲ್ಲಿ ನಮ್ಮನ್ನು ಪ್ರತಿಷ್ಠಿಸು, ಅವನ್ನು ನಮಗೆ ಅನುಗ್ರಹಿಸು. ನಮ್ಮನ್ನು ಪವಿತ್ರಗೊಳಿಸು, ಅಮ್ಮಾ ಭೂಮಿ ! ನೀನೇ ನನ್ನ ತಾಯಿ; ನಾನು ಭೂಪುತ್ರ; ಪರ್ಜನ್ಯನೇ ತಂದೆ; ಅವನು ನಮ್ಮನ್ನು ಪಾಲಿಸಲಿ.

ವಿವರಣೆ : ಹೆದರಿದ ಮಗುವು ತಾಯಿಯ ಮಡಿಲನ್ನು ಭದ್ರವಾಗಿ ಆಶ್ರಯಿಸುವಂತೆ, ಇಲ್ಲೂ ಭೂದೇವಿಯ ಮಡಿಲನ್ನು ಋಷಿಯು ಆಶ್ರಯಿಸುತ್ತಿದ್ದಾನೆ. ಇದ್ದಲ್ಲಿಗೇ ನಮಗೆ ತನ್ನೆಲ್ಲ ಐಶ್ವರ್ಯವನ್ನೂ ತಾಯಿ ತಂದುಕೊಡುವಂತೆ, ಭೂಮಿಯೂ ಧನಧಾನ್ಯಾದಿಗಳನ್ನೆಲ್ಲ ಅನುಗ್ರಹಿಸುತ್ತಾಳೆ. ಈ ಭೂಮಿ ತಾಯಿಯೆಂಬುದರಲ್ಲೇನು ಸಂದೇಹ ? ತಂದೆಯಾದ ಪರ್ಜನ್ಯನೂ (ಮಳೆದೇವತೆಯೂ) ಇಲ್ಲಿಯೇ ಮಳೆಯೆಂಬ ಐಶ್ವರ್ಯವನ್ನು ಸುರಿಸುವುದೂ ಅವನು ಪಾಲಕನಾಗುವುದರಿಂದಲೇ. ಇಂಥ ಮಾತಾಪಿತೃಗಳನ್ನು ಹೊಂದಿದ ನಾವು ಧನ್ಯರು ಎಂಬುದು ಇಲ್ಲಿನ ಭಾವ.

## ೧೩ ಯಜ್ಞಭೂಮಿಯೂ ಇವಳೇ

ಯಸ್ಯಾಂ ವೇದಿಂ ಪರಿಗೃಹ್ಣಂತಿ ಭೂಮ್ಯಾಂ
ಯಸ್ಯಾಂ ಯಜ್ಞಂ ತನ್ವತೇ ವಿಶ್ವಕರ್ಮಾಣಃ ।
ಯಸ್ಯಾಂ ಮೀಯನ್ತೇ ಸ್ವರವಃ ಪೃಥಿವ್ಯಾಂ
ಊರ್ಧ್ವಾಃ ಶುಕ್ರಾಂ ಆಹುತ್ಯಾಃ ಪುರಸ್ತಾತ್ ॥
ಸಾ ನೋ ಭೂಮಿಃ ವರ್ಧಯತ್ ವರ್ಧಮಾನಾ ॥೧೩॥

ಅರ್ಥ : ಯಾವಳಲ್ಲಿ ('ಯಜಮಾನರು') ಯಜ್ಞವೇದಿಯನ್ನು ಪರಿಗ್ರಹಿಸುವರೋ (ನಿರ್ಮಿಸುವರೋ), ನಾನಾ ಬಗೆಯ ಯಾಗ ಕರ್ಮ ದೀಕ್ಷಿತರು ಯಾವಳಲ್ಲಿ ಯಜ್ಞಾಚರಣೆ ಮಾಡುವರೋ, ಎಲ್ಲಿ ಆಹುತಿಗಳಿಗೆ ಮೊದಲು, ಬೆಳಗುವ, ನೇರವಾದ ಯೂಪಸ್ತಂಭಗಳನ್ನು ನೆಟ್ಟು ಅಳೆಯುವರೋ, ಆ ಭೂಮಿಯು ತಾನೂ ಬೆಳೆದು ನಮ್ಮನ್ನೂ ಬೆಳೆಸಲಿ.

ವಿವರಣೆ : ಭೂಮಿಯು ಈಗ ಯಜ್ಞಕ್ಕೂ ಆಶ್ರಯಳೆಂದು ವರ್ಣಿಸಲ್ಪಡುತ್ತದೆ. ಯಜ್ಞವೇದಿಕೆಗಳನ್ನು ನಿರ್ಮಿಸುವುದು ಇಲ್ಲೇ. ಯೂಪಸ್ತಂಭಗಳನ್ನು ನೆಡುವುದೂ ಇಲ್ಲೇ ಈ ಯಜ್ಞಗಳಿಂದ ಭೂಮಿಯ ಕೀರ್ತಿಯೂ ಬೆಳೆದು, ಯಜಮಾನರ ಕೀರ್ತಿಯೂ ಬೆಳೆಯುತ್ತದೆ. ಭೂಮಿಯೇ ಇಲ್ಲವಾದರೆ ಯಜ್ಞಗಳೂ ಇಲ್ಲವಾಗುತ್ತಿದ್ದುವು !

## ೧೪ ಶತ್ರುನಾಶಕಳು

ಯೋ ನೋ ದ್ವೇಷತ್ ಪೃಥಿವಿ ಯಃ ಪೃತನ್ಯಾದ್
ಯೋಽಭಿದಾಸಾನ್ಮನಸಾ ಯೋ ವಧೇನ ।
ತಂ ನೋ ಭೂಮೇ ರನ್ಧಯ ಪೂರ್ವ ಕೃತ್ವರಿ ॥೧೪॥

ಅರ್ಥ : ಎಲೈ ಭೂಮಿಯೇ ! ಯಾವನು ನಮ್ಮನ್ನು ದ್ವೇಷಮಾಡುವನೋ, ಯಾವನು ನಮ್ಮೊಡನೆ ಹೋರಾಡಲು ಬರುವನೋ, ಯಾವನು ಮಾನಸಿಕವಾಗಿ ಹಿಂಸಿಸುವನೋ, ಕೊಲ್ಲಲು ಉದ್ಯೋಗಿಸಿ ಮಾರಕಶಸ್ತ್ರ ಹಿಡಿದು ಬರುವನೋ, ಅವನನ್ನು— (ನಾವು ಪ್ರಾರ್ಥಿಸುವ) ಮೊದಲೇ ರಕ್ಷಣೋನ್ಮುಖಳಾದ ನೀನು ನಮ್ಮ ವಶಪಡಿಸು.

ವಿವರಣೆ : ಕೇಳದೆಯೇ ಮಗುವನ್ನು ರಕ್ಷಿಸುವುದೇ ತಾಯಿಯ ಗುಣ. ಜೀವನವನ್ನು ನಾಶಪಡಿಸಿ, ವ್ಯವಸ್ಥೆ, ಶಾಂತಿ, ಪ್ರಗತಿಗಳನ್ನು ನಾಶಗೊಳಿಸಲೆಳಸುವ ಅಸುರೀ ಶಕ್ತಿಗಳು ಎಂದಿನಿಂದ ಇದ್ದೇ ಇವೆ. ಮಾನವನು ಅಂಜುವುದೂ ಇದಕ್ಕೆ. ಭೂಮಿಯು ಈ ದುಷ್ಟ ಶಕ್ತಿಗಳನ್ನು ನಿವಾರಿಸುವ ಸಾಮರ್ಥ್ಯ ಹೊಂದಿದ್ದಾಳೆ. ಭೂಕಂಪವಾದರೆ ಸಾಕು, ಯಾವ ದುಷ್ಟನ ಆಯುಧಾಗಾರವೂ ಉಳಿಯಲಾರದು; ಯಾವ ಮಾರಕಾಸ್ತ್ರವೂ ನಿಲ್ಲಲಾರದು. ಮಾನವನ ಪ್ರಾರ್ಥನೆ ಕೇಳುವ ಮೊದಲೇ ರಕ್ಷಿಸುವ ಇವಳು ತಾಯಿಯಲ್ಲವೇ ?

## ೧೫ ಸೂರ್ಯೋದಯಕ್ಕೂ ಆಶ್ರಯಗಳು

ತ್ವಜ್ಜಾತಾಸ್ತ್ವಯಿ ಚರನ್ತಿ ಮರ್ತ್ಯಾಃ
ತ್ವಂ ಬಿಭರ್ಷಿ ದ್ವಿಪದಃ ತ್ವಂ ಚತುಷ್ಪದಃ ।
ತವೇಮೇ ಪೃಥಿವಿ ಪಂಚ ಮಾನವಾಃ ಯೇಭ್ಯೋ
ಜ್ಯೋತಿರಮೃತಂ ಮರ್ತ್ಯೇಭ್ಯಃ ಉದ್ಯನ್
ಸೂರ್ಯೋ ರಶ್ಮಿಭಿರಾತನೋತಿ ॥೧೫॥

ಅರ್ಥ : ಅಮ್ಮಾ ! ಮರ್ತ್ಯರಾದ ಮಾನವರು ನಿನ್ನಲ್ಲೇ ಜನಿಸಿ, ನಿನ್ನಲ್ಲೇ ಸಂಚರಿಸುವರು. ನೀನು (ಅವರನ್ನಲ್ಲದೆ) ಬೇರೆ ಎರಡು ಕಾಲಿನ, ನಾಲ್ಕು

ಕಾಲಿನ ಪ್ರಾಣಿಗಳನ್ನೂ ಕಾಪಾಡುವೆ. ಭೂಮಿಯನ್ನಾಶ್ರಯಿಸಿಯೇ 'ಪಂಚಜನ'ರಿರುವುದು (ನಾಲ್ಕು ವರ್ಣಗಳೂ + ನಿಷಾದರು.) ಇವರಿಗಾಗಿಯೇ ಉದಿಸುವ ಸೂರ್ಯನೂ ಅಮೃತಮಯವಾದ ಬೆಳಕಿನ ಕಿರಣಗಳನ್ನು ಇತ್ತು ರಕ್ಷಿಸುವನು,

ವಿವರಣೆ : ಭೂಮಿಯು ಎಲ್ಲ ಬಗೆಯ ಪ್ರಾಣಿಗಳಿಗೂ ಜನನ ಕ್ಷೇತ್ರವಲ್ಲದೆ, ಕರ್ಮಕ್ಷೇತ್ರವೂ ಆಗಿದೆ. ಎಲ್ಲ ವರ್ಣಗಳ, ಕರ್ಮಗಳ, ಜನ್ಮಗಳಿಗೂ ಇದು ಆಶ್ರಯ. ಸೂರ್ಯೋದಯ ಆಗಿ ಬೆಳಗುವ ಬೆಳಕಿನ ಕಿರಣಗಳು ಇಲ್ಲಿ ಬರುವುದೂ ಭೂಮಿಕೃಪೆಯಿಂದಲೇ. ಭೂಲೋಕ ಬಿಟ್ಟು ಬೇರೆಲ್ಲೋ ಹುಟ್ಟಿದ್ದರೆ. ಜೀವನವೆಲ್ಲ ಕತ್ತಲೆಯೇ ಆಗುತ್ತಿತ್ತೇನೋ ! ಸೂರ್ಯ ರಶ್ಮಿಗಳು ನಮಗೆ ದೊರಕಿದ್ದೂ ಇವಳ ಕೃಪೆಯಿಂದಲೇ.

## ೧೬ ಮಾನವನಿಗೆ ಮಾತು ಕಲಿಸಿದವಳು

ತಾನಃ ಪ್ರಜಾಃ ಸಂ ದುಹ್ರತಾಂ
ಸಮಗ್ರಾವಾಚೋ ಮಧು ಪೃಥಿವಿಧೇಹಿ ಮಹ್ಯಂ ॥೧೬॥

ಅರ್ಥ : ಎಲೈ ಪೃಥ್ವಿಯೇ ! (ನಿನ್ನಲ್ಲಿ) ಯಾವ ಯಾವ ಪ್ರಜೆಗಳಿರುವರೋ (ಸಂತಾನಗಳುಂಟೋ). ಅವರೆಲ್ಲರೂ ನಮಗೆ ಹಾಲ್ಗರೆದು ಅನುಗ್ರಹ ಮಾಡಲಿ. ಮಾತಿನಲ್ಲಿರುವ ಜೇನನ್ನು ನಮಗೆ ಅನುಗ್ರಹಿಸು.

ವಿವರಣೆ : ಮೇಲ್ನೋಟಕ್ಕೆ ಇದೊಂದು ಒಗಟಿಯಂಥ ಮಂತ್ರವಾಗಿ ಕಾಣುತ್ತದೆ. ಭೂಮಿಯು ನಾನಾ ಬಗೆಯ ಪಶು, ಪಕ್ಷಿ, ಪ್ರಾಣಿ, ಮನುಷ್ಯಾದಿಗಳನ್ನು ತನ್ನ ಸಂತಾನವನ್ನಾಗಿ, ಪ್ರಜೆಯನ್ನಾಗಿ (ಮಕ್ಕಳನ್ನಾಗಿ) ಹೊಂದಿದೆಯಷ್ಟೆ. ಈ ಪೈಕಿ ಮಾನವನೊಡನೆ ಸಹಬಾಳ್ವೆಗಾಗಿಯೇ ಉಳಿದ ಪ್ರಾಣಿಗಳನ್ನೂ, ಸ್ಥಾವರ ಪತಂಗಾದಿಗಳನ್ನೂ ಭಗವಂತನು ನಿರ್ಮಿಸಿ

ದ್ದಾನೆಂಬುದನ್ನು ಪ್ರಕೃತಿವಾತಾವರಣ ಶಾಸ್ತ್ರಜ್ಞರು (Ecologists) ಇಂದಾದರೂ ಕಂಡುಕೊಂಡಿರುವುದು ನಮ್ಮ ಪುಣ್ಯ. ಸೊಳ್ಳೆಯಂಥ, ಇರುವೆಯಂಥ, ಮಣ್ಣಿನ ಹುಳದಂಥ; ಕ್ರಿಮಿಕೀಟಗಳೂ ಪ್ರಕೃತಿಯಲ್ಲಿ ಗೌರವಸ್ಥಾನ ಪಡೆದು ಒಂದಿಲ್ಲೊಂದು ರೀತಿಯಲ್ಲಿ ಮಾನವನಿಗೆ ಉಪಕಾರಕಗಳಾಗಿವೆ. ಅವು "ಕರೆಯುವ" ಹಾಲೆಂದರೆ. ಮಾನವನಿಗೆ ಬಗೆಬಗೆಯಿಂದ ಮಾಡುವ ಉಪಕಾರಗಳು. ಇವು ನಿರಂತರವಾಗಿ ಹೀಗೆ ಮಾಡುತ್ತಿರಬೇಕಾದರೆ ಭೂಮಿಯು ಇವೆಲ್ಲಕ್ಕೂ ಜಾಗಕೊಡಬೇಕೆಂದು ಇಲ್ಲಿ ಪ್ರಾರ್ಥನೆ. ಮಾನವನಿಗೆ ಮಾತು ದೈವೀನಿಯಮದಂತೆ, ಅನುಗ್ರಹದಂತೆ ಬಂದಿದೆ! ಭೂಸಂಬಧದಿಂದಲೇ ಅವನಿಗೆ ಮಾತನಾಡುವ ಶಕ್ತಿ ಬಂದಿರಬೇಕೆಂದೂ, ಪೃಥ್ವಿಯಲ್ಲಿ ಇಷ್ಟೊಂದು ವಿವಿಧ ಜಾತಿಯ ಪಶು, ಪಕ್ಷಿ, ಗಿಡ, ಮರ, ಮೊದಲಾದುವು ಇರುವುದರಿಂದಲೇ ಈ ಒಂದೊಂದಕ್ಕೂ ಉಚಿತವಾದ ಹೆಸರು ಮಾನವನಿಗೆ ಅವಶ್ಯವಾಗಿದ್ದು, ತೋರಿಕೊಂಡಿರುವುದೂ ಭೂಮಿಯ ಕೃಪೆಯಿಂದಲೇ. ಆದುದರಿಂದ ಮಾನವನಿಗೆ ಮಾತು ಕಲಿಸಿದವಳು ಭೂಮಿಯೇ ಎಂದರೆ ಅತ್ಯುಕ್ತಿಯಲ್ಲ. ಸಂಗೀತ ಶಾಸ್ತ್ರದಲ್ಲಿ ಕೆಲವು ರಾಗಗಳು, ಸ್ವರಗಳು, ಪ್ರಾಕೃತಿಕರವದಿಂದ ಪ್ರೇರಿತವಾಗಿವೆಯೆಂದು ಹೇಳುವುದೂ ಸ್ಮರಣೀಯ: ಮಾತಿಗಲ್ಲದೆ, ಸಂಗೀತಕ್ಕೂ ಭೂಮಿಯೇ ಆಧಾರ !

## ೧೭ ಎಲ್ಲರಿಗೂ ತಾಯಿ

ವಿಶ್ವಸ್ವಂ ಮಾತರ ಮೋಷಧೀನಾಂ ಧ್ರುವಾಂ
ಭೂಮಿಂ ಪೃಥಿವೀಂ ಧರ್ಮಣಾ ಧೃತಾಂ ।
ಶಿವಾಂ ಸ್ಯೋನಾಂ ಅನುಚರೇಮ ವಿಶ್ವದಾ ॥೧೭॥

ಅರ್ಥ : ಭೂಮಿಯು ಎಲ್ಲವನ್ನೂ ಹಡೆಯುವ ತಾಯಿ (ವಿಶ್ವವೆಂದರೆ ಎಲ್ಲ ಬಗೆಯ ಜೀವಿಗಳೂ, ನಿರ್ಜೀವ ಪದಾರ್ಥಗಳೂ ಆಗುತ್ತವೆ. ನಿರ್ಜೀವ

ಗಳಲ್ಲಿ ಕಲ್ಲುಬಂಡೆ, ಬೆಟ್ಟ, ಲೋಹಗಳು, ನದಿಗಳು, ಇತ್ಯಾದಿ. ಭೂಮಿಯಲ್ಲಿ ಲಾವಾರಸ ಉಕ್ಕೇರಿದಾಗ ನಿರ್ಮಾಣವಾಗುವುದರಿಂದ ಇವೂ ಭೂಮಿಯ ಮಕ್ಕಳೇ. ವಿಶ್ವಂ ಸೂತೇ = ವಿಶ್ವಸೂಃ) ಔಷಧಿಗಳಿಗೂ (ಗಿಡಮರ ಗಳಿಗೂ) ತಾಯಿ ಅಚಲೆಯಾಗಿರುವಳು. ಧರ್ಮದ ಆಧಾರದ ಮೇಲೆ ಧರಿಸಲ್ಪಟ್ಟಿರುವವಳು; ಮಂಗಳಮಯಳು, ಪ್ರಸನ್ನಳು. ನಮಗೆ ಇವಳು ಸದಾ ಸಂಚಾರಕ್ಕೆ ಅನುಕೂಲಳಾಗಿರಲಿ.

ವಿವರಣೆ : ಭೂಮಿಯಲ್ಲಿರುವ ಎಲ್ಲಬಗೆಯ ಜೀವಂತ, ನಿರ್ಜೀವ ವಸ್ತುಗಳಿಗೂ ಭೂಮಿಯು ಅಕ್ಷರಶಃ ತಾಯಿಯಾಗಿರುವಳೆಂಬುದೊಂದೇ. ಅವಳ ದೊಡ್ಡತನಕ್ಕೆ ಸಾಕ್ಷಿಯಾಗಿರಲು ಸಾಕು. ಅವಳು ನಿಂತಿರುವುದೇ ಧರ್ಮದ ಆಧಾರದ ಮೇಲೆಂಬುದನ್ನು ಮೊದಲನೇಮಂತ್ರದಲ್ಲೇ ಹೇಳಿ ಯಾಗಿದೆ. ಮಾನವನಿಗೆ ಸಕಲ ಕಲ್ಯಾಣಕಾರಕಳಾದ ಮಂಗಳ ಸ್ವರೂಪಿಣಿಯಿ ವಳು. ಅನ್ನ ಕೊಡುವವಳೂ ಇವಳೇ. ರೋಗನಿವಾರಕಳೂ, ಆರೋಗ್ಯ ದಾತಳೂ, ಇವಳೇ. ಭೂಮಿಯು ಮಾನವನಿಗೆ ನಿರಂತರಕಾಲದ ವರೆಗೆ ವಾಸಸ್ಥಾನವಾಗಿ, ಕ್ರೀಡಾಸ್ಥಾನವಾಗಿ, ಕಾರ್ಯಕ್ಷೇತ್ರವಾಗಿರಬೇಕೆಂಬ ಪ್ರಾರ್ಥನೆ, ಇಂದು, ಭೂಮಿಯಲ್ಲಿ ವಿನಾಶಕಾರೀ ವೈಜ್ಞಾನಿಕ ಪ್ರಯೋಗ ಗಳನ್ನು ಭೂಗರ್ಭದಲ್ಲಿ ಆಸುರೀ ಶಕ್ತಿಗಳು ನಡೆಸುತ್ತಿರುವಾಗ ಬಹು ಪ್ರಸಕ್ತ (relevant) ಆಗಿದೆ

## ೧೮ ಭೂಮಿ 'ಮಹೀ' ಏಕೆ ?

ಮಹತ್ ಸಧಸ್ಥಂ ಮಹತೀ ಬಭೂವಿಥ
ಮಹಾನ್ ವೇಗ ಏಜಥುರ್ವೇಪಥುಷ್ಟೇ ।
ಮಹಾಂಸ್ತ್ವೇಂದ್ರೋ ರಕ್ಷತ್ಯಪ್ರಮಾದಂ ॥

ಸಾ ನೋ ಭೂಮೇ ಪ್ರರೋಚಯ ಹಿರಣ್ಯಸ್ಯೇವ
ಸಂದೃಶಿ ಮಾನೋ ದ್ವಿಕ್ಷತ ಕಶ್ಚನ ॥೧೮॥

ಅರ್ಥ : ಎಲೈ ಭೂಮಾತೆಯೇ ! ದೊಡ್ಡವಳಾಗಿರುವ ನೀನು, ದೊಡ್ಡ ವಾಸಸ್ಥಾನವೂ ಆಗಿರುವೆ. ನಿನ್ನ ವೇಗವೂ, ನಡುಕವೂ ( ಕಂಪನವೂ ), ಬೆದರುವಿಕೆಯೂ ಅಷ್ಟೇ ದೊಡ್ಡವಾಗಿದೆ. ಮಹಾಶೂರನಾದ ಇಂದ್ರನು ಎಚ್ಚರತಪ್ಪದೆ ನಿನ್ನನ್ನು ರಕ್ಷಿಸುತ್ತಾನಷ್ಟೆ ! ಚಿನ್ನವು ಪ್ರಕಾಶಿಸುವಂತೆ (ನಮ್ಮ ಜೀವನ ಬಂಗಾರವಾಗಿ, ವರ್ಣಮಯವಾಗುವಂತೆ) ನಮ್ಮನ್ನು ಅನುಗ್ರಹಿಸು. ಯಾರೊಬ್ಬರೂ ನಮ್ಮನ್ನು ದ್ವೇಷಿಸದಂತಾಗಲಿ.

ವಿವರಣೆ : ಭೂಮಿಯನ್ನು ಏಕೆ ಮಹೀ ಎನ್ನುತ್ತಾರೆಂಬುದಕ್ಕೆ ಇಲ್ಲಿ ನಿರ್ವಚನರೂಪ ಉತ್ತರ ಇರುವಂತಿದೆ. ಭೂಮಿಯ ಆಕಾರವೂ ದೊಡ್ಡದು; ಜೀವರಾಶಿಗೆ ಆಶ್ರಯವಾಗಿರುವ ಅವಳ ಸ್ವಭಾವವೂ ದೊಡ್ಡದು. ಕಿಂಚಿತ್ತೂ ಸ್ವಾರ್ಥವಿಲ್ಲದ, ಮಹೋಪಕಾರದ ಸಾಕಾರಮೂರ್ತಿಯಾದ ಇವಳು ಎಲ್ಲ ವಿಧದಿಂದಲೂ ದೊಡ್ಡವಳೇ. ಅವಳ ವೇಗವೂ ಹಾಗೇ ! (ಋಷಿಗಳಿಗೆ ಭೂಮಿಯು ಸೂರ್ಯನ ಸುತ್ತ ಸುತ್ತುವಳೆಂಬುದನ್ನು ಇಂದಿನ (ವಿ)ಜ್ಞಾನಿಗಳು ಹೇಳಿಕೊಡಬೇಕಿಲ್ಲವಷ್ಟೆ ! ಸೂರ್ಯನು ನಿಜವಾಗಿ ಹುಟ್ಟುವುದೂ ಇಲ್ಲ, ಮುಳುಗುವುದೂ ಇಲ್ಲವೆಂಬುದನ್ನು ಛಾಂದೋಗ್ಯ ಉಪನಿಷತ್ತಿನಲ್ಲಿ ಹೇಳಿರುವುದನ್ನೂ (III-II-), ಇದನ್ನೇ ಐತರೇಯ ಬ್ರಾಹ್ಮಣದಲ್ಲೂ ಹೇಳಿರುವುದನ್ನು (XIV–6) ಇಲ್ಲಿ ಸ್ಮರಿಸಬೇಕು. ಛಾಂದೋಗ್ಯದಲ್ಲಿ "ನೈವೋದೇತಾ ನಾಸ್ತಮಿತಾ ಏಕಲ ಏವ ಮಧ್ಯೇ ಸ್ಥಾತಾ" ಎಂದು ಹೇಳಿದರೆ, ಐತರೇಯ ಬ್ರಾಹ್ಮಣದಲ್ಲಿ" ಸ ವಾ ಏಷ ನ ಕದಾಚನ ಅಸ್ತಮೇತಿ, ನೋದೇತಿ" ಎಂದು ಹೇಳಿರುವುದು ಮಾತ್ರವಲ್ಲದೆ, ಪ್ರಾಕೃತರು, ಸೂರ್ಯನು ಉದಿಸಿದನೆಂದೂ ಅಸ್ತಮಿಸಿದನೆಂದೂ ಹೇಳುವುದಕ್ಕೆ, ಒಂದು ಕಡೆ ಬೆಳಕಿದ್ದು ಅಲ್ಲೇ ಮತ್ತೆ ರಾತ್ರಿ ಬರುವುದು ಮಾತ್ರ ಕಾರಣವೆಂದೂ ವಿವರಿಸಿದ್ದಾರೆ. ಆಂದರೆ ಭೂಮಿಯು ಸೂರ್ಯನ ಸುತ್ತ ಸುತ್ತುತ್ತಾ ಹಗಲುರಾತ್ರಿಗಳಾಗುವ ಮರ್ಮವನ್ನು ವೇದವು ಕಂಡುಕೊಂಡೇ ಹೀಗೆ ಹೇಳಿದೆ.

ಪ್ರಕೃತ ಮಂತ್ರವು ದಧ್ಯಙ್ ಅಥರ್ವಣಸೂಕ್ತವೆಂಬುದನ್ನು. ಭಾರತೀಯ ವಿಜ್ಞಾನಕ್ಕೆಲ್ಲ ಒಂದಲ್ಲೊಂದು ಬಗೆಯಲ್ಲಿ ಇವರು ಮೂಲಪುರುಷರೆಂಬುದನ್ನು ನೆನೆಸಿಕೊಂಡಾಗ ಮಂತ್ರಾರ್ಥದಲ್ಲಿ ಸಂಶಯ ಉಳಿಯಲಾರದು!)

ಭೂಮಿಯು ಸಂಚರಿಸದಿದ್ದರೆ 'ವೇಗ' ಕ್ಕೆ ಅರ್ಥವೇ ಆಗಲಾರದು. ಆದರೂ ಭೂಮಿಯು ಸ್ಥಿರಳು. ಸುತ್ತುವುದರಲ್ಲೂ ಬೀಳದ ಜಾಣ್ಮೆಯೇ ಆ ಸ್ಥಿರತೆ. 'ಧ್ರುವಾ' ಎಂದು ಪದೇ ಪದೇ ಹೇಳುವುದು ಈ ಅರ್ಥದಲ್ಲಿಯೇ. ಭೂಮಿಗೆ ನಡುಕವುಂಟಾಗುವುದೂ ಸಾಮಾನ್ಯವಲ್ಲ; ಅದರ ಕೋಲಾಹಲವೂ ದೊಡ್ಡಪ್ರಮಾಣದ್ದೇ. ಬೆದರುವಿಕೆಯೆಂದರೆ ಕಂಪಾನಂತರ ಏರ್ಪಡುವ ಹೊಸ ನದೀ ಪ್ರವಾಹಾದಿಗಳು; ಅಥವಾ ಲಾವಾ ಪ್ರವಾಹ; ಇವೂ ದೊಡ್ಡವೇ. ಇಷ್ಟೆಲ್ಲ ಆಗಾಗ ಆದರೂ, ಭೂಮಿಯು ಬಿರಿದು ಚೂರು ಚೂರಾಗಿ ಹೊಳಾಗಿ ಹೋಗದಿರುವುದಕ್ಕೆ ಭಗವಂತನ ಇಂದ್ರರೂಪೀ ಮುಖದ ರಕ್ಷಣೆಯೇ ಮುಖ್ಯ ಕಾರಣ, ಬಾಳು ಬಂಗಾರವಾಗಬೇಕೆಂದು ಗಾದೆಯಲ್ಲಿ ಹೇಳುತ್ತೇವಷ್ಟೆ! ಲೋಹಗಳಲ್ಲಿ ಚಿನ್ನವು ಶ್ರೇಷ್ಠತೆಯನ್ನು ಪಡೆದಿರುವುದು ಅದರ ಶಾಶ್ವತ ಹೊಳಪಿನಿಂದ. ಹಿತ್ತಾಳೆ, ತಾಮ್ರ ಮೊದಲಾದುವಕ್ಕೆ ಇಲ್ಲದ ಗುಣ ಅದು. ಹಾಗೇ ಜೀವನದಲ್ಲೂ ತೇಜಸ್ಸು ಸ್ವಾಭಾವಿಕವಾಗಿ ಬರಬೇಕಾದರೆ, ಭೂಮಿಯ ಅನುಗ್ರಹ ಬೇಕು; ಭೂದೇವಿಯ ಅನೇಕ ದಿವ್ಯಗುಣಗಳಲ್ಲಿ ಒಂದೆರಡಾದರೂ— ಅರ್ಪಣೆ, ಪರೋಪಕಾರ ಇತ್ಯಾದಿ— ನಮ್ಮಲ್ಲಿ ಮೂಡಿದರೆ ಮಾತ್ರ ಈ ಶಾಶ್ವತ ತೇಜಸ್ಸು ಸಾಧ್ಯ. ಅದಕ್ಕಾಗಿ ಇಲ್ಲಿ ಬಂದಿರುವ ಪ್ರಾರ್ಥನೆ ಮನೋಹರವಾಗಿದೆ.

## ೧೯ ಅಗ್ನಿಧಾರಕಳು

ಅಗ್ನಿರ್ಭೂಮ್ಯಾಂ ಓಷಧೀಷು
ಅಗ್ನಿಂ ಆಪೋ ಬಿಭ್ರತ್ಯಗ್ನಿರಶ್ಮಸು ।

ಅಗ್ನಿರನ್ತಃ ಪುರುಷೇಷು
ಗೋಷ್ವಶ್ವೇಷು ಅಗ್ನಯಃ ॥೧೯॥

ಅರ್ಥ : ಅಗ್ನಿಯು ಭೂಮಿಯಲ್ಲಿದ್ದಾನೆ, (ಭೂಗರ್ಭದಲ್ಲಿ.) (ಹಾಗೇ ಭೂಮಿಯ ಮೇಲೆ ಬೆಳೆಯುವ) ಔಷಧಿಗಳಲ್ಲೂ, (ಭೂಮಿಯಲ್ಲಿ ಹರಿಯುವ) ನೀರಲ್ಲೂ, (ಭೂಮಿಯ ಮೇಲಿರುವ) ಕಲ್ಲುಗಳಲ್ಲೂ ಅಗ್ನಿಯಿದ್ದಾನೆ. (ಹೆಚ್ಚೇನು ?) ಮನುಷ್ಯರಲ್ಲೂ, ಗೋವುಗಳಲ್ಲೂ, ಕುದುರೆಗಳಲ್ಲೂ ಅಗ್ನಿಯಿದ್ದಾನೆ. (ನಾನಾರೂಪದ ನಿಮಿತ್ತ 'ಅಗ್ನಿಗಳು' ಎಂದು ಪ್ರಯೋಗ.)

ವಿವರಣೆ : ಈ ಮತ್ತು ಮುಂದಿನ ಎರಡು ಮಂತ್ರಗಳನ್ನು ಪ್ರಕೃತ ಭೂಸೂಕ್ತಕ್ಕೆ ಸಂದರ್ಭಬಾಹಿರವೆಂದು ವ್ಹಿಟ್ನಿ ಮಹಾಶಯನು ಭಾವಿಸಿ 'ಅಧಿಕಪ್ರಸಂಗ'ವೆಂದು ಟೀಕಿಸಿದ್ದಾನೆ. "This and the two following verses are quite out of conneetion here, and seem to be an intrusion." ಯಾವುದು ಅಧಿಕಪ್ರಸಂಗವೆಂಬುದನ್ನು ವೇದಾಭಿಮಾನಿಗಳಾದ ವಾಚಕರೇ ನಿರ್ಧರಿಸಲಿ! ಭೂಗರ್ಭವು ಇಂದಿಗೂ ಅಗ್ನಿಜ್ವಾಲಾಮಯವಾಗಿರುವುದೆಂದು ಭೂಗರ್ಭಶಾಸ್ತ್ರಜ್ಞರು ಹೇಳುತ್ತಾರೆ. ಭೂಮಿಯು ಹಿಂದೆ ಕೆಂಡದುಂಡೆಯಾಗಿ ಅನಿಲ ರೂಪದಲ್ಲಿದ್ದವಳೇ! ಮೇಲೆ ಆರುತ್ತಾ, ಶಾಂತಳಾಗಿ, ಜೀವರಾಶಿಯ ಉಗಮಕ್ಕೆ ಸಹಾಯಕಳಾದಳಷ್ಟೆ! ಆದ್ದರಿಂದ ಮೇಲೆ ವಾಸಿಸುವ ನಮಗೆ, ಭೂಮಿಯ ಭಯಂಕರ ರುದ್ರ ಸ್ವರೂಪವು ಮರೆತೇ, ಮಾಡಬಾರದ ಕೆಲಸಗಳನ್ನೆಲ್ಲ ಮಾಡುತ್ತಿರುವ ಈ ಸಂದರ್ಭದಲ್ಲಿ ಭೂಸೂಕ್ತವು ಇದನ್ನು ಜ್ಞಾಪಿಸಿಕೊಡುವುದು ಸಂದರ್ಭಕ್ಕೆ ಸರಿಯಾಗಿಯೇ ಇದೆ. ಈ ಹಿಂದಿನ ಮಂತ್ರದಲ್ಲೂ ಭೂಮಿಯ ವೇಗವತ್ತಾದ ಚಲನ, ಕಂಪ, ಮೊದಲಾದುವುಗಳ ಪ್ರಸ್ತಾಪ ಬಂದಿರುವುದೂ ಇದಕ್ಕೆ ಪೂರಕವಾಗಿಯೇ. ಮೊದಲೇ ಹೀಗಿರುವ ಭೂಮಿಯೊಳಗೆ ಪರಮಾಣು ಅಸ್ತ್ರಗಳ ಪ್ರಯೋಗ ಮಿತಿಮೀರಿ ನಡೆದು, ಮತ್ತೆ ಭೂಮಿಯು ಸಿಡಿದೆದ್ದು ಭಯಂಕರ ಅಗ್ನಿ(ರುದ್ರ) ಸ್ವರೂಪಳಾದರೇನು ಗತಿ? ಎಂಬುದನ್ನು ಸೂಚಿಸುವುದು ಹೇಗೆ ಅಪ್ರಸ್ತುತ? ಭೂಗರ್ಭದ ಅಗ್ನಿಯೇ, ಭೂಮಿಯ ಮೈಮೇಲಿನ ಬಂಡೆ

ಗಳಲ್ಲೂ ಇರುವುದರಿಂದ ಸೃಷ್ಟಿಯೆಲ್ಲಕ್ಕೂ ಭೂಮಿಗೂ ಅಗ್ನಿದ್ವಾರಾ ಇಂದಿಗೂ ಸಂಬಂಧವಿದ್ದೇ ಇದೆ, ಎಂದು ಮಂತ್ರವು ನೆನಪಿಸುತ್ತಿದೆ. ಅಥವಾ ಅಗ್ನಿಯೂ ಭೂಪುತ್ರನೇ ! (ಭೂಗರ್ಭದಿಂದ ಹೊರಗೆ ಬಂದನೆಂಬರ್ಥದಲ್ಲಿ) ಉಳಿದೆಲ್ಲವೂ ಈ ಅಗ್ನಿಸಂಬಂಧವನ್ನೇ ಹೊಂದಿದ್ದು, ಭೂಸಂಬಂಧವಿಲ್ಲದ ಯಾವುದೂ ಇಲ್ಲಿಲ್ಲವೆಂದು ಸೂಚಿಸುವುದೂ ಮಂತ್ರದ ಉದ್ದೇಶ್ಯವಿರಬೇಕು. ಮಂತ್ರದ ಋಷಿಗಳು, ಭೂಮಿಗೆ ಮೊದಲು ಅಗ್ನಿಯನ್ನು ತೋರಿಸಿಕೊಟ್ಟ ದಧ್ಯಙ್ ಅಥರ್ವ ಆಂಗಿರಸರು, ಅಗ್ನಿಪುತ್ರರು, ಎಂಬುದನ್ನು ನೆನೆಸಿದಾಗ ವಿಶೇಷವು ಕಾಣದೇ ಹೋಗದು.

## ೨೦ ಭೂಮಿಯ ಮೂಲ ರೂಪಾಗ್ನಿ

ಅಗ್ನಿರ್ದಿವ ಆ ತಪತ್ಯಗ್ನೇಃ
ದೇವಸ್ಯೋರ್ವಂತರಿಕ್ಷಂ ।
ಅಗ್ನಿಂ ಮರ್ತಾಸ ಇಂಧತೇ
ಹವ್ಯವಾಹಂ ಘೃತಪ್ರಿಯಂ ॥ ೨೦ ॥

ಅರ್ಥ : ಅಗ್ನಿಯು ದೇವಲೋಕದಿಂದ ತಪಿಸುತ್ತಾನೆ, ವಿಶಾಲಾಂತರಿಕ್ಷವೆಲ್ಲ ಅಗ್ನಿಯದೇ; ಮರ್ತ್ಯರಾದ ಮಾನವರೂ ದೇವತೆಗಳಿಗೆ ಹವ್ಯವನ್ನೊಯ್ಯಲು ಅಗ್ನಿಯನ್ನು (ವೇದಿಯಲ್ಲಿ) ಮಥಿಸುತ್ತಾರೆ. ಈ ಅಗ್ನಿಯು ಯಾವಾಗಲೂ ತುಪ್ಪವನ್ನು ಪ್ರಿಯವೆಂದೆಣಿಸುತ್ತಾನೆ.

ವಿವರಣೆ : ಭೂಗರ್ಭದ ಅಗ್ನಿಯನ್ನು ಈ ಹಿಂದಿನ ಮಂತ್ರದಲ್ಲಿ ಹೇಳಿತು. ಭೂಮಿಗೆ ಆಚಿನ ಅಗ್ನಿಯೊಂದನ್ನು (ಸೂರ್ಯಾಗ್ನಿಯನ್ನು) ಇಲ್ಲಿ ಹೇಳಿದೆ, ಭೂಗರ್ಭದಲ್ಲಿ ಅಗ್ನಿ ಉದಿಸಲು, ಭೂಮಿಯಾಚೆಯ 'ಅಗ್ನಿ'ಯೇ ಕಾರಣನಿರಬೇಕು. ಏಕೆಂದರೆ ಆ ಸೂರ್ಯಾಗ್ನಿಯೇ, ಈ ಭೂಮಿಯು,

ಭೂಗತ ಅಗ್ನಿಯ ಮೂಲ ರೂಪ ! ಆದ್ದರಿಂದ ಭೂಸೂಕ್ತದಲ್ಲಿ, ಭೂಮಿಯ ಮೂಲಾಧಾರರೂಪಾಗ್ನಿಯ ಸ್ತುತಿ ಅಪ್ರಸ್ತುತವಲ್ಲ. ಪದೇ ಪದೇ ಮಂತ್ರವು ಇದನ್ನು ನೆನಪಿಸುತ್ತಿರುವುದರಲ್ಲಿ ಎಚ್ಚರಿಕೆಯಿದೆ. ಎಲ್ಲ ಅಂತರಿಕ್ಷವೂ ಆ ಸೂರ್ಯಾಗ್ನಿಯ ವ್ಯಾಪ್ತಿಯಲ್ಲೇ ಬರುತ್ತದೆ. ಭೂಮಿಯಲ್ಲಿ ನಡೆಯುವುದೆಲ್ಲ ಆ ಅಗ್ನಿಗೆ ಕಾಣುವುದು ಮಾತ್ರವಲ್ಲ. ಅಗ್ನಿಯೇ ಆಗಿದ್ದ ಭೂಮಿಯು ಶಾಂತಳಾಗಿ ಈಗ ವನಸ್ಪತಿ ಪ್ರಾಣಿಜಾತಕ್ಕೆಲ್ಲ ಆಧಾರಳಾಗಿದ್ದರೂ, ಮಾನವನ ಅತ್ಯಾಚಾರ ಮಿತಿಮೀರಿದರೆ, ಭೂಮಿಯ ಮೂಲ ರೂಪಾಗ್ನಿಯಾದ ಸೂರ್ಯನು 'ಸುಡುವ' ಬಗೆಯನ್ನು ಹೆಚ್ಚು ತೀವ್ರಮಾಡಿ, ಎಲ್ಲವನ್ನೂ ಬೂದಿ ಮಾಡುವ ಸಂಭವವಿದೆ! ಹೀಗಾಗದೆ, ಬಾಳಿಗೆ ಹಿತವಾಗಲೆಂದು ಪ್ರಜ್ಞಾವಂತರಾದ ಮಾನವರು ದೇವತೆಗಳಿಗೆ ಅರ್ಪಣೆಗಳನ್ನು ಆ ಅಗ್ನಿಯ ಸಂಕೇತರೂಪವಾದ ಉಪಾಸ್ಯಾಗ್ನಿಯಲ್ಲಿ, ವೇದಿಯಲ್ಲಿ, ಸಮರ್ಪಿಸುತ್ತಾರೆ. ಈ ಅರ್ಪಣೆಗೂ. ಸೂರ್ಯನ ತಪನಕ್ಕೂ, ಭೂಮಿಯ ಶಾಂತತೆಗೂ ಒಂದು ನಿಕಟ ಸಂಬಂಧವನ್ನು ಋಷಿಗಳು ಕಂಡುಕೊಂಡೇ "ದ್ಯೌಃ ಶಾಂತಿಃ. ದಿಶಃ ಶಾಂತಿಃ, ಅಗ್ನಿಃ ಶಾಂತಿಃ..." ಇತ್ಯಾದಿ, ಎಲ್ಲೆಡೆಗಳಲ್ಲೂ ಶಾಂತಿಯನ್ನು ಬಯಸಿದರು. ಅಶಾಂತಿಯ ಭಯ, ಪ್ರಮಾಣ, ಸಂಭವ, ಪ್ರಕೃತಿಯ ಕೋಪ ಪ್ರಕಾರ, ಅದರ ಅನಿವಾರ್ಯ ಬಲ, ಅದು ಸ್ಫೋಟವಾದಾಗ ಮಾನವನ ನಿಸ್ಸಹಾಯಕತೆ, ಇವೆಲ್ಲವನ್ನೂ (ಇಂದಿನ ವಿಜ್ಞಾನಿಗಳಂತೆ) ಅಂದು ಋಷಿಗಳು ಕಂಡುಕೊಂಡೇ ಸದಾ ಶಾಂತಿಜಪಮಾಡುತ್ತಾ ಶಾಂತಿ ಸ್ಥಾಪನೆಗಾಗಿ ಅರ್ಪಣೆ, ಸಮರಸ ಜೀವನ ಪ್ರಕಾರ, ಸಹಕಾರ ತತ್ತ್ವ, ಸಹ ಬಾಳ್ವೆ ಮೊದಲಾದುವನ್ನು ಕಂಡುಕೊಂಡು, ಅವನ್ನು ಪದೇಶಿಸಿದರು. ಜಗತ್ತು ಹಾಳಾದರೆ ಆಗಲಿ, ನಾವೂ ಹೋಗಿಬಿಡೋಣವೆಂಬ ಹುಂಬತನದ ಮೂರ್ಖ ತನದ ಪರಮಾವಧಿಗೆ ಮುಟ್ಟಿದ ಇಂದಿನ ವಿಶ್ವರಾಜಕಾರಣಿಗಳ ಬಾಯಲ್ಲಿ ಈ ಶಾಂತಿಪಾಠವಾದರೂ ಶಕ್ಯವೇ ?

ಈ ಅಗ್ನಿಯು 'ಘೃತಪ್ರಿಯ'ನೆಂದರೇನು ? 'ಘೃತ' ಶಬ್ದಕ್ಕೆ ಜ್ಞಾನ ವೆಂದೂ, ತುಪ್ಪವೆಂದೂ ಅರ್ಥವುಂಟು. ಪ್ರಜ್ಞಾರೂಪದ ಅಗ್ನಿಗೆ ಜ್ಞಾನವು ಇಷ್ಟವಾದ ಆಹಾರವೆಂದರೆ ಅರ್ಥವು ಸ್ಪಷ್ಟವಲ್ಲವೇ ? (ನಮ್ಮ ತೃತೀಯ

ಸಂಪುಟ ಪೂರ್ತಾ ಓದಿನೋಡಿ.) ಹೀಗೆ ಬಾಹ್ಯಾಕಾಶದ ಅಗ್ನಿಗೂ, ಭೂಗರ್ಭದ ಅಗ್ನಿಗೂ, ಮಾನವ ಪ್ರಜ್ಞೆಯಲ್ಲಿನ ಅಗ್ನಿಗೂ ಸಂಬಂಧವಿದ್ದು, ಭೂಮಿಯು ಭೂಮಿಯೇ ಆಗಿ ಉಳಿಯುವುದನ್ನು, ಅಗ್ನಿಗೆ ನಾವು ಕೊಡುವ ಹವ್ಯ —ಆಹುತಿಗಳೇ ನಿರ್ಧರಿಸುತ್ತವೆಯಾಗಿ, ಈ ಮಂತ್ರದಲ್ಲೂ, ಭೂಸಂಬಂಧದ ವಿಚಿತ್ರ ಪ್ರಜ್ಞೆಯೊಂದು ಆವಿಷ್ಕರಿಸಿದೆ.

## ೨೧ ಬೆಂಕಿಯ ಸೀರೆಯುಟ್ಟವಳು

ಅಗ್ನಿವಾಸಾಃ ಪೃಥಿವ್ಯಸಿತಜ್ಞೂಃ

ತ್ವಿಷೀಮಂತಂ ಸಂಶಿತಂ ಮಾಕೃಣೋತು ॥ ೨೧ ॥

ಅರ್ಥ : ಅಗ್ನಿಯನ್ನೇ ವಸ್ತ್ರವಾಗಿ ಉಟ್ಟವಳೂ, ಕಪ್ಪು ಮೊಣಕಾಲುಳ್ಳವಳೂ ಆದ ಭೂದೇವಿಯು ನನ್ನನ್ನು ಚುರುಕುಬುದ್ಧಿಯವನನ್ನಾಗಿಯೂ, ತೇಜಸ್ವಿಯನ್ನಾಗಿಯೂ ಮಾಡಲಿ.

ವಿವರಣೆ : ಭೂಮಿಯು ಅಗ್ನಿಯಿಂದ ಸುತ್ತುವರೆಯಲ್ಪಟ್ಟಿರುವಳೆಂದರೆ ಸದಾ ಸೂರ್ಯನ ಬಿಸಿಲನ್ನೇ ಉಡಿಗೆಯನ್ನಾಗಿ ಉಟ್ಟಿರುವಳೆಂದು ಹೇಳಿದಂತಾಗುತ್ತದೆ. ಕಪ್ಪುಮೊಣಕಾಲುಳ್ಳವಳೆಂದರೆ ಅರ್ಥ ತಿಳಿಯುವುದು ಕಷ್ಟವೇ ! ವ್ಯಾಖ್ಯಾನವಾಗಲೀ, ಭಾಷಾಂತರವಾಗಲೇ ಇಲ್ಲಿ ಸ್ಪಷ್ಟವಿಲ್ಲದುದು ಶೋಚನೀಯ. ಭೂಮಿಯು ಸಾಧಕನನ್ನು ಬುದ್ಧಿವಂತನನ್ನಾಗಿಯೂ, ಚುರುಕಾದವನನ್ನಾಗಿಯೂ ಮಾಡಲೆಂಬ ಪ್ರಾರ್ಥನೆ ತಾಯಿಗೆ ಮಗನು ಮಾಡಿಕೊಂಡ ಪ್ರಾರ್ಥನೆಯಾಗುವುದು.

## ೨೨ ಮಾನವರಿಗೂ ದೇವರಿಗೂ ಇಲ್ಲೇ ಅನ್ನ!

ಭೂಮ್ಯಾಂ ದೇವೇಭ್ಯೋ ದದತಿ ಯಜ್ಞಂ ಹವ್ಯಮರಂಕೃತಂ।
ಭೂಮ್ಯಾಂ ಮನುಷ್ಯಾ ಜೀವಂತಿ ಸ್ವಧಯಾನ್ನೇನ ಮರ್ತ್ಯಾಃ।
ಸಾ ನೋ ಭೂಮಿಃ ಪ್ರಾಣಮಾಯುರ್ದಧಾತು
ಜರದಷ್ಟಿಂ ಮಾ ಪೃಥಿವೀ ಕೃಣೋತು ॥೨೨॥

ಅರ್ಥ : (ಯಜಮಾನರು) ಭೂಮಿಯಲ್ಲೇ (ಅಮರರಾದ) ದೇವತೆಗಳಿಗೆ ಹವ್ಯವನ್ನು ಚೆನ್ನಾಗಿ ತಯಾರಿಸಿ, ಯಜ್ಞಮುಖೇನ ಕೊಡುವರು. ಮರ್ತ್ಯರಾದ ಮಾನವರಿಗೂ ಇಲ್ಲೇ ಭೂಮಿಯಲ್ಲೇ ಯಜ್ಞಶೇಷವಾದ ಸ್ವಧಾರೂಪ ಅನ್ನವು ದೊರೆತು, ಅದರಿಂದ ಅವರೂ ಜೀವಿಸುವರು. ಇಂಥ ಖ್ಯಾತಿಯ ಭೂಮಿಯು ನನಗೆ ಪ್ರಾಣವನ್ನೂ, ಆಯುಸ್ಸನ್ನೂ ಕೊಟ್ಟು, (ಅನೇಕ ಕಾಲ) ವೃದ್ಧನಾಗಿ ನಾನು ಬದುಕುವಂತೆ ಮಾಡಲಿ.

ವಿವರಣೆ ; ದೇವತೆಗಳೋ ಅಮರರು, ಮಾನವರೋ ಮರ್ತ್ಯರು; ಧರ್ಮವು ಹೀಗೆ ಇಬ್ಬರಿಗೂ ಬೇರೆಯಾಗಿದ್ದರೂ ಸಹ, ಪರಸ್ಪರ ಕೂಡಿ ಬಾಳಬೇಕೆಂಬುದು ದೈವ ನಿಯಮ. ಮನುಷ್ಯರು ದೇವತೆಗಳಿಗೆ ಯಜ್ಞಗಳಲ್ಲಿ ಹವಿಸ್ಸನ್ನು ಕೊಟ್ಟು, ಅದರಿಂದ ತೃಪ್ತರಾದ ದೇವತೆಗಳು ಮಾನವರನ್ನು ಸಮೃದ್ಧಾನ್ನದಿಂದ ಅನುಗ್ರಹಿಸಬೇಕೆಂಬ ಯಜ್ಞಚಕ್ರ ಅನಾದಿಕಾಲದಿಂದ ಏರ್ಪಟ್ಟಿದ್ದು. (ಗೀತೆಯ ಮೂರನೆಯ ಅಧ್ಯಾಯದಲ್ಲಿ ಇದನ್ನು ಮತ್ತೆ ದೇವರೇ ತೋರಿಸಿದ್ದಾನೆ.) ಆದರೆ ಹೀಗೆ ದೇವತೆಗಳಿಗೆ ಯಜ್ಞಾಂಗವಾದ ಹವಿಸ್ಸು ಮನುಷ್ಯರಿಗೆ ಯಜ್ಞಶೇಷವಾದ, ದೇವತೆಗಳ ವರಪ್ರಸಾದವಾದ ಸ್ವಧೆಯೂ ದೊರಕುವುದು ಈ ಭೂಮಿಯಲ್ಲೇ. ಆದ್ದರಿಂದ ಇಬ್ಬರಿಗೂ ಇದು ಸಂಧಿಸುವ ಸ್ಥಳ. ದೇವತೆಗಳಿಗೆ ವಾಸಕ್ಕಾಗಿ ದೇವಲೋಕವೆಂಬ ಒಂದು ಪ್ರತ್ಯೇಕ ಉತ್ತಮಲೋಕವನ್ನೇ ಮಾಡಿದ ದೇವರು, ಅವರಿಗೆ ಆಹಾರ

ಮಾತ್ರ ಇಲ್ಲೇ ಭೂಮಿಯಲ್ಲಿ ದೊರಕುವಂತೆ ಮಾಡಿದ್ದು. ಈ ಭೂಮಿಗೆ ವ ಹತಿ ಏರ್ಪಡಲೆಂದು, ಸಾಧಕನು ಈ ದೈವೀ ನಿಯಮದಂತೆ ಯಜ್ಞ ನಿರತನಾಗಿ ನೂರಾರು ವರ್ಷ ಬಾಳಿದರೆ ಜಗತ್ತಿಗೇ ಕ್ಷೇಮ; ಹಾಗಾಗ ಲೆಂಬ ಪ್ರಾರ್ಥನೆ ಅರ್ಥಯುಕ್ತವಾಗಿದೆ,

## ೨೩ ಗಂಧವತೀ ಭೂಮಿ !

ಯಸ್ತೇ ಗಂಧಃ ಪೃಥಿವಿ ಸಂಬಭೂವ
ಯಂ ಬಿಭ್ರತ್ಯೋಷಧಯೋ ಯಮಾಪಃ ।
ಯಂ ಗಂಧರ್ವಾ ಅಪ್ಸರಸಶ್ಚ ಭೇಜಿರೇ
ತೇನ ಮಾ ಸುರಭಿಂ ಕೃಣು
ಮಾನೋ ದ್ವಿಕ್ಷತ ಕಶ್ಚನ ॥೨೩॥

ಅರ್ಥ : ಎಲೈ ಭೂದೇವಿಯೇ ! ನಿನ್ನಲ್ಲಿ (ಸಹಜವಾಗಿಯೇ) ಯಾವ ಗಂಧವುಂಟಾಯಿತೋ. ಯಾವುದನ್ನು ( ನಿನ್ನಲ್ಲಿ ಬೆಳೆದ ) ಔಷಧಿಗಳೂ, (ನಿನ್ನಲ್ಲೇ ಪ್ರವಹಿಸುವ) ನದಿಗಳೂ ಧರಿಸಿವೆಯೋ, ಯಾವುದನ್ನು (ಇಲ್ಲೇ ಹಾಡುವ) ಗಂಧರ್ವರೂ, (ಕುಣಿಯುವ) ಅಪ್ಸರೆಯರೂ ಆಶ್ರಯಿಸಿರು ವರೋ (ಹಂಚಿಕೊಂಡಿರುವರೋ), ಆ ದಿವ್ಯಗಂಧದಿಂದ ನನ್ನನ್ನು ಗಂಧ ಯುಕ್ತನನ್ನಾಗಿ ಮಾಡು. ಯಾರೂ ನಮ್ಮನ್ನು ದ್ವೇಷಿಸದಿರಲಿ.

ವಿವರಣೆ : ಭೂಮಿಯು ಗಂಧತತ್ತ್ವಾಭಿಮಾನೀದೇವತೆ ಎಂಬುದು ಪ್ರಸಿದ್ಧ. ಈ ಭೂಮಿಯಲ್ಲಿರುವ ಪುಣ್ಯಗಂಧವು ತನ್ನದೇ ಎಂದು ಭಗ ವಂತನೂ ಗೀತೆಯಲ್ಲಿ ಹೇಳಿರುವುದರಿಂದ, (ಪುಣ್ಯೋ ಗಂಧಃ ಪೃಥಿವ್ಯಾಶ್ಚ- VII-9,) ಈ ಭೂಮಿಯ ಪರಿಮಳವು ಬಗವಂತನ ಸಂಬಂಧದಿಂದಲೇ ಉಂಟಾದುದೆಂಬುದರಲ್ಲಿ ಸಂದೇಹವಿಲ್ಲ. ತಾಯಿಯ ಗುಣ ಮಕ್ಕಳಿಗೂ

ಬರುವಂತೆ, ಈ ಪುಣ್ಯಗಂಧವು ಭೂಮಿಯಲ್ಲಿ ಬೆಳೆದ ಗಿಡ, ಮರ, ಸಸ್ಯಗಳಿಗೂ, ಇಲ್ಲೇ ಪ್ರವಹಿಸುವ ನದಿಗಳಿಗೂ ಬಂದಿದೆ. (ಹಳ್ಳಿಗಾಡಿನ ಸರಳ, ನಿಸರ್ಗಸಮೀಪದ ಜೀವನದಲ್ಲಿ ಇದನ್ನೆಲ್ಲ ಚೆನ್ನಾಗಿ ಅನುಭವಿಸಬಹುದಷ್ಟೆ! ಪಟ್ಟಣವಾಸದವರಿಗೆ ಅಸಹ್ಯ, ಕೊಳಕು ಯಂತ್ರೋತ್ಪತ್ತಿ ಪ್ಲಾಸ್ಟಿಕ್ಸಿಲಗಳ ಹೊರತು, ಕಾರಖಾನೆಗಳ ಕೊಳಚೆಗಳ ಹೊರತು ಮೂಸುವುದಕ್ಕೆ ಬೇರೇನಿದೆ!) ಭೂಮಿಯ ಪರಿಮಳವು ಆಕರ್ಷಕವಾದುದರಿಂದಲೇ ಅಪ್ಸರೆಯರೂ ಇಲ್ಲೇ ಬಂದು ಕುಣಿಯುತ್ತಾರೆ. ಗಂಧರ್ವರೂ ಇಲ್ಲೇ ಬಂದು ಹಾಡುತ್ತಾರೆ! ಏಕೆಂದರೆ, ಈ ಪರಿಮಳ ದೇವಲೋಕದಲ್ಲೂ ಇಲ್ಲ! (ಇಂದು ನದಿಗಳನ್ನೆಲ್ಲ ಚರಂಡಿಗಳಾಗಿ ಪರಿವರ್ತಿಸಿದ ಮೇಲೆ, ಗಿಡಮರಗಳನ್ನೆಲ್ಲ ಮಾನವ ತನ್ನ ದಾಹಕ್ಕೆ ಸುಟ್ಟು ಬೂದಿಮಾಡಿದ ಮೇಲೆ, ಭೂಗರ್ಭದಲ್ಲೇ ಪರಮಾಣು ಅಸ್ತ್ರಗಳನ್ನು ಒಗೆದು ಭೇದಿಸಿದಮೇಲೆ, ದಾನವನೇ ಆಗಿರುವ ಮಾನವನಿಗೆ ಈ ಭೂಪರಿಮಳದಿಂದ ಅಗಬೇಕಾದ್ದೇನು! ಕುಣಿಯಲು ಭೂಮಿಯ ಸೂಳೆಯರೂ, ಚಲಚ್ಚಿತ್ರನಟಿಯರೂ, ಹಾಡಲು ಹಣಕೊಟ್ಟುಕೊಂಡ ಹಿನ್ನೆಲೆ ಗಾಯಕರೂ ಇರುವಾಗ ದೇವಗಾನ, ದೇವನೃತ್ಯ, ಯಾರಿಗೆ ಬೇಕು? (ನಮ್ಮ ಇದೇ ಮಾಲೆಯ ಆರನೇ ಸಂಪುಟದ ಪು. ೨೫೭ ನ್ನು ಮೂರನೇ ಸಂಪುಟದ, ಪು ೧೩೯–೪೦ ನ್ನು ನೋಡಿರಿ. ಜೀವನವನ್ನು ನೂತನತೆಯೆಡೆಗೆ ಒಯ್ಯಬಲ್ಲ ನೃತ್ಯಗಾನಗಳೇ ಬೇರೆ! ಅದನ್ನು ಮೃತ್ಯುವಿನೆಡೆಗೆ ಒಯ್ಯಬಲ್ಲ ನೃತ್ಯ-ಗಾನಗಳೇ ಬೇರೆ! ಇದು ಯಾಂತ್ರಿಕ ಮಾನವನಿಗೆ ತಿಳಿಯುವುದು ಯಾವ ಜನ್ಮಕ್ಕೆ? ಎಂದು ಮಂತ್ರವು ನಮ್ಮನ್ನೇ ಕೇಳುವಂತಿದೆ.)

## ೨೪ ತಾವರೆಯು ಪರಿಮಳವೂ ಇವಳದೇ!

ಯಸ್ತೇ ಗಂಧಃ ಪುಷ್ಕರಮಾವಿವೇಶ
ಯಂ ಸಂ ಜಭ್ರುಃ ಸೂರ್ಯಾಯಾ ವಿವಾಹೇ ।

ಅಮರ್ತ್ಯಾಃ ಪೃಥಿವಿ ಗಂಧಮಗ್ರೇ ತೇನ ಮಾ
ಸುರಭಿಂ ಕೃಣು ಮಾನೋ ದ್ವಿಕ್ಷತು ಕಶ್ಚನ ॥೨೪॥

ಅರ್ಥ : ಅಮ್ಮಾ ! ಭೂದೇವಿಯೇ ! ಯಾವ ನಿನ್ನ ಪರಿಮಳವು ಪದ್ಮ ಪುಷ್ಪವನ್ನು ಪ್ರವೇಶಿಸಿತೋ, ಯಾವುದನ್ನು ಅಮರರು ಸೂರ್ಯಾದೇವಿಯ ವಿವಾಹದಲ್ಲಿ ಒಟ್ಟಿಗೆ ತಂದರೋ, ಆ ಪದ್ಮಪರಿಮಳದಿಂದ ನನ್ನನ್ನು ಗಂಧ ವಂತನನ್ನಾಗಿಸು ಯಾರೊಬ್ಬನೂ ನಮ್ಮನ್ನು ದ್ವೇಷಿಸದಂತಾಗಲಿ.

ವಿವರಣೆ : ಪುಷ್ಪಗಳಲ್ಲಿ ಕಮಲವು ಶ್ರೇಷ್ಠ. ಗಂಧಗಳಲ್ಲಿ ಅದರ ಪರಿಮಳವು ಅಗ್ರಪಂಕ್ತಿಯಲ್ಲಿ ನಿಲ್ಲುವಂಥದು. ಲಕ್ಷ್ಮಿದೇವಿಯನ್ನು ಪದ್ಮ ಪ್ರಿಯೇ, ಪದ್ಮಹಸ್ತೇ, ಪದ್ಮಾಲಯೇ, ಪದ್ಮದಳಾಯತಾಕ್ಷಿ, ಪದ್ಮಿನಿ ಎಂದೆಲ್ಲ ಶ್ರುತಿಯು ಕೊಂಡಾಡಿದೆ. ಲಕ್ಷ್ಮಿಗೆ ಇಷ್ಟು ಪ್ರಿಯವಾಗಲು ಈ ಪುಷ್ಪದ ಲ್ಲೇನಿದೆ ? ಎಂದರೆ, ಆದರಲ್ಲಿರುವ ದಿವ್ಯಗಂಧ. ಇದು ಭೂದೇವಿಯ ದಿವ್ಯಶರೀರದಿಂದ ಅದಕ್ಕೆ ಬಂದಿದೆಯಾಗಿ ಭೂದೇವಿಯೂ 'ಪದ್ಮಗಂಧಿ' ಎನಿಸುತ್ತಾಳೆ. ಪದ್ಮದಲ್ಲಿರುವ ಇವಳ ಒಂದಂಶದ ಗಂಧವೇ ಅಷ್ಟು ಆಕ ರ್ಷಕವಾಗಿರಬೇಕಾದರೆ, ಇನ್ನು ಮೂಲದ ಭೂದೇವಿಯ ಮೈ ಪರಿಮಳ ಹೇದಿರಬೇಡ !

ಪದ್ಮದ ಗಂಧವು ಇಂದು ನೆನ್ನೆ ಬಂದುದಲ್ಲ. ವೇದಗಳಲ್ಲಿ ಪ್ರಸಿದ್ಧ ವಾದ ಸೂರ್ಯಾದೇವಿಯ ವಿವಾಹ ಕಾಲದಲ್ಲಿ, ಈ ಪರಿಮಳದ ದೆಸೆಯಿಂದ ಇವುಗಳ ಹಾರವೇ ಶ್ರೇಷ್ಠಕಾಣಿಕೆಯೆಂದು ತಿಳಿದು, ದೇವತೆಗಳೇ ಈ ಮಾಲೆ ಯೊಂದನ್ನು ಅಲ್ಲಿ ಅರ್ಪಿಸಿದರೆಂದೂ, ವೇದದಲ್ಲಿ ಪದೇ ಪದೇ ಹೇಳಿದೆ. (ಸೂರ್ಯನ ಪತ್ನಿಯೇ ಸೂರ್ಯಾದೇವಿಯೆಂದೂ, ಸೂರ್ಯಾಂಶದಿಂದ ಹುಟ್ಟಿದ ಅಶ್ವಿನಿಗಳ ಪತ್ನಿಯಾಗಿಯೂ ಇವಳಿರುವಳೆಂದೂ ಬಗೆಬಗೆಯಿಂದ ವರ್ಣಿತವಾದ ಈ ದೇವಿಯ ಸ್ವರೂಪವನ್ನು ನಮ್ಮ ಮಾಲೆಯ ಏಳನೇ ಸಂಪು ಟದ ಪುಟ ೧೯೯ ರಿಂದ ೧೪೨ರ ವರೆಗೆ ವಿವರವಾಗಿ ಓದಿ ತಿಳಿಯಿರಿ) ಅಶ್ವಿನಿ ಗಳಿಗೆ ಕಮಲ ಪುಷ್ಪಹಾರಗಳು ಪ್ರಿಯವೆಂಬ ಐತಿಹ್ಯಕ್ಕೂ ಇಲ್ಲಿ ಸಂಬಂಧ ವಿರುವಂತಿದೆ. ಒಟ್ಟಿನಲ್ಲಿ ಸೂರ್ಯಾದೇವಿಯು ಗಂಡನಿಗೆ ವಿವಾಹಕಾಲದಲ್ಲಿ

ಆಕರ್ಷಕಳಾಗಿ ಕಾಣುವುದಕ್ಕೆ ಈ ದೇವತೆಗಳರ್ಪಿಸಿದ, ಭೂಗಂಧಯುಕ್ತ, ಕಮಲಪುಷ್ಪ ಹಾರಗಳೇ ಕಾರಣವೆಂದಮೇಲೆ, ಭೂದೇವಿಯು ವಿವಾಹಿತ್ಸಾಗುವ ಕನ್ಯೆಯರಿಗೆ ಆಕರ್ಷಕತೆಯನ್ನನುಗ್ರಹಿಸಬಲ್ಲಳು ಎಂದಂತಾಗುತ್ತದೆ.

## ೨೫ ಪಶು, ಪ್ರಾಣಿ, ಪುರುಷಾದಿಗಳ ಗಂಧವೂ ಸಹ

ಯಸ್ತೇ ಗಂಧಃ ಪುರುಷೇಷು ಸ್ತ್ರೀಷು
ಪುಂಸು ಭಗೋ ರುಚಿಃ ।
ಯೋ ಅಶ್ವೇಷು ವೀರೇಷು ಯೋ
ಮೃಗೇಷೂತ ಹಸ್ತಿಷು ।
ಕನ್ಯಾಯಾಂ ವರ್ಚೋ ಯದ್ಭೂಮೇ
ತೇನಾಸ್ಮಾನ್ ಅಪಿ ಸಂ ಸೃಜ ಮಾ ನೋ
ದ್ವಿಕ್ಷತ ಕಶ್ಚನ ॥ ೨೫ ॥

ಅರ್ಥ : ತಾಯಿ, ಭೂದೇವಿ ! ಯಾವ ನಿನ್ನ (ಮೈ) ಪರಿಮಳವೂ ಮನುಷ್ಯರಲ್ಲಿ, ಗಂಡಸರಲ್ಲಿ, ಹೆಂಗಸರಲ್ಲಿ, ಕುದುರೆಗಳಲ್ಲಿ ವೀರರಲ್ಲಿ, ಕಾಡು ಪ್ರಾಣಿಗಳಲ್ಲಿ, ಆನೆಗಳಲ್ಲಿ ಹುಟ್ಟನಿಂದ ಉಂಟೋ, ಕನ್ಯೆಯರಲ್ಲಿ (ನಿನ್ನ ಸಂಬಂಧದ) ಯಾವ ವರ್ಚಸ್ಸು ಉಂಟೋ, ನಾವೂ ಈ ಪರಿಮಳ, ಕಾಂತಿ, ವರ್ಚಸ್ಸುಗಳಿಂದ ಹುಟ್ಟುವಂತೆ, ಇವನ್ನು ನಮ್ಮಲ್ಲಿ ಸೇರಿಸು. ಯಾರೂ ನಮ್ಮನ್ನು ದ್ವೇಷಿಸದಿರಲಿ.

ವಿವರಣೆ :- ಭೂದೇವಿಯ ಪರಿಮಳವು ದೇವಲೋಕಕ್ಕೆ, ದೇವ ವಿವಾಹದ ವರೆಗೆ ಪಸರಿಸಿದುದನ್ನು ಹಿಂದೆ ಹೇಳಿತಷ್ಟೆ. ಇಲ್ಲಿ ಭೂಮಿಯ

ಸಕಲ ಪ್ರಾಣಿಜಾತದಲ್ಲೂ ಅದು ಹರಡಿರುವುದನ್ನು ಹೇಳಿದೆ. ಭೂಸಂಬಂಧ ವಿಲ್ಲದೆ ಯಾವ ಪ್ರಾಣಿಗೂ ಕಾಂತಿಯಾಗಲೀ, ತೇಜಸ್ಸಾಗಲೀ, ಶರೀರಗಂಧ ವಾಗಲೀ ಲಭ್ಯವಲ್ಲವೆಂದ ಮೇಲೆ ಸಕಲ ಐಹಿಕ ಭಾಗ್ಯಕ್ಕೂ, ಸುಖಕ್ಕೂ ಭೂದೇವಿಯೇ ಕಾರಣವೆಂದಂತಾಯಿತು. ಮೂಕ ಪ್ರಾಣಿಗಳೂ ಸಹ ಇತರ ಪ್ರಾಣಿಗಳಾರೆಂಬುದನ್ನು ತಿಳಿಯಲು ಈ ಗಂಧವೇ ಕಾರಣವಾದ್ದರಿಂದ, ತಿಳುವಳಿಕೆಯಿಲ್ಲದ ಈ ಜಂತುಗಳಿಗೂ ಈ ಒಂದು ಬಗೆಯ ತಿಳುವಳಿಕೆಯು ಭೂದೇವಿಯ ಕರುಣೆಯಿಂದಲೇ ಉಂಟಾಯಿತೆಂದೂ ಹೇಳಿದಂತಾಗಿದೆ.

## ೨೬ ಅಚೇತನಗಳಿಗೂ ಆಶ್ರಯಳು

ಶಿಲಾ ಭೂಮಿರಶ್ಮಾ ಪಾಂಸುಃ

ಸಾ ಭೂಮಿಃ ಸಂಧೃತಾ ಧೃತಾ ।

ತಸ್ಯೈ ಹಿರಣ್ಯ ವಕ್ಷಸೇ

ಪೃಥಿವ್ಯಾ ಅಕರಂ ನಮಃ ॥

ಅರ್ಥ : ಕಲ್ಲು, ಬಂಡೆ, ಧೂಳು, ಹರವಿದ ಭೂಭಾಗಗಳು— ಇವೆಲ್ಲ ವನ್ನು ಚೆನ್ನಾಗಿ ಧರಿಸಿ, ತಾನೂ ಅವುಗಳಿಂದ ಧೃತಳಾಗಿರುತ್ತಾ ಇರುವ (ಧರಿತ್ರೀ ಎನಿಸಿದ) ಎಲೈ ಭೂದೇವಿಯೇ ! ಚಿನ್ನದಬಣ್ಣದ ಎದೆಯುಳ್ಳ ತಾಯಿಯೇ ! ನಿನಗೆ ನಮಸ್ಕಾರ ಮಾಡಿದೆನು.

ವಿವರಣೆ : ಮೇಲೆ ದೇವತೆಗಳಿಗೂ ಶುಭಕೋರುವಳೆಂದೂ, ಪ್ರಾಣಿ ಗಳಾದ ಚೇತನವರ್ಗವೆಲ್ಲಕ್ಕೂ ಐಹಿಕ ಸುಖಕಾರಕಳೆಂದೂ ಹೇಳಿ, ಇಲ್ಲಿ ಅಚಿತ್ತುಗಳಾದ ಕಲ್ಲು, ಮಣ್ಣು, ಕೋಡುಬಂಡೆ, ಧೂಳು ಇವುಗಳಿಗೂ ಉಪಕಾರಕಳೆಂದು ಹೇಳಿದೆ. ನಿರ್ಜೀವವಾದ ಈ ವಸ್ತುಗಳು ಕಾಲಕ್ರಮ ದಲ್ಲಿ ಎಂದೋ ಹಾಳಾಗಿಹೋಗಬಹುದಾಗಿದ್ದರೂ, ಹಾಗಾಗಗೊಡದೆ, ಅವು

ಗಳನ್ನೂ ತನ್ನಲ್ಲಿ ಅವಳು ಧರಿಸಿಯೇ ಧರಿತ್ರಿಯಾಗಿದ್ದಾಳೆ ತಾಯಿಗೆ ಬುದ್ಧಿವಂತ ಮಕ್ಕಳೂ, ದಡ್ಡ ಮಕ್ಕಳೂ ಒಂದೇ ಆಗಿರುವಂತೆ, ಜೀವಂತ ವಸ್ತುಗಳಿಗೂ ನಿರ್ಜೀವವಸ್ತುಗಳಿಗೂ ಸಮವಾಗಿ ಆಶ್ರಯಳಾದ ಭೂದೇವಿಯು ನಮಸ್ಕಾರಾರ್ಹಳೆಂಬುದು ಇಲ್ಲಿನ ಭಾವ.

## ೨೭ ಗಿಡಮರಗಳಿಗೂ ಆಶ್ರಯಳು

ಯಸ್ಯಾಂ ವೃಕ್ಷಾ ವಾನಸ್ಪತ್ಯಾ
ಧ್ರುವಾಸ್ತಿಷ್ಠನ್ತಿ ವಿಶ್ವಹಾ !
ಪೃಥಿವೀಂ ವಿಶ್ವಧಾಯಸಂ
ಧೃತಾಮಚ್ಛಾವದಾಮಸಿ ॥ ೨೭॥

ಅರ್ಥ : ಯಾವಳಲ್ಲಿ ವೃಕ್ಷಗಳೂ, ವನಸ್ಪತಿಗಳೂ ಸದಾ ಭದ್ರವಾಗಿ ನಿಂತಿರುವುವೋ, ಎಲ್ಲಕ್ಕೂ ಆಶ್ರಯಳಾದ, ಎಲ್ಲವನ್ನೂ ಧರಿಸಿ ನಿಂತ, ಭೂಮಿ ತಾಯಿಗೆ ನಾವು (ಈ ಸ್ತುತಿಯನ್ನು) ಸಂಬೋಧಿಸುತ್ತೇವೆ.

ವಿವರಣೆ : ದೇವತೆಗಳಾಯಿತು; ಮನುಷ್ಯರಾಯಿತು; ಮೂಕಜನ್ತುಗಳಾಯಿತು, ಈಗ ಸ್ಥಾವರಗಳಾದ ( ಆದರೆ ಜೀವಿಗಳಾದ ) ಗಿಡಮರಗಳಿಗೂ ಆಶ್ರಯಕೊಟ್ಟಿರುವ ಭೂಮಿಯ ಔದಾರ್ಯವನ್ನು ಸ್ತುತಿಸುತ್ತಾರೆ. ಭೂಮಿಯ ಔದಾರ್ಯ ಅಳತೆಗೆ ಮೀರಿದ್ದೆಂದು ಭಾವ.

## ೨೮ ನಮ್ಮ ನಡಿಗೆ ಸರಿಯಿರಲಿ

ಉದೀರಾಣಾ ಉತಾಸೀನಾಃ
ತಿಷ್ಠನ್ತಃ ಪ್ರಕ್ರಾಮಂತಃ ।

ಪದ್ಭ್ಯಾಂ ದಕ್ಷಿಣಸವ್ಯಾಭ್ಯಾಂ
ಮಾ ವ್ಯಥಿಷ್ಮಹಿ ಭೂಮ್ಯಾಂ ॥೨೮॥

ಅರ್ಥ : ಎದ್ದೇಳುತ್ತಾ, ಕುಳ್ಳಿರುತ್ತಾ, ನಿಲ್ಲುತ್ತಾ, ಧಾವಿಸುತ್ತಾ, ಎಡಬಲ ಗಾಲುಗಳಿಂದ ಭೂಮಿಯಲ್ಲಿ (ಎಡವದೆ) ವ್ಯಥೆಪಡದಿರೋಣ.

ವಿವರಣೆ : ಭೂಮಿಯ ವಿಶಾಲತೆ, ಔದಾರ್ಯ, ರಕ್ಷಕತೆ ಮೊದಲಾದವನ್ನೆಲ್ಲ ಹೇಳಿಯಾಯಿತು. ಆದರೂ ಈ ಭೂಮಿಯ ಮೇಲೆ ಮಾನವನಿಗೆ ಇನ್ನೂ ಸರಿಯಾಗಿ ನಡೆಯಲು, ಕುಳ್ಳಿರಲು ಬಿಡಲಿಲ್ಲ. ನಿಲ್ಲಲು ಸಹ ಬಾರದು! ಭೌತಿಕಗತಿಯೇ ಇದಾದರೆ, ಇದರಲ್ಲಿ ಸಾಮ್ರಾಜ್ಯಕಟ್ಟುವರ ಯುದ್ಧಮಾಡುವರ, ಉಳುವರ ಪಾಡೇನು? ಮನುಷ್ಯನಿಗೆ ದುಃಖ ಬರುವುದು ಅವನಿಗೆ ನಡಗೆ ಬಾರದುದರಿಂದಲೇ. ಭೂಮಿಗೆ ಭಾರವಾದವರು ನಡೆಯುವ ರೀತಿ ಬೇರೆ. ನಮ್ರರ ನಡಗೆ ಬೇರೆ. ನಡಗೆ ಬಂದವನಿಗೆ ದುಃಖವಿಲ್ಲ. ಆದರೆ ಸಾಮಾನ್ಯ ಮಾನವನು ತಾನು ಎಡವಿ ಬಿದ್ದರೆ, ಅದು ಭೂಮಿಯ ತಪ್ಪೆಂದೇ ವಾದಿಸುವುದು ಅವನ ಮೂರ್ಖತನವಲ್ಲದೆ ಮತ್ತೇನ! ನಮ್ಮ ನಡಗೆ ಎಚ್ಚರದಿಂದ ಇದ್ದರೆ ನಮಗೂ ಕ್ಷೇಮ; ಭೂಮಿಗೂ ಸುಖ ಎಂಬ ಧ್ವನಿ ಇಲ್ಲಿರುವಂತಿದೆ.

## ೨೯ ಗುಣ ನಿಧಿ ಭೂಮಿ

ವಿಮೃಗ್ವರೀಂ ಪೃಥಿವೀಮಾವದಾಮಿ
ಕ್ಷಮಾಂ ಭೂಮಿಂ ಬ್ರಹ್ಮಣಾ ವಾವೃಧಾನಾಂ ।
ಊರ್ಜಂ ಪುಷ್ಟಂ ಬಿಭ್ರತೀ ಮನ್ನ ಭಾಗಂ
ಘೃತಂ ತ್ವಾಭಿ ನಿಷೀದೇಮ ಭೂಮೇ ॥೨೯॥

ಅರ್ಥ : ಶುದ್ಧಿಕಾರಕಳೂ, ಕ್ಷಮಾಗುಣಯುಕ್ತಳೂ, ವೈದಿಕ ಸ್ತೋತ್ರ

ಗಳಿರದ ಬೆಳೆಯುವವಳೂ ಆದ ಭೂದೇವಿಯೇ, ನಿನ್ನನ್ನು ಕುರಿತು ಹೇಳು ತ್ತೇನೆ : (ನಮಗೆ) ಐಶ್ವರ್ಯವನ್ನೂ, ಪುಷ್ಟಿಕರ ಆಹಾರವನ್ನೂ, (ಭೋಗ ಕರವಾದ) ತುಪ್ಪ ಮೊದಲಾದುವನ್ನೂ ಹೊತ್ತು ತರುವ ನಿನ್ನಲ್ಲಿ ಕೊಡು ತ್ತೇವೆ, ತಾಯೀ !

ವಿವರಣೆ : ಭೂಮಿಯು ಶುದ್ಧಿಕಾರಕಳೆಂಬುದನ್ನು ಆರೋಗ್ಯ ಶಾಸ್ತ್ರಜ್ಞರು ಬಲ್ಲರು. ಕೊಳಕಾದ ಮೈಗೆ ಮೃತ್ತಿಕಾಸ್ನಾನವು ಎಷ್ಟೊಂದು ಆರೋಗ್ಯಕರವೆಂಬುದು ಅನುಭವದಲ್ಲೇ ಇದೆ. ಪಾತ್ರೆ ಪದಾರ್ಥಗಳ ಶುದ್ಧಿಗೂ ಮಣ್ಣೇ ಬೇಕು, ಕ್ಷಮಾ ಎಂಬುದಂತೂ ಭೂಮಿಯ ಹೆಸರೇ ಆಗಿ ಅನ್ವರ್ಥವಾಗಿದೆ. ವೇದ ಮಂತ್ರಗಳ ಪಠಜ್ಞಾನದಿಂದ ಅವಳನ್ನು ಸ್ತುತಿಸಿ, 'ಭೂಭಾರ'ವಾಗದಂತೆ ನಡೆದುಕೊಂಡರೆ, ಭೂಮಿಗೆ ಕ್ಷಯವೂ ಆಗದೆ, ವೃದ್ಧಿಯೇ ಆಗುತ್ತದೆ. ನಮಗೆ ಅನ್ನ, ಆಹಾರ, ನೀರು, ಧಾರಕ, ಪೋಷಕ, ಭೋಗ್ಯ ವಸ್ತುಗಳೆಲ್ಲ ಭೂಮಿಯ ಕೊಡುಗೆಯೇ ಆಗಿವೆ. ಇಂಥ ಭೂಮಿಯಲ್ಲಿ ಕೂಡುವುದೇ ಭಾಗ್ಯ ! ಸುಖದ ಮಡಿಲಾದ ಭೂಮಿ ನಮಗೆ ತಾಯಿಮಡಿಲಿನಂತೆಯೇ ಇದ್ದು, ಮಕ್ಕಳು ಆಡಿ ಸೋತಾಗ ಈ ಮಡಿಲಲ್ಲಿ ಕೂಡುವ ಸೌಭಾಗ್ಯವನ್ನು ಮಂತ್ರ ನೆನೆಸುತ್ತದೆ. (ಕುರ್ಚಿಯಲ್ಲಿ, ಮಂಚ, ಬೆಂಚುಗಳಲ್ಲಿ ಕೂಡುವುದಕ್ಕಿಂತ, ನೆಲದಮೇಲೆಯೇ ಕೂಡುವ ಸುಖವನ್ನು ಜಪಸೌಖ್ಯ ಬಲ್ಲವರೇ ಬಲ್ಲರಷ್ಟೇ!)

## ೩೦ ನೀರಿನ ಶುದ್ಧಿಗೂ ಇವಳೇ ಕಾರಣ

ಶುದ್ಧಾ ನ ಆಪಸ್ತನ್ವೇ ಕ್ಷರನ್ತು
ಯೋ ನ ಸೇದುರಪ್ರಿಯೇ ತಂ ನಿದಧ್ಮಃ ।
ಪವಿತ್ರೇಣ ಪೃಥಿವಿ ಮೋತ್ ಪುನಾಮಿ ॥೩೦॥

ಅರ್ಥ : ಶುದ್ಧವಾದ ನೀರುಗಳು ನಮ್ಮ ಶರೀರವನ್ನು ಶುದ್ಧೀಕರಿಸುತ್ತಾ ಹರಿಯಲಿ. ನಮ್ಮಲ್ಲಿ (ಸಿಂಬಳದಂಥ) ಅಶುದ್ಧದ್ರವ್ಯಗಳೇನುಂಟೋ ಅವನ್ನು ನಮಗೆ ಅಪ್ರಿಯನಾದವನಲ್ಲಿ ಇಡೋಣ. ಎಲೈ ಭೂದೇವಿಯೇ, ಪವಿತ್ರದಿಂದ ನನ್ನನ್ನು ಪವಿತ್ರಗೊಳಿಸಿಕೊಳ್ಳುತ್ತೇನೆ.

ವಿವರಣೆ : ರಾಸಾಯನಿಕ ದ್ರವ್ಯಗಳನ್ನು ಹಾಕದ ಹೊರತು ನೀರು ಶುದ್ಧವಲ್ಲವೆಂಬ ಭ್ರಮೆಯ 'ನಾಗರಿಕ'ರಿಗೆ ಈ ಮಂತ್ರವು ಪಿಶಾಚಿ ಬಿಡಿಸುವಂತಿದೆ ! ಕೆರೆ, ಕೊಳ, ನದಿ, ಭಾವಿಗಳ ನೀರು ಸದಾ ಶುದ್ಧವೆಂಬ ಭಾವನೆ ಒಂದು ಕಾಲದಲ್ಲಿ ಇದ್ದದ್ದುಂಟು. ಸ್ವಾಭಾವಿಕ ಭೂಸ್ಪರ್ಶವಿದ್ದದ್ದು ಶುದ್ಧ ಎಂಬುದು ಆ ನಂಬಿಕೆ ಈಜುಕೊಳದಲ್ಲಿ ಕೃತಕವಾಗಿ ತಂದ ನೀರು ಕೆಡುವುದುಂಟು. ಸ್ವಾಭಾವಿಕ ಸೆಲೆಯುಳ್ಳ ಕೆರೆ, ಭಾವಿಯ ನೀರುಗಳೂ, ಸ್ವಾಭಾವಿಕ ಪಾತ್ರವುಳ್ಳ ನದೀನೀರೂ ಕೆಡಲಾರವೆಂದು ಆಗಿನ ನಂಬಿಕೆ. ಪ್ರಕೃತಿಯನ್ನೇ ಅಶುದ್ಧ ಮಾಡಹೊರಟಿರುವ ಮಾನವನಿಗೆ ಇಂದು ಪಂಚಭೂತಗಳೂ ಶುದ್ಧವಲ್ಲವಾಗಿವೆ ! ನೀರು, ನೆಲ, ಗಾಳಿ, ಅಗ್ನಿ, ಆಕಾಶಗಳಿಗೂ ಮಾನವ ಹುಚ್ಚುಹಿಡಿಸುತ್ತಿರುವ ಈ ಎಲದಲ್ಲಿ. ಮಾನವಕೋಟಿಗೇ ಸಾಮೂಹಿಕ ಹುಚ್ಚುಹಿಡಿಯಲು ಬಹುಕಾಲ ಬೇಕಿಲ್ಲ ! ಎಲ್ಲೆಲ್ಲೂ ವಿಷಾನಿಲ, ವಿಷಯುಕ್ತ ರಾಸಾಯನಿಕಗಳಿಂದ ವಿಶ್ವವೇ ವಿಷಮಯವಾಗಿರುವಾಗ, ಶುದ್ಧಿಹವೆ, ಭೂಮಿ, ನೀರುಗಳನ್ನು ಕಾಣುವುದೆಲ್ಲಿ ? ಆದ್ದರಿಂದ ನೀರು ಶುದ್ಧವಾಗಿರಬೇಕೆಂಬ ಪ್ರಾರ್ಥನೆಯೂ, ಇದರ ಹೊಣೆ ಭೂಮಿಯದೆಂಬ ಸೂಚನೆಯೂ (ಈ ಪ್ರಾರ್ಥನೆ ಭೂಸೂಕ್ತಮಧ್ಯೆ ಬಂದಿರುವುದರಿಂದ), ಇಂದು ತುಂಬಾ ಸಕಾಲಿಕವಾಗಿದೆ. ಹಾಗಾದರೆ ಮಾನವನ ಕಶ್ಮಲ, ಕೊಳಕು, ಶರೀರದ ಮಲ, ಎಲ್ಲಿ ಹೋಗಬೇಕೆಂದರೆ, ಮಾನವಕೋಟಿಗೆ ಶತ್ರುಗಳಾಗಿ, ಅಪ್ರಿಯರಾಗಿ, ಅದರ ಭವಿತವ್ಯಕ್ಕೆ ಕುಠಾರಪ್ರಾಯರಾದ ರಾಕ್ಷಸೀ ಸಂತಾನದ ಮೇಲೆ ಎಂದು ಮಂತ್ರದಲ್ಲಿ ಹೇಳಿರುವುದು. ಋಷಿಗಳ ಅಕ್ಕರೆಯನ್ನು, ಶುದ್ಧನೀರಿನ ಬಗೆಗಿನ ಕಾಳಜಿಯನ್ನು ತೋರಿಸುತ್ತದೆ. ಮನುಷ್ಯನಿಗೆ ಬೇಡದ ದ್ರವ್ಯಗಳನ್ನೂ ಭೂಮಿ ನುಂಗಿ, ಅವನಿಗೆ ಬೇಕಾದ್ದನ್ನು ನೀಡುವ ಕಾಮಧೇನುವಾದರೂ,

ಈ ಬೇಡದ ದ್ರವ್ಯಗಳು ವಿಷಯುಕ್ತವಾದರೆ, ಅದು ನಮ್ಮ ಶತ್ರುವಿಗಿರಲಿ, ಎಂದು ಭಾವ,

## ೩೧ ದಿಕ್ಕುಗಳಿಗೂ ಆಶ್ರಯಳು

ಯಾಸ್ತೇಪ್ರಾಚೀಃ ಪ್ರದಿಶೋ ಯಾ ಉದೀಚೀಃ
ಯಾಸ್ತೇ ಭೂಮೇ ಅಧರಾತ್ ಯಾಶ್ಚ ಪಶ್ಚಾತ್।
ಸ್ಯೋನಾಸ್ತಾ ಮಹ್ಯಂ ಚರತೇ ಭವನ್ತು
ಮಾ ನಿ ಪಪ್ತಂ ಭುವನೇ ಶಿಶ್ರಿಯಾಣಃ ॥೩೧॥

ಅರ್ಥ : ಎಲೈ ಭೂಮಿಯೇ. ಯಾವ ನಿನ್ನಲ್ಲಿ ಪೂರ್ವ, ಪಶ್ಚಿಮ. ಉತ್ತರ ಕೆಳಗೆ (ಮೊದಲಾದ) ದಿಕ್ಕುಗಳುಂಟೋ, ಅವು ಇಲ್ಲಿ ಸಂಚರಿಸುವ ನನಗೆ ಮಂಗಳಕರವಾಗಿರಲಿ. ಭೂಮಿಯನ್ನಾಶ್ರಯಿಸಿದ ನಾನು ಕೆಳಗೆ ಬೀಳದಂತಾಗಲಿ.

ವಿವರಣೆ : ಭೂಮಿಯನ್ನಾಶ್ರಯಿಸಿದ ಮಾನವನು ಕೆಳಗೆ ಬೀಳದಿರಲು ಭೂಮಿಯ ಆಕರ್ಷಣೆಯೇ ಕಾರಣವೆಂದು ಇಂದಿನ ವೈಜ್ಞಾನಿಕ ಯುಗದಲ್ಲಿ ಬಲ್ಲೆವು. ದಿಕ್ಕುಗಳಂ ಭೂಮಿಯನ್ನಾಶ್ರಯಿಸಿ ಪೂರ್ವ, ಪಶ್ಚಿಮಾದಿ ವ್ಯವಹಾರವಿರುವಾಗ, ಮಾನವನಿಗೆ ಈ ದಿಕ್ಕುಗಳೆಲ್ಲ ಮಂಗಳಕರವಾಗಬೇಕಾದರೆ, ಈ ಯಾವುದರಲ್ಲೂ ಅವನಿಗೆ ಪತನವಾಗಬಾರದುಬುದು ಸಹಜ ಭಾವನೆಯಾಗಿದೆ, ಕೆಳಗೆ ಬಿದ್ದರೋ?— ಎಂಬ ಭಯ ಅನಾದಿ. ಭೂಮಿಯು ಈ ಭಯನಿವಾರಕಳೆಂದು ಮಂತ್ರದಲ್ಲಿ ಸೂಚಿಸಿದೆ.

## ೩೨ ಸರ್ವರಕ್ಷಕಳು

ಮಾನಃ ಪಶ್ಚಾತ್ ಮಾ ಪುರಸ್ತಾತ್

ನುದಿಷ್ಠಾ ಮೋತ್ತರಾದಧರಾದುತ ।

ಸ್ವಸ್ತಿ ಭೂಮೇ ನೋ ಭವ ಮಾ ವಿರ್ದ

ಪರಿಪಂಥಿನೋ ವರೀಯೋ ಯಾವಯಾ ವಧಂ ॥೩೨॥

ಅರ್ಥ : ಎಲೈ ಭೂಮಿಯೇ, ನಮ್ಮನ್ನು, ಹಿಂದೆ, ಮುಂದೆ, ಮೇಲೆ, ಅಥವಾ ಕೆಳಗೆ ತಳ್ಳಬೇಡ. ನಮಗೆ ಮಂಗಳಕರಳಾಗು. ದಾರಿಹೋಕ ದರೋಡೆಗಾರರು ನಮ್ಮನ್ನು ತಿಳಿಯದಿರಲಿ. ಭಯಂಕರ ಆಯುಧಗಳಿಂದ ದೂರವಾಗಿರೋಣ.

ವಿವರಣೆ : ದಿಕ್ಕುಗಳು ಶುಭವಾಗಿರಲು, ಅಲ್ಲಿ ದರೋಡೆಗಾರರಿಲ್ಲ ದಂತಾಗಬೇಕು. ಶಸ್ತ್ರಭೀತಿಯಿರಬಾರದು. ಈ ಎಲ್ಲ ರಕ್ಷಣೆಗಳನ್ನು ಭೂಮಿಯೇ ಮಾಡಲೆಂದು ಪ್ರಾರ್ಥನೆ.

## ೩೩ ಸದಾ ಕಾಣುತ್ತಿರು ತಾಯಿ

ಯಾವತ್ ತೇsಭಿ ವಿಪಶ್ಯಾಮಿ

ಭೂಮೇ ಸೂರ್ಯೇಣ ಮೇದಿನಾ ।

ತಾವನ್ಮೇ ಚಕ್ಷುರ್ಮಾ ಮೇಷ್ಟೋತ್ತರಾಂ

ಉತ್ತರಾಂ ಸಮಾಮ್ ॥೩೩॥

ಅರ್ಥ : (ಎಲೈ ಭೂಮಿಯೇ) ಎಲ್ಲಿನ ತನಕ, ಸೂರ್ಯನನ್ನು ದಿಗ್ದರ್ಶಕ

ನನ್ನಾಗಿ ಹೊಂದಿ, ನಿನ್ನ ಎಷ್ಟೊಂದು ಪ್ರದೇಶವನ್ನು (ಕಣ್ಣಿನಿಂದ) ಸುತ್ತ ನೋಡುತ್ತೇನೆಯೋ, ಆ ಅಷ್ಟೂ ಪ್ರದೇಶಗಳು ವರ್ಷೇ ವರ್ಷೆ, ತಪ್ಪದೇ ನನ್ನ ಕಣ್ಣಿಗೆ ಬೀಳುತ್ತಿರಲಿ.

ವಿವರಣೆ : ಭೂಮಿಯೂ, ಭೂಮಿಯ ಎಲ್ಲ ವಸ್ತುಗಳೂ ಕಾಣಲು ಸೂರ್ಯನ ಬೆಳಕು ಬೇಕು. ಸೂರ್ಯನಿದ್ದೂ ಕಣ್ಣಿಲ್ಲವಾದರೆ ಭೂಮಿಯನ್ನು ಕಾಣಲಾರೆವು. ವಯಸ್ಸಾಗುತ್ತಾ ಕಣ್ಣು ದೃಷ್ಟಿ ನಂದಿಹೋದಾಗ, ಮನುಷ್ಯನು ಕಳೆದುಕೊಳ್ಳುವ ಸೌಭಾಗ್ಯವೆಂದರೆ, ಭೂಮಿಯ, ಇದರ ನಾನಾ ಋತುಗಳ ಸ್ಥಿತಿಯ ದರ್ಶನ. ಭೂಮಿಯನ್ನು ನೋಡುತ್ತಾ ಕಣ್ಣು ಚುರುಕಾದರೆ, ನಿರಂತರವಾಗಿ ನಾನಾ ಸಸ್ಯಮಾಲಿನಿಯೂ, ವಿವಿಧ ವಿಚಿತ್ರ ಪಶುಪಕ್ಷಿಗಳಿಗೆ ಆಶ್ರಯಳೂ ಆದ ಭೂಮಿಯನ್ನು ನೋಡುವುದೊಂದು ಭಾಗ್ಯ. ಈ ಭಾಗ್ಯವಿರಲಿ ಎನ್ನುತ್ತದೆ, ಮಂತ್ರ. ಎರಡನೆಯದಾಗಿ, ವಯಸ್ಸಾಗಿಯೂ, ಕಣ್ಣಿದ್ದೂ, ಭೂಭಾಗವೇ ನೀರಲ್ಲಿ ಮುಳುಗಿ ಮಾಯವಾದರೂ ದೌರ್ಭಾಗ್ಯವೇ. ಭೂಮಿಯು ನಿರಂತರವಾಗಿ ನೀರಿನ ಮೇಲೆ ತೇಲುತ್ತಲೇ ಇದ್ದರೆ ಮಾತ್ರ ಅದನ್ನು ದಿನವೂ ಕಾಣುವ ಸೌಭಾಗ್ಯವುಂಟು. ಮಗುವಿಗೆ ತಾಯಿಯನ್ನು ನೋಡುತ್ತಿರುವುದೇ ಭಾಗ್ಯವಾಗಿರುವಂತೆ, ಈ ಭಾವದಲ್ಲಿ ನೋಡಿದಾಗ ಮಾತ್ರ ಮಂತ್ರದ ಭಾವ ತಿಳಿದೀತು.

## ೩೪ ನಿದ್ರೆಯಲ್ಲೂ ಸುಖಕಾರಕಳಾಗಿರು

ಯಚ್ಛಯಾನಃ ಪರ್ಯಾವರ್ತೇ ದಕ್ಷಿಣಂ
ಸವ್ಯಮಭಿ ಭೂಮೇ ಪಾರ್ಶ್ವಂ ।
ಉತ್ತಾನಾಸ್ತ್ವಾ ಪ್ರತೀಚೀಂ ಯತ್
ಪೃಷ್ಟೀಭಿರಧಿಶೇಮಹೇ ॥೩೪॥

ಅರ್ಥ : ಮಲಗಿರುವಾಗ, ಎಡದಿಂದ ಬಲಕ್ಕೂ, ಬಲದಿಂದ ಎಡಕ್ಕೂ ಹೊರಳುವಾಗ, ಎಲೈ ಭೂಮಿಯೇ ನಮ್ಮ ಪಕ್ಕೆಲುಬುಗಳೊಡನೆ ನಿನ್ನ ಮೇಲೆ ಮಲಗಿರುತ್ತೇವಷ್ಟೆ, ಮಲಗಿದ ಎಲ್ಲಕ್ಕೂ ಆಧಾರಳಾದ ನೀನು, ಹಾಗೆ ನೀಡಿಕೊಂಡ ನಮಗೆ ನೋವಾಗುವಂತೆ ಮಾಡಬೇಡ.

ವಿವರಣೆ : ಈ ಮಂತ್ರದಲ್ಲೂ ಮುಗ್ಧಶಿಶುವು ತಾಯಿಗೆ ಆಡುವ ಮಾತಿನ ಭಾವವಿದೆ. ತೊಡೆಯಲ್ಲಿ ಮಲಗಿ ನಿದ್ರಿಸಿದ ಮಗುವು ಹೊರಳುವಾಗ, ತನ್ನ ಮೈಮೂಳೆಯು ಎಲ್ಲಿ ಅದಕ್ಕೆ ನೋವು ಮಾಡೀತೋ ! ಎಂದು ತಾಯಿಯು ಅಂಜಿ ತನಗೆ ಹಿಂಸೆಯಾದರೂ, ಮಗುವಿನ ಮೈಕೈ ನೋಯದಂತೆ ನೋಡಿಕೊಳ್ಳುವಳೋ ಹಾಗೆ ಭೂಮಿಯೂ ಸುಖಕಾರಕಳಾಗಬೇಕೆಂಬ ಭಾವನೆಯಲ್ಲಿ ಬೇರಾವ ಭಾವವೂ ಇಲ್ಲ.

## ೩೫ ನಮ್ಮನ್ನು ಕ್ಷಮಿಸು

ಯತ್ತೇ ಭೂಮೇ ವಿಖನಾಮಿ
ಕ್ಷಿಪ್ರಂ ತದಪಿ ರೋಹತು ।
ಮಾ ತೇ ಮರ್ಮ ವಿಮೃಗ್ವರಿ
ಮಾ ತೇ ಹೃದಯ ಮರ್ಪಿಪಂ ॥ ೩೫ ॥

ಅರ್ಥ : ಎಲೈ ಭೂದೇವಿಯೇ ! ನಿನ್ನಲ್ಲಿ ಏನು ಹಳ್ಳತೋಡಿ ಅಗೆಯುತ್ತೇವೆಯೋ ಅದು ಬೇಗ ಮುಚ್ಚುವಂತಾಗಲಿ. ನಿನ್ನ ಮರ್ಮಸ್ಥಾನವನ್ನು ಹೃದಯವನ್ನೂ ನಾನು ಭೇದಿಸದಂತಾಗಲಿ.

ವಿವರಣೆ : ಭೂಮಿಯನ್ನು ಸಿಕ್ಕಾಬಟ್ಟೆ ಭೇದಿಸುವುದು, ಅಗೆಯುವುದು ಮೊದಲಾದ ಕೃತ್ಯಗಳು ಭೂಮಿಗೆ ಹಿಂಸಾಚಾರಣೆಗಳೆಂಬ ಭಾವನೆ

ಇಲ್ಲಿದೆ, (ಭೂಮಿಯಲ್ಲಿ 'ಧಡ್ ಧಡ್' ಎಂದು ಹೆಜ್ಜೆಯಿಟ್ಟು ನಡೆಯು ವುದೂ ಪಾಪವೆಂಬ ಪರಿಹಾರ ಎಚ್ಚರಿಕೆಯೂ ಇಲ್ಲಿ ಸ್ಮರಣೀಯ.) ಅನಿವಾರ್ಯವಾಗಿ, ಬಾವಿ ತೋಡುವಾಗ, ಸದೀ ಕಾಲವೆ ಮಾಡುವಾಗ, ವ್ಯವಸಾಯ ಮಾಡುವಾಗ, ಸತ್ತವರಿಗೆ ಸಮಾಧಿ ತೋಡುವಾಗ, ಮನೆಗೆ ತಳಪಾಯ ತೋಡುವಾಗ ಭೂಮಿಗೆ ಈ ಬಗೆಯ ಹಿಂಸೆ ಅನಿವಾರ್ಯ ಆದರೂ ಕ್ಷಮಾಯಾಚನೆಯ ಭಾವವೂ, ಹಳ್ಳಗಳು ಬೇಗ ಮುಚ್ಚಿ ಭೂಮಿಯು ಸಮಸ್ಥಲವಾದಾಗ ಮಾತ್ರ ನಮ್ಮ ಕ್ಷೇಮವೆಂಬ ಭಾವವೂ ಈ ಮಂತ್ರದಲ್ಲಿವೆ.

## ೩೬ ಕಾಲವು ಸುಖವಾಗುವಂತೆ ಮಾಡು

ಗ್ರೀಷ್ಮಸ್ತೇ ಭೂಮೇ ವರ್ಷಾಣಿ ಶರತ್
ಹೇಮಂತಃ ಶಿಶಿರೋ ವಸನ್ತಃ ।
ಋತವಸ್ತೇ ವಿಹಿತಾ ಹಾಯನೀಃ
ಅಹೋರಾತ್ರೇ ಪೃಥಿವಿ ನೋ ದುಹಾತಾಂ ॥೩೬॥

ಅರ್ಥ : ಎಲೈ ಭೂಮಿಯೇ ! ಬೇಸಿಗೆ, ಮಳೆಗಾಲ, ಶರತ್ಕಾಲ, ಹೇಮನ್ತ ಶಿಶಿರ, ವಸನ್ತಗಳೆಂಬ ಆರು ಋತುಗಳೇನು ನಿನ್ನನ್ನು ಆಶ್ರಯಿಸಿ, ನಿನ್ನಲ್ಲಿ (ದೇವರಿಂದ) ವಿಹಿತವಾಗಿವೆಯೋ, (ಇವುಗಳಿಂದ ಉಂಟಾದ ಇತರ ಕಾಲ ಭೇದಗಳಾದ) ವರ್ಷ, ಹಗಲು ರಾತ್ರಿ ಮೊದಲಾದವು ಏವಿವೆಯೋ, ಇವೆಲ್ಲ ನಮಗೆ ಹಾಲ್ಗರೆಯುತ್ತಾ ಸುಖ ಕೊಡಲಿ.

ವಿವರಣೆ : ಭೂಮಿಯಲ್ಲಿದ್ದೇವಾದುದರಿಂದ ಋತು, ಮಾಸ, ಅಯನ ಪಕ್ಷ, ಹಗಲು-ರಾತ್ರಿಗಳೆಂಬ ಕಾಲವೈವಿಧ್ಯದ ಸುಖ ಮಾನವನಿಗೆ ಸಾಧ್ಯ.

ಭೂಮಿ ಮತ್ತು ಸೂರ್ಯರ ಸಂಬಂಧದಿಂದ ಉಂಟಾಗುವವು. ಈ ಎಲ್ಲ. ಭೂಮಿಯಲ್ಲಿ ಬಿಟ್ಟು ಬೇರೆಲ್ಲೋ ಜಗತ್ತಿನ ಇನ್ನೊಂದು ಮೂಲೆಯಲ್ಲಿದ್ದರೆ, ನಮಗೆ ಚಿರಪರಿಚಿತವಾದ ಈ ಸುಖ ಸಿಗುತ್ತಿತ್ತು ಹೇಗೆ? ಯಾವ ಋತುವೂ ಕೆಟ್ಟದ್ದಲ್ಲ ! ಎಲ್ಲದರಲ್ಲೂ ಒಂದೊಂದು ಸುಖವಿದ್ದೇ ಇದೇ. ಋತುಗಳು ಹಾಲ್ಗರೆಯುವ ಕಾಮಧೇನುಗಳಂತೆ ಚಿರಾಯುಗಳು. ಮತ್ತೆ ಮತ್ತೆ ಅದೇ ಕ್ರಮದಲ್ಲಿ ಉರುಳಿ ಬರುತ್ತವೆ. ಭೂಮಿಗಾಗಿಯೇ, ನಮಗಾಗಿಯೇ ಇವು ವಿಹಿತವಾಗಿವೆ. ಇವು ಶಾಂತಿ, ಸುಖ ಕೊಡಲೆಂಬ ಪ್ರಾರ್ಥನೆಯಲ್ಲಿ ವಿಶಾಲದೃಷ್ಟಿ, ಮಾನವ ಕ್ಷೇಮಯಾಚನೆ ಇದೆ.

## ೩೭ ಭೂಮಿ ಬದುಕಿರುವುದು ಇಂದ್ರನಿಗಾಗಿ ವೃತ್ರನಿಗಲ್ಲ !

ಯಾಪ ಸರ್ಪಂ ವಿಜಮಾನಾ ವಿಮೃಗ್ವರೀ
ಯಸ್ಯಾಮಾಸನ್ನಗ್ನಯೋ ಯೇ ಅಪ್ಸ್ವಂತಃ ।
ಪರಾ ದಸ್ಯೂನ್ ದದತೀ ದೇವಪೀಯೂನ್
ಇಂದ್ರಂ ವೃಣಾನಾ ಪೃಥಿವೀ ನ ವೃತ್ರಂ
ಶಕ್ರಾಯ ದಧ್ರೇ ವೃಷಭಾಯ ವೃಷ್ಣೇ ॥೩೭॥

ಅರ್ಥ : ಎಲೈ ಭೂಮಿಯೇ, ಯಾವ ನಿನ್ನಲ್ಲಿ ಉದಿಸಿದ ಅಗ್ನಿಗಳು ಸದಾ ಇದ್ದುವೋ, ಆದುದರಿಂದ ಶುದ್ಧಿಕಾರಳಾಗಿರುವೆಯೋ, ಆ ನೀನು ಒಮ್ಮೆ ಸರ್ಪರೂಪದ ವೃತ್ರಾಸುರನಿಗಾಗಿ ನಡುಗಿ, ದೇವಹಿಂಸಕರೂ, ದೂಷಕರೂ ಆದ ದಸ್ಯುಗಳನ್ನು ತಿರಸ್ಕರಿಸಿ, ಇಂದ್ರನನ್ನು ಆರಿಸಿಕೊಂಡೆ.

ವೃತ್ರನನ್ನಲ್ಲ ! ನೀನು ನಿನ್ನನ್ನು ಧರಿಸಿರುವುದೇ ದೇವಶ್ರೇಷ್ಠನೂ ವೃಷಭ ಪ್ರಾಯನೂ ಇಷ್ಟಾರ್ಥವರ್ಷಕನೂ ಆದ ಇಂದ್ರನಿಗಾಗಿ.

ವಿವರಣೆ : ಈ ಮಂತ್ರವು ಅದ್ಭುತವಾದುದು. ಭೂಮಿಯಿರುವುದು ಯಜ್ಞಯಾಗಶೀಲರಾದ, ಸ್ವಾರ್ಥತ್ಯಾಗ ಮಾಡಿದ ಮಹಾನುಭಾವರ ಬಾಳಿನ ಸಾಧನೆಗಾಗಿ. ಅಗ್ನಿಯು ತ್ಯಾಗದ ಸಂಕೇತ, ಸ್ವಾರ್ಥವನ್ನು ಸುಟ್ಟು ಬೂದಿ ಮಾಡುವ ಅವನಿಗಾಗಿ ಇದು ಸೃಷ್ಟವಾಯಿತು. ಅಗ್ನಿಯನ್ನು ನಂಬಿದವರಾರೂ ಭೂಭಾರವಲ್ಲ ಆದರೆ ಅಗ್ನಿಯನ್ನೂ, ತ್ಯಾಗವನ್ನೂ, ದಿವ್ಯ ಬಾಳುವೆಯನ್ನೂ ದೂಷಿಸುವವರೂ ಇದ್ದಾರಲ್ಲವೆ ! ಜೀವನಪ್ರವಾಹ ಮುಂದುವರೆಯದಂತೆ, ಅದನ್ನಡ್ಡಗಟ್ಟಿ ಮಲಗುವ ಇವರೇ ವೃತ್ರರು ! ಇವರೇ ಹಾವುಗಳು. ಮಳೆಯನ್ನು ತುಂಬಿಟ್ಟುಕೊಂಡೂ, ಮಳೆಗರೆಯದ ಮೋಡಗಳಂತೆ, ಸ್ವಾರ್ಥಕ್ಕೆ ಇವರು ಸಂಕೇತ, ತಾನು ಬದುಕಿ ಇತರರು ಸಾಯಬೇಕೆಂಬ ಇವರಿಗಾಗಿ ಈ ಭೂಮಿ ಸೃಷ್ಟಿಯಾದಿಲ್ಲ. ಇಂದ್ರ–ವೃತ್ರ ಯುದ್ಧ (ನಮ್ಮ ಮಾಲೆಯ ತೃತೀಯ ಸಂಪುಟದ ಕೊನೆಯ ಲೇಖನ ಓದಿ.) ಇಂದು ನಿನ್ನೆಯದಲ್ಲ. ನಿರಂತರವಾದ ಯುದ್ಧ ಇದು. ಇದರಲ್ಲಿ ಎಷ್ಟು ವೃತ್ರರು ಸತ್ತರೋ ! ಇಂದ್ರ ಎಷ್ಟು ಸಲ ವಿಜಯ ಹೊಂದಿದನೋ ! ಈ ಇಂದ್ರವಿಜಯಕ್ಕೆ ಭೂಮಿಯೂ ಕಾರಣ. ಇವಳು ಇಂದ್ರನನ್ನಾರಿಸಿಕೊಂಡು, ವೃತ್ರನಿಗೆ ಆಶ್ರಯ ಕೊಡದಾದುದರಿಂದಲೇ, ವೃತ್ರನಾಶವಾಯಿತು. ಇಂದಿಗೂ ಇವನನ್ನು, ಇಂಥವರನ್ನು ಕಂಡರೆ ಭೂಮಿ ಅಂಜುತ್ತಾಳೆಂಬುದರಲ್ಲಿ, ಯಾರು ಭೂಮಿಗೆ ಭಾರ ? ಎಂಬ ಪ್ರಶ್ನೆಗೆ ಉತ್ತರವಿದೆ.

## ೩೮ ಯಜ್ಞಭೂಮಿ, ಸ್ತೋತ್ರ ಭೂಮಿ

ಯಸ್ಯಾಂ ಸದೋ ಹವಿರ್ಧಾನೇ

ಯೂಪೋ ಯಸ್ಯಾಂ ನಿಮೀಯತೇ ।
ಬ್ರಹ್ಮಾಣೋ ಯಸ್ಯಾಮರ್ಚಂತಿ
ಋಗ್ಭಿಃ ಸಾಮ್ನಾ ಯಜುರ್ವಿದಃ ॥
ಯುಜ್ಯಂತೇ ಯಸ್ಯಾಂ ಋತ್ವಿಜಃ
ಸೋಮಮಿಂದ್ರಾಯ ಪಾತವೇ ॥೩೮॥

ಅರ್ಥ : ಯಾವಳಲ್ಲಿ ಯಜ್ಞಾಸನವೂ, (ವೇದಿಯೂ) ಹವಿರ್ಧಾನವೂ ಉಂಟೋ, ಯಾವಳಲ್ಲಿ ಯೂಪಸ್ತಂಭವನ್ನು ಕಟ್ಟುವರೋ, ಬ್ರಾಹ್ಮಣರು ಯಾವಳಲ್ಲಿ (ದೇವರನ್ನು) ಯಗ್ಯಜುಸ್ಸಾಮವೇದಗಳಿಂದ ಅರ್ಚಿಸುವರೋ, ಯಾವಳಲ್ಲಿ ಋತ್ವಿಜರು ರಕ್ಷಕನಾದ ಇಂದ್ರನಿಗೆ ಸೋಮವನ್ನು ಸಿದ್ಧಪಡಿಸುವರೋ, (ಇದೂ ಮುಂದಿನ ಮಂತ್ರವೂ ಏಕಾನ್ವಯ.)

## ೩೯ ಪ್ರಜಾಪತಿಗಳಿಗೂ. ಋಷಿಗಳಿಗೂ, ವೇದಪ್ರಚಾರಕ್ಕೂ ಆಶ್ರಯಳು

ಯಸ್ಯಾಂ ಪೂರ್ವೇ ಭೂತಕೃತ
ಋಷಯೋ ಗಾ ಉದಾನೃಚುಃ ।
ಸಪ್ತ ಸತ್ರೇಣ ವೇಧಸೋ
ಯಜ್ಞೇನ ತಪಸಾ ಸಹ ॥೩೯॥

ಅರ್ಥ : ಯಾವಳಲ್ಲಿ ಪ್ರಾಚೀನರಾದ ಸೃಷ್ಟಿಕರ್ತರೂ, (ಚತುರ್ಮುಖ ಪುತ್ರರಾದ ಮನುಗಳು, ಪ್ರಜಾಪತಿಗಳು) ಋಷಿಗಳೂ, ಪವಿತ್ರ ವೇದಮಂತ್ರಗಳನ್ನು ಹಾಡಿದರೋ, ಏಳು ವಿಧಯಾಗಗಳಿಂದ ಮಹಾಬುದ್ಧಿಶಾಲಿಗಳು

ಯಜ್ಞ ತಪಸ್ಸುಗಳೊಡನೆ (ಬಾಳಿದರೋ), (ಇದನ್ನು ಮುಂದಿನ ಮಂತ್ರ ಪೂರೈಸುತ್ತದೆ.)

## ೪೦ ಭಗ, ಇಂದ್ರರ ಕಾರ್ಯಕ್ಷೇತ್ರ

ಸಾ ನೋ ಭೂಮಿರಾದಿಶತು
ಯದ್ಧನಂ ಕಾಮಯಾಮಹೇ ।
ಭಗೋ ಅನುಪ್ರಯುಂಕ್ತಾಂ
ಇಂದ್ರ ಏತು ಪುರೋಗವಃ ॥೪೦॥

ಅರ್ಥ : ಆ ಭೂದೇವಿಯು ನಮಗೆ ಸಂಪತ್ತನ್ನೂ, ಆಶಿಸಿದ್ದನ್ನೂ, ತೋರಿಸಿ, ಅನುಗ್ರಹಿಸಿ ಕೊಡಲಿ. ಭಗನು ನಮ್ಮನ್ನನುಸರಿಸಲಿ. ಇಂದ್ರನು ಮುಂದೆ ನಡೆದು ದಾರಿತೋರಲಿ.

ವಿವರಣೆ : ಈ ಮೂರೂ ಮಂತ್ರಗಳೂ ಏಕಾನ್ವಯ. ಪರಮಾತ್ಮನನ್ನು ಸೇರಲು, ಕಾಣಲು, ಉಪಾಯಗಳನ್ನು ಹೇಳುವ ಶ್ರುತಿಯು "ತಮೇತಂ ವೇದಾನುವಚನೇನ ಬ್ರಾಹ್ಮಣಾಃ ವಿವಿದಿಷನ್ತಿ, ಯಜ್ಞೇನ, ದಾನೇನ, ತಪಸಾ, ಅನಾಶಕೇನ" ಎನ್ನುತ್ತಾ, ವೇದಾಧ್ಯಾಯನ, ಯಜ್ಞಾಚರಣೆ, ದಾನ, ತಪಸ್ಸು, ಉಪವಾಸಗಳನ್ನು ತೋರಿಸಿತು. ಆದರೆ ಯಜ್ಞ ಮಾಡಲು ವೇದಿಬೇಕು. ವೇದಿಯು ಭೂಮಿಯಲ್ಲೇ ನಿರ್ಮಿತವಾಗತಕ್ಕದ್ದು ! ಯೂಪಸ್ತಂಭ ನೆಡುವುದೂ ಇಲ್ಲೇ ! ಸ್ವಾಹಾಕಾರ ಪೂರ್ವಕ ಹವಿಸ್ಸನ್ನು ಅರ್ಪಿಸುವುದೂ ಇಲ್ಲೇ ! ಋಗಾದಿ ವೇದಗಳಿಂದ ಭಗವಂತನನ್ನೂ, ದೇವತೆಗಳನ್ನೂ ಸ್ತುತಿಸುವುದೂ, ಅರ್ಚಿಸುವುದೂ, ಕೊಂಡಾಡುವುದೂ ಇಲ್ಲೇ. ಇಂದ್ರನಿಗೆ ಸೋಮವು ಸಿದ್ಧವಾಗುವ ಸೋಮಯಾಗ

ಮಾಡುವುದೂ ಇಲ್ಲೇ. ಅಷ್ಟೇಕೆ ಪ್ರಜಾಪತಿಗಳೂ, ಮನುಗಳೂ, ಲೋಕವನ್ನು ಪ್ರಜೆಗಳಿಂದ ತುಂಬಲು ಶ್ರಮಪಟ್ಟದ್ದೂ ಇಲ್ಲೇ. ಬ್ರಾಹ್ಮಣಶ್ರೇಷ್ಠರಾದ ಋಷಿಗಳಿಗೆ ವೇದಮಂತ್ರಗಳು ಪ್ರತ್ಯಕ್ಷವಾದುದೂ ಇಲ್ಲೇ! ಭೂಃ ಭುವಃ ಇತ್ಯಾದಿ ಸಪ್ತಲೋಕಗಳಲ್ಲೂ ಸಂಚರಿಸಬಲ್ಲ ಋಷಿಗಳು, ಸಪ್ತವಿಧ ಯಜ್ಞಗಳನ್ನು ಆಚರಿಸಿದುದೂ ಇಲ್ಲೇ. ಅವರೆಲ್ಲ ತಪಸ್ಸು ಮಾಡಿದ್ದೂ ಇಲ್ಲೇ. ಬೇರಾವ ಲೋಕಕ್ಕೂ ಉಂಟಾಗದ ಈ ಕೀರ್ತಿ ಈ ಭೂಮಿಗೇ ಮಾತ್ರ ಉಂಟು. ಇಷ್ಟೆಲ್ಲ ವಿಚಿತ್ರ ಸಂಬಂಧವಿದ್ದು ಪವಿತ್ರಳೂ, ಕಾಮವರ್ಷಕಳೂ ಆದ ಭೂದೇವಿಯು. ಸಾಧಕನ ಇಷ್ಟಾರ್ಥಗಳನ್ನು ಪೂರೈಸಲಿ ಎಂಬ ಭಾವನೆ ಯುಕ್ತವಾದುದು. ಋಷಿ ಸಂತಾನದಲ್ಲೇ ಬಂದ ಸಾಧಕನು ಋಷಿಯುಕ್ತವಾದ ಭೋಗ ಹೊರತು ಬೇರೇನು ಕೇಳಿಯಾನು? ಅವನು ಬಯಸುವ ಧನವೂ, ಜ್ಞಾನ, ತಪಸ್ಸು, ದೇಹದಾರ್ಢ್ಯ, ಭಗವದ್ದರ್ಶನ— ಇವೇ. ಈ ಧನವನ್ನನುಗ್ರಹಿಸಿ, ಹೊತ್ತು ಹಿಂಬಾಲಿಸಿ ಬರುವುದು ಭಗನ ಕರ್ತವ್ಯ. ಅವನು ಕೊಡುವುದೇ ಭಾಗ್ಯ, ಅದೇ ನಮ್ಮ ಭಾಗಧೇಯ, ಹೊತ್ತು ಹಿಂಬಾಲಿಸುವ ಔದಾರ್ಯ ಅವನದು. ಈ ಧನವು ನಮ್ಮೊಡನೆ ಸುರಕ್ಷಿತವಾಗಿ ಸೇರುವಂತೆ ಮಾಡುವುದು ಇಂದ್ರನ ಕರ್ತವ್ಯ. ಅದಕ್ಕೇ ಅವನು ನಮಗೆ ದಾರಿತೋರುತ್ತಾ ಮುಂದೆ ನಡೆಯುತ್ತಾನೆ. ಹೀಗಾಗಿ ಈ ಮೂರೂ ಮಂತ್ರಗಳು ವೈದಿಕರು ಇಹಲೋಕದಲ್ಲಿ ಪಡುವ ಸೌಖ್ಯ, ಪಡೆಯುವ ಭಾಗ್ಯ, ಅದರ ವೈದಿಕ ಪರಂಪರೆ, ಇದಕ್ಕೆ ದೇವರ ರಕ್ಷೆಗಳನ್ನು ಕೊಂಡಾಡುವ ಮೂಲಕ, ಇದಕ್ಕೆಲ್ಲ ನಾವು ಭೂಮಿಯಲ್ಲಿ ಹುಟ್ಟಿರುವುದೇ ಮುಖ್ಯ ಮೂಲ ಭಾಗ್ಯ ಕಾರಣವೆಂದು ನಿರ್ದೇಶಿಸಿದೆ. ಮಾನವನ ಪರಮ ಪುರುಷಾರ್ಥವನ್ನು ದಿಗ್ದರ್ಶಿಸುವ ಈ ಮಂತ್ರಗಳು ಅಮೋಘ.

## ೪೧ ಗಾನ ಭೂಮಿ ! ಶತ್ರುನಾಶಕಯುದ್ಧ ಭೂಮಿ !

ಯಸ್ಯಾಂ ಗಾಯನ್ತಿ ನೃತ್ಯನ್ತಿ
ಭೂಮ್ಯಾಂ ಮರ್ತ್ಯಾ ವ್ಯೈಲಬಾಃ ।
ಯುಧ್ಯನ್ತೇ ಯಸ್ಯಾಮಾಕ್ರಂದೋ
ಯಸ್ಯಾ ವದತಿ ದುಂದುಭಿಃ ॥
ಸಾ ನೋ ಭೂಮಿಃ ಪ್ರಣುದ ತಾಂ ಸಪತ್ನಾನ್
ಅಸಪತ್ನಂ ಮಾ ಪೃಥಿವಿ ಕೃಣೋತು ॥೪೧॥

ಅರ್ಥ : ಅಮ್ಮಾ ಪೃಥಿವಿಯೇ ! ಯಾವ ನಿನ್ನಲ್ಲಿ ಮರ್ತ್ಯರು ಹಾಡು ವರೋ, ಕುಣಿಯುವರೋ, ಅಬ್ಬರಿಸುವರೋ, ಯುದ್ಧಮಾಡುತ್ತಾ, ಕಿರುಚು ವರೋ, ನಗಾರಿ ಬಾರಿಸುವರೋ, ಆ ಭೂಮಿಯು ನಮ್ಮ ಶತ್ರುಗಳನ್ನು ಹೊಡೆದೋಡಿಸಲಿ. ನಾವು ಶತ್ರುರಹಿತರಾಗಿ ಬಾಳೋಣ.

ವಿವರಣೆ : ಸಂಪತ್ತು, ಸುಖ, ಶಾಂತಿ ಕೊಡುವ ಭೂಮಿಯು ಒಮ್ಮೆ ಸಂಗ್ರಾಮ ಭೂಮಿಯೂ ಆಗುವುದುಂಟು. ಆಗ ನಮ್ಮ ಶತ್ರುಗಳು ಅಳಿಯಲಿ ಎನ್ನುವ ಮಂತ್ರ ಐತಿಹಾಸಿಕ ಸತ್ಯವನ್ನೇ ನುಡಿಯುತ್ತಿದೆ.

## ೪೨ ಮಳೆರಾಯನ ಹೆಂಡತಿ, ಭೂಮಿ !

ಯಸ್ಯಾಮನ್ನಂ ವ್ರೀಹಿಯವೌ

ಯಸ್ಯಾ ಇಮಾ ಪಂಚ ಕೃಷ್ಟಯಃ ।
ಭೂಮ್ಯೈ ಪರ್ಜನ್ಯಪತ್ನ್ಯೈ
ನಮೋಽಸ್ತು ವರ್ಷಮೇದಸೇ ॥೪೨॥

ಅರ್ಥ : ಯಾವಳಲ್ಲಿ ಗೋದಿ, ಅಕ್ಕಿ, ಅನ್ನ ಮೊದಲಾದವನ್ನು ಬೆಳೆಯು ವರೋ, ಯಾವಳಲ್ಲಿ ಈ (ಬ್ರಾಹ್ಮಣಾದಿ ನಾಲ್ಕು ವರ್ಣಗಳೂ, ನಿಷಾದರೂ ಕೂಡಿ) ಐದು ಬಗೆಯ ಜನರು ತುಂಬಿರುವರೋ, ಆ ಭೂಮಿಗೆ ಪರ್ಜನ್ಯನ (ಮಳೆಯ) ಹೆಂಡತಿಗೆ, ಮಳೆಯಿಂದ ಸಮೃದ್ಧಳಾಗುವವಳಿಗೆ ನಮಸ್ಕಾರವಿರಲಿ.

ವಿವರಣೆ : ಭೂಮಿ ಸಕಲ ಬಗೆಯ ಜನರಿಗೂ ವಾಸಸ್ಥಾನ; ಅವರಿಗೆ ಅನ್ನವನ್ನು ಕೊಟ್ಟು ಕಾಪಾಡುವಳು ಭೂಮಿ. ಪರ್ಜನ್ಯನ ಹೆಂಡತಿ ಭೂಮಿ ಎಂದು ವೇದ ಹೇಳುವಲ್ಲಿ ಕಾವ್ಯಾತ್ಮಕ ರೂಪಕದ ಭಾಷೆಯಿದೆ. ಮಳೆ ಬಿದ್ದರೇ ಭೂಮಿಯೂ ಸಮೃದ್ಧವೆಂಬುದು ಅನುಭವದ ಮಾತು.

## ೪೩ ದೇವತೆಗಳ ಕೋಟೆ ಭೂಮಿ

ಯಸ್ಯಾಃ ಪುರೋ ದೇವಕೃತಾಃ
ಕ್ಷೇತ್ರೇ ಯಸ್ಯಾ ವಿಕುರ್ವತೇ ।
ಪ್ರಜಾಪತಿಃ ಪೃಥಿವೀಂ ವಿಶ್ವಗರ್ಭಾಂ
ಆಶಾಮಾಶಾಂ ರಣ್ಯಾಂ ನಃ ಕೃಣೋತು ॥೪೩॥

ಅರ್ಥ : ಯಾವ ಭೂಮಿಯಲ್ಲಿ ದೇವತೆಗಳಿಂದ ಮಾಡಲ್ಪಟ್ಟ ಕೋಟೆಗಳುಂಟೋ, ಆದರೆ ಎಲ್ಲಿ (ಈಗ) ಮನುಷ್ಯರು ಮಾಡಬಾರದ್ದನ್ನೆಲ್ಲ

ಮಾಡುವವರೋ (ಅಥವಾ ವಿಕಾರಕ್ಕೊಳಗಾಗುವವರೋ), ಯಾವಳು ವಿಶ್ವವನ್ನೇ ಗರ್ಭದಲ್ಲಿ ಹೊಂದಿರುವಳೋ, ಆ ಭೂಮಿಯು ಒಂದೊಂದು ದಿಕ್ಕನ್ನೂ (ಪ್ರದೇಶವನ್ನೂ) ಪ್ರಜಾಪತಿಯು ನಮಗೆ ಸುಖಕರವನ್ನಾಗಿ ಮಾಡಲಿ.

ವಿವರಣೆ : ಭೂಮಿಯು ದೇವತೆಗಳಿಗೂ, ಆಗಾಗ ಅಸುರರೊಡನೆ ಯುದ್ಧದಲ್ಲಿ, ಅಡಗಿಟ್ಟುಕೊಳ್ಳುವ ಕೋಟೆಯಾಗಿದೆ ಎಂಬ ಮಾತು ಅಮೋಘವಾದುದು. ಸ್ವರ್ಗವನ್ನೇ ಕಳಕೊಂಡು ಓಡಿಹೋಗಿ ನಿಲ್ಲಲೂ ನೆಲೆಯಿಲ್ಲದ ದೇವತೆಗಳಿಗೆ ಭೂಮಿಯು ಸುರಕ್ಷಿತ ಗುಪ್ತವಾಸಸ್ಥಾನವೆಂದರೆ ಸ್ವರ್ಗಾದಿ ಲೋಕಗಳಿಗಿಂತಲೂ ಈ ಭೂಮಿಯೇ ಶ್ರೇಷ್ಠವೆಂದಂತಾಗುತ್ತದೆ ಅಲ್ಲದೆ ಇಷ್ಟು ಪವಿತ್ರವಾದ ಭೂಮಿಯಲ್ಲಿ ಮಾನವರು ವಿಕಾರಕ್ಕೊಳಗಾಗುವುದೇ? ಮಾಡಬಾರದ್ದನ್ನೆಲ್ಲ ಮಾಡುವುದೇ ?— ಎಂಬ ಪ್ರಶ್ನೆಗೆ ನಾವೇ ಉತ್ತರಿಸಬೇಕಾಗಿದೆ. ಇಂಥವರಿಗೆ ಭೂಮಿಯ ಮಹತಿಯೂ, ಇಲ್ಲಿ ಹುಟ್ಟುವ ಭಾಗ್ಯದ ಅರಿವೂ, ಮನದಟ್ಟಾಗಿಲ್ಲವೆನ್ನಬೇಕಷ್ಟೆ. ಇಡೀ ವಿಶ್ವಕ್ಕೇ ಆಪತ್ತು ಬಂದರೂ ವಿಶ್ವವನ್ನೇ ಗರ್ಭದಲ್ಲಿಟ್ಟು ರಕ್ಷಿಸಬಲ್ಲ ಭೂಮಿಗೆ ಎಣೆಯುಂಟೇ ? ಇಂಥ ಭೂಮಿಯನ್ನು ದೇವರು ನಮಗೆ ಸದಾ ಸುಖಸ್ಥಾನ ಮಾಡಲೆಂಬ ಪ್ರಾರ್ಥನೆ ಯುಕ್ತವಾಗಿದೆ.

## ೪೪ ಐಶ್ವರ್ಯದಾತಳು

ನಿಧಿಂ ಬಿಭ್ರತೀ ಬಹುಧಾ ಗುಹಾ
ವಸು ಮಣಿಂ ಹಿರಣ್ಯಂ ಪೃಥಿವೀ ದದಾತು ಮೇ ।
ವಸೂನಿ ನೋ ವಸುದಾ ರಾಸಮಾನಾ
ದೇವೀ ದಧಾತು ಸುಮನಸ್ಯಮಾನಾ ॥೪೪॥

ಅರ್ಥ : ತನ್ನ ಗರ್ಭದಲ್ಲಿ ಗುಹೆಗಳಲ್ಲಿ (ಗುಟ್ಟಾಗಿ) ಅನೇಕ ಬಗೆಯ ನಿಧಿಗಳನ್ನು ಧರಿಸಿದವಳೂ ಆದ ಭೂಮಿಯು ನಮಗೆ ಬಗೆ ಬಗೆಯ ಮಣಿಗಳನ್ನೂ, ಬಂಗಾರವನ್ನೂ ಕೊಡಲಿ. ಶುಭವಸ್ತುಗಳನ್ನನುಗ್ರಹಿಸುವ ಭೂಮಿಯು ಒಳ್ಳೆಯ ಮನಸ್ಸಿನಿಂದ ನಮಗೆ ಸಂಪತ್ತನ್ನನುಗ್ರಹಿಸಲಿ.

## ೪೫ ಬಗೆಬಗೆಯ ಜನರಿಗೆ ಆಶ್ರಯಳು

ಜನಂ ಬಿಭ್ರತೀ ಬಹುಧಾ ವಿವಾಚಸಂ
ನಾನಾ ಧರ್ಮಾಣಂ ಪೃಥಿವೀ ಯಥೌಕಸಂ ।
ಸಹಸ್ರಂ ಧಾರಾ ದ್ರವಿಣಸ್ಯ ಮೇ ದುಹಾಂ
ಧ್ರುವೇವ ಧೇನುರನಪಸ್ಫುರನ್ತೀ ॥೪೫॥

ಅರ್ಥ : ನಾನಾ ಭಾಷೆಗಳನ್ನಾಡುವ, ನಾನಾ ರೀತಿ ನೀತಿಗಳನ್ನುಳ್ಳ (ನಾನಾ ಧರ್ಮಗಳ) ಜನರನ್ನು ಅವರಿಗೆ ಎಲ್ಲೆಲ್ಲಿ ಮನೆ ಬೇಕೋ ಹಾಗೆ ವಾಸಿಸುವಂತೆ, ಧರಿಸಿರುವ ಭೂಮಿಯು ನಿರಂತರ ಹಾಲ್ಗರೆವ ಕಾಮಧೇನುವಿನಂತೆ ನನಗೆ ಸಾವಿರ ಬಗೆಯ ಐಶ್ವರ್ಯಧಾರೆಯನ್ನು ಕರೆಯಲಿ.

ವಿವರಣೆ : ಭೂಮಿಯಲ್ಲಿರುವ ಎಲ್ಲ ಮಾನವರ ಮಾತೂ, ವಿಚಾರ, ಬದುಕಿನ ರೀತಿ ನೀತಿಗಳೂ, ಧರ್ಮಗಳೂ. ಗುಣಗಳೂ ಒಂದೇ ಆಗಿಲ್ಲ. ಆದರೂ ಭೂಮಿ ಏಕಾಶ್ರಯಳಾಗಿ ಈ ವೈವಿಧ್ಯವನೆಲ್ಲ ಧರಿಸಿದ್ದಾಳೆ. ಒಬ್ಬೊಬ್ಬರನ್ನು ಒಂದೊಂದು ಬಗೆಯಲ್ಲಿ ಅನುಗ್ರಹಿಸುತ್ತಾಳೆ. ಅವಳು ಐಶ್ವರ್ಯವನ್ನು ಕೊಡುವುದೂ ಒಂದೇ ಬಗೆಯಲ್ಲಲ್ಲ ಅದಕ್ಕೂ ಸಾವಿರ ಬಗೆಯುಂಟು. ಒಂದು ದೇಶದಲ್ಲಿ ಹಣ್ಣು ಬೆಳೆದರೆ ಮತ್ತೊಂದರಲ್ಲಿ ಕಬ್ಬು ಮುಂತಾಗಿ, ಬೆಳೆ ಬೆಳೆಯುವ ಪ್ರದೇಶಗಳಲ್ಲಿ ವಿವಿಧತೆಯುಂಟು.

ಒಂದು ಕಡೆ ಸಿಕ್ಕುವ ನಿಧಿನಿಕ್ಷೇಪ ಖನಿಜಗಳು ಇನ್ನೊಂದೆಡೆ ದೊರೆಯು ಲಾರವು. ಇದರರ್ಥ ತನ್ನ ಎಲ್ಲ ಮಕ್ಕಳಿಗೂ ಏನಾದರೊಂದು ವಿಶೇಷ ವಿರಲೆಂದೇ. ಅದಕ್ಕೇ ಭಾಷೆ, ಪದ್ಧತಿ, ಮೈಬಣ್ಣ ಆಕಾರ, ರೂಪು ಎಲ್ಲವೂ ಭಿನ್ನವಾಗಿವೆ. ಇದು ಭೂಮಿಯ ಭಾಗ್ಯ ಎನ್ನುತ್ತದೆ ಮಂತ್ರ.

## ೪೬ ಕ್ರಿಮಿಕೀಟಗಳಿಗೂ ಆಶ್ರಯಳು

ಯಸ್ತೇ ಸರ್ಪೋ ವೃಶ್ಚಿಕಸ್ತೃಷ್ಟದಂಶ್ಮಾ
ಹೇಮಂತಜಬ್ಧೋ ಭೃಮಲೋ ಗುಹಾಶಯೇ
ಕ್ರಿಮಿರ್ಜಿನ್ವತ್, ಪೃಥಿವಿ ಯದ್ಯದೇಜತಿ
ಪ್ರಾವೃಷಿ ತನ್ನಃ ಸರ್ಪನ್ಮೋಪ ಸೃಪದ್
ಯಚ್ಛಿವಂ ತೇನ ನೋ ಮೃಡ ॥೪೬॥

ಅರ್ಥ : ಯಾವ ಚೂಪಾದ ವಿಷದ ಹಲ್ಲಿನ, (ಬಾಲದ) ಚೇಳೂ, ಹಾವೂ ಗೂಢವಾಗಿ ನಿನ್ನಲ್ಲಿ ಮಲಗಿವೆಯೋ, ಛಳಿಯಿಂದ ತತ್ತರಿಸಿ, ಬೆಂದು ಬಿಸಿಲಿಗೆ ಬೆಂದು, ಗುಹೆಗಳನ್ನು ಆಶ್ರಯಿಸಿವೆಯೋ, ಎಲೈ ಭೂಮಿಯೇ. ಯಾವ ಯಾವ ಕ್ರಿಮಿಗಳೂ, ಚಟುವಟಿಕೆಯಿಂದೊಡಗೂಡಿರುತ್ತಾ, ಹೊಸಮಳೆ ಬಿದ್ದಾಗ ಎದ್ದೇಳುತ್ತವೆಯೋ, ಆ ಸರೀಸೃಪಗಳು ನಮ್ಮ ಮೇಲೆ ಸಂಚರಿಸ ದಿರಲಿ. ಯಾವುದು ಶುಭವೋ, ಮಂಗಳಕರವೋ ಅವುಗಳಿಂದ ನಮ್ಮನ್ನು ರಕ್ಷಿಸಿ ಅನುಗ್ರಹಿಸು.

ವಿವರಣೆ : ಭೂಮಿಯು ದೇವತೆಗಳಿಗೆ ಆಶ್ರಯವೆಂದ ಮೇಲೆ ಕ್ಷುದ್ರ ವಿಷಜನ್ತುಗಳಿಗೂ ಆಶ್ರಯವೆಂಬುದು ಆಶ್ಚರ್ಯವೇ, ಒಗಟಿಯೂ ಸಹ ! ಭೂಮಿಯ ವ್ಯಕ್ತಿತ್ತ್ವವು ನಮಗೆ ಎಟುಕದೇ, ನಮ್ಮ ಬುದ್ಧಿಗೆ

ವಿಾರುವುದೂ ಇಲ್ಲೇ. ಗೋವು, ಜಿಂಕೆಗಳಂಥ ಸಾಧುತಮ ಪ್ರಾಣಿಗಳನ್ನು ಸೃಷ್ಟಿಸಿದ ದೇವರೇ, ಹುಲಿಸಿಂಹಗಳನ್ನು ಸೃಷ್ಟಿಸಿದನೆಂದರೆ, ಹೇಗೆ ನಂಬಲಾರವೋ, ಭೂಮಿಯು ದೇವತೆಗಳಿಗೂ ವಿಷಜಂತುಗಳಿಗೂ ಸಮನಾಗಿಯೇ ಆಶ್ರಯಳೆಂದರೂ ಹಾಗೇ ನಂಬಲಾರದಂತಹದ್ದೇ ! ಆದರೂ ಇದು ಸತ್ಯ. ಭೂಮಿಯಲ್ಲಿ ಬದುಕುವ ಹಕ್ಕು ಎಲ್ಲ ಜೀವಿಗಳಿಗೂ, ಪ್ರಾಣಿಗಳಿಗೂ ಉಂಟು ಈ ಜೀವಿಗಳಿಗದರೂ ತಂತಮ್ಮ ಕರ್ಮಾನುಸಾರವಾಗಿ ಆ ಬಗೆಯ ಜನ್ಮಗಳನ್ನೆತ್ತಿದ ಮೇಲೆ, ಆ ಎಲ್ಲರಿಗೂ ಸಾಧನಕ್ಷೇತ್ರವಾಗಿ, ಮುಂದೆ ಉತ್ತಮಾಧಮಜನ್ಮಗಳನ್ನು ಆರಿಸಿ ಪಡೆಯಲು ಭೂಮಿ ಸಮಾನಾವಕಾಶ ಕೊಡಬೇಕಾದುದು ನ್ಯಾಯವೇ.

## ೪೭ ನಾನಾ ಬಗೆಯ ಸಂಚಾರ ಯೋಗ್ಯಳು

ಯೇ ತೇ ಪಂಥಾನೋ ಬಹವೋ ಜನಾಯನಾ
ರಥಸ್ಯ ವರ್ತ್ಮಾನಸಶ್ಚ ಯಾತವೇ ।
ಯೈಃ ಸಂಚರನ್ತ್ಯುಭಯೇ ಭದ್ರಪಾಪಾಃ ತಂ
ಪನ್ಥಾನಂ ಜಯೇಮಾನಮಿತ್ರಮತಸ್ಕರಂ
ಯಚ್ಛಿವಂ ತೇನ ನೋ ಮೃಡ ॥೪೭॥

ಅರ್ಥ : (ಎಲೈ ಭೂಮಿಯೇ !) ಜನರು ಸಂಚರಿಸಲು ನಿನ್ನಲ್ಲಿ ಯಾವ ರಸ್ತೆಗಳುಂಟೋ, ರಥಸಂಚಾರಕ್ಕೆ ಅನುಗುಣವಾದುದೂ, ಗಾಡಿಯ ಸಂಚಾರಕ್ಕೆ ಅನುಗುಣವಾದುದೂ, ಒಳ್ಳೆಯ, ಕೆಟ್ಟ ಜನರಿಬ್ಬರಿಗೂ ಸಂಚಾರಾನುಕೂಲವಾದುದೂ ಯಾವ ರಸ್ತೆಯುಂಟೋ ಅದರಲ್ಲಿ ಶತ್ರುಗಳಿಲ್ಲದಂತೆ, ಕಳ್ಳರಿಲ್ಲದಂತೆ, ನಾವು ಜಯಿಸುವಂತೆ ಮಾಡು. ಯಾವುದು ಶುಭಕರವೊ ಅದರಿಂದ ನಮ್ಮನ್ನನುಗ್ರಹಿಸು.

ವಿವರಣೆ : ಭೂಮಿಯ ನಿಷ್ಪಕ್ಷಪಾತತೆಗೆ ಮಿತಿಯೇ ಇಲ್ಲ. ಎಲ್ಲ ಬಗೆಯ ಜೀವಿಗಳಿಗೂ ಆಶ್ರಯವಾದುದು ಮಾತ್ರವಲ್ಲದೆ, ಎಲ್ಲ ಬಗೆಯ ಸಂಚಾರಕ್ಕೂ ಯೋಗ್ಯವಾದ ರಸ್ತೆಗಳನ್ನು ಹೊಂದಿದ, ಆ ರಸ್ತೆಗಳಲ್ಲಿ ಸಂಚರಿಸುವವರು ದುಷ್ಟರೋ, ಶಿಷ್ಟರೋ ಎಂದು ಭೂಮಿ ವಿಚಾರಿಸು ವುದಿಲ್ಲ. ಆದರೂ ನಮಗೆ ಶತ್ರುಗಳ, ಕಳ್ಳರ ಕಾಟವಾಗದಿರಲಿ ಎಂದು ಋಷಿಯು ಪ್ರಾರ್ಥಿಸುವುದು ನಮ್ಮ ದೃಷ್ಟಿಯಿಂದ.

## ೪೮ ಬ್ರಹ್ಮನೊಡನೆ ಒಪ್ಪಂದ ಮಾಡಿಕೊಂಡವಳು

ಮಲ್ವಂ ಬಿಭ್ರತೀ ಗುರುಭೃತ್
ಭದ್ರ ಪಾಪಸ್ಯ ನಿಧನಂ ತಿತಿಕ್ಷುಃ
ವರಾಹೇಣ ಪೃಥಿವೀ ಸಂವಿದಾನಾ
ಸೂಕರಾಯ ವಿ ಜಿಹೀತೇ ಮೃಗಾಯ ॥೪೮॥

ಅರ್ಥ : ಬುದ್ಧಿವಂತನನ್ನೂ, ದಡ್ಡನಾದವನನ್ನೂ, ಭಾರವಾದವನ್ನೂ, ಧರಿಸಿ, ಸಹಿಸಿ, ಒಳ್ಳೆಯವರಿಗೂ, ಕೆಟ್ಟವರಿಗೂ ವಾಸಸ್ಥಾನವಾಗಿರುತ್ತಾ, ಭೂದೇವಿಯು ವರಾಹನೊಡನೆ ಮಾಡಿಕೊಂಡ ಒಪ್ಪಂದದಂತೆ ಸಿಂಹಕ್ಕೂ (ಅಥವಾ ಜಿಂಕೆಗಳಿಗೂ) ಹಂದಿಗೂ ಬಾಗಿಲು ತೆರೆದಿದೆ.

ವಿವರಣೆ : ಭೂಮಿಯು ನೀರಿನಲ್ಲಿ ಮುಳುಗಿಯೇ ಹೋಗಿದ್ದ ಕಾಲವೊಂದಿತ್ತು ! ಆದನ್ನು ಭಗವಂತನು ವರಾಹಾವತಾರವೆತ್ತಿ ಮೇಲೆ ತ್ತಿದ್ದು ಪ್ರಸಿದ್ಧವಿದೆ. ಆಗಾಗ ಭೂಭಾರ ಹೆಚ್ಚಿ, ಕುಸಿಯುವಂತಾದರೂ ತಾನು (ಶೇಷರೂಪದಲ್ಲಿ) ಅವಳನ್ನು ಧರಿಸಿ ಅವಳ ರಕ್ಷಣೆಗಿರುವುದರಿಂದ ಹೆದರಬಾರದೆಂದೂ, ಜೀವಿಗಳು ಯಾರೇ ಆದರೂ, ಎಂಥವರೇ ಆದರೂ

ದಡ್ಡರೋ, ಬುದ್ಧಿವಂತರೋ, ಭಾರವೋ ಆದರೂ, ಹೋರಿ, ಜಿಂಕೆ, ಸಿಂಹಗಳಂತೆ ಅಂತರವುಳ್ಳವರಾದರೂ, ಎಲ್ಲರಿಗೂ ಆಶ್ರಯಕೊಡಬೇಕೆಂಬುದೇ ಆ ನಿಬಂಧನೆ. ಇದನ್ನು ಮೀರದವಳು ಭೂಮಿ.

## ೪೯ ದುಷ್ಟಮೃಗಗಳಿಂದ ರಕ್ಷಿಸು

ಯೇ ತ ಆರಣ್ಯಾಃ ಪಶವೋ ಮೃಗಾ ವನೇ
ಹಿತಾಃ ಸಿಂಹಾಃ ವ್ಯಾಘ್ರಾಃ ಪುರುಷಾದಶ್ಚರನ್ತಿ
ಉಲಂ ವೃಕಂ ಪೃಥಿವಿ ದುಚ್ಛುನಾಮಿತ
ಋಕ್ಷೀಕಾಂ ರಕ್ಷೋ ಅಪ ಬಾಧಯಾಸ್ಮತ್ ॥೪೯॥

ಅರ್ಥ : ಯಾವ ನಿನ್ನಲ್ಲಿ ಅರಣ್ಯ ಪಶುಗಳೂ, ದುಷ್ಟವನಮೃಗಗಳೂ, ಸಿಂಹ, ಹುಲಿ, ಮನುಷ್ಯರನ್ನು ತಿನ್ನುವ ಇತರ ದುಷ್ಟಜನ್ತುಗಳು ಆಶ್ರಯಿಸಿ ಸಂಚರಿಸುವವೋ, ನರಿ, ತೋಳ ಮುಂತಾದವು ಉಂಟೋ, ಎಲೈ ಭೂಮಿಯೇ, ಈ ದುರದೃಷ್ಟಗಳನ್ನು, ರಾಕ್ಷಸಶಕ್ತಿಗಳನ್ನು ನಮ್ಮಿಂದ ದೂರ ಓಡಿಸು. (ವಿವರಣೆ ಅನವಶ್ಯ.)

## ೫೦ ಪಿಶಾಚರಾಕ್ಷಸರಿಂದ ರಕ್ಷಿಸು

ಯೇ ಗಂಧರ್ವಾ ಅಪ್ಸರಸೋ
ಯೇ ಚಾರಾಯಾಃ ಕಿಮೀದಿನಃ ।

ಪಿಶಾಚಾನ್ ಸರ್ವಾ ರಕ್ಷಾಂಸಿ
ತಾನಸ್ಮತ್ ಭೂಮೇ ಯಾವಯ ।೫೦॥

ಅರ್ಥ: ಎಲೈ ಭೂಮಿಯೇ, ನಿನ್ನಲ್ಲಿ ಯಾವ ಗಂಧರ್ವರು, ಅಪ್ಸರೆಯರು, ಆರಾಯರು, ಕಿಮೀದಿಗಳೆಂಬ ಪಿಶಾಚರು, ಎಲ್ಲಾ ರಾಕ್ಷಸರೂ ಉಂಟೋ, ಅವರೆಲ್ಲರನ್ನು ನಮ್ಮಿಂದ ಓಡಿಸು.

ವಿವರಣೆ: ಗಂಧರ್ವಾಪ್ಸರೆಯರನ್ನು ಪಿಶಾಚಾದಿಗಳ ಪಟ್ಟಿಯಲ್ಲಿ ಸೇರಿಸಿರುವುದು ಸಾಮಾನ್ಯರ ತಿಳುವಳಿಕೆಯಂತೆ ಮಾತ್ರ. "ಒಬ್ಬಳಿಗೆ ಗಂಧರ್ವನೊಬ್ಬನು ಮೆಟ್ಟಿಕೊಂಡನು." ಇತ್ಯಾದಿ ಔಪನಿಷದ ಕಥೆಗಳ ಪ್ರಯೋಗದಲ್ಲಿ, ಗಂಧರ್ವನೂ ಭೌತಾತೀತ ದುಷ್ಟಶಕ್ತಿಯೆಂಬ ಭಾವ ಕಾಣುತ್ತದೆ. ಹಾಡುವ ದೈವೀಗಂಧರ್ವ ಶಕ್ತಿ ಇದಲ್ಲ; ಹಾಗೇ ದೇವತೆಗಳು ಋಷಿಮುನಿಗಳ ತಪಃಪರೀಕ್ಷಾರ್ಥವಾಗಿ ಕಳುಹುವ ಅಪ್ಸರೆಯೂ ತಪಸ್ಸಿನ ವಿಘ್ನಶಕ್ತಿಯೆಂಬ ಸಾಮಾನ್ಯ ತಿಳುವಳಿಕೆಯಷ್ಟೇ ಈ ಶಬ್ದಪ್ರಯೋಗದ ಉದ್ದೇಶ್ಯ. ಗಂಧರ್ವಾಪ್ಸರೆಯರ ಉನ್ನತಾರ್ಥ ಇಲ್ಲಿ ವಿವಕ್ಷಿತವಲ್ಲ; ಅದು ಇಲ್ಲಿ ಖಂಡಿಸಲ್ಪಡಲೂ ಇಲ್ಲ. (ವಿನಾಯಕನೆಂದರೆ, ವಿಘ್ನಕಾರಕ, ಪರಿಹಾರಕ ಎಂಬೆರಡೂ ಅರ್ಥವಿರುವಂತೆ ಇಲ್ಲೂ ಕೆಳಗಿನ ಅರ್ಥವೇ ಮಾತ್ರ ವಿವಕ್ಷಿತ.)

## ೫೧ ಪಕ್ಷಿಗಳಿಗೆ ಆಶ್ರಯಳು

ಯಾಂ ದ್ವಿಪಾದಃ ಪಕ್ಷಿಣಃ ಸಂಪತಂತಿ
ಹಂಸಾಃ ಸುಪರ್ಣಾಃ ಶಕುನಾ ವಯಾಂಸಿ।
ಯಸ್ಯಾಂ ವಾತೋ ಮಾತರಿಶ್ವೇಯತೇ ರಜಾಂಸಿ
ಕೃಣ್ವಂ ಶ್ಚ್ಯಾವಯಂಶ್ಚ ವೃಕ್ಷಾನ್
ವಾತಸ್ಯ ಪ್ರವಾಮುಪವಾಮನು ವಾತ್ಯರ್ಚಿಃ ॥೫೧॥

ಅರ್ಥ : ಯಾವಳನ್ನು (ಆಶ್ರಯವನ್ನಾಗಿ) ಕುರಿತು ಎರಡು ಕಾಲಿನ ಪಕ್ಷಿಗಳು ಹಾರಿ ಬರುತ್ತವೆಯೋ, ಹಂಸಗಳು, ಗರುಡಪಕ್ಷಿಗಳು ಇನ್ನಿತರ ಪಕ್ಷಿಗಳೂ ಸಹ ಯಾವಳಲ್ಲಿ ಮಾತರಿಶ್ವನೆನಿಸಿದ ವಾಯುವು ಧೂಳನ್ನು ಹೊತ್ತು ಬೀಸುವನೋ. ಮರಗಳನ್ನುರುಳಿಸುವನೋ, ಗಾಳಿಯು ಹಿಂದೆಯೇ ಸಿಡಿಲಿನಜ್ವಾಲೆಯು ಬೀಸುವುದೋ ( ಮುಂದಿನ ಮಂತ್ರದೊಡನೆ ಇದು ಅನ್ವಯ ವಾಗಿರುತ್ತಾ, ಅಲ್ಲೇ ವಿವರಣೆ ನೀಡಲಾಗುವುದು.)

## ೫೨ ಹಗಲು ರಾತ್ರಿಗಳಿಗೆ, ಋತುಗಳಿಗೆ ಆಧಾರಳು

ಯಸ್ಯಾಂ ಕೃಷ್ಣಮರುಣಂ ಚ ಸಂಹಿತೇ
ಅಹೋ ರಾತ್ರೇ ವಿಹಿತೇ ಭೂಮ್ಯಾಮಧಿ ।
ವರ್ಷೇಣ ಭೂಮಿಃ ಪೃಥಿವೀ ವೃತಾವೃತಾ
ಸಾ ನೋ ದಧಾತು ಭದ್ರಯಾ ಪ್ರಿಯೇ ಧಾಮನಿ
ಧಾಮನಿ ॥೫೨॥

ಅರ್ಥ : ಯಾವಳಲ್ಲಿ ಕಪ್ಪಾದ ರಾತ್ರಿಯೂ, ಅರುಣೋದಯದಿಂದ ಆರಂಭವಾದ ಹಗಲೂ ಕೂಡಿ, ಭೂಮಿಯನ್ನಾಶ್ರಯಿಸಿರಬೇಕೆಂದು ವಿಧಿಸಲ್ಪಟ್ಟಿದೆಯೋ, ವಿಸ್ತಾರವಾದ ಭೂಮಿಯು ಮಳೆಯಿಂದ ಆವರಿಸಲ್ಪಟ್ಟು ಸುತ್ತಲ್ಪಟ್ಟದೆಯೋ, ಆ ಭೂಮಿಯು ನಮ್ಮನ್ನು ಮಂಗಳಕರವಾದ ಪ್ರಿಯ ಲೋಕ ಲೋಕಾಂತರಗಳಲ್ಲಿ ಸ್ಥಾಪಿಸಲಿ.

ವಿವರಣೆ : ಈ ಹಿಂದಿನ ಮಂತ್ರದಲ್ಲಿ ಪಕ್ಷಿಗಳಿಗೆಲ್ಲ ಭೂಮಿಯು ಆಶ್ರಯವೆಂದೂ, ಬೀಸುವಗಾಳಿಯು, ಸಿಡಿಲಿನ ಅಬ್ಬರದ ವರ್ಣನೆಯನ್ನು ಮಾಡಿತು. ಈ ಮಂತ್ರದಲ್ಲಿ ಹಗಲು ರಾತ್ರಿಗಳೂ ಭೂಮಿಯನ್ನಾಶ್ರಯಿಸಿರುವುದಾಗಿ ಹೇಳಿದೆ. ಸೌರಮಂಡಲದ ಬೇರಾವ ಗ್ರಹದಲ್ಲಿ ಹೀಗಿ

ದೆಯೋ ಗೊತ್ತಿಲವಾಗಿ, ಇಲ್ಲಿ ಇದು ನಮ್ಮ ಭಾಗ್ಯವೇ ಆಗಿವೆ. ದುಡಿಮೆಗೆ ಹಗಲು, ವಿಶ್ರಾಂತಿಗೆ ರಾತ್ರಿ -- ಈ ನಿಯಮವು ಭೂಮಿಯು ತನ್ನ ಅಕ್ಷದ ಮೇಲೆ ತಾನೇ ಸುತ್ತುವುದರಿಂದ ಏರ್ಪಟ್ಟದ್ದಾಗಿ, ಈ ವಿಭಾಗವು ಭೂಮಿಯ ಕೊಡುಗೆಯಾಗಿದೆ. ಹಾಗೇ ಋತುಗಳೂ ಸಹ -- ಪ್ರಧಾನವಾಗಿ ವರ್ಷರ್ತು. ತುಂಬುಮಳೆ ಭೂಮಿಯನ್ನು ಆನಂದದಿಂದ ಅಪ್ಪಿಕೊಳ್ಳುವ ದೃಶ್ಯ ರಂಜನೀಯವಾಗಿ ಇಲ್ಲಿ ವರ್ಣಿತವಾಗಿದೆ. ಈ ಭೂಮಿಯಲ್ಲಿ ಚೆನ್ನಾಗಿ ಬಾಳಿದವರು ಇಷ್ಟವಾದ ಲೋಕಾಂತರಗಳಿಗೆ ಹೋಗುವುದೂ ಭೂಮಿಯ ಕೃಪೆಯಿಂದಲೇ ಸಾಧ್ಯವೆಂಬುದನ್ನೂ ಮಂತ್ರ ಹೇಳಿದೆ.

## ೫೩ ಈ ಭೂಮಿಯನ್ನು ಕೊಟ್ಟವರೇ ಬುದ್ಧಿಯನ್ನೂ ಕೊಟ್ಟವರು !

ದ್ಯೌಶ್ಚ ಮ ಇದಂ ಪೃಥಿವೀ ಚಾನ್ತರಿಕ್ಷಂ
ಚ ಮೇ ವ್ಯಚಃ ।
ಅಗ್ನಿಃ ಸೂರ್ಯಃ ಆಪೋ ಮೇಧಾಂ
ವಿಶ್ವೇ ದೇವಾಶ್ಚ ಸಂ ದದುಃ ॥೫೩॥

ಅರ್ಥ : ದ್ಯುಲೋಕವೂ ಅನ್ತರಿಕ್ಷವೂ ಭೂಮಿಯೂ (ಈ ಮೂರರೂ ದೇವತೆಗಳೂ) ನನಗೆ ಇದನ್ನು (-- ಭೂಮಿಯನ್ನೂ, ಭೂಮಿಯಲ್ಲಿ ಬಾಳುವ ಭಾಗ್ಯವನ್ನೂ) ಕೊಟ್ಟರು. ಅಗ್ನಿಯೂ, ಸೂರ್ಯನೂ, ಅಬ್ದೇವತೆಯೂ, ವಿಶ್ವೇದೇವರೂ ನನಗೆ ಮೇಧಾಶಕ್ತಿಯನ್ನು ಕೊಟ್ಟರು.

ವಿವರಣೆ : ಮೊದಲು ನಿಲ್ಲಲು, ಕೂಡಲು, ಬಾಳಿಬದುಕಲು ಆಶ್ರಯ ಸಿಕ್ಕರೆ, ಈ ಬಾಳನ್ನು ಹಸನಾಗಿಸಲು, ಸುಖಮಯವನ್ನಾಗಿಸಲು ಉಳಿದೆಲ್ಲ

ಕೊಡುಗೆಗಳಿಗೂ ಅರ್ಥ ಉಂಟು. ಎಷ್ಟೇ ಬುದ್ಧಿಯಿದ್ದರೂ, ದೈವಭಕ್ತಿ ಶ್ರದ್ಧೆಗಳಿದ್ದರೂ ನಿಲ್ಲಲು ಜಾಗವಿಲ್ಲದಿದ್ದರೇನು ಫಲ ! ಹೀಗೆ ಮೊದಲು ಭೂಮಿಯ ಉಪಕಾರ ಸ್ಮರಣೀಯ. ದ್ಯುಲೋಕ, ಅಂತರಿಕ್ಷ, ಭೂಲೋಕಗಳ ಅಭಿಮಾನಿ ದೇವತಾತ್ರಯರು ಮಾಡಿದ ಉಪಕಾರ ಇದು. ಅಗ್ನಿ, ಸೂರ್ಯಾದಿಗಳದ್ದು ಆಮೇಲಿನ ಉಪಕಾರ, ಅದಕ್ಕೇ ಭೂಮಿ ನಮಗೆ ಸಮೀಪದ ಬಂಧು, ತಾಯಿ, ಆಗಿದ್ದಾಳೆ.

## ೫೪ ವೀರರ ಜನ್ಮವಿತ್ತ ಮಾತೆ

ಅಹಮಸ್ಮಿ ಸಹಮಾನ ಉತ್ತರೋ ನಾಮ ಭೂಮ್ಯಾಂ ।
ಅಭೀಷಾದಸ್ಮಿ ವಿಶ್ವಾಷಾಡಾಶಾಮಾಶಾಂ ವಿಷಾ ಸಹಿಃ ॥೫೪॥

ಅರ್ಥ : "ನಾನು ಎಲ್ಲವನ್ನೂ ಸಹಿಸುವವನಾಗಿಯೂ (ವಿಜಯಿಸುವವನಾಗಿಯೂ) ಹೆಸರಿನಿಂದ ಎಲ್ಲಕ್ಕಿಂತಲೂ ಮೇಲ್ಪಟ್ಟವನಾಗಿಯೂ ಈ ಭೂಮಿಯಲ್ಲಿದ್ದೇನೆ. ಎಲ್ಲವನ್ನೂ ಸೋಲಿಸಬಲ್ಲವನಾಗಿಯೂ, ವಿಶ್ವವನ್ನೇ ಗೆಲ್ಲಬಲ್ಲವನಾಗಿಯೂ, ದಿಕ್ಕು ದಿಕ್ಕುಗಳಲ್ಲೂ (ಶತ್ರುಗಳನ್ನು) ಎದುರಿಸಬಲ್ಲವನಾಗಿಯೂ ಸಹ "

ವಿವರಣೆ : ಇದು ವೀರನೊಬ್ಬನ ವಾಣಿಯಂತಿದೆ. ಇದಕ್ಕೂ ಈ ಸೂಕ್ತಕ್ಕೂ ಸಂಬಂಧ ಸ್ಪಷ್ಟವಲ್ಲದಿದ್ದರೂ, ಯಾವುದೇ ವೀರನಂ ಹೀಗೆ ಉದ್ಗರಿಸಲು ಸಾಧ್ಯವಾದುದು ಅವನು ಈ ಭೂಮಿಯಲ್ಲಿ ಹುಟ್ಟಿದ್ದರಿಂದ. ಆದ್ದರಿಂದ ಈ ವೀರಗೀತೆಯೂ ಅಭಿಮಾನದ ಆಳದಲ್ಲಿ ಭೂಮಿಗೀತೆಯೂ ಆಗಬಲ್ಲದು. ಮಕ್ಕಳ ಕೀರ್ತಿ, ಆ ಮಕ್ಕಳ ಮಾತಾಪಿತೃಗಳಿಗೂ ಸೇರಿದಂತೆ ಇಲ್ಲೂ ಭೂಮಿಪುತ್ರನೊಬ್ಬನ ಪ್ರತಾಪದ ಉದಾಹರಣೆಯೂ ಭೂದೇವಿಯ ಅಭಿಮಾನದ ನುಡಿಯಾಗಿರಲು ಸಾಕು.

## ೫೫ ಸುಖಜೀವನಾಧಾರಳಾದ, 'ಮಹೀ' 'ಪೃಥ್ವೀ'

ಅದೋ ಯದ್ದೇವಿ ಪ್ರಥಮಾನಾ ಪುರಸ್ತಾತ್
ದೇವೈರುಕ್ತಾ ವ್ಯಸರ್ಪೋ ಮಹಿತ್ವಂ
ಆ ತ್ವಾ ಸುಭೂತಮಾವಿಶತ್ ತದಾನೀಂ
ಅಕಲ್ಪಯಥಾಃ ಪ್ರದಿಶ್ಚತಸ್ರಃ ॥೫೫॥

ಅರ್ಥ : (ದೇವಿ, ಭೂಮಿಯೇ!) ಹಿಂದೊಮ್ಮೆ, ಅನಾದಿಕಾಲದಲ್ಲಿ, ದೇವತೆಗಳು ಆಜ್ಞಾಪಿಸಿದೊಡನೆಯೇ ನೀನು ವಿಶಾಲವಾಗಿ ಹರಡಿಕೊಂಡು, ಮುಂದೆಲ್ಲ ವಿಶಾಲವಾಗಿರುತ್ತಾ, ದೊಡ್ಡತನವನ್ನು ಹೊಂದಿ, 'ಪೃಥ್ವೀ, ಮಹೀ' ಎಂದು ಅನ್ವರ್ಥಳಾದೆ. ಆಗ ನಾಲ್ಕು ದಿಕ್ಕುಗಳಿಗೂ ಅರ್ಹವಾಗಿರುವಂತೆ, ಸುಖಜೀವನಕ್ಕೆ ಆಧಾರಳೂ ಆದೆ, ಸುಖಜೀವನದ ತತ್ತ್ವವನ್ನು ಪ್ರವೇಶಿಸಿದೆ.

ವಿವರಣೆ : ಭೂಮಿಯೇ ಇಲ್ಲದಿದ್ದ ಅನಾದಿಕಾಲವೊಂದರಲ್ಲಿ, ದೇವತೆಗಳು ಈ ತತ್ತ್ವಾಭಿಮಾನಿ ದೇವತೆಗೆ ಹೀಗೊಂದು ಅಪ್ಪಣೆಯಿತ್ತರಂತೆ. "ದೇವಿ! ವಿಶಾಲವಾಗಿ ಎಲ್ಲೆಡೆ ಹರಡಿಕೊಂಡು, ಸುಖ ಜೀವನಾಧಾರಳಾಗು" ಎಂದು. ಆದರ ಫಲವೇ ಈಗ ನಾವು ನಿಂತಿರುವ ಭೂಮಿಯೂ, ಇದನ್ನಾಶ್ರಯಿಸಿದ ಎಲ್ಲವೂ. ಭೂಮಿಯ ಎರಡು ದೊಡ್ಡ ಗುಣಗಳು, ಇದರ ಹರವು ವ್ಯಾಪ್ತಿ ಮತ್ತು ದೊಡ್ಡ ಆಕಾರ. ( ಮಹಿತ್ತ್ವಂ ) ಅಗಲವೂ ಇಲ್ಲದೆ, ಭಾರ ತಾಳಲೂ ಲಾರದೆ, ನಿಂಬೇಕಾಯಿಗಾತ್ರದ ಭೂಮಿಮಾತ್ರ ಇದಾಗಿದ್ದರೆ ಆಗ ಯಾರಿಗೆ ಪ್ರಯೋಜನವಾಗುತ್ತಿತ್ತು ? ಆದ್ದರಿಂದಲೇ ಈ ಎರಡು ಗುಣಗಳಿಗೆ ಮಹತ್ತ್ವ. ಅದರಿಂದಲೆ (ಸುಭೂತಂ) ಸುಖಜೀವನತತ್ತ್ವವನ್ನು ಭೂಮಿ ಪ್ರವೇಶಿಸಿ, ನಮಗೆಲ್ಲ ಸದಾಶ್ರಯಳಾಗಿದ್ದಾಳೆ.

## ೫೬ ಕೊಂಡಾಡುವಲ್ಲೇ ವಿಷಯವುಳ್ಳವಳು

ಯೇ ಗ್ರಾಮಾಃ ಯದರಣ್ಯಂ ಯಾಃ ಸಭಾಃ
ಅಧಿ ಭೂಮ್ಯಾಂ ।
ಯೇ ಸಂಗ್ರಾಮಾಃ ಸಮಿತಯಃ
ತೇಷು ಚಾರು ವದಾಮ ತೇ ॥೫೬॥

ಅರ್ಥ : ಯಾವ ಹಳ್ಳಿಗಳೂ, ಕಾಡೂ, ಸಭೆಗಳೂ ಭೂಮಿಯಲ್ಲುಂಟೋ, ಎಲ್ಲಿ ಯುದ್ಧವೋ, ಎಲ್ಲಿ ಸಾರ್ವಜನಿಕ ಸಮಾರಂಭಗಳುಂಟೊ. ಎಲ್ಲೆಲ್ಲಿ ಜನ ಸೇರುವರೋ ( ಸಂದರ್ಭ ಯಾವುದಾದರಾಗಲಿ ) ಅಲ್ಲೆಲ್ಲ. ( ಎಲೈ ಭೂಮಿಯೇ) ನಿನ್ನ ಬಗೆಗೆ ನಾವು ಒಳ್ಳೊಳ್ಳೆಯ ಮಾತುಗಳನ್ನೇ (ನಿನ್ನ ಈ ಕೀರ್ತಿಯನ್ನೇ ಕುರಿತು) ಮಾತಾಡುವಂತಾಗಲಿ.

ವಿವರಣೆ : ಕೇವಲ ಉಪಕಾರವನ್ನೇ ಮಾಡಿರುವ. ಮಾಡುತ್ತಿರುವ ಭೂಮಿಯ ಈ ದಿವ್ಯಗುಣಗಳನ್ನೇ ಎಲ್ಲೆಲ್ಲೂ ಕೊಂಡಾಡೋಣವೆಂಬ ಭಾವ ಈ ಇಡೀ ಸೂಕ್ತದ ಹೃದಯವೇ, ಇದರ ಮೂಲ ಸ್ಫೂರ್ತಿಯೇ ಆಗಿದೆ. ಜಗತ್ತಿನ ಬೇರಾವ ಸಾಹಿತ್ಯದಲ್ಲೂ ಭೂಮಿಯನ್ನು ಹೀಗೆ ಕೊಂಡಾಡಿರು ವುದು ಇಲ್ಲ. ಇಷ್ಟು ಕೊಂಡಾಡಿಯೂ ಸಾಲದೆಂಬ ಭಾವ ಇಲ್ಲಿದೆ. ಏಕೆಂದರೆ ಭೂಮಿಯ ದೊಡ್ಡತನ, ಉಪಕಾರ ಸದಾ ಸ್ಮರಿಸಿದರೂ ತೀರುವುದಿಲ್ಲ. ಸತ್ಪುತ್ರನಿಗೆ ತಾಯಿಯನ್ನು ಕೊಂಡಾಡುವುದರ ಹೊರತು ಬೇರೇನು ಕರ್ತವ್ಯ? ಹಾಗೆ ಇಲ್ಲೂ. ಇಲ್ಲಿ ಹೆಸರಿಸಲ್ಪಟ್ಟ, ಗ್ರಾಮಜೀವನ ಅರಣ್ಯ ಸಂಪತ್ತು, ಸಾಮಾಜಿಕ ಸಂಸ್ಥೆಗಳು ಇವೆಲ್ಲ ಭೂಮಿಯ ಕೊಡುಗೆಗಳೇ ಆಗಿವೆ. ಭೂಮಿ ಯನ್ನು ಕೊಂಡಾಡಲು ಎಲ್ಲಿ ಯಾವಾಗ ಹೊರಟರೂ, ಅದಕ್ಕೆ ಬೇಕಾದ ವಿಷಯ, ಅಲ್ಲೇ ಆಕ್ಷಣವೇ ದೊರೆಯುವಂತಿರುವುದೇ, ಈ ನಿರಂತರ ಕೀರ್ತಿಗೆ ಸಾಕ್ಷಿ.

## ೫೭ ನವೀನತೆಗೆ ಸದಾ ಆಶ್ರಯಳು

ಅಶ್ವ ಇವ ರಜೋ ದುದುವೇ ವಿ ತಾ೯ ಜನಾ೯
ಯ ಆಕ್ಷಿಯನ್ ಪೃಥಿವೀಂ ಯಾದಜಾಯತ ।
ಮಂದ್ರಾಗ್ರೇತ್ವರೀ ಭುವನಸ್ಯ ಗೋಪಾ
ವನಸ್ಪತೀನಾಂ ಗೃಭಿರೋಷಧೀನಾಂ ॥೫೭॥

ಅರ್ಥ : ಕುದುರೆಯು ತನ್ನ ಕಾಲನ್ನಾಶ್ರಯಿಸಿದ ಧೂಳನ್ನು (ಓಡುತ್ತಲೇ) ಕೊಡವಿಕೊಳ್ಳುವಂತೆ, (ಭೂಮಿಯೂ) ಇಲ್ಲಿ ಹಿಂದೆ ಹುಟ್ಟಿದ (ಬಾಳಿ ಬದುಕಿದ) ಎಲ್ಲರನ್ನೂ, ಸೃಷ್ಟಿಯ ಅನಾದಿಕಾಲದಿಂದ ಹಿಡಿದು, ಕೊಡವಿ ಕೊಂಡಿದ್ದಾಳೆ. ಸಂತೋಷದಾಯಕಳೂ. ಎಲ್ಲರಿಗಿಂತ ಮುಂದೆ ನಡೆಯು ವವಳೂ, ಜಗತ್ತಿನ ರಕ್ಷಕಳೂ, ಓಷಧಿ ವನಸ್ಪತಿಗಳನ್ನು ತನ್ನಲ್ಲಿ ಉಳ್ಳ ವಳೂ ಆದ (ಈ ಭೂಮಿಯು ಸಾಮಾನ್ಯಳಲ್ಲ.)

ವಿವರಣೆ ; ಭೂಮಿಯ ಗತಿ ಅವ್ಯಾಹತ. ಹಳೆಯದನ್ನೆಲ್ಲ ಕ್ರಮ ವಾಗಿ ಬಿಡುವ, ಹೊಸತನ್ನು ನಿರ್ಮಿಸುವ ಶಕ್ತಿ ಅದಕ್ಕುಂಟು. ಕಣ್ಣಿಂದ ನೋಡನೋಡುತ್ತಿರುವಂತೆಯೇ ಈ ಪರಿವರ್ತನೆ ಆಗುವುದೊಂದು ಜಾದು! ಕುದುರೆಯು ಆಯಾಸವಿಲ್ಲದೆಯೇ ಧೂಳನ್ನು ಕೊಡವುವಂತೆ: ಇಲ್ಲಿ ನೂತನ ಸೃಷ್ಟಿಯೂ. ಹಳೆಯದರ ವಿಸರ್ಜನೆಯೂ ಆಗುವುದರಿಂದಲೇ, ಕಾಲಕ್ಕೂ ಅರ್ಥವಿದೆ,

## ೫೮ ಭೂಸ್ತುತಿ ಪಾಠಕನ ವಾಣಿಯು ಮಧುರ

ಯದ್ವದಾಮಿ ಮಧುಮತ್ ತದ್ವದಾಮಿ
ಯದೀಕ್ಷೇ ತದ್ವನಂತಿ ಮಾ ।

ತ್ವಿಷೀಮಾನಸ್ಮಿ ಜೂತಿಮಾನ್
ಅವಾನ್ಯಾನ್ ಹನ್ಮಿ ದೋಧತಃ ॥೫೮॥

ಅರ್ಥ : ನಾನು ಏನನ್ನು ಆಡುತ್ತೇನೋ ಅದು ಜೇನಿನಿಂದ ಕೂಡಿ ರುಚಿಕರವಾಗಿರುವಂತೆಯೇ ಆಡುತ್ತೇನೆ. ಏನನ್ನು ನೋಡುತ್ತೇನೋ ಅದೆಲ್ಲ ನನ್ನನ್ನು ಕಾಮಿಸಿ, ನನ್ನನ್ನೇ ಹುಡುಕಿಕೊಂಡು ಬರುತ್ತದೆ! ಬುದ್ಧಿವಂತನೂ, ವೇಗಶಾಲಿಯೂ ಆದ ನಾನು ಹಿಂಸಾತ್ಮಕವಾದುದನ್ನೆಲ್ಲ ಕೊಲ್ಲುತ್ತೇನೆ, ನಿಗ್ರಹಿಸುತ್ತೇನೆ.

ವಿವರಣೆ : ಭೂಮಿಯನ್ನು ಕೊಂಡಾಡಲು ಭೂಮಿಯಷ್ಟಗಲ ದೇಶವೂ, ಭೂ-ನಿರ್ಮಿತ ಕಾಲವೂ ಸಾಲದೆಂದು ಹಿಂದೆ ಹೇಳಿತು. ಈ ರೀತಿ ಕೊಂಡಾಡುವ ವೇದವಾಣಿ ಮಧುರವೂ, ಮಧುಯುತವೂ ಎಂದು ಇಲ್ಲಿ ಹೇಳಿದೆ. ಈ ಮರ್ಮವನ್ನರಿತು, ಭೂಮಿಯನ್ನು ಕೊಂಡಾಡುವನ ವಾಣಿಯೂ, ನೋಡುವ, ನೋಟವೂ ವ್ಯರ್ಥವಲ್ಲ ಎಂದು ಮುಂದುವರೆದು ಹೇಳಿದೆ. ಭೂಮಿಯಮೇಲೆಯೇ ಭೂಶತ್ರುಗಳೂ ಉಂಟು. ಸುಖಭೂಮಿಯಾಗಲರ್ಹವಾದ ಇದನ್ನು ಕ್ಲೇಶ, ಕಶ್ಮಲ, ಕಲಹಗಳಿಂದ ಹಾಳಾಗಿಸಲು ನೋಡುವ, ದುಷ್ಕರ್ಮಿಗಳೇ ಈ ಶತ್ರುಗಳು. ಇವರನ್ನು ಗೆಲ್ಲುವ, ಕೊಲ್ಲುವ, ಸಾಮರ್ಥ್ಯ ಭೂಮಿಯ ಸತ್ಪುತ್ರನಿಗುಂಟು ಎನ್ನುತ್ತದೆ, ಮಂತ್ರ.

## ೫೯ ಆಶೀರ್ವದಿಸು, ತಾಯೇ!

ಶಾಂತಿ ವಾ ಸುರಭಿಃ ಸ್ಯೋನಾ
ಕೀಲಾಲೋಧ್ನೀ ಪಯಸ್ವತೀ ।
ಭೂಮಿರಧಿ ಬ್ರವೀತು ಮೇ
ಪೃಥಿವೀ ಪಯಸಾ ಸಹ ॥೫೯॥

ಅರ್ಥ : ಶಾಂತಳೂ, ಸುಗಂಧಯುಕ್ತಳೂ, ಸುಖಕರಳೂ, ಎದೆಯಲ್ಲಿ ಸುಖ ಕರಸ್ತನ್ಯವನ್ನು ತುಂಬಿಕೊಂಡವಳೂ, ಸಮೃದ್ಧವಾಗಿ ಹಾಲುಳ್ಳವಳೂ, ನನ್ನನ್ನು ಆಶೀರ್ವದಿಸಲಿ; ಸಮೃದ್ಧ ಹಾಲನ್ನೂ ಅನುಗ್ರಹಿಸಲಿ.

ವಿವರಣೆ : ಎಷ್ಟೊಂದು ಬೆಳೆದು, ಪ್ರೌಢನಾಗಿ, ಬಲಿಷ್ಠನಾಗಿ, ವೃದ್ಧನಾಗಿದ್ದರೂ, ಮಾನವನು ಭೂದೇವಿಯ ಶಿಶುವೇ. ಇದನ್ನವನು ಮರೆಯಲಾರದ ಗುಣಗಳು ಇಲ್ಲಿ ಸಂಗ್ರಹೀತವಾಗಿವೆ. ಶಾಂತಳಾಗಿರುವುದು ಅವಳ ಮೊದಲ ದೊಡ್ಡ ಗುಣ. ಭೂಮಿಯ ಸುಗಂಧ ಯಾರೂ ಕೆಡಿಸ ಲಾರದ್ದು. ಮಕ್ಕಳಿಗೆ ಬೇಕಾದ ಆಹಾರ ಅವಳೆದೆಯಲ್ಲಿ ಸದಾ ಇದೆ. ಭೂಮಿಯೇ ಕೊಡದಿದ್ದರೆ ಆಹಾರವನ್ನು ಬೇರಾವ ಲೋಕದಿಂದ ತರುವುದು! ನಮಗೆ ಸದಾ ಬೇಕಾದ್ದು ಈ ಭೂದೇವಿಯ ಆಶೀರ್ವಾದ ಎಂಬಲ್ಲಿ ವಿವೇಕ ವಿದೆ. ಇಂದು ಭೂಮಿಯನ್ನು ಹದಗೆಡಿಸಲು ಹೊರಟಿರುವ ಯಂತ್ರ ಯುಗದ ಮುಂದಾಳುಗಳು ಈ ಆಶೀರ್ವಾದದ ಬೆಲೆಯನ್ನು ಮನಗಂಡಂತಿಲ್ಲ.

## ೬೦ 'ವಿಶ್ವಕರ್ಮ'ನ ತಪಸ್ಸಿನಿಂದವತರಿಸಿದವಳು

ಯಾಮನ್ವೈಚ್ಛದ್ಧವಿಷಾ ವಿಶ್ವಕರ್ಮಾ
ಅಂತರರ್ಣವೇ ರಜಸಿ ಪ್ರವಿಷ್ಟಾಂ ।
ಭುಜಿಷ್ಯಂ ಪಾತ್ರಂ ನಿಹಿತಂ ಗುಹಾ
ಯದಾವಿರ್ಭೋಗೇ ಅಭವನ್ ಮಾತೃಮದ್ಭ್ಯಃ ॥೬೦॥

ಅರ್ಥ : ವಿಶ್ವವನ್ನೇ ಸೃಷ್ಟಿಸಿ ವಿಶ್ವಕರ್ಮನೆಂದು ಅನ್ವರ್ಥನಾಮನಾದ ಭಗವಂತನು, ಯಾಗ ಮಾಡಿ, ಹವಿಸ್ಸಮರ್ಪಣ ಪೂರ್ವಕನಾಗಿ, ನೀರೊಳಗೆ ಹೊಕ್ಕು ಅಡಗಿದ್ದ ಈ ಭೂದೇವಿಯನ್ನು ಹೊರತರಲು ಹುಡುಕಿದನು.

(ಸಫಲನಾದನು.) ಆಗ. ಭೋಗಗಳಿಗೆಲ್ಲ ಸಾಧನವಾದ ಈ ಪಾತ್ರೆಯಂಥ ಭೂಮಿಯು, ಅವರೆಗೆ ಗೂಢವಾದ ಗುಹೆಯಲ್ಲಿ ಬಚ್ಚಿಟ್ಟದ್ದು ( ಹೊರ ಬಂದು) ಭೋಗಾರ್ಹವಾಗಿ ಪ್ರಕಟವಾಯಿತು. ತಾಯನ್ನುಳ್ಳವರಿಗೆಲ್ಲ ಇದು (ಹೀಗೆ ಮಹಾತಾಯಿ ಆಯಿತು.)

ವಿವರಣೆ : ಏನು ಸೃಷ್ಟಿಯಾಗಬೇಕಾದರೂ ಹವಿಸ್ಸಮರ್ಪಣರೂಪದ ಯಜ್ಞ-ಯಾಗಗಳಿಂದಲೇ ಆಗುವಂತಿಲ್ಲವೆಂಬುದು ವೈದಿಕಸಿದ್ಧಾಂತ. ದೇವರು ತನಗೆ 'ಪುಣ್ಯಶ್ಲೋಕ'ನೆಂಬ ಹೆಸರುಂಟಾಗಲೂ ಸಹ ತಾನೂ ಒಂದು ಯಾಗ ವನ್ನು ಮಾಡಿ, ತಾನೇ ಹವಿಸ್ಸೂ, ಯಜಮಾನನೂ, ದೇವತೆಯೂ, ಪಶುವೂ ಆದನೆಂದು ತೈತ್ತಿರೀಯ ಬ್ರಾಹ್ಮಣ ಹೇಳುತ್ತದೆ ('ಶ್ರವಣ' ಎಂಬ ಹೆಸರು ಆ ನಕ್ಷತ್ರಕ್ಕೆ ಬಂದುದೇ ಹೀಗೆಂದು ಅಲ್ಲಿ ಹೇಳಿದೆ ) ದೇವರಿಗೂ ಬಿಡದ ನಿರ್ಬಂಧ, ಈ ಯಜುಸ್ತತ್ತ್ವ. ಹಾಗೆಯೇ ಭೂ ಸೃಷ್ಟಿಗೂ ದೇವರು ಪಾಡು ಪಟ್ಟು ಯಾಗ ಮಾಡಬೇಕಾಯಿತು. ಜಗತ್ತೆಲ್ಲ ಏಕಾರ್ಣವವಾಗಿ, ನೀರು ಭೂಮಿಯನ್ನು ನುಂಗಿದ್ದ ಪ್ರಳಯಕಾಲವದು. ಭೂತತ್ತ್ವ ಅವಿನಾಶಿಯಾ ದರೂ, ಜಲಾಂತರ್ಗತವಾಗಿ, ಅದೃಶ್ಯವಾಗಿ, ಈಗಿನ ಉಪಯುಕ್ತಾವಸ್ಥೆಯಲ್ಲಿ ರಲಿಲ್ಲ. ದೇವರು ಇದಕ್ಕಾಗಿ ಮಾಡಿದ ಯಾಗದ ಫಲವೇ, ಈ ಭೂಮಿ ಈಗ ದರ್ಶನೀಯಳಾಗಿ, ಉಪಯೋಗ, ಉಪಭೋಗಾರ್ಹಳಾಗಿರುವುದು. ಈ ಭೂಮಿಯೊಂದು ಅಕ್ಷಯ ಪಾತ್ರೆಯಿದ್ದಂತೆ. ವರ್ಷವರ್ಷವೂ ಕೊನೆಯಿ ಲ್ಲದೆ ಅನ್ನ ಕೊಡುವುದು ಇದು. ಇದು ಹೊರಬರದಿದ್ದರೆ ಏನುಗತಿಯಾಗು ತ್ತಿತ್ತು! ಯಾರಾರನ್ನೋ 'ತಾಯಿ' ಎಂದು ಕರೆಯುವ ನಮಗೆ ಈ ಆದಿ ತಾಯಿಯ ಅರಿವಾಗಬೇಡವೇ? —ಎಂದು ಮಂತ್ರ ಕೇಳುವಂತಿದೆ, "ಉದ್ಧೃ ತಾಸಿ ವರಾಹೇಣ ಕೃಷ್ಣೇನ ಶತಬಾಹುನಾ" ಎಂಬ ಪ್ರಸಿದ್ಧ ಯಾಜುಷ ಭೂಸೂಕ್ತ ಮಂತ್ರಕ್ಕೆ ಇಲ್ಲಿ ಭಾಷ್ಯವಿರುವಂತಿದೆ.

## ೭೧ ನೀನು ಕೊರತೆಯಿಲ್ಲದಿರಬೇಕು

ತ್ವಮಸ್ಯಾವಪನೀ ಜನಾನಾಂ ಅದಿತಿಃ
ಕಾಮದುಘಾ ಪಪ್ರಥಾನಾ।
ಯತ್ತ ಊನಂ ತತ್ತ ಆಪೂರಯಾಮಿ
ಪ್ರಜಾಪತಿಃ ಪ್ರಥಮಜಾ ಋತಸ್ಯ ॥೭೧॥

**ಅರ್ಥ :** ನೀನೊಂದು ವಿಶಾಲ ಹೊಲದಂತಿರುವ ದೇವಿ. (ಆವಪನೀ ಎಂದರೆ, ಬೀಜಗಳಂ ಮೊಳೆಯಲು ಅನುಕೂಲ ಕ್ಷೇತ್ರ.) ವಿವಿಧ ಜನರಿಗೆ, ಉತ್ಪತ್ತಿಗೆ ಅವಕಾಶಳಾದ ನೀನೇ ಅದಿತಿ. (ಮಿತಿಯಿಲ್ಲದ ಮಹಿಮೆಯುಳ್ಳವಳು.) ಹೆಸರು ಪಡೆದವರಲ್ಲಿ ಶ್ರೇಷ್ಠಳಾದ ಕಾಮಧೇನುವೂ ನೀನೇ. (ನಿನ್ನಲ್ಲಿ ಒಂದು ವೇಳೆ) ಏನೇ ಕೊರತೆಯಿದ್ದರೂ ಅದನ್ನೆಲ್ಲ ಋತದ ಪ್ರಥಮ ಪುತ್ರನಾದ ಪ್ರಜಾಪತಿಯು ಪೂರೈಸಲಿ (ಅವನ ಅಂಶಭೂತನಾದ) ನಾನೂ ಪೂರೈಸುತ್ತೇನೆ.

**ವಿವರಣೆ :** ಇದು ದೂದೇವಿಗೊಂದು ಮಂಗಳಶಾಸನ! ಹೊಲವಿಲ್ಲದ ರೈತನಿಗೆ ಉತ್ತಮ ಬೀಜಗಳಿಂದ ಯಾವ ಫಲವೂ ಬಾರದಂತೆ, ಭೂಮಿಯೇ ಇಲ್ಲದಿದ್ದರೆ ಯಾರಿಗೂ ಯಾವ ಪುರುಷಾರ್ಥ ಸಾಧನೆಯೂ ಆಗಲಾರದು. ಕೇಳಿದ್ದನ್ನೆಲ್ಲ ಕರುಣಿಸುವ, ಅಮಿತಮಹಿಮಾನ್ವಿತಳಾದ, ಕೀರ್ತಿವಂತಳಾದ ಭೂಮಿಗೆ ಯಾವ ಕೊರತೆಯೂ ಇರಬಾರದು (ಮರ್ತ್ಯರಾದ ನಮಗೆ ಕೊರತೆಗಳಿರುವುದು ಸಹಜ ; ಸಹನೀಯ ; ಆದರೆ ಇವಳು ಹಾಗಲ್ಲ,) ಯಾವುದು ಹೇಗಿರಬೇಕೋ ಅದು ಋತ. ಇದು ಅನಾದಿ ವಿಶ್ವನಿಯಮ. ಇದರ ರಕ್ಷಕನೇ ದೇವರು. ಇದರಲ್ಲೇ ಅವತರಿಸಿ, ಇದನ್ನು ರಕ್ಷಿಸುವವನೂ ಋತದ ರಕ್ಷಕನೇ. ಭೂಮಿಯನ್ನು ರಕ್ಷಿಸಿ, ಇದಕ್ಕಾವ ಕೊರತೆಯೂ ಇಲ್ಲದಂತೆ ಮಾಡಬೇಕೆಂಬ ಈ ಪ್ರಾರ್ಥನೆಯು ಪರಾರ್ಥದ ಪರಮ ಸೋಪಾನವಾದಿದೆ.

## ೬೨ ನಿನ್ನ ಮಡಿಲು ಖಾಲಿಯಾಗದಿರಲಿ !

ಉಪಸ್ಥಾಸ್ತೇ ಅನಮೀವಾ ಅಯಕ್ಷ್ಮಾ
ಅಸ್ಮಭ್ಯಂ ಸನ್ತು, ಪೃಥಿವಿ ಪ್ರಸೂತಾಃ।
ದೀರ್ಘಂ ನ ಆಯುಃ ಪ್ರತಿಬುದ್ಧ್ಯಮಾನಾ
ವಯಂ ತುಭ್ಯಂ ಬಲಿಹೃತಃ ಸ್ಯಾಮ ॥೬೨॥

ಅರ್ಥ : ತಾಯೀ! ನಿನ್ನ ಮಡಿಲುಗಳು (ಪ್ರಜನನ ಸ್ಥಾನಗಳು) ರೋಗಾದಿಗಳಿಲ್ಲದೇ, ಕ್ಷಯವಿಲ್ಲದೇ ನಮಗೆ ಸದಾ ಪ್ರಸವ ಮಾಡುತ್ತಿರಲಿ. (ಕೊಡಬೇಕಾದ ಧಾನ್ಯ, ಮೊದಲಾದ ಅನ್ನಾಹಾರಂಗಳನ್ನು ಕೊಡುತ್ತಿರಲಿ) ನಮಗೆ ದೀರ್ಘಾಯುಷ್ಯವುಂಟಾಗಿ, ನಾವು ಜ್ಞಾನಿಗಳಾಗಿ (ಜೀವನಮರ್ಮವನ್ನರಿತು) ಬಾಳುವಂತಾಗಿ, ನಾವು ನಿನಗೆ (ಆಗಾಗ) ಕಾಣಿಕೆಗಳನ್ನೂ ಉಪಾಯನಗಳನ್ನೂ ಅರ್ಪಿಸುವಂತಾಗಲಿ.

ವಿವರಣೆ : ಇದೂ ಮಂಗಳಾಶಾಸನವೇ. ಸುಮಂಗಲಿಯರಾದ ಸ್ತ್ರೀಯಳನ್ನು ಹರಸುವಾಗ ಹಿರಿಯರು "ನಿನ್ನ ಮಡಿಲು ಬರಿದಾಗದಿರಲಿ" ಎಂದು ಆಕೆಯ ಸಂತಾನವನ್ನು ಹರಸಿ ಹರಸುವಂತೆ, ಇಲ್ಲೂ ಭೂಮಿಯನ್ನು ಹರಸುವಾಗ ಆಕೆಯ ಗರ್ಭಸಿರಿ ನಿರಂತರವಾಗಿ ಬೆಳೆಯಲೆಂದು ಆಶಿಸಿದೆ. ಹಿಂದೊಮ್ಮೆ ಸಮೃದ್ಧ ನಾಡಾಗಿದ್ದು, ಹಸಿರುಸಂಪತ್ತಿನಿಂದ ಕೂಡಿದ ಭೂಭಾಗವೆಲ್ಲ ಇಂದು ಮರುಳುಗಾಡಾಗಿ, ಸುಡುಗಾಡಾಗಿರುವುದು ಮಾನವನ ದುರಾಸೆಯ ದೌರ್ಭಾಗ್ಯದ ಫಲ. (ಇಂದಿನ ಸಿಂಧ್, ಈಜಿಪ್ತ, ದಕ್ಷಿಣ ರಷ್ಯಾವನ್ನು ನೋಡಿ.) ಭೂಮಿಯು ಫಲವತಿಯಾಗಲು ಯಾರ ಪ್ರೋತ್ಸಾಹವೂ ಬೇಡ. ರಾಸಾಯನಿಕ ದ್ರವ್ಯಗಳಿಂದ ಅಧಿಕ ಬೆಳೆ ತೆಗೆಯುವ ಭರದಲ್ಲಿ, ವಿಪರೀತ ಪರಿಣಾಮಗಳುಂಟಾಗಿ, ಭೂಮಿಯೇ ಬಂಜರಾದೀತು! (ವಿಜ್ಞಾನಿಗಳೂ ಇಲ್ಲಿ ಎಚ್ಚರಿಸಿದ್ದಾರೆ.) ಆದರೆ ಕಾಡು ನಾಡಾಗಿ, ನಾಡು ಕಾಡಾಗಿ, ಪರ್ಯಾಯ ಕ್ರಮದಲ್ಲಿ ಎಲ್ಲಿ ಏನನ್ನು, ಹೇಗೆ, ಯಾವಾಗ ಬೆಳೆಯಬೇಕೋ ಆ ಗುಟ್ಟು ಭೂದೇವಿಗೆ

ಗೊತ್ತಿದೆ. ಭೂಮಿಯ ಪ್ರಜನನ ಸಾಮರ್ಥ್ಯವನ್ನು ಯಾರೂ ಹಾಳು ಮಾಡಲಾರರು. ಆಗಾಗ ತಾತ್ಕಾಲಿಕವಾಗಿ ಅಲ್ಲಲ್ಲಿ ಹಾಗಾಗಬಹುದು; ಆಗಿರಲೂ ಬಹುದು "ಖಲ್ವಾ ವಾ ಇಯಂ ಅಲೋಮಕಾಸೀತ್..." ಇತ್ಯಾದಿ ತೈತ್ತಿರೀಯಬ್ರಾಹ್ಮಣ ಭಾಗದಲ್ಲಿ ಹಾಗಾದ ಕಥೆಯೂ ಇದೆ. ಆದರೆ ಭೂಮಿಯು ಆಗ ತನಲ್ಲಿ ಸಸ್ಯವನಸ್ಪತಿಗಳುಂಟಾಗುವಂತೆ ಅದಿತಿ ದೇವತೆಯನ್ನುಳ್ಳ ಪುನರ್ವಸೂ ನಕ್ಷತ್ರದಲ್ಲಿ ಒಂದು ಯಾಗ ಮಾಡಿ, ಸಸ್ಯಮಾಲಿನೀ, ಸುಜಲಾ. ಸುಫಲಾ ಆದಳೆಂದು ವೇದ ಹೇಳುತ್ತದೆ. ಆದ್ದರಿಂದ ಭೂಗರ್ಭವು ಬಂಜೆಯಾಗದೆ, ರೋಗ ಪೀಡಿತವಾಗದೇ, ಉತ್ಪಾದನಾ ಸಾಮರ್ಥ್ಯವನ್ನು ಸದಾ ಹೊಂದಿ, ನಿತ್ಯ ಯೌವ್ವನ ಭರಿತಳಾಗಿ ಭೂಮಿಯಿರಬೇಕೆಂಬ ಪ್ರಾರ್ಥನೆ ಇಂದಿಗೂ. ಎಂದೆಂದಿಗೂ, ಸದಾ ಸಮಂಜಸವಾಗಿದೆ. ಹಾಗಿದ್ದಾಗ ಮಾತ್ರ ನಾವೂ ನಿತ್ಯ ಕರ್ಮಾನುಷ್ಠಾನಪರರಾಗಿರುತ್ತಾ. ವೈಶ್ವದೇವಾದಿಗಳನ್ನೂ ಪಂಚಮಹಾ ಯಜ್ಞಗಳನ್ನೂ ಆಚರಿಸುತ್ತಾ, ಭೂದೇವಿಗೂ ಸಲ್ಲಿಸಬೇಕಾದ ಕಾಣಿಕೆಗಳನ್ನು ಕೊಡುವಂತಾಗುತ್ತದೆ.

## ೬೩ ನನಗೆ ಪ್ರತಿಷ್ಠೆಯನ್ನನುಗ್ರಹಿಸು

ಭೂಮೇ ಮಾತರ್ನಿಧೇಹಿ ಮಾ
ಭದ್ರಯಾ ಸುಪ್ರತಿಷ್ಠಿತಂ ।
ಸಂವಿದಾನಾ ದಿವಾ ಕವೇ
ಶ್ರಿಯಾಂ ಮಾ ಧೇಹಿ ಭೂತ್ಯಾಂ ॥೬೩॥

ಅರ್ಥ : ಅಮ್ಮಾ, ಭೂದೇವಿ! ನನ್ನನ್ನು ನಿನ್ನಲ್ಲಿ ಸುಪ್ರತಿಷ್ಠಿತನಾಗಿರುವಂತೆ. ಮಂಗಳಮಯವಾಗಿ ಸ್ಥಾಪಿಸು. ಮೇಲಿನ ಲೋಕದ ನನ್ನ ಭಾಗ್ಯಾನುಸಾರ

ವಾಗಿ, ಎಲೈ ವಿಶ್ವದರ್ಶಿಯೇ! (ಭೂಮಿಯೇ! ಅಥವಾ ಭಗವಂತನೇ!) ನನಗೆ ಸಮೃದ್ಧವಾದ ಐಶ್ವರ್ಯವನ್ನನುಗ್ರಹಿಸು.

ವಿವರಣೆ : ಈ ಕೊನೆಯ ಮಂತ್ರದಲ್ಲಿ ಋಷಿಯು ಭೂಮಿಯನ್ನು ತನಗೆ ಪ್ರತಿಷ್ಠೆಯನ್ನನುಗ್ರಹಿಸುವಂತೆ ಪ್ರಾರ್ಥಿಸುತ್ತಾನೆ. ಬಾಳಿದರೆ ಕೀರ್ತಿವಂತನಾಗಿ ಬಾಳಬೇಕೇ ವಿನಾ, ನಃಯಿನರಿಗಳಂತೆ ಅಲ್ಲ! ನಿಲ್ಲಲು ನೆಲೆಯೀಯುವ ಭೂಮಿಯು ಆ ಕೀರ್ತಿ, ಗೌರವವನ್ನು ದಯಪಾಲಿಸಲೆಂಬುದು ಯುಕ್ತವಾಗಿದೆ. ಈ ಕೀರ್ತಿ, ಗೌರವಗಳು ಎಷ್ಟರಮಟ್ಟಿಗಿರಬೇಕೆಂಬುದು ನಮ್ಮ ನಮ್ಮ ಕರ್ಮಾನುಸಾರವಾಗಿ 'ಮೇಲಿನ' ಲೋಕದಲ್ಲಿ ದೇವರಿಂದ ತೀರ್ಮಾನಿಸಲ್ಪಡುವುದನ್ನು ಮಂತ್ರವು ಹೇಳಿದೆ. ಅದಕ್ಕೆ ಮೀರಿದ್ದು ವಿವಕ್ಷಿತವಲ್ಲ. ಸಾಧನ ಕ್ಷೇತ್ರವಾದ ಈ ಭೂಮಿಯು ನಮಗೂ ಒಂದಷ್ಟು ಐಶ್ವರ್ಯ, ಸಮೃದ್ಧಿಯನ್ನಿತ್ತ ಹೊರತು ಸಾಧನೆಯಾಗಲಾರದಾದ್ದರಿಂದ, ವೇದೋಕ್ತವಾದ ಶ್ರೀಸೂಕ್ತದಂತೆಯೇ ಈ ಅಥರ್ವ ಭೂಸೂಕ್ತವೂ, ಸಾಧಕನ ಶಾಂತಿ, ಸುಖ, ಸಮೃದ್ಧಿಗಳಿಗಾಗಿ ಪ್ರಾರ್ಥಿಸಿರುವುದು, ಇಹ–ಪರಗಳಿಗೂ ಅನುಕೂಲವಾಗಿದೆ,

ಸಾಮಾನ್ಯವಾಗಿ ಅಥರ್ವವೇದವೆಂದೊಡನೆಯೇ ಮೂಗುಮುರಿಯುವವರು ಇನ್ನಾದರೂ ಇಂಥ (ಮಂತ್ರಗಳ ಭಾಂಡಾರವಾಗಿರುವ ಈ ವೇದವನ್ನು ಗೌರವ ದೃಷ್ಟಿಯಿಂದ ಕಾಣಲೆಂದು ಪ್ರಕೃತಸೂಕ್ತವನ್ನು ಪೂರ್ತಾ ವ್ಯಾಖ್ಯಾನದೊಡನೆಕೊಡಲಾಗಿದೆ,

ಮಂತ್ರಗಳಲ್ಲಿ ಹೇಳಿರುವುದೆಲ್ಲ ಸಿದ್ಧಿಸಲೆಂದು ಪ್ರಾರ್ಥಿಸೋಣ,

ಮೊದಲನೆಯ ಅಧ್ಯಾಯ ಸಮಾಪ್ತ

॥ ಶ್ರೀಭೂದೇವ್ಯೈ ನಮಃ ॥

ಎರಡನೆಯ ಅಧ್ಯಾಯ

# ಕೃಷ್ಣಯಜುರ್ವೇದೀಯ ಭೂಸೂಕ್ತ

( ತೈ. ಸಂ. 1–5–3 )

ಪ್ರವೇಶ

ಅಥರ್ವವೇದೀಯ ಭೂಸೂಕ್ತದಲ್ಲಿ ದೇವಿಯ ಗುಣಪೂರ್ತಿಯನ್ನು ಕಂಡು ಅನುಭವಿಸಿದ ನಂತರ ಈಗ ಸುಪ್ರಸಿದ್ಧವಾದ ಯಜುರ್ವೇದೀಯ ( ಕೃಷ್ಣ, ತೈತ್ತಿರೀಯ ಸಂಹಿತೋಕ್ತ ) ಭೂಸೂಕ್ತ ಮಂತ್ರಗಳನ್ನು ಅಭ್ಯಸಿಸೋಣ.

ಈ ಸೂಕ್ತದ ಆರು ಮಂತ್ರಗಳು ಮಾತ್ರ ಇಲ್ಲಿ ಸಂಹಿತೋಕ್ತವಾಗಿದ್ದು, ಉಳಿದ ಈ ಸೂಕ್ತದ ಜೊತೆಯಲ್ಲಿ ಈಗ ವಾಡಿಕೆಯಂತೆ ಪಠಿಸಲ್ಪಡುವ ಹನ್ನೆರಡು ಮಂತ್ರಗಳನ್ನು ಖಿಲವೆನ್ನುತ್ತಾರೆ, ಆದರೂ ಸಕಲ ವೈದಿಕರೂ ಈ ಉಳಿದ ಹನ್ನೆರಡು ಮಂತ್ರಗಳನ್ನು ಭಾರತಾದ್ಯಂತ. ಪ್ರಕೃತ ಆರರೊಡನೆಯೇ ಕೂಡಿಸಿ ಪಠಿಸುವ ವಾಡಿಕೆ ಅನಾದಿಕಾಲದಿಂದ ಬಂದಿರುವುದರಿಂದ, ಇವೂ ವೈದಿಕವೆಂಬುದರಲ್ಲಿ ಸಂದೇಹ ಬೇಡ. ಹಿಂದಿನ ಅಧ್ಯಾಯದ ವಿಸ್ತಾರವಾದ ಪೀಠಿಕೆಯಲ್ಲೇ ಇಲ್ಲಿ ಹೇಳಬೇಕಾದ್ದನ್ನೆಲ್ಲ ಹೇಳಿರುವುದರಿಂದ ವಾಚಕರು ಅದನ್ನು ಸದಾ ಮನಸ್ಸಿನಲ್ಲಿಡಬೇಕಾಗಿ ಬಿನ್ನಹ. (ಸಾಯಣರು ಈ ಮಂತ್ರಗಳನ್ನು, ಕಲ್ಪಾನುಸಾರವಾಗಿ, ಗಾರ್ಹಪತ್ಯ, ದಕ್ಷಿಣಾಗ್ನಿ, ಆಹವನೀಯಾಗ್ನಿಗಳ ಸ್ಥಾಪನೆಗೆ ಯೋಗ್ಯವಾದ ಭೂಪ್ರದೇಶದ ಸ್ತುತಿಪರವಾಗಿ, ಕೇವಲ ಯಾಜ್ಞಿಕಾರ್ಥವನ್ನು ಮಾತ್ರ ಕೊಟ್ಟು, ಇದಕ್ಕೆ ಮೇಲಿನ ಅರ್ಥವನ್ನು ನಿರೂಪಿಸಿಲ್ಲ ಆದರೂ ಪೂರ್ವಿಕರ ವಿವರಣಾನುಸಾರವಾಗಿ, ಇಲ್ಲಿ ಯಾಜ್ಞಿಕಕ್ಕೆ ಮೀರಿದ ಅರ್ಥವಿಶೇಷವೇ ವರ್ಣಿಸಲ್ಪಡುವುದು.)

(ಮೊದಲನೆಯ ಮಂತ್ರ :)

## ೧ ತ್ರಿಲೋಕ ಶರೀರಿಣೀ

ಭೂಮಿರ್ಭೂರ್ವಮ್ನಾ ದ್ಯೌರ್ವರಿಣಾಂತರಿಕ್ಷಂ ಮಹಿತ್ವಾ ।
ಉಪಸ್ಥೇ ತೇ ದೇವ್ಯದಿತೇಽಗ್ನಿಮನ್ನಾದಂ
ಅನ್ನಾದ್ಯಾಯಾದಧೇ ॥೧॥

ಅರ್ಥ : ಎಲೈ ಭೂದೇವಿಯೇ ! ನಿನ್ನ ಮಹಿಮೆಯಿಂದ (ವ್ಯಾಪ್ತಿಯಿಂದ) ಅನ್ವರ್ಥವಾಗಿ ಭೂಮಿಯೆನಿಸಿಯೂ, ಶ್ರೇಷ್ಠತ್ವದ ದೆಸೆಯಿಂದ ದೇವಲೋಕವೆಂದೂ, ಮಹತ್ತ್ವದಿಂದ ಅಂತರಿಕ್ಷವೆಂದೂ ವ್ಯವಹರಿಸಲ್ಪಡುವೆ. ಎಲೈ (ಗುಣ) ಪೂರ್ಣಳೇ ! (ಅದಿತಿಯೇ) ನಿನಗೆ ಸಮೀಪದಲ್ಲಿ (ನಿನ್ನ ಮಡಿಲಲ್ಲಿ ) ಸರ್ವಾನ್ನಭೋಕ್ತಾ ಎನಿಸಿದ ಭಗವಂತನನ್ನು ಅನುಭವಿಸುವ ಯೋಗ್ಯತೆಯುಳ್ಳ ಅಗ್ನಿಪ್ರಾಯನಾದ ಜೀವಾತ್ಮನನ್ನು, ಆ ಸರ್ವಭೋಕ್ತೃವೆನಿಸಿದ ಅನ್ನಾನುಭವಕ್ಕಾಗಿ, ಸಮರ್ಪಿಸುತ್ತೇನೆ.

ವಿವರಣೆ : ಮೊದಲು ಇಲ್ಲಿ ಭೂಮಿಯನ್ನೇ ದ್ಯುಲೋಕವೆಂದೂ, ಅಂತರಿಕ್ಷವೆಂದೂ ವರ್ಣಿಸಿರುವುದನ್ನು ಮನಗಾಣಬೇಕು. ಕೆಳಗಿನ ಲೋಕವಾದ ಭೂಮಿಯನ್ನೇ, ಉಳಿದೆರಡರೊಡನೆ ಐಕ್ಯಗೊಳಿಸಿ, ತ್ರೈಲೋಕ್ಯವೆಂದು ಹೇಳಬಹುದೇ ? ಎಂದು ಕೇಳುವವರಿಗೆ ಮಂತ್ರವು ಹೀಗೆ ಉತ್ತರಿಸಿದೆ. ಭೂಮಿಯ ಮೂರುಗುಣಗಳೇ ಅದನ್ನು ಮೂರು ಲೋಕದ ಎತ್ತರಕ್ಕೇರಿಸಿವೆ, ಭೂಮ್ನಾ ವರಿಣಾ ಮಹಿತ್ವಾ— ಎಂಬುವೇ ಈ ಮೂರು ಗುಣಗಳು (೧) ದೊಡ್ಡತನ, ವಿಸ್ತಾರವಾಗಿ ಹರಡಿರುವಿಕೆ, ಕ್ಷಮಾಗುಣ ಮೊದಲಾದ ವಿಶೇಷ ಗುಣಗಳಿಂದಲೂ, ದೊಡ್ಡವಳೆನಿಸಿ, ಭೂಮಿ ಆಗಿದ್ದಾಳೆ. (ಪರಮಾತ್ಮನು ಭೂಮಾ ಎನಿಸಿ ನಿರತಿಶಯ ಬೃಹದ್ವಸ್ತುವಾಗಿ

ಛಾಂದೋಗ್ಯ ಉಪನಿಷತ್ತಿನಲ್ಲಿ ವರ್ಣಿಸಲ್ಪಟ್ಟಿರುವುದಕ್ಕೆ ಸರಿಯಾಗಿ, ಈ ದೇವಿಯೂ ಭೂಮಿ ಎನಿಸಿರುವುದು ಇವಳ ಪತಿಯ ಗುಣಕ್ಕೆ ಸರಿಯಾಗಿಯೇ ಇದೆ !) (೨) ವರಿಷ್ಠಾ, ವರಿಮ್ಣಾ, ಶ್ರೇಷ್ಠತ್ವೇನ —ಎಂದು ಸಾಯಣರು ವಿವರಿಸಿರುವಂತೆ, ಶ್ರೇಷ್ಠತ್ವ ಗುಣದಿಂದ ಇವಳೇ ದೇವಲೋಕವೆನಿಸಿದ್ದಾಳೆ. ಭೂತತ್ತ್ವಾಭಿಮಾನಿಯಾದ ಈ ದೇವತೆಗೆ ಭೂಮಿಯಂತೆ ದೇವಲೋಕವೂ ಶರೀರವಾಗಿದೆಯೆಂಬ ವಿಶೇಷಾರ್ಥವನ್ನು ಇಲ್ಲಿ ಹಿರಿಯರು ಮಾಡಿದ್ದಾರೆ. ಅಥವಾ ದೇವತೆಗಳೇ ತಮ್ಮ ಆತ್ಮೋಜ್ಜೀವನಾರ್ಥವಾಗಿ ಇಲ್ಲಿಗೆ ಬಂದು ತಪಸ್ಸು ಮಾಡಲು ಆಸೆಪಡುವುದರಿಂದಲೂ, ದೇವಲೋಕವನ್ನು ಕಳೆದುಕೊಂಡು ಆಗಾಗ ತಲೆತಪ್ಪಿಸಿಕೊಂಡು ಅಲೆದಾಡುವಾಗ ಭೂಮಿಗೇ ಬಂದು ಇಲ್ಲೇ ಆಶ್ರಯ ಪಡೆಯುವುದರಿಂದಲೂ, ಭೂಮಿಯಮೇಲಿರುವ ದೇವತೆಗಳೆನಿಸಿದ ಬ್ರಹ್ಮವಿತ್ತಮರಿಗೆ ಆಶ್ರಯಳಾಗಿರುವುದರಿಂದಲೂ, ಭೂಮಿಯೇ ಒಂದರ್ಥದಲ್ಲಿ ದೇವಲೋಕವೆಂಬುದು ಸಂಗತವಾಗಿಯೇ ಇದೆ. (ಭೂಮಿಯು ದೇವಲೋಕವಾದ ಸ್ವರ್ಗವಾಗುವುದೂ, ನರಕವಾಗುವುದೂ ನಮ್ಮ ನಮ್ಮ ಕರ್ಮಾನುಸಾರವಾಗಿ ಮಾತ್ರ. ಮನಃ ಪ್ರೀತಿಕರಃ ಸ್ವರ್ಗಃ, ನರಕಃ ತದ್ವಿಪರ್ಯಯಃ ಎಂಬ ಶ್ರೀವಿಷ್ಣುಪುರಾಣೋಕ್ತಿಯಂತೆ, ಮನಸ್ಸಿಗೆ ಪ್ರೀತಿಯನ್ನುಂಟುಮಾಡುವ ಅನುಭವವೇ ಸ್ವರ್ಗ; ಇದಕ್ಕೆ ವ್ಯತ್ಯಸ್ತವಾದ ಅನುಭವವೇ ನರಕ. ನಮ್ಮ ಅನುಭವದ ಮಾತು ಇದಾದರೂ, ಭೂಮಿಯಿರುವುದೇ ನಮಗೆ ಉತ್ತಮಾನುಭೂತಿಯನ್ನು ಕೊಡಲು. ಅದರ ಗುಣವೇ ಅಂಥದು ಎಂಬುದು ಈ ವರ್ಣನೆಯ ಉದ್ದೇಶ್ಯ.) (೩) ಮಹಿತ್ವಾ —ಮಹತ್ತ್ವೇನ ಎಂದು ಸಾಯಣರು ಹೇಳಿರುವಂತೆ, ಭೂಮಿಯೇ ಮಹತಿಯಿಂದ ಅಂತರಿಕ್ಷವೂ ಆಗುತ್ತಾಳೆ. ಸೂರ್ಯ ಚಂದ್ರರು ಬೆಳಗುವುದು ಆಕಾಶದಲ್ಲಾದರೂ, ಇವಳ ಪ್ರಯೋಜನಕ್ಕಾಗಿಯೇ ಅವರಿರುವುದರಿಂದ, ಅಂತರಿಕ್ಷಸ್ಥಪದಾರ್ಥಗಳೆಲ್ಲವೂ ಇವಳಿಗೆ ಶೇಷಭೂತವಾಗಿ, ಶರೀರಭೂತವಾಗಿದ್ದು, ಇವಳೇ ಅಂತರಿಕ್ಷಶಬ್ದವಾಚ್ಯಳಾಗುತ್ತಾಳೆ.

ಎಂದರೆ ಈ ಮೂರು ವಿಶೇಷಣಗಳಿಂದ ಇವಳ ವಿರಾಟ್ ಸ್ವರೂಪವನ್ನೇ ವರ್ಣಿಸಿದಂತಾಯಿತು. ಮೂರು ಲೋಕಗಳನ್ನಳೆದವನ ಪತ್ನಿಯಾದ್ದ

ರಿಂದ, ಆ ಮೂರು ಲೋಕಗಳೂ ಇವಳಿಗೂ ಶೇಷವಾದರೆ ಯುಕ್ತವಾದುದೇ ಆಗಿದೆ.

## ೨ ಅದಿತಿ

ಇವಳನ್ನು ಅದಿತಿಯೆಂದು ಕರೆದಿರುವುದನ್ನು ಮರ್ಮಸಹಿತ ಈಗ ಗಮನಿಸೋಣ. ಸಕಲ ದೇವತೆಗಳನ್ನೂ ದೇವಪತ್ನಿಯರನ್ನೂ ತನ್ನಲ್ಲಿ ಒಳಗೊಂಡಿರುವವಳೆಂಬರ್ಥದಲ್ಲಿ, ಇವಳನ್ನೇ ಶುಕ್ಲಯಜುರ್ವೇದ ಸಂಹಿತೆಯಲ್ಲಿ (II–61), ವಿಶ್ವದೇವ್ಯಾವತೀ ಎಂದು ವೇದ ಕರೆದಿದೆ. ವಿಸ್ತಾರವಾದಿ ಹರಡಿರುವವಳೆಂದು ಋಗ್ವೇದವು (V-46-6) ಇವಳನ್ನೇ ಉರುವ್ಯಚಾ ಎಂದು ಕರೆಯಿತು ಎಲ್ಲವನ್ನೂ ಧರಿಸಿರುವವಳಾದ್ದರಿಂದ ಧಾರಯತ್ ಕ್ಷಿತಿಂ ಎಂದೂ ಅಲ್ಲೇ (I–36–3) ವರ್ಣಿಸಿತು. ಇವು ಭೂದೇವಿಗೆ ಒಪ್ಪುವ ಗುಣಗಳಾಗಿ ಅದಿತಿ ಶಬ್ದದ ವಿಸ್ತಾರ ವ್ಯಾಖ್ಯಾನಗಳೇ ಆಗಿವೆ.

ಅದಿತಿ ಶಬ್ದವನ್ನೇ ನೋಡೋಣ. ದಿತಿ ಅಲ್ಲದವಳು ಅದಿತಿ ಎಂಬುದು ಬಹಳ ಜನರ ಗ್ರಹಿಕೆ. ದಿತಿ ಎಂದರೆ ಪರಿಮಿತಳು, ಒಡೆದವಳು, ಅಪರಿಪೂರ್ಣಳು ಎಂಬರ್ಥವುಂಟು (ದೋ-ಅವಖಂಡನೇ ಧಾತು.) ಅದಿತಿಯೆಂದರೆ ಅದೀನಾ ದೇವಮಾತಾ ಎಂದು ಯಾಸ್ಕರು ನಿರುಕ್ತದಲ್ಲಿ ಹೇಳಿರುವಂತೆ, ದೈನ್ಯವಿಲ್ಲದವಳು, ದೇವಮಾತೆ, ಎಂದರ್ಥವಾಗುವುದು. ಖಂಡನ ಅನರ್ಹಳು ಅಪರಿಮಿತಳೆಂಬುದು ಇಲ್ಲಿ ವ್ಯಂಗಾರ್ಥ. ಋ. ಸಂ (V-62-8)ರ ಭಾಷ್ಯದಲ್ಲಿ ಸಾಯಣರು ಈ ಶಬ್ದಕ್ಕೆ "ಅಖಂಡಳು" ಎಂದೇ ಅರ್ಥ ಮಾಡಿದ್ದಾರೆ. ಪೃಥ್ವೀ ನಾಮಗಳಲ್ಲಿ ಈ ಅದಿತಿ ಶಬ್ದವೂ ಬಂದಿರುವುದನ್ನು ಕಾಣುತ್ತೇವೆ. ವಾಜಸನೇಯ ಸಂಹಿತೆಯಲ್ಲಿ (X-16)ರ ಭಾಷ್ಯದಲ್ಲಿ ಅದಿತಿಯೆಂದರೆ ದಾರಿದ್ರ್ಯವಿಲ್ಲದವಳೆಂದೂ, ದಿತಿಯೆಂದರೆ, ದರಿದ್ರಳೆಂದೂ ಅರ್ಥ ಹೇಳಿದೆ. ವಿಶ್ವವ್ಯಾಪಕವಾದ ಪ್ರಕೃತಿತತ್ತ್ವಾಭಿಮಾನೀ ದೇವತೆಯೇ ಅದಿತಿಯೆಂಬುದನ್ನು ಭಾಷ್ಯ

ಕಾರರು ಅನೇಕ ಕಡೆ ಹೇಳಿದ್ದಾರೆ. ಋ.ಸಂ.(I-89-10) ಭಾಷ್ಯದಲ್ಲಿ ಸಾಯಣರು "ಅದಿತಿಃ, ಅದೀನಾ, ವಾ, ಅಖಂಡನೀಯಾ ವಾ ಪೃಥ್ವೀ ದೇವಮಾತಾ" ಎಂದು ವಿವರಣೆ ನೀಡಿದ್ದಾರೆ. ಪಾಶ್ಚಾತ್ಯರಲ್ಲಿ ಅನೇಕರು ಈ ಬಗೆಯ ಅರ್ಥಗಳನ್ನೇ ವಿಶೇಷವಾಗಿ ಆದರಿಸಿ, ವಿವರಿಸಿಯೂ ಇದ್ದಾರೆ.

ದಿತಿಗೆ ಪ್ರತಿಯೌಗಿಕಾರ್ಥದಲ್ಲಲ್ಲದೆ, ಅದಿತಿ ಪದವನ್ನು ಅದ್ ಧಾತುವಿನಿಂದ ಸರ್ವಂ ಅತ್ತೀತಿ ಅದಿತಿಃ ಎಂದು ಪರಿಗ್ರಹಿಸುವಾಗ, ಎಲ್ಲವನ್ನೂ 'ಭಕ್ಷಿಸುವವಳು' ಎಂದರೆ ಎಲ್ಲವನ್ನೂ ತನ್ನಲ್ಲಿ ಒಳಗೊಳ್ಳುವವಳು, ಸರ್ವವ್ಯಾಪಕಳೆಂಬ ಅರ್ಥವಾಗುವುದು. ಈ ಸೂಕ್ತದಲ್ಲಿ ಈ ಹಿಂದೆ ಬಂದ ಭೂಮಿಯ ಮೂರು ವಿಶೇಷಣಗಳಿಗೆ ಇದು ಆಗ ಪೋಷಕವಾಗುವುದು. ಯಾವ ಅರ್ಥದಲ್ಲಿ ಎಲ್ಲವನ್ನು ಒಳಗೊಳ್ಳುವಳೆಂಬುದನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ, ಶ್ರೀ ಅರವಿಂದರು ಇನ್ನೊಂದು ವಿಲಕ್ಷಣ ಆಧ್ಯಾತ್ಮಿಕಾರ್ಥವನ್ನು ವಿವರಿಸಿರುತ್ತಾರೆ. ಭೂಮಿಯೆಂದರೆ ಕೇವಲ ಪ್ರಾಕೃತಾರ್ಥದ ಭೂಮಿಯೆಂಬ ವಸ್ತುವಾಗಿರದೆ. ತದಭಿಮಾನೀದೇವತೆಯನ್ನು ಈ ಶಬ್ದ ಸೂಚಿಸುವಾಗ ಈ ದೇವತಾಸ್ವರೂಪವನ್ನು ಒಳಮರ್ಮಸಮೇತ ತಿಳಿಯುವುದವಶ್ಯವಾಗುವುದು, ಇವಳು ದೇವಮಾತೆ; 'ಗೋ'ಸ್ವರೂಪಿಣೀ, (ಬೆಳಕಿನ ಶರೀರವುಳ್ಳವಳು) ಎಲ್ಲ ಬೆಳಕೂ ಇವಳಿಂದಲೇ ಪ್ರಸೃತವಾಗುವುದು ಇತ್ಯಾದಿ ವೈದಿಕ ವರ್ಣನೆಗಳನ್ನು ಗಮನಿಸಿದಾಗ, ಇವಳು ಭುವಃ, ಸುವಃ ಎಂಬ ಇನ್ನಿತರ ಎರಡು ವ್ಯಾಹೃತಿಗಳನ್ನೊಳಗೊಂಡ ಭೂಃ ಆಗಿರುವಳೆಂಬ ವೇದದ ಮಾತಿಗೆ ವಿಶೇಷಾರ್ಥವಾಗುವುದು! ಅನಂತಮುಖ ಪ್ರಜ್ಞಾಸ್ವರೂಪಳು. Infinite Consciousness. ಮಾನವಪ್ರಜ್ಞೆಯು ಭೂಃ ಮಟ್ಟದಿಂದ ಮೇಲಮೇಲಕ್ಕೆ ವಿಕಸಿತವಾಗಿ. ಅನಂತವಾಗಲು ಆಶ್ರಯ ನೀಡುವವಳು, ಎಂಬ ವಿಲಕ್ಷಣಾರ್ಥವನ್ನು ಅರವಿಂದರು ಮಾಡಿದ್ದಾರೆ. (On the Vedas p. 151) ಅದಿತಿರ್ದೇವತಾಮಯೀ, ಋತಸ್ಯ ಪತ್ನೀ, ಸುಹವಾ, ಅನರ್ವಾ, ಜ್ಯೋತಿಷ್ಮತೀ, ಸ್ವರ್ವತೀ, ಇತ್ಯಾದಿ ವೇದೋಕ್ತ ಅದಿತಿ ವಿಶೇಷಣಗಳನ್ನೆಲ್ಲಾ ವಿವರಿಸುವುದಾದರೆ, ಅದೇ ಒಂದು ಗ್ರಂಥವಾಗುವುದು! ಭೂತತ್ತ್ವ ಅಷ್ಟು ಗಹನವಾದುದು.

## ೩ ಭೂದೇವಿ ಉಣಿಸುವ ದಿವ್ಯಾನ್ನ

ಇಂಥ ದೇವಿಯ ಮಡಿಲಲ್ಲಿ "ಅಗ್ನಿಯನ್ನು, ಅನ್ನಾದನನ್ನು, ಅನ್ನಾದ್ಯಾಯ = ಅನ್ನಾದ್ಯನಿಗಾಗಿ, ಸಮರ್ಪಿಸುತ್ತೇನೆ" ಎಂದರೇನರ್ಥ ವೆಂಬುದನ್ನು ಈಗ ನೋಡೋಣ.

ತೈತ್ತಿರೀಯ ಉಪನಿಷತ್ತಿನ ಭೃಗುವಲ್ಲಿಯಲ್ಲಿ (೧೦-೫) "ಅಹಂ ಅನ್ನಾದಃ" —"ನಾನು ಅನ್ನವನ್ನುಣ್ಣುವವನು" ಎಂದು ಮುಕ್ತಾತ್ಮನು ಸಾಮಗಾನ ಮಾಡುತ್ತಾ, ಪರಮಪದದಲ್ಲಿ 'ಕಾಮಾಗ್ನಿ'ಯಾಗಿ, ಬೇಕಾದಂತೆ, ಬೇಕಾದಷ್ಟು ಅನ್ನವನ್ನು ತಿನ್ನುವವನಾಗಿ ಸಂಚರಿಸುವುದಾಗಿ ಹೇಳಿದೆಯಷ್ಟೆ. ಪ್ರಾಕೃತಲೋಕದಲ್ಲಿ ಉಣ್ಣುವ ಕರ್ಮಫಲರೂಪ ಅನ್ನದಂತಲ್ಲದೆ, ಅಪ್ರಾಕೃತಲೋಕವಾದ ವಿಷ್ಣುಪದದಲ್ಲಿ ಅವನಿಗೆ ಹಸಿವಿಲ್ಲವೆಂದು (ಅಪಹತಪಾಪ್ಮಾ, ವಿಜರೋ ವಿಮೃತ್ಯುಃ, ಅಪಿಪಾಸಃ... ಇತ್ಯಾದಿ ವರ್ಣನೆಯಂತೆ) ಒಂದು ಕಡೆ ಹೇಳಿ, ಇಲ್ಲಿ ಹಸಿವಿದೆಯೆಂದೂ, ಅನ್ನ ಉಣ್ಣುವನೆಂದೂ ಹೇಳಿದರ, ವಿರೋಧ ಬಾರದಂತೆ ಅರ್ಥಮಾಡಬೇಕಷ್ಟೆ! ಹಾಗೆ ಮಾಡುವಾಗ ಈ ಹಸಿವು ದಿವ್ಯವಾಗಿಯೂ, ಈ ಹಸಿವನ್ನು ಇಂಗಿಸುವ ಅನ್ನವೂ ದಿವ್ಯವಾಗಿಯೂ ಮಾತ್ರವೇ ಕಾಣಬರುವುದು. ಭಗವಂತನೇ ಅನ್ನವಾಗಿಯೂ, ಭಗವದನುಭೂತಿಯ ಬಯಕೆಯೇ ಹಸಿವಾಗಿಯೂ, ಬಾಯಾರಿಕೆಯಾಗಿಯೂ ಅಲ್ಲಿ ತೋರುವುದಾದರೆ, ಇದು ಚೇತನನ ಆನಂದಾನುಭೂತಿಸ್ವರೂಪದ ಪರಮಪದಾನುಭವಕ್ಕೆ ಅನುಗುಣವಾಗಿ, ಯುಕ್ತವಾಗುವುದು. ಹೀಗೆ ದೇವರೆಂಬ ಅನ್ನವನ್ನುಣ್ಣುವ ಜೀವಾತ್ಮನೇ ಅನ್ನಾದನೆನಿಸುವನು. ಇವನೇ ಜ್ಯೋತಿಃಸ್ವರೂಪನಾಗಿ ಅಗ್ನಿ ಎನಿಸುವವನು. "ಅಗ್ರಂ ನೀಯತ ಇತ್ಯಗ್ನಿಃ" ಎಂಬಂತೆ, ದೇವರೆಡೆಗೆ ಒಯ್ಯಲ್ಪಡುವವನೆಂದರೂ ಸರಿಯೇ. ಇಂಥ ಚೇತನನ್ನು ಅನ್ನಾದ್ಯಾಯ — ಎಂದರೆ, ಭಗವದನುಭವವೆಂಬ ಊಟವನ್ನು ಉಣಿಸುವುದಕ್ಕಾಗಿ, ಭೂದೇವಿಯಲ್ಲಿ— ಅವಳ ಮಡಿಲಲ್ಲಿ, ಮಂತ್ರದ ಋಷಿಯು ಸಮರ್ಪಿಸುತ್ತಿದ್ದಾನೆಂದು ಭಾವ.

ಎಂದರೆ ಬೂದೇವಿಯು ಚೇತನನ ಕರ್ಮಾನುಸಾರವಾಗಿ, ಈ ಲೋಕದ ಪ್ರಾಕೃತ ಉಣಿಸನ್ನು (ಕರ್ಮಫಲವನ್ನು) ಅನುಭವಿಸಲು ಅವಕಾಶಕೊಡುವಂತೆಯೇ, ಅಪ್ರಾಕೃತವಾದ ದಿವ್ಯಾನುಭವವನ್ನು ಉಣಿಸಬಲ್ಲವಳಾಗಿದ್ದು, ಶರಣಾಗತರಾಗಿ, ಮಡಿಲನ್ನು ಆಶ್ರಯಿಸಿದ, ಶುದ್ಧಸಾತ್ತ್ವಿಕ ಜೀವಿಗಳಿಗೆ ಆ ಭಗವದನುಭೂತಿಯನ್ನು, ಉಣಿಸುತ್ತಾಳಾಗಿ, ಋಷಿಯು, ಈ ಎರಡನೇ ಉಣಿಸಿಗಾಗಿ ಶರಣಾಗತಿ ಮಾಡುವುದೇ ಈ ಮಂತ್ರದ ವೈಶಿಷ್ಟ್ಯ.

ಎರಡನೆಯ ಮಂತ್ರ

## ಇವಳ ಪ್ರದಕ್ಷಿಣೆಯಿಂದಲೇ ಸೂರ್ಯನಿಗೂ ಭಗವತ್ಪ್ರಾಪ್ತಿ ಆಯಿತು!

ಆಯಂ ಗೌಃ ಪೃಶ್ನಿರಕ್ರಮೀತ್ ಅಸನನ್
ಮಾತರಂ ಪುನಃ ।
ಪಿತರಂ ಚ ಪ್ರಯನ್ತ್ಸುವಃ ॥ ೨ ॥

ಅರ್ಥ : 'ಗೋ' ಶಬ್ದವಾಚ್ಯಳಾದ ಎಲೈ ಭೂದೇವಿಯೇ! ಈ ಬಿಳಿಯ ಬಣ್ಣವುಳ್ಳ ಸೂರ್ಯನು ವೇಗವಾಗಿ ಚಲಿಸುತ್ತಾ, ತಾಯಿಯಾದ ನಿನ್ನನ್ನು ಪ್ರದಕ್ಷಿಣ ಮಾಡಿದನು. ಮತ್ತೆ ಸುಂದರವಾಗಿ ಸಂಚರಿಸುತ್ತಾ, ತಂದೆಯನ್ನೂ (ಪರಮಪುರುಷನನ್ನು) ಹೊಂದಿದನು. (ಅಂತರ್ಯಾಮಿಯನ್ನಾಗಿ.)

ವಿವರಣೆ ಭೂದೇವಿಯಲ್ಲಿ ಶರಣಾಗತಿಮಾಡಿದವನಿಗೆ ದಿವ್ಯಾನ್ನ ಪ್ರಾಪ್ತಿಯಾಗಿ, ಹಸಿವು ಇಂಗುವ ಭಗವದನುಭೂತಿಯುಂಟೆಂದು ಹೇಳಿದ್ದಕ್ಕೆ ಇಲ್ಲಿ ಉದಾಹರಣೆ ತೋರಿಸಿದೆ.

'ಗೋ' ಶಬ್ದವು ಭೂವಾಚಕ. ಇಲ್ಲಿ ಸಂಬುದ್ಧಿಯಾಗಿ 'ಎಲೈ ಭೂಮಿಯೇ' ಎಂಬರ್ಥದಲ್ಲಿ "ಹೇ ಗೌಃ!" ಎಂದು ಅನ್ವಯ ಪೃಶ್ನಿ

ಯೆಂದರೆ ಶ್ವೇತವರ್ಣವುಳ್ಳ ಸೂರ್ಯನೆಂದು ಭಾಷ್ಯಕಾರರು ಇಲ್ಲೂ ಬೇರೆ ಡೆಯೂ ವೇದದಲ್ಲಿ ಅರ್ಥಮಾಡಿದ್ದಾರೆ. ಸೂರ್ಯನು ಭೂಪ್ರದಕ್ಷಿಣೆ ಮಾಡಿ, ತಾಯಿಯನ್ನು ಅನೇಕ ಕಾಲ ಉಪಾಸನೆ ಮಾಡಿದ್ದರಿಂದ, ಅದಿತಿ ಪುತ್ರನಾದ ಈ ಆದಿತ್ಯನಿಗೆ ದಿವ್ಯಫಲ ಪ್ರಾಪ್ತಿಯಾಯಿತು. ಅದೇನೆಂದರೆ, ಸರ್ವಪಿತಾ ಎನಿಸಿದ ಭಗವಂತನೇ ಅವನಲ್ಲೂ ಅಂತರಾತ್ಮನಾಗಿದ್ದು, ಇಂದಿಗೂ ಬ್ರಾಹ್ಮಣರು ಆದಿತ್ಯಮಂಡಲಾಂತವರ್ತಿಯಾದ ಭಗವಂತನನ್ನು ತ್ರಿಕಾಲಗಳಲ್ಲೂ, ಸಂಧ್ಯೆಯಲ್ಲಿ, ಗಾಯತ್ರೀದ್ವಾರಾ ಉಪಾಸನ ಮಾಡುವ ನೆಪದಲ್ಲಿ ಆದಿತ್ಯನನ್ನೂ ಪೂಜಿಸುವ ಯೋಗ್ಯತೆ ಪಡೆದದ್ದು. ಎಲ್ಲರಲ್ಲೂ ಅಂತರ್ಯಾಮಿಯಾಗಿಯೇ ಇರುವ ದೇವರು, ಸೂರ್ಯನಲ್ಲೂ ಇದ್ದೇ ಇರು ವಾಗ, ಈ ಫಲಪ್ರಶಂಸೆಗೇನರ್ಥ? ಎಂದರೆ, ದೇವರು ಎಲ್ಲರ ಅಂತರಾತ್ಮ ನಾಗಿದ್ದಾಗ್ಯೂ, ಸಿಕ್ಕ ಸಿಕ್ಕ ವಸ್ತುಗಳ ಅಂತರಾತ್ಮನೆಂದು ಯಾರೂ ಆವನನ್ನು ಉಪಾಸಿಸವುದಿಲ್ಲ! "ಯೋ ಅಂತರಾದಿತ್ಯೇ ಮನಸಾ ಚಿಂತಂ," "ಅಂತ ರಾದಿತ್ಯೇ ಹಿರಣ್ಮಯಃ ಪುರುಷಃ" ಎಂದು ಹೇಳುವಂತೆ, "ಅಂತಃಸದ್ಧ- ರ್ಮೋಪದೇಶಾತ್" ಎಂದು ಬ್ರಹ್ಮಸೂತ್ರಕಾರರೂ ನಿರ್ಣಯಿಸಿರುವಂತೆ, ಆದಿತ್ಯಮಂಡಲಸ್ಥನಾದ ಭಗವಂತನು ವಿಶೇಷವಾಗಿ ಉಪಾಸ್ಯನು. ಅಲ್ಲಿ ವಿಶೇಷ ಸನ್ನಿಧಾನವುಂಟು. "ಶುಕ್ರೇಣ ಜ್ಯೋತೀಗ್ಂಷಿ ಸಮನುಪ್ರವಿಷ್ಟಃ" ಎಂದು ಶ್ರುತಿಯಲ್ಲೂ, "ಯದಾದಿತ್ಯಗತಂ ತೇಜಃ" ಎಂದು ಗೀತೆಯಲ್ಲೂ, ಹೇಳಿರುವುದು ಈ ವಿಶೇಷ ಸಾನ್ನಿಧ್ಯವನ್ನು ಕುರಿತೇ. ಇಲ್ಲಿ ಸೂರ್ಯ ನನ್ನು ಉದಾಹರಣೆಯನ್ನಾಗಿ ಕೊಟ್ಟಿರುವುದು ಉತ್ತಮ ವ್ಯಕ್ತಿ ವಿಶೇಷದ ತಪಃ ಪ್ರಭಾವದನ್ನು ಪ್ರಶಂಸಿಸಲು, ಅಥವಾ ಅಂಥ ಪ್ರಸಿದ್ಧ ವೈಭವ ನಾದ ಸೂರ್ಯನಿಗೂ ಭೂದೇವಿಯ ಕರುಣೆ ಅವಶ್ಯವಾದ ಮೇಲೆ ನಮಗೆ ಇನ್ನೆಷ್ಟು ಅವಶ್ಯ! ಎಂಬುದನ್ನು ತೋರಿಸಲು.

ಸಂಧ್ಯಾಉಪಾಸನಾ ಕಾಲದಲ್ಲಿ ಶ್ರೀಮನ್ನಾರಾಯಣನನ್ನೇ ಧ್ಯಾನಿಸಿ ದರೂ, ಸೂರ್ಯಮಂಡಲಾಂತರ್ವರ್ತಿಯಾಗಿಯೇ. ಸೂರ್ಯಶರೀರಿಯನ್ನಾ ಗಿಯೇ, ಉಪಾಸಿಸುವುದರಿಂದ, ಇವರಿಂದ ಸೂರ್ಯನಿಗೇರ್ಪಟ್ಟ ಭಾಗ್ಯ ವಿಶೇಷವನ್ನು ಎತ್ತಿತೋರಿಸುವುದೂ ಇನ್ನೊಂದು ಉದ್ದೇಶ್ಯವಾಗಿದ್ದೀತು.

ಧ್ಯೇಯಸ್ಸದಾ ಸವಿತೃಮಂಡಲ ಮಧ್ಯವರ್ತೀ
ನಾರಾಯಣಃ ಸರಸಿಜಾಸನ ಸಂನ್ನಿವಿಷ್ಟಃ ।
ಕೇಯೂರವಾನ್ ಮಕರಕುಂಡಲವಾನ್ ಕಿರೀಟೀ
ಹಾರೀ ಹಿರಣ್ಮಯವಪುಃ ಧೃತಶಂಖಚಕ್ರಃ ॥

ಎಂಬ ಪ್ರಸಿದ್ಧ ಸ್ಮೃತಿವಾಕ್ಯ ಇಲ್ಲಿ ಅನುಸಂಧೇಯ ಈ ಸಂಬಂಧದ ಸಕಲ ಶ್ರುತಿಗಣಗಳ ವ್ಯಾಖ್ಯಾರೂಪವಾಗಿರುವ ಇದನ್ನು ಸಕಲ ವೈದಿಕರೂ ಪಠಿಸಿಯೇ ಗಾಯತ್ರೀ ಜಪಮಾಡುತ್ತಾರಾಗಿ, ಉಪಾಸಕರಿಗೆ ಭೂದೇವಿಯ ಉಪಾಸನಾ ಮಹಿಮೆಯನ್ನು ತೋರಿಸಲು, ಸೂರ್ಯನಿಗೆ ಸಿಕ್ಕ ಈ ಫಲವನ್ನು, ಇಲ್ಲಿ ರೋಚನಾರ್ಥವಾಗಿ ಹೇಳಿರುವುದು ಯುಕ್ತವಾಗಿದೆ.

ಮೂರನೆಯ ಮಂತ್ರ

## ಸೂರ್ಯನನ್ನು ವೇದವಾಕ್ಕು ಆಶ್ರಯಿಸಿರುವುದೂ, ಭೂದೇವಿಯು ವರವೇ !

ತ್ರಿಗ್ಂಶದ್ಧಾಮ ವಿರಾಜತಿ ವಾಕ್ಪತಂಗಾಯ ಶಿಶ್ರಿಯೇ ।
ಪ್ರತ್ಯಸ್ಯ ವಹ ದ್ಯುಭಿಃ ॥೩॥

ಅರ್ಥ : ಮೂವತ್ತು ಸ್ಥಾನಗಳಲ್ಲಿ (ಅಥವಾ ಮೂವತ್ತು ಮುಹೂರ್ತಗಳಲ್ಲಿ), (ಆ ಸೂರ್ಯನು) ಚೆನ್ನಾಗಿ ಪ್ರಕಾಶಿಸುತ್ತಾನೆ. ವೇದವಾಕ್ ತತ್ತ್ವವು (ಪಕ್ಷಿಯಂತೆ ಹಾರಿ ಸಂಚರಿಸುವ) ಸೂರ್ಯನನ್ನು ಆಶ್ರಯಿಸಿದೆ. (ಎಲೈ ಭೂದೇವಿಯೇ !) ನಿನ್ನ ತೇಜೋವಿಶೇಷ ವಿಶಿಷ್ಟವಾದ ಕಿರಣಗಳಿಂದ, ಈ ನನ್ನ, ಪ್ರತಿಕೂಲ ಸ್ವಭಾವಾದಿಗಳನ್ನು ಹೋಗಲಾಡಿಸು.

ವಿವರಣೆ : ಮತ್ತೂ ಸೂರ್ಯಪ್ರಶಂಸಾಪೂರ್ವಕವಾಗಿ ಸಾಧಕನಿಗೂ ಅಂಥ ಶ್ರೇಯಃಪ್ರಾಪ್ತಿಯಾಗಬೇಕೆಂದು ಇಲ್ಲಿ ಪ್ರಾರ್ಥಿಸಿದೆ:

ಸೂರ್ಯನಿಗೆ ಹಗಲಿನ ಹದಿನೈದು ಮುಹೂರ್ತಗಳೂ, ರಾತ್ರಿಯ ಹದಿನೈದು ಮುಹೂರ್ತಗಳೂ ವಾಸಸ್ಥಾನವಾಗಿದ್ದು, ಹೀಗೆ ಮುವ್ವತ್ತು ಮುಹೂರ್ತಗಳನ್ನೂ ವ್ಯಾಪಿಸಿ ನಿಂತಿರುವ ಅವನ ತೇಜಸ್ಸು ಅದ್ಭುತ! ಅಷ್ಟೇ ಅಲ್ಲ! ವೇದವಾಕ್ಕೆಲ್ಲ ಇವನನ್ನೇ ಆಶ್ರಯಿಸಿರುವುದೂ, ಇವನೂ ಪಕ್ಷಿಯಂತೆ ಆಕಾಶದಲ್ಲಿ ಓಡುತ್ತಿದ್ದರೂ, ವೇದವಾಕ್ಕೂ ಅವನನ್ನೆಡೆಬಿಡದೆ ಸಂಚರಿಸುತ್ತಿರುವುದೂ ಇನ್ನೊಂದು ಅದ್ಭುತ!!

ಋಗ್ಭಿಃ ಪೂರ್ವಾಹ್ಣೇ ದಿವಿ ದೇವ ಈಯತೇ ।
ಯಜುರ್ವೇದೇ ತಿಷ್ಠತಿ ಮಧ್ಯೇ ಅಹ್ನಃ ।
ಸಾಮವೇದೇನಾಸ್ತಮಯೇ ಮಹೀಯತೇ ॥
ವೇದೈರಶೂನ್ಯಃ ತ್ರಿಭಿರೇತಿ ಸೂರ್ಯಃ ॥

(ತೈ. ಬ್ರಾ. III-12-9)

ಎಂಬ ಶ್ರುತಿ ಇಲ್ಲಿ ಅನುಸಂಧೇಯ, ಆಕಾಶಮಾರ್ಗದಲ್ಲಿ ಸಂಚರಿಸುವ ಸೂರ್ಯದೇವನು ಬೆಳಗಿನಲ್ಲಿ ಋಗ್ವೇದ ಮಂತ್ರಗಳಿಂದ (ತದಭಿಮಾನೀ ದೇವತೆಗಳಿಂದ) ಒಡಗೂಡಿದವನಾಗಿ, ಅನುಸರಿಸಲ್ಪಡುವವನಾಗಿ ಸಂಚರಿಸುತ್ತಾನೆ. ನಡುಹಗಲಿಗೆ ಸರಿಯಾಗಿ ಕೊಂಚಕಾಲ, ಯಜುರ್ವೇದ ಮಂತ್ರಗಳಿಂದಲೂ, ಮಂತ್ರಾಭಿಮಾನೀ ದೇವತೆಗಳಿಂದಲೂ ಪರಿವೃತನಾಗಿ ನಮ್ಮ ನೆತ್ತಿಯ ಮೇಲೆ ನಿಲ್ಲುತ್ತಾನೆ. ಎಡಹಗಲಿನಲ್ಲಿ ಸಾಮವೇದಗಳೊಡನೆಯೂ ತನ್ಮಂತ್ರಾಭಿಮಾನೀ ದೇವತೆಗಳಿಂದಲೂ ಪರಿವೃತನಾಗಿರುತ್ತಾ, ಪೂಜಿಸಲ್ಪಡುತ್ತಾ, ಹಾಗೇ ಅಸ್ತಂಗತನಾಗುತ್ತಾನೆ. ಹೀಗೆ, ವೇದಗಳನ್ನು ಕ್ಷಣಕಾಲವೂ ಬಿಟ್ಟಿರದೆ, (ಅವುಗಳಿಂದ 'ಅಶೂನ್ಯ'ನಾಗಿಯೇ) ಮೂರು ವೇದಗಳೊಡನೆಯೇ ಸೂರ್ಯನು ಸಂಚರಿಸುತ್ತಾನೆಂದು ಮಂತ್ರಾರ್ಥ. ಸೂರ್ಯನು ಸಕಲ ವೇದಾಭಿಮಾನೀ ದೇವತೆಯಾದುದು ಹೀಗೆಯೇ. ಯಾಜ್ಞವಲ್ಕ್ಯರು ಇವನನ್ನು ಅನುಸಂಚರಿಸಿ ಶುಕ್ಲಯಜುರ್ವೇದದನ್ನು ಅಭ್ಯಸಿಸಿದುದಾಗಿಯೂ, ಹನುಮಂತನು ಸೂರ್ಯನನ್ನು ಅನುಸರಿಸಿಯೇ ಶಬ್ದ (ವ್ಯಾಕರಣ) ಶಾಸ್ತ್ರವನ್ನು ಅಧಿಕರಿಸಿದುದಾಗಿಯೂ ಐತಿಹ್ಯಗಳುಂಟಷ್ಟೇ! ಹೀಗೆ ವೇದವಾಕ್ಕಿಗೂ, ಸಕಲ ಶಬ್ದ

ಶಾಸ್ತ್ರಕ್ಕೂ ಸೂರ್ಯನು ಅಧಿದೇವತೆಯಾದುದು ಭೂಪ್ರದಕ್ಷಿಣೆಯಿಂದ ! ಆದ್ದರಿಂದ ನಮಗೂ ನಮ್ಮ ಆಂತರಶತ್ರುಗಳಾದ ಅಜ್ಞಾನಶಕ್ತಿಗಳು ತೊಲಗುವಂತೆ ಭೂಮಿಯು ಅನುಗ್ರಹಿಸಿ ಭಗವತ್ಪ್ರತಿಕೂಲ ನಡತೆಯು ದೂರವಾದರೆ, ನಮಗೂ ದೇವವಾಕ್ಯ ಕರಗತವಾಗಿ, ಕಂಠಗತವಾಗಿ, ವೇದವೇದ್ಯನ ಸ್ವರೂಪ ಸಾಕ್ಷಾತ್ಕಾರವಾಗಿ, ಔಜ್ಜ್ವಲ್ಯ ಪ್ರಾಪ್ತಿಯಾಗುವುದೆಂಬ ಆಸೆ ಈ ಮಂತ್ರದಲ್ಲಿ ಅಭಿವ್ಯಕ್ತವಾಗಿದೆ.

ನಾಲ್ಕನೆಯ ಮಂತ್ರ

## ಸೂರ್ಯನು ಜಗತ್ಪ್ರಾಣನಾದುದೂ ಭೂಮಿಯ ಮಹಿಮೆಯಿಂದಲೇ !

ಅಸ್ಯ ಪ್ರಾಣಾದಪಾನತ್ಯಂತಶ್ಚರತಿ ರೋಚನಾ ।
ವ್ಯಖ್ಯನ್ ಮಹಿಷಃ ಸುವಃ ॥೪॥

ಅರ್ಥ : ಈ ಸೂರ್ಯನ ಕಾಂತಿಯು ಅವನ ಉಚ್ಛ್ವಾಸ ಸದೃಶವಾದ ಉದಯದಿಂದ ಹಿಡಿದು ನಿಶ್ವಾಸದಂತಿರುವ ಅಸ್ತಮಯವನ್ನು ಕುರಿತು ಸಂಚಾರಮಾಡುವುದಾಗಿರುತ್ತಾ, ಮಹಾತೇಜೋಮಂಡಲಮಂಡಿತನಾದ ಸೂರ್ಯನು ಚೆನ್ನಾಗಿ ಪ್ರಕಾಶಿಸುವನು.

ವಿವರಣೆ : ಈ ಮಂತ್ರದಲ್ಲೂ ಸೂರ್ಯನ ಮಹತಿಯನ್ನು ಕೊಂಡಾಡಿದೆ (ಈ ಮಹತಿಯು ಭೂಪ್ರದಕ್ಷಿಣೆಯಿಂದ ಉಂಟಾದುದೆಂಬ ಹಿಂದಿನ ಸಂಗತಿಯೇ ಇಲ್ಲೂ ಪ್ರಸ್ತುತವಾಗಿದೆ.) ಸೂರ್ಯನನ್ನು ಇಲ್ಲಿ ಮಹಿಷನೆಂದು ಕರೆದಿರುವುದು ವಿಶೇಷ. ಮಹತಿ ಮಂಡಲೆ ಸೀದ-ತೀತಿ ಮಹಿಷಃ, ದೊಡ್ಡ ತೇಜೋ ಮಂಡಲದಲ್ಲಿ ಪ್ರಕಾಶಿಸುವನು ಎಂದು ಸಾಯಣರ ವಿವರಣೆ. ಉದಿಸುವ ಸೂರ್ಯನ ಬೆಳಕು ಉಚ್ಛ್ವಾಸವೆಂದೂ

ಅಸ್ತಮಿಸುವವನ ಬೆಳಕು ನಿಶ್ವಾಸವೆಂದೂ ಇಲ್ಲಿ ವರ್ಣಿತವಾಗಿರುವುದೂ ವಿಶೇಷ. ಇದು ಯಾರ ಉಚ್ಛ್ವಾಸ-ನಿಶ್ವಾಸವೆಂದರೆ, ತೈತ್ತಿರೀಯ ಆರಣ್ಯಕದಲ್ಲಿ ಅದಕ್ಕೆ ಹೀಗೆ ಉತ್ತರಿಸಿದೆ :

ಯೋಽಸೌ ತಪನ್ನುದೇತಿ। ಸ ಸರ್ವೇಷಾಂ ಭೂತಾನಾಂ
ಪ್ರಾಣಾನಾದಾಯೋದೇತಿ।.........
ಅಸೌ ಯೋಽಸ್ತಮೇತಿ । ಸ ಸರ್ವೇಷಾಂ ಭೂತಾನಾಂ
ಪ್ರಾಣಾನಾದಾಯಾಸ್ತಮೇತಿ......... (I-೧೪)

ಉದಿಸುವ ಸೂರ್ಯನು ಜಗತ್ತಿನ ಎಲ್ಲರ (ಎಲ್ಲ ಪ್ರಾಣಿಗಳ) ಉಸಿರನ್ನು, ಪ್ರಾಣವನ್ನು ತೆಗೆದುಕೊಂಡೇ ಉದಿಸುತ್ತಾನೆ, ಅಸ್ತಮಿಸುತ್ತಾನೆ. ಅಸ್ತಮಿಸುವಾಗಲೂ ಎಲ್ಲ ಪ್ರಾಣಿಗಳ ಉಸಿರನ್ನು, ಪ್ರಾಣವನ್ನೂ ತೆಗೆದುಕೊಂಡೇ ಅಸ್ತಮಿಸುತ್ತಾನೆಂದು ಭಾವ. ರಾತ್ರಿಯೇ ಪ್ರಾಣಿಗಳ ದಿನದಿನದ ಸಾವಿದ್ದಂತೆ ಬೆಳಗಾದರೆ ಬದುಕು; ರಾತ್ರಿಯಾದರೆ ಸಾವು; ಇದನ್ನು, ಅಮೃತ-ಮೃತ್ಯುಗಳನ್ನು, ಸರ್ವಪ್ರಾಣಿಗಳ ಅನುಭವಕ್ಕೆ ದಿನವೂ ತರುವವನೇ ಸೂರ್ಯನೆಂಬುದು ಈ ಮಂತ್ರಗಳ ಅರ್ಥ. ಅದರಂತೆ ಸೂರ್ಯನ ಉದಿಸುವ ಬೆಳಕನ್ನು ಜಗತ್ತಿನ ಉಚ್ಛ್ವಾಸವೆಂದೂ, ಅಸ್ತಮಿಸುವ ಕ್ಷೀಣಬೆಳಕನ್ನು ನಿಃಶ್ವಾಸವೆಂದೂ ಕರೆದಿರುವುದು ಕಾವ್ಯಾತ್ಮಕ ಭಾಷೆಯ ಸೊಗಸು, ಹೀಗೆ ಜಗತ್ತಿನ ಉಸಿರಾಗಿರುತ್ತಾ, ತೇಜೋಮಯಮಂಡಲವಿಶಿಷ್ಟನಾಗಿರುವ ಭಾಗ್ಯ ಸೂರ್ಯನಿಗೆ ದೊರೆತದ್ದು, ಅವನು ದಿನವೂ ಮಾಡುವ ಭೂಪ್ರದಕ್ಷಿಣೆಯ ಮಹಿಮೆಯಿಂದ ಎಂದು ಹೇಳಿ ಭೂಮಿಯ ಮಹಿಮೆಯನ್ನು ವರ್ಣಿಸುವುದು ಮಂತ್ರದ ಆಶಯ.

ಐದನೆಯ ಮಂತ್ರ

## ದೇವರೇ! ನನ್ನ ಕೋಪಕೃತ್ಯವನ್ನು ಕ್ಷಮಿಸು

ಯತ್ತ್ವಾ ಕ್ರುದ್ಧಃ ಪರೋವಪ ಮನ್ಯುನಾ ಯದವರ್ತ್ಯಾ।
ಸುಕಲ್ಪಮಗ್ನೇ ತತ್ತವ ಪುನಸ್ತ್ವೋದ್ದೀಪಯಾಮಸಿ ॥೫॥

ಅರ್ಥ : ಎಲೈ ಅಗ್ನಿ ಶಬ್ದವಾಚ್ಯನಾದ ಭಗವಂತನೇ ! ಅಶಕ್ತನಾದುದರಿಂದ ಕೋಪಗೊಂಡ ನಾನು, ಆ ಕೋಪದಿಂದ ನಿನ್ನನ್ನು ಬಿಟ್ಟುಬಿಟ್ಟದ್ದು (ಪರಿತ್ಯಾಗ ಮಾಡಿದ್ದು) ಏನುಂಟೋ, ಅದು ನಿನ್ನ ಕೃಪೆಯಿಂದ ಮತ್ತೆ ಸುಕೃತರೂಪ ತಾಳುವಂತಾಗಲಿ. ನಿನ್ನನ್ನು (ಇಗೋ ಈಗ) ಉದ್ದೀಪನಗೊಳಿಸುತ್ತೇನೆ.

ವಿವರಣೆ : ಈ ಮಂತ್ರದಲ್ಲಿ ಸಾಕ್ಷಾತ್ತಾಗಿ ಭೂದೇವಿಯ ಪ್ರಸ್ತಾಪವಿಲ್ಲವಾದಾಗ್ಯೂ, ಸಾಧಕನು ಭಗವಂತನಲ್ಲಿ ತನ್ನ ಕೋಪಕರ್ಮಕ್ಕೆ ಕ್ಷಮಾಯಾಚನೆ ಮಾಡುತ್ತಿರುವುದರಿಂದ, ಕ್ಷಮಾಗುಣದ ಸಾಕಾರಮೂರ್ತಿಯಾಗಿದ್ದು, ಕ್ಷಮಾ ಶಬ್ದವಾಚ್ಯಳೂ ಆಗಿರುವ ಭೂದೇವಿಯ ಎದುರಿಗೇ, ಭೂದೇವಿ ಸಹಿತನಾದ ಭಗವಂತನಲ್ಲಿ ಈ ಕ್ಷಮಾಯಾಚನೆ ಮಾಡುತ್ತಿರುವುದಾಗಿ ಹಿನ್ನೆಲೆಯ ಸೂಚನೆಯನ್ನೂ ಗಮನಿಸಿದರೆ, ಭೂದೇವಿಯಲ್ಲೇ ಒಂದು ರೀತಿಯಿಂದ ಈ ಕ್ಷಮೆ ಕೋರಿದ ಅನ್ವಯವಾಗುವುದು. ದಂಡಧರನಾದ ಭಗವಂತನು ಕರುಣೆದೋರುವುದು ಕ್ಷಮಾಗುಣಮೂರ್ತಿಯಾದ ಭೂದೇವಿಯ ಸಾಂನ್ನಿಧ್ಯ ಮತ್ತು ಪುರುಷಕಾರದಿಂದ.

ಮನುಷ್ಯನಿಗೆ ಒಳಗಿನ ಮಹಾಶತ್ರುವೆಂದರೆ ಕೋಪ. "ಕ್ರುದ್ಧೋ ಹನ್ಯಾದ್ ಗುರೂನಪಿ" ಎಂದು ಆರ್ಯವಾಣಿ ಹೇಳುತ್ತದೆ. ಗುರುಹತ್ಯೆಗೆ ಕೂಡ ಅದು ಪ್ರೇರಿಸುತ್ತದೆ: ಈ ಕೋಪವು ಅಶಕ್ತರಲ್ಲೇ ಮನೆಮಾಡಿಕೊಂಡಿರುವುದೆಂಬುದೂ ಅನುಭವದಲ್ಲಿದೆ

ಅಶಕ್ತಾಃ ತತ್ಪದಂ ಗನ್ತುಂ ತತೋ ನಿನ್ದಾಂ ಪ್ರಕುರ್ವತೇ ।

ಮೋಕ್ಷಪದಕ್ಕೆ ಹೋಗಲು ಅಶಕ್ತರಾದ ಬಲಹೀನರು, ಅಂಥದೊಂದು ಪದವೇ ಇಲ್ಲವೆಂದೂ, ದೇವರೇ ಇಲ್ಲವೆಂದೂ ಮುಂತಾಗಿ ನಾಸ್ತಿಕವಾದದಲ್ಲಿ ತೊಡಗುತ್ತಾರಾದುದರಿಂದಲೇ

ನಾಯಮಾತ್ಮಾ ಬಲಹೀನೇನ ಲಭ್ಯಃ (ಕಠೋಪನಿಷತ್ತು)

ಎಂದು ಶ್ರುತಿಯೂ ಹೇಳಿತು. ಬಲಹೀನತ್ತ್ವವೂ ಅಜ್ಞಾನ, ಅಸಹನೆ, ಅಸೂಯೆ, ಕೋಪಾದಿಗಳ ರೂಪ ತಾಳುವುದು. ಇಂಥ ಅಶಕ್ತನು ತಾನು ಕೇಳಿದಾಗಲ್ಲ, ತಾನು ಕೇಳಿದಂತೆಲ್ಲ, ಜಗತ್ತಿನ ವಿಧಿಗನುಗುಣವಲ್ಲದಿದ್ದರೂ, ದೇವರು ತನ್ನ ಅಕಾರ್ಯಗಳಿಗೆ ಸಹಾಯ ಮಾಡಬೇಕೆಂದೇ ಬಯಸುತ್ತಾನೆ. ಆ ಸಹಾಯ ಬಾರದಿದ್ದಾಗ ದೇವರನ್ನೂ ನಿಂದಿಸಿ, ಕೊನೆಗೆ ಆ ದೇವರೇ ಇಲ್ಲವೆಂದು ನಿರ್ಣಯಿಸುವುದೇ 'ದೇವರನ್ನು ಬಿಡುವುದು' ಎಂಬ ಪರಿತ್ಯಾಗ. "ಅನೀಶಯಾ ಶೋಚತಿ ಮುಹ್ಯಮಾನಃ", "ತನಗೊಬ್ಬ ಈಶನಿಲ್ಲವೆಂದು ಭಾವಿಸುವುದೇ ಅವನ ಅಜ್ಞಾನ, ದುಃಖಗಳಿಗೆ ಕಾರಣ" (ಮುಂಡಕ) ಶ್ರುತಿಯೂ ಈ 'ಪರಿತ್ಯಾಗವ'ನ್ನು ಕುರಿತು ಕನಿಕರಪಡುತ್ತದೆ. ಹೀಗೆಲ್ಲಾ ನಾಸ್ತಿಕವಾದ ಮಾಡಿಯೂ ಕೊನೆಗೆ ಕಣ್ಣುತೆರೆದ ಸಾಧಕನು ಪ್ರಕೃತ ಮಂತ್ರದಲ್ಲಿ 'ಅಗ್ನಿ' ಶಬ್ದವಾಚ್ಯನಾದ ಭಗವಂತನಲ್ಲಿ ಶರಣಾಗತಿ ಮಾಡಿ, ತನ್ನನ್ನು ಕ್ಷಮಿಸುವಂತೆ ಕೇಳಿಕೊಳ್ಳುತ್ತಾನೆ.

ದೇವರನ್ನು ಪುನಃ 'ಉದ್ದೀಪನಗೊಳಿಸುವುದು' ಎಂದರೇನು ? ಎಂದು ಕೇಳಬೇಕಾಗುವುದು ! ಭಕ್ತನೊಬ್ಬೊಬ್ಬನೂ ದೇವರನ್ನು ನಿರಾಕರಿಸುತ್ತಾ, ಲೋಕವೇ ನಾಸ್ತಿಕಮಯವಾದರೆ, ಒಂದು ರೀತಿಯಲ್ಲಿ ಇದು ಭಗವಂತನ ತೇಜೋ ಹೀನತೆಯೇ ಆಗುವುದು ಪುನಃ ಎಷ್ಟೆಷ್ಟು ಸಂಖ್ಯೆಯಲ್ಲಿ ಜನರು ಅವನನ್ನು ಕೊಂಡಾಡಿದರೆ ಅದೇ ಉದ್ದೀಪನ. ಹಿಂದೆ ಅಸುರರು ಇಂದ್ರನ ರಾಜ್ಯವನ್ನಪಹರಿಸಿದ್ದಾಗ, ಕ್ಷೀಣಗೊಂಡ ಅಗ್ನಿಯಂತೆ 'ವಾಮನ'ನಾಗಿದ್ದ ವಿಷ್ಣುವನ್ನು ಸ್ತುತಿರೂಪಮಂತ್ರಗಳಿಂದ 'ಬೆಳೆಸಿ', ತ್ರಿವಿಕ್ರಮನನ್ನಾಗಿಸಿದರು ಎಂಬ ಶುಕ್ಲಯಜುರ್ವೇದೀಯ ಶತಪಥಬ್ರಾಹ್ಮಣೋಕ್ತ ಆಖ್ಯಾನ ಇಲ್ಲಿ ಈ ಉದ್ದೀಪನ ಕ್ರಮಕ್ಕೆ ಉದಾಹರಣೆಯಾದೀತು. "ಬಲಂ ವಿಷ್ಣೋಃ ಪ್ರವರ್ಧತಾಂ" ಎಂದು ದಿನದಿನವೂ ವಿಷ್ಣುಬಲವನ್ನು ವೈದಿಕರು 'ಬೆಳೆಸು'

ವುದೇ ಹೀಗೆ. ಭಗವಂತನ ಪ್ರಸನ್ನತೆಯೇ ಅವನ 'ವರ್ಧನೆ'. ಅವನ ನಿಗ್ರಹರೂಪ ಕೋಪವೇ 'ಕ್ಷೀಣತೆ' ಎಂದರೆ ಕಾವ್ಯಾತ್ಮಕ ಭಾಷೆಯ ಮರ್ಯಾದೆಯಲ್ಲಿ ತಿಳಿಯಬೇಕಷ್ಟೆ.

ಭಕ್ತನು ದೇವರನ್ನು ಮರೆಯುವುದು ವಿಕಲ್ಪವೆಂದೂ ನೆನೆಯುವುದು ಸುಕಲ್ಪವೆಂದೂ, ಮಂತ್ರವು ಈ ಸುಕಲ್ಪ ಶಬ್ದಪ್ರಯೋಗದಲ್ಲಿ ತೋರಿಸಿದೆ.

ಆರನೆಯ ಮಂತ್ರ

## ದೇವರ ಕೋಪವನ್ನು ಧರಿಸಿಕೊಂಡ ಭೂದೇವಿ

ಯತ್ತೇ ಮನ್ಯುಪರೋಪ್ತಸ್ಯ ಪೃಥಿವೀಮನು ದಧ್ವಸೇ ।
ಆದಿತ್ಯಾ ವಿಶ್ವೇ ತದ್ದೇವಾ ವಸವಶ್ಚ ಸಮಾಭರನ್ ॥೬॥

ಅರ್ಥ : (ಎಲೈ ಭಗವಂತನೇ !) ಕೋಪದಿಂದ ನಿನ್ನ ಯಾವ ತೇಜಸ್ಸು ಬಿಡಲ್ಪಟ್ಟಿತೋ, ಅದು ಭೂಮಿಯನ್ನಾಶ್ರಯಿಸಿ, ಪ್ರವೇಶಿಸಿ, ಅದನ್ನು ವಸುಗಳೂ, ವಿಶ್ವೇದೇವರುಗಳೂ, ಆದಿತ್ಯರೂ, ಧರಿಸಿಕೊಂಡು, ಭರಿಸಿದರು.

ವಿವರಣೆ : ಸಾಧಕನು ತನ್ನನ್ನು ಮರೆತದ್ದರಿಂದ ಕೋಪಗೊಂಡು ನಿಗ್ರಹೋದ್ಯುಕ್ತನಾದ ಭಗವಂತನು, ಅಗ್ನಿಯು ಕಿಡಿಕಾರುವಂತೆ, ಸಿಡಿದಿದ್ದಾಗ, ಅವನ ಕೋಪ ರೂಪ ತೇಜೋವಿಶೇಷವು ಭೂಮಿಯನ್ನು ಮೊದಲು ಪ್ರವೇಶಿಸಿತು. ಭೂಮಿಯು ಇಲ್ಲಿ ಭಕ್ತನ ಮೇಲೆ ಕಿಡಿಕಾರಿದ ಭಗವಂತನ ಕೋಪವನ್ನು ತನ್ನಲ್ಲಿ ಸ್ವೀಕರಿಸಿ, ಅವನನ್ನು ಪ್ರಸನ್ನಗೊಳಿಸಿದ. ಅವಳ ಪುರುಷಕಾರ ಕೃತ್ಯ ಸ್ಪಷ್ಟವಾಗಿ ವರ್ಣಿತವಾಗಿರುವುದು ಗಮನೀಯ. ಕ್ರಮೇಣ ಇದನ್ನು ಆದಿತ್ಯ, ವಸು, ವಿಶ್ವೇದೇವರೂ ಹೊತ್ತು ಧರಿಸಿದರೆಂದರೆ ಭಗವತ್ಕೋಪದ ತೀವ್ರತೆಯು ಅರಿವಾಗುವುದು. ಹೀಗೆ ಹಿಂದಿನ ಮಂತ್ರದಲ್ಲಿ ಶರಣಾಗತನಾದ ಭಕ್ತನ ಮೇಲಿನ ದೇವರ ಕೋಪ ಇಳಿದ ಪ್ರಕಾರ

ವನ್ನು, ಅದನ್ನು ಭೂದೇವಿ ತಾಳಿಕೊಂಡ ಬಗೆಯನ್ನು ಇಲ್ಲಿ ವರ್ಣಿಸಿದಂತಾಯಿತು. ತಂದೆಯು ತನ್ನ ಮಗುವನ್ನು ಸಿಟ್ಟಿನಿಂದ ಹೊಡೆಯಬಂದಾಗ್ಯ, ತಾಯಿಯು ಅಡ್ಡಬಂದು, ಮಗುವಿಗೆ ಬೀಳಲಿರುವ ಏಟನ್ನು ತಾನು ವಹಿಸಿಕೊಂಡ ಭಾವವನ್ನು ಇಲ್ಲಿ ಭೂದೇವಿಯ ಕೃತ್ಯದಲ್ಲಿ ಕಂಡರೆ, ಪುರುಷಕಾರದ ಸ್ವರೂಪ ಅರಿವಾಗುವುದು. ಇವಳಿಲ್ಲದಿದ್ದರೆ ಆ ಕೋಪಶಮನವೆಂತಾಗುತ್ತಿತ್ತು ? ವಸುಗಳೂ, ಆದಿತ್ಯರೂ, ವಿಶ್ವೇದೇವತೆಗಳಲ್ಲಿ ಯಾವ ತೇಜಸ್ಸು ಇನ್ನು ಉಂಟೋ, ಅದು ಅವರು ಭಗವಂತನ ಕೋಪವನ್ನು ನುಂಗಿಕೊಂಡು ಧರಿಸಿರುವುದರಿಂದಲೇ, ಎಂದು ಹೇಳಿರುವಲ್ಲಿಯೂ ವಿಷ್ಣು ತೇಜಸ್ಸೇ ಎಲ್ಲವನ್ನೂ ಆವರಿಸಿದೆಯೆಂಬ ವಿಶಾಲ ಔಪನಿಷದ ದೃಷ್ಟಿಯೇ ಇದೆ. "ತಮೇವ ಭಾನ್ತಂ ಅನುಭಾನ್ತಿ ಸರ್ವೇ, ತಸ್ಯ ಭಾಸಾ ಸರ್ವಮಿದಂ ವಿಭಾತಿ ।" ಎಂಬ (ಕಠ) ಶ್ರುತಿ ಇದನ್ನು ಪೋಷಿಸುತ್ತದೆ.

(ಯಜುರ್ವೇದೀಯ ಭೂಸೂಕ್ತ ಇಲ್ಲಿಗೆ ಮುಗಿಯಿತು)

ಈ ಮುಂದಿನ ಮಂತ್ರಗಳನ್ನು ಭೂಸೂಕ್ತಾನುಬಂಧಿಯಾಗಿ ಪಠಿಸುವುದು ವೈದಿಕರ ವಾಡಿಕೆ. ಇವು ಅಥರ್ವಣ ವೇದಕ್ಕೆ ಒಂದು ಕಾಲದಲ್ಲಿ ಸೇರಿದ್ದುವೆಂದು ಹಿರಿಯರು ಹೇಳುತ್ತಾರೆ. ಆದರೆ ಈಗ ಉಪಲಬ್ಧವಾಗಿರುವ ಅಥರ್ವಮಂತ್ರಗಳಲ್ಲಿ ಇವು ಕಾಣ ಬರುವುದಿಲ್ಲ. ಕಂಡುಬಂದಿರುವುದನ್ನು ಈಗಾಗಲೇ ಕೊಟ್ಟಾಗಿದೆ. ಶಿಷ್ಟಾಚಾರಕ್ಕೆ ಸಮ್ಮತವಾದ, ಈ ಮುಂದಿನ ಮಂತ್ರಗಳನ್ನು ತಿಳಿಯಬೇಕು.

ಏಳನೆಯ ಮಂತ್ರ

## ಇಂದ್ರಿಯ ಶಕ್ತಿಯನ್ನೂ, ಬ್ರಹ್ಮತೇಜಸ್ಸನ್ನೂ ಅನುಗ್ರಹಿಸುವವಳು

ಮೇದಿನೀ ದೇವೀ ವಸುನ್ಧರಾ
ಸ್ಯಾದ್ವಸುಧಾ ದೇವೀ ವಾಸವೀ ।
ಬ್ರಹ್ಮವರ್ಚಸಃ ಪಿತೄಣಾಂ
ಶ್ರೋತ್ರಂ ಚಕ್ಷುರ್ಮನಃ ॥ ೭ ॥

ಅರ್ಥ : ರತ್ನಾದಿ ಐಶ್ವರ್ಯವನ್ನು ಧರಿಸಿ ವಸುಂಧರೆಯೆನಿಸಿ, ಆ ಧನವನ್ನು ಪೋಷಿಸುತ್ತಾ ವಸುಧಾ ಎನಿಸಿ. ಧಾನ್ಯರೂಪಧನವನ್ನು ಧರಿಸಿ ವಾಸವೀ ಎನಿಸಿ, ಪ್ರಕಾಶಿಸುತ್ತಾ ದೇವೀ ಎನಿಸಿ, ಪ್ರಸಿದ್ಧಳಾದ ಭೂದೇವಿಯು (ಮೇದಿನೀ ಎಂದು ಕರೆಯಲ್ಪಡುವವಳು), ನನ್ನಲ್ಲಿ (ಅನುಗ್ರಹಮಯಳು) ಆಗಲಿ. ನನ್ನ ಪಾಲಕರಾಗಿರುವ ಪಿತೃಗಳಿಗೂ, ಇಂದ್ರಿಯತೇಜಸ್ಸನ್ನೂ, ಬ್ರಹ್ಮವರ್ಚಸ್ಸನ್ನೂ, (ಅನುಗ್ರಹಿಸಲಿ).

ವಿವರಣೆ : ಇಲ್ಲಿ ಭೂಮಿಯನ್ನು ಮುಖ್ಯವಾಗಿ ಮೇದಿನೀ ಎಂದು ಕರೆದಿದೆ. ಏಕೆಂದರೆ, ಹಿಂದೆ ಮಧುಕೈಟಭರೆಂದಬ ಅಸುರರನು ಭಗವಂತನು ಸಂಹರಿಸಿದಾಗ ಆ ಅಸುರರ ದುರ್ಗಂಧಯುಕ್ತವಾದ ರಕ್ತ ಮಾಂಸ ಪ್ರವಾಹದಲ್ಲಿ (ಮೇದಸ್ಸು) ಭೂಮಿಯೂ ದುರ್ಗಂಧಮಯಳೇ ಆದಳು ( ಇಂಥವರು ಇನ್ನೆಷ್ಟು ದುಷ್ಟರು ಇಲ್ಲಿ ಹುಟ್ಟಿ ಸತ್ತರೋ ! ) ಇವಳಿಗೆ ಈ ಸಂಬಂಧದಿಂದ ಮೇದಿನೀ ಎಂದು ಹೆಸರುಂಟಾದ ಅನಾದಿ ಐತಿಹ್ಯವನ್ನು ಮುರಾರಿ

ಮಧುಕೈಟಭ ದಾನವೇಂದ್ರ ಮೇದಃ
ಪ್ಲವ ವಿಸ್ರಾ ವಿಷಮೈವ ಮೇದಿನೀಯಂ ॥

(ಇತ್ಯಾದಿ) (I–14)

ಯುಗಯುಗದಲ್ಲಿಯೂ ಭಗವಂತನ ಅವತಾರಗಳಲ್ಲಿ, ಈ 'ಸರ್ವಗಂಧ'ನ ಸಂಯೋಗದಿಂದ ಆ ದುರ್ಗಂಧವನ್ನವಳು ತೊಳೆದುಕೊಂಡು ಸುಗಂಧವತೀ ಆಗುವಳಂತೆ. ಶ್ರೀರಾಮಚಂದ್ರಾವತಾರ ಕಾಲದಲ್ಲಿ, ಅವನನ್ನೆ ಪತಿಯನ್ನಾಗಿ ಹೊಂದಬೇಕೆಂದು, ಅಯೋಧ್ಯಾವಾಸಿಗಳೂ, ಕೋಸಲ ಜನರೂ ಬಯಸುವು ದಿರಲಿ, ಅದಕ್ಕೆ ಮುಂಚೆಯೇ ಈ ದುರ್ಗಂಧಯುಕ್ತ ಭೂಮಿಯೇ ಬಯಸಿದ ಳೆಂದು ಸೂಚಿಸಲು "ಅಕಾಮಯತ ಮೇದಿನೀ" ಎಂದು ವಾಲ್ಮೀಕಿ ಮಹರ್ಷಿ ಗಳು ಮಾಡಿರುವ ಶಬ್ದ ಪ್ರಯೋಗಕ್ಕೆ ಪೂರ್ವಿಕರು ವ್ಯಾಖ್ಯಾನಿಸುವಾಗ ಈ ಐತಿಹ್ಯವನ್ನು ಎತ್ತಿತೋರಿಸುವುದುಂಟು ಸ್ವಾಭಾವಿಕ ಸುಗಂಧವತಿಯಾದ ಭೂದೇವಿಯು ತನ್ನ ಮಕ್ಕಳ ಸಲುವಾಗಿ ಈ ದುರ್ಗಂಧವನ್ನು ಧರಿಸಿ, ಈ ನಿಮಿತ್ತದ ಹೆಸರನ್ನೇ ಹೊಂದಿರುವುದರಲ್ಲೂ ಅವಳ ಕರುಣೆಯೇ, ಕ್ಷಮಾ ಗುಣವೇ ಎದ್ದು ಕಾಣುತ್ತದೆ. ಇದು ಅವಳ ಪುತ್ರವಾತ್ಸಲ್ಯಕ್ಕೆ ಸಾಕ್ಷಿ )

ವಸುಂಧರಾ, ವಸುಧಾ, ವಾಸವೀ ಶಬ್ದಗಳು ಅವಳಿಗಿರುವ ಐಶ್ವರ್ಯ ಸಂಬಂಧವನ್ನು ಸೂಚಿಸುತ್ತವೆ. 'ರತ್ನಗರ್ಭಾ ವಸುಂಧರಾ' ಎಂಬಲ್ಲಿ ಈ ನಾಮದ ವ್ಯಾಖ್ಯಾನವೇ ಅಡಗಿದೆ. ನವರತ್ನಗಳೂ ಇವಳ ಗರ್ಭದಲ್ಲಿವೆ. ಅದನ್ನು ಪೋಷಿಸಿ, ಬೆಳೆಸುವವಳಾಗಿ ವಸುಧಾ ಎನಿಸಿದ್ದಾಳೆ. ಈ ಧನವಲ್ಲದೆ ಧಾನ್ಯರೂಪ ಐಶ್ವರ್ಯವನ್ನೂ ಸದಾ ಹೊಂದಿರುತ್ತಾ ಜೀವಿಗಳನ್ನು ಪೋಷಿಸುವವಳಾದ್ದರಿಂದ ವಾಸವೀ ಎನಿಸಿದ್ದಾಳೆ. (ವೈಶ್ಯರು ಪೂಜಿಸುವ ವಾಸವೀ ದೇವಿಯು ಭೂದೇವಿಯೇ ಆಗಿದ್ದು, ಧನಿಕರಾದ ಇವರು, ವಾಣಿಜ್ಯ, ಪಶುಪಾಲನೆ, ಗೋರಕ್ಷೆ, ವ್ಯವಸಾಯಗಳಲ್ಲಿ ನಿರತರಾಗಿರುತ್ತಾ, ಈ ಧನ ಧಾನ್ಯ ಅನುಗ್ರಾಹಕಳಾದ ಭೂದೇವಿಯನ್ನು ಪೂಜಿಸುತ್ತಾ ಬಂದಿರುವುದು ಯುಕ್ತವಾಗಿದ್ದು, ಅನಾದಿಕಾಲದಿಂದ ನಡೆದು ಬಂದಿದೆ. ಭಗವಂತನನ್ನೇ ಇಂದ್ರ ವಾಸವಾದಿ ಶಬ್ದಗಳಲ್ಲಿ ಕೊಂಡಾಡುವಾಗ, ಈ ಭೂದೇವಿಯೇ ಇಂದ್ರಾಣಿ, ವಾಸವೀ ಎನಿಸುವವಳಾಗಿ ಈ ರೂಪದಲ್ಲಿರುವವಳೂ ಅವಳೇ. ವೈಶ್ಯರಿಗೂ ರೂಢಿಯ ಇಂದ್ರಪತ್ನಿಗೂ ಯಾವ ಸಂಬಂಧವೂ ಇರಲು ಕಾರಣವಿಲ್ಲವಾದ್ದರಿಂದ, ಇಲ್ಲಿ ಮೂಲಾರ್ಥವನ್ನೇ ಗಮನಿಸತಕ್ಕದ್ದು.

ಇಂಥವಳ ಅನುಗ್ರಹವಿದ್ದರೆ ಮಾತ್ರ ಸಕಲ ಇಂದ್ರಿಯಗಳ ಸೌಷ್ಠವವೂ ಕಾರ್ಯಕ್ಷಮತೆಯೂ ( ಕೆಲಸ ಮಾಡುವ ಶಕ್ತಿಯೂ ) ಬ್ರಹ್ಮವರ್ಚಸ್ಸೂ, ಉಂಟಾಗುವುದೆಂದು ಮಂತ್ರ ಹೇಳುತ್ತದೆ. ಸಾಧಕನಿಗೆ ಮಾತ್ರವಲ್ಲ, ಅವನ ಪಿತೃಗಳಿಗೂ ಸಹ.

ಜನಿತಾ ಚೋಪನೇತಾ ಚ ಯಶ್ಚ ವಿದ್ಯಾಂ ಪ್ರಯಚ್ಛತಿ ।
ಅನ್ನದಾತಾ ಭಯತ್ರಾತಾ ಪಂಚ ತೇ ಪಿತರಃ ಸ್ಮೃತಾಃ ॥

ಎಂಬಂತೆ, ಜನ್ಮಕೊಟ್ಟವನೂ, ಉಪನಯನ ಮಾಡಿದವನೂ, ವಿದ್ಯಾದಾನ ಮಾಡಿದವನೂ, ಅನ್ನ ಕೊಟ್ಟವನೂ, ಭಯದಲ್ಲಿ ರಕ್ಷಿಸಿದವನೂ, — ಈ ಐವರೂ ತಂದೆಗಳೇ ಎಂದು ಸ್ಮೃತಿಕಾರರು ಹೇಳುತ್ತಾರಷ್ಟೆ. ಭೂಸ್ತುತಿ ಮಾಡಿದವನ ಸಂಬಂಧದಿಂದ ಈ ಎಲ್ಲ ಬಗೆಯ ಪಿತೃಗಳಿಗೂ, ಕುರುಡು ಕಿವುಡು, ಮುಂತಾದ ಇಂದ್ರಿಯ ಶೈಥಿಲ್ಯ ತೊಲಗಿ, ಬ್ರಹ್ಮವರ್ಚಸ್ಸು ದೊರಕುವುದೆಂದು ಸ್ತುತಿಸಿ, ಮಂತ್ರವು ಭೂದೇವಿಯ ಮಹಿಮೆಯನ್ನು ವರ್ಣಿಸಿದೆ.

### ಎಂಟನೆಯ ಮಂತ್ರ

## 'ಸತ್ಯ'ಕ್ಕೆ ಆಶ್ರಯಳು !

ದೇವೀ ಹಿರಣ್ಯಗರ್ಭಿಣೀ ದೇವೀ ಪ್ರಸೂವರೀ ।
ಸದನೇ ಸತ್ಯಾಯನೇ ಸೀದ ॥

ಅರ್ಥ : ಸತ್ಯಶಬ್ದವಾಚ್ಯನೂ, ಸತ್ಯಾದಿಗುಣಪರಿಪೂರ್ಣನೂ ಆದ ಭಗವಂತನಿಗೆ ಆಯತನವಾಗಿ (ವಾಸಸ್ಥಾನವಾಗಿ)ರುವವಳೇ ! (ಭೂದೇವಿಯೇ !) ಸಕಲ ಭೂತಜಾತಕ್ಕೂ ನಿತ್ಯವಾಸಸ್ಥಾನವಾಗಿರುವವಳೇ, (ಸದನೇ !) ಬಂಗಾರವನ್ನು ಗರ್ಭದಲ್ಲಿ ಧರಿಸಿರುವವಳೇ ! ಕಾಂತಿಯುಕ್ತಳೇ ! ಉತ್ತಮ ವಸ್ತುಗಳನ್ನು ಪ್ರಸವಿಸುವವಳೇ ! ಉತ್ತಮನಿಧಿಗಳನ್ನುಳ್ಳವಳೇ ! ದೇವ

ದೇವನಾದ ಮಹಾವಿಷ್ಣುವಿನ ಪತ್ನಿಯಾದಿ ದೇವದೇವಿ ಎನಿಸಿದವಳೇ ! ನನ್ನನ್ನನುಗ್ರಹಿಸು.

ವಿವರಣೆ : ಈ ಮಂತ್ರವು ಭೂದೇವಿಯ ಗುಣಾನುಸಂಧಾನ ರೂಪದಲ್ಲಿರುವುದು ಸುವ್ಯಕ್ತ. ಇಲ್ಲಿ 'ಸತ್ಯಾಯನೇ !' 'ಸದನೇ !' ಎಂದು ಬಂದಿರುವ ಎರಡು ಸಂಬೋಧನೆಗಳು ಅಪೂರ್ವವಾದುವು. "ಸತ್ಯಕ್ಕೆ ಆಯತನವಾಗಿರುವವಳು" ಎಂಬುದು ಮೊದಲನೆಯದರ ಅರ್ಥ. ಸತ್ಯ ಶಬ್ದವು ಪರಮಾತ್ಮವಾಚೀ. ಹಾಗೇ ಸೃಷ್ಟವಾದಿ ಸಕಲ ಜಗತ್ತಿಗೂ ವಾಚಕ. ಸತ್ಯಾತ್ಮಕವಾದ ಜಗತ್ತಿಗೆ ನಿಲ್ಲಲು ಆಶ್ರಯರೂಪಳಾದಿರುವವಳೆಂದೂ, ಭಗವಂತನೂ ಇವಳಲ್ಲಿ ನಿತ್ಯವಾಸ ಮಾಡುವನೆಂಡೂ ಅರ್ಥ. 'ಸದನೇ !' ಎಂಬುದು ಎಲ್ಲ ಜೀವರಾಶಿಗಳಿಗೂ, ಅಚೇತನವಸ್ತುಗಳಿಗೂ ಇವಳೇ ಆಶ್ರಯವೆಂಬುದನ್ನು ಸೂಚಿಸುವ ಸಂಬೋಧನೆ. ಉಳಿದ ಅರ್ಥಗಳು ಸ್ಪಷ್ಟ.

## ಒಂಭತ್ತನೆಯ ಮಂತ್ರ

## ಸಮುದ್ರವಸನೇ ! ಪರ್ವತ ಸ್ತನಮಂಡಿತೇ !

ಸಮುದ್ರವತೀ ಸಾವಿತ್ರೀ ಅನೋ ದೇವೀ ಮಹ್ಯಂಗೀ ।
ಮಹೀ ಧರಣೀ ಮಹೋ ವ್ಯಥಿಷ್ಠಾಃ ॥೯॥

ಅರ್ಥ : ಸಮುದ್ರವನ್ನೇ ಸೀರೆಯಂತೆ ಉಟ್ಟಿರುವವಳೇ ! ಸೂರ್ಯನನ್ನು (ಪುತ್ರನನ್ನಾಗಿ) ಉಳ್ಳವಳೇ ! ಅಕಾರವಾಚ್ಯನಾದ (ಅನಃ) ಪರಮಾತ್ಮನಿಗೆ ಪತ್ನಿಯಾಗಿರುವ ದೇವಿಯೇ ! ಭೋಗ್ಯವಾದ ಉತ್ತಮಾಂಗಗಳನ್ನು ಶರೀರದಲ್ಲಿ ಉಳ್ಳವಳೇ ! ಎಲ್ಲವನ್ನೂ ಸಹನೆಯಿಂದ ಧರಿಸಿ, ಧರಣೀ ಎನಿಸಿರುವವಳೇ ! ವಿಶೇಷ ಕಾಂತಿಯಿಂದ ನೀನು ಬೆಳಗುವೆ.

( ಪ್ರತ್ಯೇಕ ವಿವರಣೆ ಅನವಶ್ಯಕ )

## ಹತ್ತನೆಯ ಮಂತ್ರ

# ಯಜ್ಞವರಾಹ ಮಹಿಷೀ

ಶೃಂಗೇ ಶೃಂಗೇ ಯಜ್ಞೀ ಯಜ್ಞೀ ವಿಭೀಷಣೀ।
ಇಂದ್ರಪತ್ನೀ ವ್ಯಾಪಿನೀ ಸುರಸರಿರಿಹ ॥೧೦॥

ಅರ್ಥ : ಎತ್ತರದ ಬೆಟ್ಟಗಳೊಂದೊಂದರ ಮೇಲಿರುವವಳೂ, ಪ್ರತಿಯೊಂದು ಯಜ್ಞ ಕ್ರಿಯೆಯಲ್ಲೂ, ಯಜ್ಞಭೂಮಿಯಲ್ಲೂ ಇರುವವಳೇ ! ಶತ್ರುಭಯಂಕರಳೇ ! ಮಹದೈಶ್ವರ್ಯ ಸಂಪನ್ನನಾದ ಭಗವಂತನ ದೇವಿಯೇ ಸರ್ವವ್ಯಾಪಿನಿಯೇ ! ದೇವತೆಗಳಿಂದಲೂ ಇಲ್ಲೇ ಆಶ್ರಯಿಸಲ್ಪಟ್ಟಿರುವವಳೂ ನೀನೇ.

ವಿವರಣೆ : ಪರ್ವತಗಳು ಭೂದೇವಿಯ ಸ್ತನಗಳೆಂದು ವರ್ಣಿಸುವುದು ಪ್ರಸಿದ್ಧ. ಭೂದೇವಿಯ ಭೋಗ್ಯತೆ ಇಲ್ಲಿ ವಿಶೇಷವಾಗಿರುವುದರಿಂದಲೇ ಭಗವಂತನು ಈ ಪರ್ವತಗಳ ಶಿಖರದಲ್ಲಿ ಸದಾ ವಾಸಿಸುತ್ತಾನೆ. (ನೃಸಿಂಹರೂಪದಲ್ಲಿ). " ವಿಷ್ಣುಃ ಪರ್ವತಾನಾಂ ಅಧಿಪತಿಃ " ಎಂಬ ವೇದ ವಾಕ್ಯಕ್ಕೆ ಹೀಗೆ ವಿಶೇಷಾರ್ಥವಾಗುವುದು. ಯಜ್ಞಪುರುಷನೆಂದೂ ವಿಷ್ಣುವಿಗೆ ಹೆಸರುಂಟು. ಪರಮಾತ್ಮನು ಮಾಡಿದ ವಾರಾಹಾವತಾರವನ್ನು ಯಜ್ಞ ವರಾಹಾವತಾರವೆಂದೂ ಕರೆಯುವುದುಂಟು. ಇಲ್ಲಿ ಯಾವ ಭೂದೇವಿಯ ಉದ್ಧಾರವಾಯಿತೆಂದರೆ, ಹಿರಣ್ಯಾಕ್ಷನಕಾಲದಲ್ಲಿ ನೀರಲ್ಲಿ ಮುಳುಗಿದ ಭೂಮಿಯು ಒಂದಂಶವಾದರೆ, ಆಸುರಾಕ್ರಾಂತವಾಗಿ, ಯಜ್ಞಾಚರಣೆಗೆ ಒಂದಂಗುಲವೂ ದೊರಕದೇ 'ಮುಳುಗಿದ' ಭೂಮಿಯೂ ಒಂದುಂಟು. ಯಜ್ಞಭೂಮಿ ಇದ್ದರಲ್ಲವೇ ಯಜ್ಞಾಚರಣೆ ! ಆ ಭೂಮಿಯೇ ಇಲ್ಲವಾದಂತೆ, ಯಜ್ಞೇತರ, ದುಷ್ಟಸ್ವಾರ್ಥ ಕ್ರಿಯೆಗಳಲ್ಲಿ ಈ ಭೂಮಿ ನಷ್ಟವಾಗಿದ್ದಳೆಂದರೆ, ಇಂದಿನ ಸ್ಥಿತಿಯೇ ನೆನಪಾಗುತ್ತದೆ. ದೇವಾಲಯದ ಜಮೀನು

ಗಳೂ, ವೇದಾಧ್ಯಯನಕ್ಕಾಗಿ, ಅಗ್ನಿಹೋತ್ರಕ್ಕಾಗಿ. ನಿತ್ಯ ಅನ್ನದಾನಕ್ಕಾಗಿ, ಶಾಸ್ತ್ರಬೆಳೆಸುವ ಶಾಸ್ತ್ರಿಗಳಿಗಾಗಿ ದಾನ ಕೊಟ್ಟಿದ್ದ ಭೂಮಿಯೆಲ್ಲ ಈ ಬಗೆಯ ಯಜ್ಞಗಳಿಗೆ ಸಿಗದಂತೆ ಆದರೆ ಇದೂ ಭೂಮಿ 'ಮುಳುಗಿದ' ಹಿರಣ್ಯಾಕ್ಷನ ಕಾಲವೇ ಅಲ್ಲವೆ? ಆಗ ಯಜ್ಞೇಶ್ವರನಾದ ವಿಷ್ಣುವು ಮೊದಲು ತಾನು ನಿಲ್ಲಲು ಸ್ಥಾನರೂಪವಾಗಿ ಎತ್ತಿದ ಭೂಮಿಯೇ ಯಜ್ಞವರಾಹ ಪತ್ನೀ. ಎಲ್ಲೆಲ್ಲಿ ಯಜ್ಞ ಮಾಡುವರೋ ಅಲ್ಲಿ ಭೂಶೋಧನೆ ಮಾಡುವುದೂ, ಅಲ್ಲಿ ಹೂತ ಮೂಳೆ, ಮೊದಲಾದವುಗಳ ನಿಮಿತ್ತ ಯಾವ ಅಸುರೀ ಕಾಟವೂ ಇಲ್ಲದಂತೆ, ಯಜ್ಞ ನಿರ್ವಿಘ್ನವಾಗಿ ಮುಗಿಯಲು ಭೂದೇವಿಯ ಅನುಗ್ರಹವಿಲ್ಲದಿದ್ದರೆ ಯಜ್ಞಾಚರಣೆ ಶಕ್ಯವಿಲ್ಲ, ಯಜ್ಞೇಶ್ವರನ ಅನುಗ್ರಹವಿಲ್ಲದೆ. ಈ ಭೂಮಿಯೂ ಅನುಗ್ರಹಿಸಳು. ಇಬ್ಬರ ಸಾಂನ್ನಿಧ್ಯವೂ ಭಕ್ತರಿಗೆ ಬೇಕೆಂಬುದನ್ನು "ಯಜ್ಞೇ ಯಜ್ಞೇ" ಎಂಬ ಪ್ರಯೋಗ ತೋರಿಸುತ್ತದೆ.

ಪರ್ವತದ ಕೋಡುಗಳಿರುವುದು ನಮ್ಮ ಭೋಗಕ್ಕಲ್ಲವೆಂದೂ, ಭಗವಂತನು ಭೂದೇವಿಯ ಈ ಸ್ತನಗಳಲ್ಲಿ ವಿಹರಿಸುವುದಕ್ಕೆಂದೂ ತೋರಿಸಲು "ಶೃಂಗೇ ಶೃಂಗೇ" ಪ್ರಯೋಗ ಬಂದಿದೆ. ಶೂರ್ಪಣಖಿಯು ರಾಮಾಯಣದಲ್ಲಿ ಶ್ರೀರಾಮನನ್ನು ಕಾಮದೃಷ್ಟಿಯಿಂದ ಕಂಡಾಗ, ತನ್ನೊಡನೆ ಅವನು ಭೋಗಪಡಲು ಬೆಟ್ಟದ ಶಿಖರಗಳಿವೆ. ತತಃ ಪರ್ವತ ಶೃಂಗಾಣಿ, ವನಾನಿ, ವಿವಿಧಾನಿ ಚ । ಪಶ್ಯ ಸಹ ಮಯಾ ಕಾಂತ ದಂಡಕಾ ವಿಚರಿಷ್ಯಸಿ ॥- ಎಂದು ಹೇಳುವಲ್ಲಿ ಈ ಪರ್ವತ ಶೃಂಗಗಳನ್ನು ನಾಸ್ತಿಕ ಭಾವದಲ್ಲಿ ನೋಡಿರುವುದೇ ಮಾತ್ರ ಕಾಣಬರುತ್ತದೆ, ಪರ್ವತಗಳು ಭಗವಂತನ ಏಕಾಂತ ವಿಹಾರ ಕ್ಷೇತ್ರಗಳಾಗಿರತ್ತಾ ಅವನ ಅಂತಃಪುರದಂತಿವೆ ಎಂಬದು ವೈದಿಕ ಪ್ರಜ್ಞೆ, ಅವು ಮಾನವನ ಭೋಗಕ್ಷೇತ್ರಗಳೆಂಬ Tourist ( ಪ್ರವಾಸ ) ಬುದ್ಧಿ ಆಸುರೀ ಮೂಲದ್ದೆಂದು ಈ ಮಂತ್ರದ ಹಿನ್ನೆಲೆ ತಿಳಿಸುತ್ತದೆ, ಉಳಿದ ಅರ್ಥಗಳು ಸ್ಪಷ್ಟ.

ಹನ್ನೊಂದನೆಯ ಮಂತ್ರ

## ಕುರುಡು ಮಕ್ಕಳಲ್ಲಿ ವಿಶೇಷ ಕೃಪೆಯುಳ್ಳವಳು

ವಾಯುಮತೀ ಜಲಶಯನೀ ಶ್ರಿಯಂಧಾರಾಜಾ
ಸತ್ಯಂಧೋಪರಿ ಮೇದಿನೀ।
ಶ್ವೋ (ಸೋ) ಪರಿಧತ್ತಂಗಾಯ॥

ಅರ್ಥ : ವಾಯುವನ್ನು ಉಸಿರಾಗಿ ಉಳ್ಳವಳೂ, ಸಮುದ್ರವನ್ನು ಹಾಸಿಗೆಯಾಗಿ ಉಳ್ಳವಳೂ, ಐಶ್ವರ್ಯವನ್ನು ಧರಿಸಿ, ಅಜಳಾಗಿ (ಅಮರಳಾಗಿ) ರುವವಳೂ, ಅಜ್ಞಾನಿಗಳಾದ ಕುರುಡ ಮಕ್ಕಳಿಗಾಗಿಯೇ ಬದುಕಿರುವವಳೂ (ಅಂಧೋಪರಿ ಸತೀ) ಆದ ಭೂದೇವಿಯು, ಇಂದಲ್ಲ ನಾಳೆಯಾದರೂ (ಶ್ವಃ) ಅಥವಾ 'ಸಾ' ಅಂಥವಳು, ಭಗತ್ಪ್ರಾಪ್ತಿನಮಗಾಗಲೆಂದು, ತನ್ನ ಮೇಲೆಯೇ ಎಲ್ಲವನ್ನೂ ಧರಿಸಿದ್ದಾಳೆ.

ವಿವರಣೆ : ಇಲ್ಲಿ ಭೂಮಿಯ ವಾತ್ಸಲ್ಯಗುಣವನ್ನು ಹೃದ್ಯವಾಗಿ ಕೊಂಡಾಡಲಾಗಿದೆ. ಅಪ್ ತತ್ವವೂ, ವಾಯುತತ್ತ್ವವೂ ಇವಳಿಗೆ ಹಾಸಿಗೆ, ಉಸಿರಿನ ಸಂಬಂಧವನ್ನು ಹೊಂದಿ ಪವಿತ್ರವಾಗಿವೆ. ಈ ಸಂಬಂಧವಿಲ್ಲದಿದ್ದರೆ ಅವು ಕೇವಲ ಪ್ರಾಕೃತಗಳಾಗುತ್ತಿದ್ದವೆಂದು ಭಾವ. ಕುರುಡರಂತೆ ಅಜ್ಞಾನಿಗಳಾದ ಮಕ್ಕಳಲ್ಲಿ ಇವಳ ಕರುಣೆ ಅಪಾರವೆಂಬುದು ಮನೋಹರ ವರ್ಣನೆ. ಭೂದೇವಿಯು ಸಕಲ ಚೇತನರೂ ತನ್ನ ಮೂಲಕ ಭಗವತ್ಪ್ರಾಪ್ತಿ ಹೊಂದಲೆಂಬ ದೃಢ ಸಂಕಲ್ಪವುಳ್ಳವಳೆಂಬ ವರ್ಣನೆಯಲ್ಲಿ ಭೂಃ ತತ್ತ್ವದ ಸಾರಸರ್ವಸ್ವವೇ ಅಡಗಿದೆ.

ಹನ್ನೆರಡನೆಯ ಮಂತ್ರ

# ಮಾಧವಪ್ರಿಯೆ, ಭೂಮಿ

ವಿಷ್ಣು ಪತ್ನೀಂ ಮಹೀಂ ದೇವೀಂ
ಮಾಧವೀಂ ಮಾಧವಪ್ರಿಯಾಂ ।
ಲಕ್ಷ್ಮೀ ಪ್ರಿಯಸಖೀಂ ದೇವೀಂ
ನಮಾಮ್ಯಚ್ಯುತ ವಲ್ಲಭಾಂ ॥೧೨॥

ಅರ್ಥ : ಮಾಧವನೆಂಬ, (ಲಕ್ಷ್ಮೀಪತಿಯಾದ) ವಿಷ್ಣುವಿಗೆ ಪತ್ನಿಯೂ, ಆ ಮಾಧವನಿಗೆ ಪ್ರಿಯಳಾದವಳೂ, ಮಾಧವೀ ಎಂಬ ಶ್ರೀನಾಮ ಹೊಂದಿದವಳೂ, ಅಚ್ಯುತವಲ್ಲಭೆಯೂ, ಲಕ್ಷ್ಮೀದೇವಿಗೆ ಪ್ರಿಯಸಖಿಯೂ ಆದ ಭೂದೇವಿಯನ್ನು ನಮಸ್ಕರಿಸುತ್ತೇನೆ.

ವಿವರಣೆ : ಭೂದೇವಿಗೂ ಭಗವಂತನಿಗೂ ಇರುವ ಹಲವು ಬಗೆಯ ಸಂಬಂಧಗಳನ್ನು ಕೊಂಡಾಡಿರುವುದೇ ಈ ಮಂತ್ರದ ವಿಶೇಷ.

ಭಗವಂತನು ಮಾಧವನಾದ್ದರಿಂದ ಇವಳೂ ಮಾಧವೀ. ಇಲ್ಲೂ ಭಗವಂತನನ್ನು ಮಾಧವ ಎಂದದ್ದರಿಂದ ಲಕ್ಷ್ಮೀದೇವಿಯೇ ಅವನಿಗೆ ಪ್ರಧಾನ ಮಹಿಷಿ ಎಂದಂತಾಯಿತು. ಭೂದೇವಿಯು ದ್ವಿತೀಯ ಮಹಿಷಿ ಎಂಬುದನ್ನು ಅವಳ 'ಮಾಧವೀ' ನಾಮ ತೋರಿಸುತ್ತದೆ. ಆದ ಮಾತ್ರದಿಂದ ಇವಳು ಅವನಿಗೆ ಅನಾದರಣೀಯಳೇನಲ್ಲ! ಏಕೆಂದರೆ ಇವಳನ್ನು ಅಚ್ಯುತವಲ್ಲಭೆಯೆಂದು ಇಲ್ಲೇ ಹೇಳಿದೆ. ಮಾಧವನಿಗೆ ಪ್ರಿಯಳೆಂಬುದೂ ಸಹ ಮಂತ್ರೋಕ್ತವಾಗಿದೆ. ಲಕ್ಷ್ಮೀದೇವಿಗೂ ಭೂದೇವಿಗೂ ಇರುವ ಸಂಬಂಧವನ್ನು "ಲಕ್ಷ್ಮೀಪ್ರಿಯ ಸಖೀಂ" ಎಂಬುದು ತೋರಿಸುತ್ತದೆ. (ಸವತಿಭಾವ ಇಲ್ಲವೆಂದರ್ಥ.) ಭಗವಂತನ ಸರ್ವವ್ಯಾಪಾರಗಳಲ್ಲೂ ಇವಳಿಗೂ ಅನ್ವಯವುಂಟೆಂಬುದನ್ನು 'ಪತ್ನೀ' ಶಬ್ದಪ್ರಯೋಗತೋರಿಸುತದೆ. ಪತ್ಯುರ್ನೋ ಯಜ್ಞಸಂಯೋಗೇ —ಎಂಬ ವ್ಯಾಕರಣನಿಯಮದಂತೆ, ಪತಿಯು ನಡೆಸುವ

ಯಜ್ಞದಲ್ಲಿ ಅವನೊಡನೆ ಹಕ್ಕಿನಿಂದ ಭಾಗವಹಿಸುವ ಸ್ತ್ರೀಯಳು ಮಾತ್ರ ಪತ್ನಿಯಾಗುವಳೆಂದರ್ಥ.) ಜಗತ್ಸೃಷ್ಟಿ ಸ್ಥಿತಿಸಂಹಾರ, ಮೋಕ್ಷಪ್ರದಾನ, ಇತ್ಯಾದಿ ವ್ಯಾಪಾರಗಳಲ್ಲೆಲ್ಲಿ ಇವಳಿಗೂ ಅನ್ವಯವುಂಟೆಂದು ಹೀಗೆ ತೋರಿಸಿದೆ.

ಹದಿಮೂರನೆ ಮಂತ್ರ : (ಭೂಮಿಗಾಯತ್ರೀ)

## ಕೈಯಲ್ಲಿ ಬಿಲ್ಲು ಹಿಡಿದವಳು !

ಓಂ, ಧನುರ್ಧರಾಯ (ಯೈ) ವಿದ್ಮಹೇ
ಸರ್ವ ಸಿದ್ಧ್ಯೈ ಚ ಧೀಮಹಿ ।
ತನ್ನೋ ಧರಾ ಪ್ರಚೋದಯಾತ್ ॥೧೩॥

ಅರ್ಥ : ಧನುಸ್ಸನ್ನು ಧರಿಸಿದ ಭಗವಂತನನ್ನು (ಶ್ರೀರಾಮಚಂದ್ರನನ್ನು), ಅಥವಾ ಧನುಸ್ಸನ್ನು ಧರಿಸಿದ ಭೂದೇವಿಯನ್ನು (ಸೀತಾಮಾತೆಯನ್ನು) ಸರ್ವ ಸಿದ್ಧಿಗಳಿಗಾಗಿ ಧ್ಯಾನಿಸುತ್ತೇವೆ. (ಅಥವಾ, 'ಸರ್ವಸಿದ್ಧಿ' ಎನಿಸಿದ ಆ ದೇವಿಯನ್ನು ಧ್ಯಾನಿಸುತ್ತೇನೆ) ಆ ಧ್ಯಾನವನ್ನು ನಮಗೆ ಭೂದೇವಿಯು ಪ್ರಚೋದಿಸಲಿ.

ವಿವರಣೆ : ಈ ಮಂತ್ರವು ಭೂಮಿಗಾಯತ್ರೀ ಎನಿಸಿದೆ. ಎಲ್ಲಾ ಗಾಯತ್ರೀ ಮಂತ್ರಗಳಂತೆ— (ವಿಷ್ಣುಗಾಯತ್ರೀ, ಗರುಡ ಗಾಯತ್ರೀ, ಲಕ್ಷ್ಮೀ ಗಾಯತ್ರೀ— ಇತ್ಯಾದಿ)— ಇಲ್ಲೂ ಪರಮಾತ್ಮ ಧ್ಯಾನವನ್ನು ವೃದ್ಧಿ ಮಾಡುವಂತೆ. ಭೂದೇವಿಯನ್ನು ಪ್ರಾರ್ಥಿಸಿದೆ.

ಧನುರ್ಧರನೆಂದರೆ - ಶಾರ್ಙ್ಗವೆಂಬ ಧನಸ್ಸನ್ನು ಧರಿಸಿದ ಶ್ರೀಮಹಾ ವಿಷ್ಣು ಇವನ ಧನುರ್ಧಾರೀ ಅವತಾರವಾದ ಶ್ರೀರಾಮನೂ ಇಲ್ಲಿ ಉದ್ದಿಷ್ಟ ನಿರಬಹುದು. ಏಕೆಂದರೆ ಆಗ ಸೀತಾದೇವಿಯು ಮಂತ್ರದಲ್ಲಿನ ಉದ್ದಿಷ್ಟ

ದೇವತೆಯಾಗುವಳು, ಇವಳು ಭೂದೇವಿಯ ಅವತಾರವೆಂಬುದು ಸುಪ್ರಸಿದ್ಧವಾದುದರಿಂದ ಮಂತ್ರದ ಸಂದರ್ಭಕ್ಕೂ ಸರಿಹೊಂದುವುದು. 'ಧನುರ್ಧರಾಯೈ' ಎಂದು ಪಾಠವಾದಾಗ, ಭೂದೇವಿಗೆ ಧನುಸ್ಸನ್ನು ಧರಿಸಿದ ರೂಪವೊಂದುಂಟೆಂಬುದು ವ್ಯಕ್ತವಾದಂತಾಗುತ್ತದೆ. (ಧನುಸ್ಸೆಂಬ ರಾಶಿಗೆ ಅಭಿಮಾನೀ ದೇವತೆಯಿವಳೆಂದು ಒಬ್ಬ ವ್ಯಾಖ್ಯಾನಕಾರರು ಅರ್ಥೈಸಿದ್ದಾರೆ.) ಹೀಗೆ ಶ್ರೀರಾಮೋಪಾಸನೆಯನ್ನು ಸೀತಾಮಾತೆಯು ದೃಢಗೊಳಿಸಲೆಂಬ ಪ್ರಾರ್ಥನೆ ಯುಕ್ತವಾಗಿದೆ.

(ಭೂಸೂಕ್ತಾನುಬಂಧೀ ಮಂತ್ರಗಳು)

ಹದಿನಾಲ್ಕನೆಯ ಮಂತ್ರ

## ಶ್ರವಣನಕ್ಷತ್ರಾಭಿಮಾನಿ

ಶೃಣ್ವಂತಿ ಶ್ರೋಣಾ ಮಮೃತಸ್ಯ ಗೋಪಾಂ
ಪುಣ್ಯಾಮಸ್ಯಾಂ ಉಪಶೃಣೋಮಿ ವಾಚಂ ।
ಮಹೀಂ ದೇವೀಂ ವಿಷ್ಣುಪತ್ನೀಮಜೂರ್ಯಾಂ
ಪ್ರತೀಚೀಮೇನಾಂ ಹವಿಷಾ ಯಜಾಮಃ ॥೧೪॥

ಅರ್ಥ : ಶ್ರವಣನಕ್ಷತ್ರಕ್ಕೆ ಅಭಿಮಾನಿದೇವತೆಯೂ, ಅಮೃತತ್ತ್ವವೆಂಬ ಮೋಕ್ಷಪದವಿಯ ರಕ್ಷಕಳೂ ಆದ ಭೂದೇವಿಯನ್ನು (ಇವಳ ಮಹಿಮೆಯನ್ನು) ಜ್ಞಾನಿಗಳುಕೇಳುತ್ತಾರೆ. ಇವಳ ವಿಷಯದಲ್ಲಿ ಕೀರ್ತಿಕರವಾದ ಶುದ್ಧವಾದ ಮಾತನ್ನು (ನಾನೂ) ಕೇಳುತ್ತೇನೆ. ವಿಷ್ಣುಪತ್ನಿಯೂ, (ಅವನನ್ನು ಬಿಟ್ಟಿರದೆ) ವಿರಹತಾಪವಿಲ್ಲದವಳೂ ಆದ ಈ ಭೂದೇವಿಯನ್ನು ಹವಿಸ್ಸಮರ್ಪಣದೊಡನೆ ಯಜ್ಞದಲ್ಲಿ ಆರಾಧಿಸುತ್ತೇವೆ.

ವಿವರಣೆ : ಈ ಮಂತ್ರದ ಪೂರ್ವಾರ್ಧವು ತೈತ್ತಿರೀಯ ಬ್ರಾಹ್ಮ

ಣದಲ್ಲಿ (III-1-2-5) ಬಂದಿದೆ. ಉತ್ತರಾರ್ಧವೂ ಅಲ್ಲೇ (III-1-2-6) ಬಂದಿದೆ.

ಶ್ರವಣವು ವಿಷ್ಣುನಕ್ಷತ್ರವೆಂಬುದು ಪ್ರಸಿದ್ಧ. ಲೋಕದಲ್ಲಿ ತನ್ನನ್ನು ನಂಬದವರನ್ನು ಇವನು ಉದ್ಧರಿಸಲಿಲ್ಲವೆಂಬ ಅಪಕೀರ್ತಿ ತನಗೆ ಬೇಡವೆಂದೂ ಪುಣ್ಯಶ್ಲೋಕನೆಂದು ತನ್ನನ್ನು ಎಲ್ಲರೂ ಉಪಾಸಿಸಬೇಕೆಂದೂ, ವಿಷ್ಣುವೇ ಈ ನಕ್ಷತ್ರದಲ್ಲಿ ಯಾಗ ಮಾಡಿ, ಸಿದ್ಧಿಹೊಂದಿ ಕೀರ್ತಿ (ಶ್ರವಃ) ಪಡೆದದ್ದರಿಂದ, ಈ ನಕ್ಷತ್ರಕ್ಕೆ ಹೀಗೆ ಹೆಸರಾಯಿತೆಂದು ಇದೇ (ನಕ್ಷತ್ರೇಷ್ಟಿಯೆಂಬ) ಮಂತ್ರಭಾಗದಲ್ಲಿ ಉಕ್ತವಾಗಿದೆ. ಇದಕ್ಕೆ ಭೂದೇವಿಯು ಅಭಿಮಾನೀ ಎಂಬುದರಿಂದ ಅವನಿಗೆ ಇದರಲ್ಲಿ ಆದರಾತಿಶಯವು ಮೂಡಲು ಇನ್ನೂ ಒಂದು ಕಾರಣವಾಯಿತು, ಇವಳನ್ನು ಮುಂದಿಟ್ಟು ಭಗವಂತನಲ್ಲಿ ಶರಣಾಗತಿ ಮಾಡಿದರೆ ಮೋಕ್ಷಪ್ರಾಪ್ತಿಯುಂಟೆಂಬುದು ಸಂಗತವಾಗಿದೆ.

ಹದಿನೈದನೆಯ ಮಂತ್ರ

## ಶ್ರೀವಿಷ್ಣುವಿನಿಂದ ಅಳೆಯಲ್ಪಟ್ಟವಳು

ತ್ರೇಧಾ ವಿಷ್ಣುರುರುಗಾಯೋ ವಿಚಕ್ರಮೇ
ಮಹೀಂ ದಿವಂ ಪೃಥಿವೀಮಂತರಿಕ್ಷಂ ।
ತಚ್ಛ್ರೋಣೈತಿ ಶ್ರವ ಇಚ್ಛಮಾನಾ
ಪುಣ್ಯಗ್ಂ ಶ್ಲೋಕಂ ಯಜಮಾನಾಯ ಕೃಣ್ವತೀ ॥೧೫॥

ಅರ್ಥ: ಮಹಾ ಕೀರ್ತಿಶಾಲಿಯಾದ ವಿಷ್ಣುವು ದೊಡ್ಡದಾದ ಈ ಭೂಮಿಯನ್ನೂ, ದೇವಲೋಕವನ್ನೂ, ಅಂತರಿಕ್ಷವನ್ನೂ, ಮೂರು ಅಡಿ ಪಾದಗಳಿಂದ (ಮೂರು ಪಾದವಿಕ್ಷೇಪಗಳಿಂದ) ಅಳೆದನು. ಆಗ ಶ್ರವಣನಕ್ಷತ್ರಾಭಿಮಾನಿಯಾದ ಭೂದೇವಿಯು, ಕೀರ್ತಿಯನ್ನು ಬಯಸಿ, ತನ್ನನ್ನು ಆರಾಧಿಸುವ

ವರಿಗೆ ಪರಿಶುದ್ಧ ಕೀರ್ತಿಯನ್ನು ಉಂಟುಮಾಡುವವಳಾಗಿ ಆ ವಿಷ್ಣುವನ್ನು ಆಶ್ರಯಿಸುತ್ತಾಳೆ.

ವಿವರಣೆ : ಬಲಿಚಕ್ರವರ್ತಿಯ ವಶದಲ್ಲಿದ್ದ ಭೂಮಿಯನ್ನು ಕಿತ್ತು ಕೊಳ್ಳಲು ನಡೆಸಿದ ಅವತಾರವಿದೆಂಬುದನ್ನು ಪುರಾಣಗಳಲ್ಲಿ ಹೇಳಿದೆಯಷ್ಟೆ. ಆದರೆ ಭೂಮಿಯು ಬಲಿಯದೂ ಅಲ್ಲ; ಬೇರಾರದ್ದೂ ಅಲ್ಲ; ವಿಷ್ಣುವಿನದೇ! ಭೂದೇವಿಯ ಮೇಲಿನ ಪ್ರೀತಿ ಅವನಿಗೆಷ್ಟೆಂದರೆ, ಕ್ರಾಂತ್ವಾ, ನಿಗೀರ್ಯ ಪುನರುದ್ಗಿರತಿ ತ್ವದನ್ಯಃ— ಎಂದು ಶ್ರೀಯಾಮುನಾಚಾರ್ಯರು (ಸ್ತೋತ್ರ ರತ್ನದಲ್ಲಿ) ವರ್ಣಿಸಿರುವಂತೆ, ಇದನ್ನು ಅಳೆದು ನುಂಗಿ, ಮತ್ತೆ ಹೊರ ತೆಗೆದು, ಹೀಗೆ ನಾನಾ ಲೀಲೆಗಳಲ್ಲಿ ಭೂದೇವಿಯನ್ನು ಆನಂದಗೊಳಿಸು ತ್ತಾನೆ. ಇದು ವಿಷ್ಣುಭಗವಂತನ ಪರತ್ವ ಲಕ್ಷಣವೂ ಹೌದು; ಬೇರಾವ ದೇವತೆಗೂ ಭೂಮಿಯೊಡನೆ ಈ ಬಗೆಯ ಸಂಬಂಧವಿಲ್ಲವಾದುದರಿಂದ ತಾನು ವಿಷ್ಣುವಿಗೆ ಅನನ್ಯಭೋಗ್ಯಳೂ, ಅನನ್ಯಾಧೀನಳೂ ಆಗಿರುವುದರಿಂದಲೇ, ಈ ಭೂದೇವಿಯ ಸಮಾಶ್ರಯಣವೂ, ಪರಮಾತ್ಮನ ವಿಶೇಷ ಕಟಾಕ್ಷಪ್ರಾಪ್ತಿಗೆ ಉಪಾಯವೆಂದೂ ಹೇಳಿದೆ.

### ಹದಿನಾರನೆಯ ಮಂತ್ರ

## ಪಾಪನಿವಾರಕಳು

ಸಹಸ್ರಪರಮಾ ದೇವೀ ಶತಮೂಲಾ ಶತಾಂಕುರಾ ।
ಸರ್ವಗ್ಂ ಹರತು ಮೇ ಪಾಪಂ ದೂರ್ವಾ ದುಃಸ್ವಪ್ನ
ನಾಶನೀ ॥೧೬॥

ಅರ್ಥ : (ಮನುಷ್ಯರನ್ನು ಪಾವನಗೊಳಿಸುವ) ಸಾವಿರಾರು ಪದಾರ್ಥಗಳಿ ಗಿಂತ ಉತ್ತಮಳೂ, ನೂರಾರು ಮೂಲಿಕೆಗಳೂ, ಅಂಕುರಗಳೂ (ಮೊಳಕೆ

ಗಳೂ) ಯಾವಳನ್ನಾಶ್ರಯಿಸಿವೆಯೋ ಆ ಬೀಜಮೂಲಗಳೂ, ದೂರ್ವಾ ಎಂಬ ಹುಲ್ಲುಗರಿಕೆಗೆ ಅಭಿಮಾನಿ ದೇವತೆಯೂ, ದುಃಸ್ವಪ್ನನಾಶಕಳೂ ಆದ ಭೂದೇವಿಯೂ ನನ್ನ ಪಾಪಗಳನ್ನೆಲ್ಲ ನಾಶಮಾಡಲಿ.

ವಿವರಣೆ : ಇದೂ ಮುಂದಿನವೂ ತೈತ್ತಿರೀಯ ಆರಣ್ಯಕದ ಯಾಜ್ಞಿಕೀ (ಮಹಾನಾರಾಯಣ) ಉಪನಿಷತ್ತಿನಲ್ಲಿ ಬರುವ ಮಂತ್ರಗಳು. ಸ್ನಾನ ಮಾಡುವಾಗ ಮೃತ್ತಿಕಾ ಲೇಪನ ಕಾಲದಲ್ಲಿ ವೈದಿಕರು ಇದನ್ನು ಪಠಿಸುವುದುಂಟು. ಭೂದೇವಿಯೂ ಮನುಷ್ಯಾದಿ ಪ್ರಾಣಿಗಳಿಗೆ ಆಶ್ರಯಳಾಗಿರುವುದು ಮಾತ್ರವಲ್ಲ, ಸಮಸ್ತ ಬೀಜಗಳಿಗೂ, ಮೂಲಿಕೆಗಳಿಗೂ ಆಶ್ರಯಳಾಗಿದ್ದಾಳೆ— ಹುಲ್ಲುಗರಿಕೆಗೂ ಸಹ! ಇವಳನ್ನು ನೆನೆಸಿದರೆ ಕೆಟ್ಟಸ್ವಪ್ನಗಳು ಬಿಟ್ಟು ಹೋಗುವುವು. ನಮ್ಮ ಎಲ್ಲ ಪಾಪನಿವಾರಕಳಿವಳು,

ಹದಿನೇಳನೆಯ ಮಂತ್ರ

## ವಿಷ್ಣುವಿನಿಂದ ತಲೆಯಲ್ಲಿ ಧರಿಸಲ್ಪಟ್ಟವಳು

ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುನ್ಧರಾ।
ಶಿರಸಾ ಧಾರಿತಾ ದೇವೀ ರಕ್ಷಸ್ವ ಮಾಂ ಪದೇ ಪದೇ ॥೧೭॥

ಅರ್ಥ : ಕುದುರೆಗಳ ಸಂಚಾರದಿಂದ ಅಳೆಯಲ್ಪಟ್ಟವಳೂ, ರಥಸಂಚಾರದಿಂದ ಅಳೆಯಲ್ಪಟ್ಟವಳೂ ಆದ ಭೂದೇವಿಯು ಆ ವಿಷ್ಣುವಿನಿಂದಲೇ ಕೊನೆಗೆ ( ಶೇಷರೂಪದಲ್ಲಿ ) ತಲೆಯ ಮೇಲೆ ಧರಿಸಲ್ಪಟ್ಟವಳು. ( ಈ ದೇವಿಯ ಒಂದಂಶವಾದ ಮೃತ್ತಿಕೆಯು ) ನನ್ನಿಂದಲೂ ಶಿರಸ್ಸಿನಲ್ಲಿ (ಶುದ್ಧ್ಯರ್ಥವಾಗಿ) ಧರಿಸಲ್ಪಟ್ಟಿದೆ. ಎಲೈ ದೇವಿ ! ನನ್ನನ್ನು ಪದೇ ಪದೇ ರಕ್ಷಿಸು. (ಅಥವಾ) ಅಶ್ವಕ್ರಾಂತಿ, ರಥಕ್ರಾಂತಿ, ವಿಷ್ಣುಕ್ರಾಂತಿಯೆಂಬ ಔಷಧಿಮೂಲಿಕೆಗಳಿಗೆ ಧಾರಕಳೇ ! ನನ್ನನ್ನು ರಕ್ಷಿಸು.

ವಿವರಣೆ : ಭೂಮಿಯನ್ನು ಭಗವಂತನು ಅಳೆದು ಸರ್ವಪ್ರಾಣಿಗಳಿಗೂ ಉಪಯುಕ್ತವನ್ನಾಗಿ ಮಾಡಿದನು. ಅಸುರಾಕ್ರಾಂತವಾಗಿದ್ದಾಗ ಭೂಮಿಯು ಹೀಗೆ ಸರ್ವೋಪಜೀವ್ಯವಾಗಿರಲಿಲ್ಲ. ಕುದುರೆಯಂಥ ಪ್ರಾಣಿಯೂ ರಥದಂತಹ ಅಚೇತನ ವಾಹನ ವಸ್ತುವೂ ಆಮೇಲೆ ಈ ಭೂಮಿಯಲ್ಲಿ ಸಂಚರಿಸಿ, ಅಳೆಯಲು ಶಕ್ಯವಾದದ್ದು ತ್ರಿವಿಕ್ರಮಾವತಾರಾನಂತರವೇ ! ಸಕಲ ಮೂಲಿಕೆಗಳೂ ಭೂಮಿಯನ್ನಾಶ್ರಯಿಸುವಂತಾದುದದ್ದು, ಆಮೇಲೆಯೇ. ಅದರಲ್ಲೂ ಜೀವರಕ್ಷಕ ಔಷಧಿ ಮೂಲಿಕೆಗಳಾದ ಅಶ್ವಕ್ರಾಂತಿ ಮೊದಲಾದವೂ ತಮ್ಮ ಜೀವರಕ್ಷಕ ಗುಣಗಳನ್ನು ಈ ಸರ್ವರಕ್ಷಕನ ಪಾದಪ್ರಭಾವದಿಂದ, ಭೂಸ್ಪರ್ಶದಿಂದ ಪಡೆದವು.

ಹದಿನೆಂಟನೆಯ ಮಂತ್ರ

## ವರಾಹವತಾರದಲ್ಲಿ ಮೇಲೆತ್ತಲ್ಪಟ್ಟವಳು

ಉದ್ಧೃತಾಸಿ ವರಾಹೇಣ ಕೃಷ್ಣೇನ ಶತಬಾಹುನಾ ।
ಭೂಮಿರ್ಧೇನುರ್ಧರಣೀ ಲೋಕಧಾರಿಣೀ ॥

ಅರ್ಥ : ಎಲೈ ಭೂದೇವಿಯೇ ! ಆಶ್ರಿತರಿಗೆ ಕಾಮಧೇನುವಾಗಿ, 'ಗೋ' ಎನಿಸಿದವಳೇ ! ಲೋಕವನ್ನು ಧರಿಸಿ 'ಲೋಕಧಾರಿಣೀ' ಎನಿಸಿದವಳೇ ! (ಹಿಂದೊಮ್ಮೆ, ನೀನು ನೀರಲ್ಲಿ ಮುಳುಗಿದ್ದಾಗ) ವರಾಹಾವತಾರರೂಪೀ, ಕೃಷ್ಣವಿಷ್ಣುವಿನಿಂದ, ಅವನ ಶತಬಾಹುಗಳಿಂದ ಉದ್ಧರಿಸಲ್ಪಟ್ಟೆಯಲ್ಲವೇ !

ವಿವರಣೆ : ಇನ್ನೊಬ್ಬರನ್ನು ಉದ್ಧರಿಸುವ ಗುಣ ಭೂಮಿಗೆ ಬಂದುದು ಹೇಗೆಂದರೆ, ತಾನೇ ಒಮ್ಮೆ ಮುಳುಗಿದ್ದು ಉದ್ಧರಿಸಲ್ಪಟ್ಟುದರ ದೆಸೆಯಿಂದ ಎಂದು ಕಾಣುತ್ತದೆ. ಕಷ್ಟಪಡದಿದ್ದವರಿಗೆ ಇತರರ ಕಷ್ಟ ತಿಳಿಯಲಾರದಷ್ಟೆ ! ಭಗವಂತನ ವರಾಹಾವತಾರ ಇಲ್ಲಿ ಸ್ತುತಿಸಲ್ಪಟ್ಟಿದೆ. ಹಿರಣ್ಯಾ

ಕ್ಷನು ಭೂಮಿಗೆ ಕೊಟ್ಟ ಹಿಂಸೆ ಅಷ್ಟಿಷ್ಟಲ್ಲ! ಅವನನ್ನು ಸಂಹರಿಸಿದ ವಿಷ್ಣುವು. ರಸಾತಳಕ್ಕೆ ಇಳಿಯುತ್ತಿದ್ದ ಭೂಮಿಯನ್ನು ತನ್ನ ಅನಂತ ಬಾಹುಗಳಿಂದ ಮೇಲೆತ್ತಿದನು. ಆಗವಳಿಗೆ ಅಸ್ತಿತ್ವವುಂಟಾಗಿ 'ಭೂ' ಎನಿಸಿದಳು. ಆಮೇಲೆ ಇತರರಿಗೂ ಧಾರಕಳಾದಳು.

### ಹತ್ತೊಂಭತ್ತನೆಯ ಮಂತ್ರ

## ಆಯುಸ್ಸು, ಪುಷ್ಟಿ ಕೊಡುವವಳು

ಮೃತ್ತಿಕೇ ಹನ ಮೇ ಪಾಪಂ ಯನ್ಮಯಾ ದುಷ್ಕೃತಂ ಕೃತಂ।
ತ್ವಯಾ ಹತೇನ ಪಾಪೇನ ಜೀವಾಮಿ ಶರದಃ ಶತಂ ॥
ಮೃತ್ತಿಕೇ ದೇಹಿ ಮೇ ಪುಷ್ಟಿಂ ತ್ವಯಿ ಸರ್ವಂ
ಪ್ರತಿಷ್ಠಿತಂ ॥ ೧೯ ॥

ಅರ್ಥ : ಎಲೈ ಭೂದೇವಿಯೇ! ನನ್ನ ಯಾವ ಪಾಪಗಳುಂಟೋ ಆ ಎಲ್ಲವನ್ನೂ ನಿವಾರಿಸು. ಆಗ ನಾನು ನೂರು ವರ್ಷ ಬಾಳುತ್ತೇನೆ. ದೇವಿ! ನನಗೆ ದೇಹಪುಷ್ಟಿಯನ್ನನುಗ್ರಹಿಸು. ನಿನ್ನಲ್ಲಿ ಎಲ್ಲವೂ ಪ್ರತಿಷ್ಠಿತವಾಗಿದೆ.

(ಮಂತ್ರಾರ್ಥವು ಸ್ಪಷ್ಟವಾಗಿದೆ.)

### ಇಪ್ಪತ್ತನೆಯ ಮಂತ್ರ

## ಲಕ್ಷ್ಮೀದೇವಿಯ ರೂಪಾಂತರ

ಗಂಧದ್ವಾರಾಂ ದುರಾಧರ್ಷಾಂ …… ಶ್ರಿಯಂ ॥

(ಪು ೧೯೩—೨೦೨ ನ್ನು ನೋಡಿರಿ)

( ಇಲ್ಲಿಗೆ ಯಾಜುಷ ಭೂಸೂಕ್ತ ವಿವರಣೆ ಮುಗಿಯಿತು )

## ಮೂರನೆಯ ಅಧ್ಯಾಯ

# ೧. ನೀಳಾಸೂಕ್ತ—ವಿವರಣೆ

ಪ್ರವೇಶ : ತೈತ್ತಿರೀಯ ಸಂಹಿತೆಯಲ್ಲಿ (IV-4-12 ರಲ್ಲಿ) ಬರುವ ಈ ಸೂಕ್ತವು ಅದಿತಿಪರವೆಂದು ಶ್ರೀ ಸಾಯಣರು ವ್ಯಾಖ್ಯಾನಿಸಿರುತ್ತಾರೆ. ಶ್ರೀವೈಷ್ಣವರು ಅನಾದಿಕಾಲದಿಂದ ಇದನ್ನು ನೀಳಾಸೂಕ್ತವೆಂದು ಕರೆಯುತ್ತಾ ಬಂದಿದ್ದಾರೆ. ಅದಿತಿ ಎಂದರೂ ವಿಷ್ಣುಪತ್ನಿ ಎಂಬರ್ಥವನ್ನು ಈ ಹಿಂದೆ ತೋರಿಸಿಯಾಗಿದೆ. ಪ್ರಕೃತ ಮಂತ್ರವೂ "ಅಸ್ಯೇಶಾನಾ ಜಗತೋ ವಿಷ್ಣುಪತ್ನೀ" ಎಂದು ಕಂಠೋಕ್ತವಾಗಿಯೇ ಇದು "ಈ ಜಗತ್ತಿಗೇ ಒಡೆಯಳಾದ ವಿಷ್ಣುಪತ್ನಿ"ಗೆ ಸಂಬಂಧಪಟ್ಟದ್ದೆಂದು ಘೋಷಿಸಿರುವಾಗ, ಸಲ್ಲದ ಕೌತಸ್ಕುತಕ್ಕೆ ಅವಕಾಶವೇ ಇಲ್ಲ. ಇದು ಅಶ್ವಮೇಧ ಪ್ರಕರಣವಾದುವರಿಂದ ಇಲ್ಲಿ ನೀಳಾದೇವಿಗೆ ಹೇಗೆ ಅನ್ವಯ ? ಎನ್ನುವುದಾದರೆ, ಅದೇ ಅಶ್ವಮೇಧದಲ್ಲಿ 'ಅದಿತಿ'ಗೆ ಅನ್ವಯವುಂಟೆಂದು ಸಾಯಣರು ಹೇಗೆ ತೋರಿಸಿದ್ದಾರೋ, ಹಾಗೆಯೇ, ಎನ್ನಬೇಕಾಗುತ್ತದೆ. ಕೃಷ್ಣಯಜುಸ್ಸಂಹಿತೆಯಲ್ಲಿ ಮಂತ್ರ ಬ್ರಾಹ್ಮಣ ಭಾಗಗಳೂ, ವಿಧಿ–ಅರ್ಥವಾದಗಳೂ ಪರಸ್ಪರ ಕೂಡಿಯೇ ಬರುವುದು ಜಗತ್ಪ್ರಸಿದ್ಧವಾಗಿದೆ. ಆದುದರಿಂದ ಪ್ರಕರಣದ ಪ್ರಶ್ನೆಯೇ ಇಲ್ಲಿ ಏಳುವುದಿಲ್ಲ.

ಪ್ರಕರಣವನ್ನೇ ನೋಡಿದರೂ ಬಾಧಕವೇನಿಲ್ಲ. ಮುಂದೆ ಇದೇ ಸಂಹಿತೆಯಲ್ಲಿ ( VII-5-14 ), ಇದೇ ಪ್ರಕರಣದಲ್ಲಿ ಬರುವ ಹತ್ತು ದೇವತೆಗಳಿಗೆ, ಯಾವಾಗ ಯಾವಾಗ ( ಯಾವ ಯಾವ ಋತುಗಳಲ್ಲಿ ) ಎಷ್ಟೆಷ್ಟು ಕಪಾಲಗಳಲ್ಲಿ ಎಷ್ಟೆಷ್ಟು ಹವಿಸ್ಸಮರ್ಪಣ ಮಾಡಬೇಕೆಂದು ಹೇಳಿದೆಯಷ್ಟೆ; ( ಈ ದೇವತೆಗಳಿಗೆ ಯಾವ ಯಾವ ಛಂದಸ್ಸುಗಳು ಪ್ರಿಯವೆಂಬುದನ್ನೂ ಅಲ್ಲಿ ಹೇಳಿದೆ. ) ಈ ದೇವತೆಗಳಿಗೆ ಈ ಈ ಹವಿಸ್ಸಮರ್ಪಣೆ ಮಾಡು

ವಾಗ ಪಠಿಸಬೇಕಾದ ಯಾಜ್ಯಾ ಮತ್ತು ಅನುವಾಕ್ಯಾ ಮಂತ್ರಗಳನ್ನು ಪ್ರಕೃತ ನಾಲ್ಕನೆಯ ಕಾಂಡದ ಭಾಗದಲ್ಲಿ ಹೇಳಿದೆ. ಈ ಹತ್ತು ದೇವತೆಗಳಾರೆಂದರೆ;

೧. ಅಗ್ನಿ ೨. ಇಂದ್ರ ೩. ವಿಶ್ವೇದೇವತೆಗಳು ೪. ಮಿತ್ರಾವರುಣರು ೫. ಬೃಹಸ್ಪತಿ ೬. ಸವಿತಾ ೭. ವಿಷ್ಣುಪತ್ನಿಯಾದ ಅದಿತಿ ೮. ಅಗ್ನಿ ವೈಶ್ವಾನರ ೯. ಅನುಮತೀ ಮತ್ತು ೧೦. 'ಕ' ಶಬ್ದ ವಾಚ್ಯನಾದ ಪ್ರಜಾಪತಿ, ಎಂಬುವರೇ ಈ ಹತ್ತು ದೇವತೆಗಳು.

ಈ ಪೈಕಿ ಏಳನೆಯ ದೇವತೆಯನ್ನು ಮೂಲದಲ್ಲಿಯೇ ಸಂಹಿತೆಯಲ್ಲಿ ಅದಿತ್ಯೈ ವಿಷ್ಣುಪತ್ನ್ಯೈ ಎಂದು ವಿವರಿಸಿರುವಾಗ, ಮತ್ತೆ ಅಡ್ಡ ಪ್ರಶ್ನೆಗೆ ಅವಕಾಶವೆಲ್ಲಿ ?

ಈ ದೇವತೆ ಇಲ್ಲೇಕೆ ಬರಬೇಕೆನ್ನುವುದಾದರೆ, ಉಳಿದ ದೇವತೆಗಳಿಗೂ ಇದನ್ನೇ ಕೇಳಬೇಕಾಗುತ್ತದೆ ! ವೇದ ಪುರುಷನನ್ನು ಪ್ರಶ್ನಿಸುವರುಂಟೇ ? ಮೂಲದಲ್ಲಿ ಅದಿತಿ ಎಂದಿರುವವಳೇ ನೀಳಾ ದೇವಿಯೋ, ಹೇಗೆಂದರೆ, ಮಂತ್ರೋಕ್ತ ದೇವತಾ ಲಕ್ಷಣಗಳಿಂದಲೇ ನಿರ್ಣಯವಾಗುವ ಪ್ರಶ್ನೆ ಇದು. ಇವಳು ವಿಷ್ಣುಪತ್ನಿಯೆಂದು ಎರಡೂ ಕಡೆಯಲ್ಲಿ ಹೇಳಿರುವ ನಿರ್ಣಯವೊಂದೇ ಸಾಕು.

(ಹಾಗೆ ನೋಡಿದಲ್ಲಿ ಇಲ್ಲಿ ಒಂಭತ್ತನೆಯ ದೇವತೆಯಾಗಿ ಬಂದಿರುವ ಅನುಮತೀ ದೇವತೆಯ ವಿಷಯದಲ್ಲಿಯೂ ಪ್ರಶ್ನೆ ಏಳುತ್ತದೆ. " ಅನುಮತ್ಯೈ ಚರುಂ " ಎಂದು ನಕ್ಷತ್ರೇಷ್ಟಿಯಲ್ಲೂ, ಅದಿತಿಯಂತೆಯೇ ಚರು ಸ್ವೀಕರಿಸುವ ಇವಳಾರು ? ಪ್ರತಿ ಯಾಗ, ಹೋಮಾದಿಗಳಲ್ಲಿ ಆದಿಯಲ್ಲೂ ಅಂತ್ಯದಲ್ಲಿಯೂ 'ಪರಿಷೇಚನ'ವೆಂಬ ಕ್ರಿಯೆಯೊಂದುಂಟಷ್ಟೆ !

ಅದಿತೇಽನುಮನ್ಯಸ್ವ ! ಅನುಮತೇಽನು ಮನ್ಯಸ್ವ ।
ಸರಸ್ವತ್ಯೇಽನುಮನ್ಯಸ್ವ ! ದೇವ ಸವಿತಃ ಪ್ರಸುವ
(ಪ್ರಾಸಾವೀಃ) ॥

ಎಂಬ ಮಂತ್ರವನ್ನು ಆಗ ಹೇಳುತ್ತೇವೆ. ಇಲ್ಲಿ ಅದಿತಿ, ಅನುಮತಿ, ಸರಸ್ವತಿ ಎಂಬ ಮೂರು ದೇವತೆಗಳನ್ನು ಸವಿತೃವಿನೊಡನೆ ಪಠಿಸುವುದಾಗಿದೆ. ಪ್ರಾರಂಭದಲ್ಲಿ ಯಜ್ಞರಕ್ಷಣೆಗಾಗಿಯೂ, ಕೊನೆಯಲ್ಲಿ ಯಜ್ಞ ರಕ್ಷಣೆಯಾಗಿ ಕೃತಜ್ಞತಾ ಸ್ಮರಣಪೂರ್ವಕವಾಗಿಯೂ ಹೇಳಲ್ಪಡುವ ಈ ಮಂತ್ರದಲ್ಲಿ, ಸವಿತಾ ಎಂದರೆ ಸಕಲ ಜಗತ್ಪ್ರಸೂತಿಕಾರಣನಾದ ಶ್ರೀಮನ್ನಾರಾಯಣನು, ಯಜ್ಞಪುರುಷನು ಮಾತ್ರವಲ್ಲದೆ ಅವನ ಪತ್ನಿಯರಾದ ಈ ಮೂವರೂ ಸ್ತುತಿಸಲ್ಪಡುವುದು ಸುವ್ಯಕ್ತ. ಇವರೇ ಶ್ರೀ, ಭೂ, ನೀಳೆಯರೆಂದೂ ಅನ್ಯತ್ರ ಖ್ಯಾತರಾಗಿರುವುದರಿಂದ, ಅದಿತಿಯಂತೆಯೇ ಉಳಿದಿಬ್ಬರೂ ವಿಷ್ಣುಪತ್ನಿಯರೆಂಬ ಭಾವ ದೃಢಪಡುವುದು. ಶ್ರೀಭೂನೀಳಾಸಮೇತನಾದ ಭಗವಂತನೇ ಆರಂಭದಲ್ಲೂ ಅಂತ್ಯದಲ್ಲೂ ನಿಂತು ಯಜ್ಞ-ಯಾಗ ಸಂರಕ್ಷಣೆ ಮಾಡುವಂತೆ ಏರ್ಪಟ್ಟಿರುವ ಈ ಪದ್ಧತಿಯಲ್ಲಿ ವೇದಾಗಮಗಳ ಸಂಕೇತಗಳ ಐಕ್ಯವಿರುವುದನ್ನು ಜಾಣರು ಕಾಣಬೇಕು !)

ಈಗ ಮಂತ್ರವನ್ನೂ ಮಂತ್ರಾರ್ಥವನ್ನೂ ಗಮನಿಸೋಣ:

## ಇಹಪರ ಸೌಖ್ಯಪ್ರದಳು

॥ಓಂ॥ ನೀಳಾಂ ದೇವೀಂ ಶರಣಮಹಂ ಪ್ರಪದ್ಯೇ ॥
ಗೃಣಾಹಿ । ಘೃತವತೀ ಸವಿತರಾಧಿಪತ್ಯೈಃ
ಪಯಸ್ವತೀ ರಂತಿರಾಶಾ ನೋ ಅಸ್ತು ।
ಧ್ರುವಾಂ ದಿಶಾಂ ವಿಷ್ಣುಪತ್ನ್ಯಘೋರಾಸ್ಯೇ-
ಶಾನಾ ಸಹಸೋ ಯಾ ಮನೋತಾ ॥೧॥

ಬೃಹಸ್ಪತಿರ್ಮಾತರಿಶ್ವೋತ ವಾಯುಃ
ಸಂಧುವಾನಾವಾತಾ ಅಭಿನೋ ಗೃಣನ್ತು ।

ವಿಷ್ಟಂಭೋ ದಿವೋ ಧರುಣಃ ಪೃಥಿವ್ಯಾ
ಅಸ್ಯೇಶಾನಾ ಜಗತೋ ವಿಷ್ಣುಪತ್ನೀ ॥೨॥

ಅರ್ಥ : ನೀಳಾದೇವಿಯನ್ನು ಶರಣುಹೋಗುತ್ತೇನೆ. ಎಲೈ ದೇವಿಯೇ, ಮಾತನಾಡು. ಎಲೈ ಜಗತ್ಕಾರಣನಾದ ಭಗವಂತನೇ ! ಯಾವ ದೇವಿಯು ಭಕ್ತರಿಗೆ ಭದ್ರವಾದ ದಿಕ್ಕಾಗಿ (ಶರಣ್ಯಳಾಗಿ), ವಿಷ್ಣುಪತ್ನಿ ಎನಿಸಿ, ಘೋರಳಲ್ಲದೆ, ತಂಪಾದ ಗುಣಪೂರ್ಣಳಾಗಿರುತ್ತಾ, ಈ ಜಗತ್ತಿಗೆ ಒಡೆಯಳಾಗಿರುತ್ತಾ, ಸಕಲ ಬಲಗಳಿಗೂ ಅಧೀಶ್ವರಿಯಾದಿರುತ್ತಾ, (ಭಕ್ತ) ಮಾನಸಪೂಜಿತಳಾಗಿರುವಳೋ, ಅವಳು ಸರ್ವವ್ಯಾಪಿನಿಯಾಗಿ ಎಲ್ಲ ದಿಕ್ಕುಗಳಲ್ಲೂ ಇರುತ್ತಾ, ಭಕ್ತರಿಗೆ ಘೃತವನ್ನನುಗ್ರಹಿಸುತ್ತಾ, ಆಧಿಪತ್ಯವನ್ನು (ಪ್ರಭುತ್ವವನ್ನು) ಅನುಗ್ರಹಿಸುತ್ತಾ ನಮಗೆ (ಮಂಗಳಮಯಳು) ಆಗಲಿ. (೧)

ದೇವಗುರುವಾದ ಬೃಹಸ್ಪತಿಯೂ, ಮಾತರಿಶ್ವನೆನಿಸಿದ ವಾಯುವೂ, ನಮ್ಮ ಪ್ರಾಣವಾಯುವೂ, ನಮ್ಮ ಶರೀರದಲ್ಲಿ ಹಲವು ಬಗೆಯ ಚೇಷ್ಟಾವ್ಯಾಪಾರಗಳನ್ನೆಸಗುತ್ತಿರುವ ಉಳಿದ ನಾಲ್ಕು ಅಪಾನಾದಿ ಪ್ರಾಣಗಳೂ, ಸಹ, ದೇವಲೋಕವನ್ನು ಕಂಭದಂತೆ ಧರಿಸಿರುವವಳೂ, ಭೂಮಿಗೆ ಆಧಾರಳೂ, ವಿಷ್ಣುಪತ್ನಿಯೂ, ಈ ಜಗತ್ತಿಗೇ ಅಧೀಶ್ವರಿಯೂ ಆದ ನೀಳಾದೇವಿಯೂ, ನಮ್ಮನ್ನು ಅನುಗ್ರಹಿಸಲಿ. (೨)

## ಪುರುಷಕಾರ ಸ್ವರೂಪಿಣೀ

ವಿವರಣೆಗಳು : ಮೊದಲನೆಯ ಮಂತ್ರದಲ್ಲಿ ಸಾಧಕನು ದೇವಿಯನ್ನು ಏನನ್ನೋ "ಹೇಳು"— "ಗೃಣಾಹಿ" —ಎಂದು ಕೇಳುತ್ತಾನೆಯಷ್ಟೆ ! ('ಗೃ-ಶಬ್ದೇ' ಧಾತುವಿನಂತೆ ಈ ಅರ್ಥಸಿದ್ಧಿಯಾಗುತ್ತೆ.) "ನಾವು ಮಾಡುವ ಶರಣಾಗತಿಯನ್ನು ಅಂಗೀಕರಿಸುವಂತೆ ಭಗವಂತನಲ್ಲಿ ನಮ್ಮ

ಪರವಾಗಿ ಶಿಫಾರಸು ಹೇಳು" ಎಂಬುದು ಇಲ್ಲಿಯ ಭಾವ. ಇವಳ ಪುರುಷ ಕಾರವಿಲ್ಲದೆ ಪ್ರಪತ್ತಿ ಸಿದ್ಧಿಸಲಾರದೆಂದು ಭಾವ.

ಅಥವಾ, ಸಾಧಕನು ತನ್ನ ಮನಸ್ಸನ್ನೇ ಕುರಿತು : "ಹೇಳು" ಎಂದಿದ್ದಾನೆನ್ನುವುದೂ ಯುಕ್ತ. ಆಗ, 'ಹೇಳು' ಎಂಬುದಕ್ಕೆ, "ಆಕೆಯು ವಿಷಯಕ ಸ್ತೋತ್ರರೂಪ ಮಂತ್ರವನ್ನು, ಸೂಕ್ತವನ್ನು ಹೇಳು" ಎಂದರ್ಥವಾಗುತ್ತದೆ.

ಮುಂದಿನ ಭಾಗ ಭಗವಂತನನ್ನು ಉದ್ದೇಶಿಸಿ ಮಾಡಿದ ಪ್ರಾರ್ಥನಾ ರೂಪದಲ್ಲಿದೆ. 'ಸವಿತೃ'ಶಬ್ದದಿಂದ ಅವನನ್ನು ಕರೆದು, "ಯತಃ ಪ್ರಸೂತಾ ಜಗತಃ ಪ್ರಸೂತಿಃ ತೋಯೇನ ಜೀವಾನ್ ವ್ಯಸಸರ್ಜ ಭೂಮ್ಯಾಂ" ಎಂಬ ಯಾಜ್ಞಿಕೀ ಉಪನಿಷತ್ತಿನಲ್ಲಿನ ನಾರಾಯಣಾರ್ಥವನ್ನೇ ಇಲ್ಲಿ ಸವಿತೃ ಶಬ್ದದಿಂದ ಹೇಳಿದೆ.

ಈ ಶಬ್ದದಿಂದ ಕರೆಯಲ್ಪಡುವ ಭಗವಂತನು ನಮಗೆ ಅನುಗ್ರಹಿಸಬೇಕಾದುದೇನೆಂದರೆ, ನೀಳಾದೇವಿಯ ಕೃಪೆಯನ್ನು.

ಎಂಥ ದೇವಿ ಅವಳೆಂದರೆ, ಅವಳು ನಮಗೆ 'ತುಪ್ಪ'ವನ್ನು ಕೊಡುವವಳಾಗಬೇಕು. (ನಃ ಘೃತವತೀ ಅಸ್ತು !) ತುಪ್ಪವು ಭೋಗವಸ್ತುಜಾತಕ್ಕೆ ಸಂಕೇತ. ಇಹ ಸೌಖ್ಯಕ್ಕೂ ಸಹ. ಪಯಸ್ವತೀಅಸ್ತು ಎಂಬಲ್ಲೂ ಇಹ ಭೋಗರೂಪಾಂತರವನ್ನೇ ಹೇಳಿದೆ. ಈ ದೇವಿಯು ಘೋರಸ್ವರೂಪಳಲ್ಲದೆ, ಕರುಣಾಮೂರ್ತಿ ಎಂಬುದನ್ನು ಅಘೋರಾ ಎಂಬ ಅವಳ ವರ್ಣನೆ ತಿಳಿಸುತ್ತದೆ. ನಮಗೆ (ರಾತಿರಸ್ತು) ಆನಂದವನ್ನು ಕೊಡುವ ದೇವಿ ಇವಳು. ಧ್ರುವಾ ದಿಶಾಂ ಎಂಬಲ್ಲಿ, ದಿಶನ್ತೀತಿ ದಿಶಃ, ಎಂಬಂತೆ, ದೇವರ ಬಳಿಸೇರಲು ಭದ್ರವಾದ ದಾರಿಯನ್ನು (ಶರಣಾಗತಿ ಮಾರ್ಗವನ್ನು) ತೋರಿಸುವವಳು ಎಂದು ಹೇಳಿದೆ. ವಿಷ್ಣುಪತ್ನಿಯೆಂದರೆ, ವಿಷ್ಣುವಿನಿಂದ ವ್ಯಾಪ್ತವಾದ ಸಕಲ ಜಗತ್ತಿಗೂ ಇವಳೂ ಈಶ್ವರಿ ಎಂಬುದನ್ನು ಉಳಿದ ವಿಶೇಷಣಗಳು ತಿಳಿಸುತ್ತವೆ. ಹೀಗೆ ಭಗವಂತನು ಇವಳ ಅನುಗ್ರಹವನ್ನು ನಮ್ಮ ಮೇಲೆ ಇಳಿಯುವಂತೆ ಮಾಡಬೇಕೆಂಬ ಪ್ರಾರ್ಥನೆ ಇಲ್ಲಿದೆ.

## ಲೋಕಾಧಾರಳು

ಎರಡನೆಯ ಮಂತ್ರದಲ್ಲಿ ಬೃಹಸ್ಪತಿಯೂ, ವಾಯುವೂ ಬಂದಿರುವು ದರ ಔಚಿತ್ಯವನ್ನು ಗಮನಿಸೋಣ. ಬೃಹಸ್ಪತಿಯ ಬುದ್ಧಿಯಿಂದ ದೇವ ಲೋಕ ನಿಂತಿರುವಂತೆ, ಪಂಚಪ್ರಾಣರೂಪೀ ವಾಯುವಿನಿಂದ ಈ ಜೀವಲೋಕ ನಿಂತಿದೆ. ಈ ಇಬ್ಬರೂ ದೇವತೆಗಳೂ ಹೀಗೆ ದೇವ-ಜೀವಲೋಕ ಧಾರಕ ರಾಗಿರಲು ಕಾರಣವೇನೆಂದರೆ, ಪ್ರಧಾನವಾಗಿ ಈ ಲೋಕಗಳನ್ನು ಧರಿಸಿರುವ ನೀಲಾದೇವಿಯ ಅಂಶಭೂತರಾಗಿರುವುದರಿಂದ ಎಂದು ಮಂತ್ರ ಸೂಚಿಸುತ್ತದೆ. ದೇವಲೋಕಕ್ಕೆ ಆಧಾರ (ವಿಷ್ಕಂಭೋದಿವೋ)ಳೂ, ಭೂಲೋಕಕ್ಕೆ ಆಧಾ ರಳೂ (ಧರುಣಃ ಪೃಥಿವ್ಯಾ) ಇವಳೇ ಎಂದಮೇಲೆ, ಬೃಹಸ್ಪತಿವಾಯು ಗಳು ಗೌಣವಾಗಿ ಆಧಾರರು ಎಂದಂತಾಯಿತು. ಇಷ್ಟು ಗೌಣಾರ್ಥದಲ್ಲೂ ಅವರು ಧಾರಕರಾಗಿರುವುದು ಈ ದೇವಿಯ ಅಂಶ, ಮಹಿಮೆ, ಕರುಣೆಗಳಿಂದ ಎಂದು ಸಂಗತಿ.

ಈ ಎರಡೂ ಮಂತ್ರಗಳಲ್ಲಿ ದೇವಿಯನ್ನು ಜಗತ್ತಿಗೆ ಒಡೆಯಳು ಎಂದು ಹೇಳಿರುವುದು ವಿಶೇಷ ಗಮನೀಯ. ಈ ಒಡೆತನ ವಿಷ್ಣುಪತ್ನಿಯಾದ ಪ್ರಯುಕ್ತವೆಂಬುದೂ ಗಮನೀಯ.

ಮೂಲದಲ್ಲಿ ನೀಳಾ(ಲಾ) ನಾಮಪ್ರಯೋಗವಿಲ್ಲವಾದರೂ, ಸೂಕ್ತ ರೂಪದಲ್ಲಿ ಪಠಿಸುವಾಗ ಈ ರೂಢಿಯುಂಟು.

## ಶ್ರೀಕೃಷ್ಣಾವತಾರದಲ್ಲಿ ನೀಳಾದೇವಿಯ ಪಾತ್ರ

ಶ್ರೀಕೃಷ್ಣಾವತಾರ ಕಾಲದಲ್ಲಿ ನಂದಗೋಪನಿಗೆ ಮೈದುನನಾಗಿ, ಪಶು ಸಂಪತ್ತಿಯಿಂದೊಡಗೂಡಿದ ಕುಂಭನೆಂಬ ಗೋಪನೊಬ್ಬನಿದ್ದನಂತೆ. ಇವನ

ಮಗಳೇ ನೀಳಾದೇವಿಯು ಅವತಾರ. ಆಳ್ವಾರುಗಳು ಇವಳ ಕೇಶಪಾಶದ ಸೌಂದರ್ಯಕ್ಕೆ ಮನಸೋತ ಗೋಪ-ಗೋಪಿಯರ ಭಾವದಲ್ಲಿ "ನಪ್ಪಿನ್ನೈ" ಎಂದು ಇವಳನ್ನು ಕರೆದರು. ಇವಳ ವಿವಾಹಕ್ಕೆ ಕುಂಭ ಒಂದು ಪಣ ಒಡ್ಡಿದ್ದ. ಮದಿಸಿದ ಏಳು ಎತ್ತುಗಳನ್ನು ಅಡಗಿಸಬಲ್ಲವನಿಗೆ ಇವಳನ್ನು ಕೊಡುವುದಾಗಿ ಹೇಳಿದ್ದ. ಶ್ರೀಕೃಷ್ಣ ಇದನ್ನು ಪೂರೈಸಿ ಇವಳ ಕೈಹಿಡಿದ ಎಂಬ ಐತಿಹ್ಯವುಂಟು. (ಹರಿವಂಶದಲ್ಲಿ)

ಸ್ನಾಲೋಽಥ ನಂದಗೋಪಸ್ಯ ಮಿಥಿಲೇಷು ಗವಾಂ ಪತಿಃ ।
ಪ್ರವೃದ್ಧ ಗೋಧನೋ ದಕ್ಷಃ ಕುಂಭಕೋ ನಾಮ
ನಾಮತಃ ॥ ೧ ॥

ದಾತಾ ದುಗ್ಧಸ್ಯ ಸರ್ವೇಷಾಂ ತಕ್ರಸ್ಯ ಚ ಘೃತಸ್ಯ ಚ ।
ಜನಸ್ಯ ಪ್ರಿಯವಾಗ್ ನಿತ್ಯಂ ಯಶೋದಾಯಾ
ಜಘನ್ಯಜಃ ॥ ೨ ॥

ಧರ್ಮದಾ ತಸ್ಯ ಭಾರ್ಯಾಸೀತ್ ಧರ್ಮದೈವತನಾಮತಃ ।
ಸಾ ಸೂತ್ವಾಪತ್ಯಯುಗಳಂ ಶೋಭನಂ
ಗೋಪಭೂಷಣಂ ॥ ೩ ॥

ತಯೋಸ್ತತ್ರ ಪುಮಾ ಜಜ್ಞೇ ಶ್ರೀದಾಮಾ ನಾಮ ವಿಶ್ರುತಃ ।
ಸರ್ವೈಶ್ಚಾಸೀತ್ ಗುಣೈರ್ಯುಕ್ತಃ ಸರ್ವ
ಪ್ರಾಣಿಮನೋರಮಃ ॥
ನೀಳಾನಾಮಾ ಚ ಕನ್ಯಾ ಸಾ ರೂಪೌದಾರ್ಯ ಗುಣಾನ್ವಿತಾ
॥೪॥

ಎಂಬ ಈ ಶ್ಲೋಕಗಳಂತೆ, ಯಶೋದೆಯ ತಮ್ಮನಾದ ಕುಂಭಕನು ಮಿಥಿಲೆಯಲ್ಲಿ ಗೋಸಂಪತ್ತಿನೊಡಗೂಡಿದ್ದುದಾಗಿಯೂ. ಇವನ ಪತ್ನಿ ಧರ್ಮದಾ ಎಂಬುವಳೆಂದೂ, ಇವರಿಗೆ ಶ್ರೀದಾಮನೆಂಬ ಗಂಡು ಮಗುವೂ, ನೀಳಾ

ಎಂಬ ಹೆಣ್ಣು ಮಗುವೂ ಜನಿಸಿದುದಾಗಿಯೂ. ಹೇಳಿದೆ. ಈ ಐತಿಹ್ಯವೂ ಈ ಶ್ಲೋಕಗಳೂ ಹರಿವಂಶದಲ್ಲಿವೆಯೆಂದು ಅಪ್ಪಯದೀಕ್ಷಿತರು. ವೇದಾಂತ ದೇಶಿಕರ ಯಾದವಾಭ್ಯುದಯ ಕಾವ್ಯದ ವ್ಯಾಖ್ಯಾನದಲ್ಲಿ (ಶ್ಲೋ ೯೮, ಸರ್ಗ ೯೪) ಹೇಳಿದ್ದಾರೆ. ಈ ನಪ್ಪಿನ್ನೈಯೇ ನೀಳೆ ಯೆಂದೂ ಅದೇ ಸ್ವರ್ಗದ ೫೦ ನೇ ಶ್ಲೋಕ ವ್ಯಾಖ್ಯಾನದಲ್ಲೂ ಹೇಳಿದ್ದಾರೆ ಆದ್ದರಿಂದ ಸಂದೇಹ ಬೇಡ. (ಈಗಿರುವ ಹರಿವಂಶದ ಮುದ್ರಿತ ಪ್ರತಿಗಳಲ್ಲಿ ಈ ಶ್ಲೋಕಗಳು ಕಾಣಬರುವದಿಲ್ಲವೆಂಬುದು ಸೋಜಿಗ !)

## ಇತಿಹಾಸ ಪುರಾಣಗಳಲ್ಲಿ

ಅಲ್ಲದೆ ಬ್ರಾಹ್ಮಪುರಾಣದಲ್ಲಿ ಬರುವ ಈ ಕೆಳಗಿನ ಶ್ಲೋಕಗಳೂ ನೀಲಾ ದೇವಿಯನ್ನು ಕುರಿತವು ಎಂದು ಹಿರಿಯರು ಹೇಳುವುದುಂಟು.

ಪ್ರಾಣಾಖ್ಯಾ ಮಂತ್ರಮಾತಾ ಚ ವಿಶ್ವಸ್ಯ ಜನನೀ ಧ್ರುವಾ ।
ಭಗವದ್ವಾಸುದೇವಸ್ಯ ನಿತ್ಯೈಷೈಷ್ಯಾನಪಾಯಿನೀ ॥
ಏಕೈವ ವರ್ತತೇ ಭಿನ್ನಾ ಜ್ಯೋತ್ಸ್ನೇವ ಹಿಮದೀಧಿತೇಃ ।
ತಸ್ಮಾತ್ ಪ್ರೀತಾ ಜಗನ್ಮಾತಾ ಶ್ರೀರಸ್ಯಾಚ್ಯುತ ವಲ್ಲಭಾ ॥
ಸುಪ್ರೀತಾಃ ಶಕ್ತಯಸ್ತಸ್ಯ ಸಿದ್ಧಿಮಿಷ್ಟಾಂ ದಿಶಂತಿ ಚ ॥

ಸಕಲಮಂತ್ರಗಳಿಗೂ ತಾಯಿಯಾಗಿ, ಭಗವಾನ್ ವಾಸುದೇವನನ್ನು ಎಡೆಬಿಡದೆ ಇರುವ ಇವಳು ನಿತ್ಯಳು. ಒಬ್ಬಳೇ ಆಗಿದ್ದರೂ ಹಿಮಕಾಂತಿಯಂತೆ ಭಿನ್ನ ಭಿನ್ನಳಾಗಿಯೂ ಇರುತ್ತಾಳೆ: ಅಚ್ಯುತವಲ್ಲಭೆಯಾದ ಶ್ರೀಯೂ ಇವಳೇ. ಜಗನ್ಮಾತೆಯಾದ ಇವಳು ಸದಾ ಸುಪ್ರೀತಳು. ಭಗವಂತನ ಸುಪ್ರೀತ ಶಕ್ತಿಗಳಾದ ಶ್ರೀ, ಭೂ, ನೀಳೆಯರು ಬೇಕಾದ ಇಷ್ಟಸಿದ್ಧಿಯನ್ನು ಕೊಡುತ್ತಾರೆ ಎಂದರ್ಥ,

ಆದ್ದರಿಂದ ವೇದ, ಇತಿಹಾಸ, ಪುರಾಣಗಳಲ್ಲಿ ಪ್ರಸಿದ್ಧಳಾದ ಈ ದೇವಿಯ ಸ್ವರೂಪವನ್ನು ಭಕ್ತಿಯಿಂದರಿತು ಉಪಾಸಿಸುವುದು ವೈದಿಕರೆಲ್ಲರಿಗೆ ಶ್ರೇಯಸ್ಸಿನ ದಾರಿಯಾಗುವುದು. ಇತಿಹಾಸಗಳಲ್ಲಿ ಎಲ್ಲಿ ಈ ದೇವಿ ಉಕ್ತಳೆಂದರೆ, ಹರಿವಂಶ (ಮಹಾ ಭಾರತ ಖಿಲ) ವನ್ನು ತೋರಿಸಿಯಾಗಿದೆ. ಶ್ರೀರಾಮಾಯಣದಲ್ಲಿ ಭಗವಂತನು ಸಮುದ್ರದ ಪ್ರಸನ್ನತೆಗಾಗಿ ಪ್ರಾಯೋಪವೇಶ ಮಾಡಿದಾಗ "ನೀಳವಾದ ತೋಳುಗಳನ್ನು ನೀಡಿ ಮಲಗಿದನು" ಎಂಬಲ್ಲಿ "ಭುಜೈಃ ಪರಮನಾರೀಣಾಂ ಅಭಿಮೃಷ್ಟಂ ಅನೇಕಧಾ"— "ಪರಮಾಂಗನೆಯರಿಂದ ಬಹಳ ಸಲ ಒತ್ತಲ್ಪಟ್ಟಿದ್ದು" ಎಂದಿದೆ. ಈ ಪರಮಾಂಗನೆಯರೇ ಶ್ರೀಭೂನೀಳಾದೇವಿಯರೆಂದು ವ್ಯಾಖ್ಯಾನ. ರಾಮಾವತಾರದಲ್ಲಿ ಏಕಪತ್ನೀ ವ್ರತವಾದ್ದರಿಂದ, ಅವತಾರ ಪೂರ್ವದ ಕ್ಷೀರಾಬ್ಧಿನಾಥನ, ವೈಕುಂಠನಾಥನ ಒಪ್ಪುವ ವರ್ಣನೆ ಇದೆಂದು ವ್ಯಾಖ್ಯಾತೃಗಳ ಅಭಿಪ್ರಾಯ. ಪಾಂಚರಾತ್ರ ಗ್ರಂಥಗಳಲ್ಲೂ ಪೂರ್ವಾಚಾರ್ಯ ಸೂಕ್ತಿಗಳಲ್ಲೂ, ಆಳ್ವಾರುಗಳ ದಿವ್ಯ ಪ್ರಬಂಧಗಳಲ್ಲೂ ಈ ದೇವಿಯರ ವರ್ಣನೆ ಪ್ರಸಿದ್ಧ.

## ೨ ಶ್ರದ್ಧಾಸೂಕ್ತ —ವಿವರಣೆ

ಪ್ರವೇಶ : ವೇದದಲ್ಲಿ ಬರುವ ಶ್ರೀ ಭೂನೀಳಾ ಸೂಕ್ತಗಳಲ್ಲದೆ, ಅಲ್ಲೇ ಬರುವ ಶ್ರದ್ಧಾ, ಮೇಧಾ, ವಾಕ್ ಸೂಕ್ತಗಳೂ, ವಾಗಾಂಭೃಣೀ ಸೂಕ್ತವೂ ಸಹ ಲಕ್ಷ್ಮೀಪರವೆಂದು ಹೇಳಿಯಾಗಿದೆ.

ಇವುಗಳಲ್ಲಿ ಈಗ ಶ್ರದ್ಧಾಸೂಕ್ತವನ್ನು ಅರ್ಥಸಹಿತ ಅಭ್ಯಸಿಸೋಣ. ಋಕ್ಸಂಹಿತೆಯ (ಮಂಡಲ ೧೦, ಸೂಕ್ತ ೧೫೧) ಲ್ಲಿಯೂ, ತೈತ್ತಿರೀಯ ಬ್ರಾಹ್ಮಣದಲ್ಲಿಯೂ (II-8-8) ಬರುವ ಈ ಮಂತ್ರಗಳನ್ನು ಭಕ್ತಿಯಿಂದ

ಜಪಿಸಿದರೆ, ಜಾಪಕನಿಗೆ ಜೀವನದಲ್ಲೂ, ಸಕಲಕಾರ್ಯಗಳಲ್ಲೂ ಶ್ರದ್ಧೆ (ಆಸಕ್ತಿ) ಯುಂಟಾಗುವುದೆಂದು ಋಗ್ವಿಧಾನದಲ್ಲಿ ಹೇಳಿದೆ (IV–71).

ಶ್ರದ್ಧಾಸೂಕ್ತಂ ಜಪೇನ್ನಿತ್ಯ ಶ್ರದ್ಧಾಕಾಮಃ ಸಮಾಹಿತಃ ।
ಸರ್ವತ್ರ ಲಭತೇ ಶ್ರದ್ಧಾಂ ಮೇಧಾ ಸೂಕ್ತಂ ತಥೈವ ಚ ॥

(ಇತ್ಯಾದಿ)

ಈ ಸೂಕ್ತಕ್ಕೆ ಶ್ರದ್ಧಾದೇವಿಯೇ ಅಧಿದೇವತೆಯೆಂದು ಹೇಳಿದೆ. ಇದೊಂದು 'ಭಾವನಾ ದೇವತೆ' (Abstract Goddess) ಎಂದು ಹಲವರು ಸಾಮಾನ್ಯವಾಗಿ ಅರ್ಥಮಾಡಿದ್ದಾರೆ. 'ಶ್ರೀ' ಎಂದರೆ 'ದ್ರವ್ಯಾನುಗ್ರಹ ಮಾಡುವ ದೇವತೆ' ಎಂದು ಲಕ್ಷ್ಮೀದೇವಿಯನ್ನು ಸಾಮಾನ್ಯವಾಗಿ ಕುರಿತು ಹೇಳುವಂತಿದೆ, ಈ ಬಗೆಯ ವ್ಯವಹಾರ. "ಶ್ರದ್ಧಾ–ಕಾಮಾಯನೀ" ಎಂದೂ ಹೇಳುತ್ತಾರೆ.

"ಮನುಷ್ಯರಲ್ಲಿರುವ ವಿಶೇಷಾಭಿಲಾಷೆಯೇ ಇವಳು", "ಪುರುಷಗತೋಽಭಿಲಾಷ ವಿಶೇಷಃ ಶ್ರದ್ಧಾ" ಎಂದು ಶ್ರೀಸಾಯಣರ ವಿವರಣೆ (ಋ. ಸಂ ಭಾಷ್ಯದಲ್ಲಿ). "ಶಾಸ್ತ್ರಾರ್ಥದಲ್ಲಿ ಅತಿಶಯ ವಿಶ್ವಾಸರೂಪವುಳ್ಳ ಚಿತ್ತವೃತ್ತಿಯೇ ಶ್ರದ್ಧೆಯು. ತದಭಿಮಾನಿನೀ ದೇವತೆಗೂ ಅದೇ ಹೆಸರು", "ಶಾಸ್ತ್ರಾರ್ಥೇ ವಿಶ್ವಾಸಾತಿಶಯ ರೂಪಾ ಚಿತ್ತವೃತ್ತಿಃ ಶ್ರದ್ಧಾ । ತದಭಿಮಾನಿನೀ ದೇವತಾಽಪಿ ತನ್ನಾಮಿಕೈವ ।" ಎಂದು ಅವರೇ ತೈ. ಬ್ರಾ. ಭಾಷ್ಯದಲ್ಲಿ ಬರೆದಿದ್ದಾರೆ. ಇದೆಲ್ಲ ಸಾಮಾನ್ಯಾರ್ಥವೇ ಆಯಿತು. ಆದರೆ ಕೀರ್ತಿ, ಶ್ರೀ, ವಾಕ್, ಸ್ಮೃತಿ, ಕ್ಷಮಾದಿಗಳಲ್ಲಿಯೂ ತನ್ನ ಒಂದು ತೇಜೋಂಶವಿರುವುದಾಗಿ ಭಗವಂತನೇ ಗೀತೆಯಲ್ಲಿ (ಹತ್ತನೆಯ ಅಧ್ಯಾಯದಲ್ಲಿ) ಹೇಳಿಕೊಂಡಿರುವ ಹಿನ್ನೆಲೆಯಲ್ಲಿ, ಈ ಗುಣಾಭಿಮಾನೀ ದೇವತೆಗಳಿಗೂ ಅವನಿಗೂ ಬಹುನಿಕಟ ಸಂಬಂಧವಿರಬೇಕಾಗುತ್ತದೆ. ಸಕಲ ದೇವತೆಗಳೂ —ಇಂದ್ರ, ರುದ್ರ, ವರುಣಾದಿಗಳು— ಅವನ ಒಂದೊಂದಂಶವಾದರೆ, ಈ ಸ್ತ್ರೀರೂಪ ದೇವತೆಗಳೂ ಲಕ್ಷ್ಮೀದೇವಿಯ ಒಂದೊಂದಂಶವೆಂಬ ವ್ಯವಹಾರವೂ ಅರ್ಥಪೂರ್ಣವೇ ಆಗುವುದು. ಶ್ರದ್ಧಾ ಶಬ್ದವು ಲಕ್ಷ್ಮಿಯನ್ನೇ ಕುರಿತು ಹೇಳುವುದೆಂಬ ಪ್ರಾಚೀನ ತಿಳುವಳಿಕೆಗೆ ಹೀಗೆ ಮೂಲವುಂಟು.

# ವೇದಪ್ರಕರಣವೊಂದು

ಶ್ರದ್ಧಾದೇವಿಯು ಲಕ್ಷ್ಮಿಯೇ ಹೌದೆಂಬುದಕ್ಕೆ ವೇದಪ್ರಕರಣವೊಂದನ್ನೇ ಈಗ ಪ್ರಮಾಣವನ್ನಾಗಿ ನೋಡೋಣ.

ತೈತ್ತಿರೀಯ ಬ್ರಾಹ್ಮಣದಲ್ಲಿ (III-12-12) ಭಗವಂತನನ್ನೂ ಅವನ ಪತ್ನಿಯನ್ನು ಕೂಡಿಸಿ ಸ್ತುತಿಸುವ ಪ್ರಕರಣ ಹೀಗಿದೆ :

ಯೇನೇದಂ ವಿಶ್ವಂ ಪರಿಭೂತಂ ತದಸ್ತಿ। ಪ್ರಥಮಜಂ ದೇವಗ್ಂ ಹವಿಷಾ ವಿಧೇಮ। ಸ್ವಯಂಭು ಬ್ರಹ್ಮ ಪರಮಂ ತಪೋ ಯತ್। ಸ ಏವ ಪುತ್ರಃ ಸ ಪಿತಾ ಸ ಮಾತಾ। ತಪೋ ಹ ಯಕ್ಷಂ ಪ್ರಥಮಂ ಸಂಬಭೂವ। ಶ್ರದ್ಧಯಾ ದೇವೋ ದೇವತ್ವಮಶ್ನುತೇ। ಶ್ರದ್ಧಾ ಪ್ರತಿಷ್ಠಾ ಲೋಕಸ್ಯ ದೇವೀ। ಸಾ ನೋ ಜುಷಾಣೋಪಯಜ್ಞಮಾಗಾತ್। ಕಾಮವತ್ಸಾಮೃತಂ ದುಹಾನಾ। ಶ್ರದ್ಧಾ ದೇವೀ ಪ್ರಥಮಜಾ ಋತಸ್ಯ। ವಿಶ್ವಸ್ಯ ಭರ್ತ್ರೀ ಜಗತಃ ಪ್ರತಿಷ್ಠಾ। ತಾಗ್ಂ ಶ್ರದ್ಧಾಗ್ಂ ಹವಿಷಾ ಯಜಾಮಹೇ। ಸಾ ನೋ ಲೋಕಮಮೃತಂ ದಧಾತು। ಈಶಾನಾ ದೇವೀ ಭುವನಸ್ಯಾಧಿಪತ್ನೀ ॥

ಅರ್ಥ : "ಯಾವ ಭಗವಂತನಿಂದ ಈ ವಿಶ್ವವು ವ್ಯಾಪ್ತವಾಗಿದೆಯೋ (ಪರಿಭೂತಂ = ಸರ್ವತೋ ವ್ಯಾಪ್ತಂ, ಎಂದು ಸಾಯಣರು,) ಯಾವನು ಎಲ್ಲಕ್ಕಿಂತ ಮೊದಲು ಹುಟ್ಟಿಬಂದನೋ ಆ ದೇವನನ್ನು ಆತ್ಮಹವಿಸ್ಸಮರ್ಪಣ ರೂಪ ಯಜ್ಞದಿಂದ ಪರಿಚರ್ಯೆ ಮಾಡೋಣ. ಅವನು ತನಗೆ ತಾನೇ ಹುಟ್ಟಿದವನು (ಅವನಿಗೆ ಬೇರೆ ಕಾರಣರಿಲ್ಲ) ಅವನೇ ಪರಮ ಬ್ರಹ್ಮ ಸಂಕಲ್ಪರೂಪ ತಪಸ್ಸೂ ಅವನೇ. (ಇದೇ ಸೃಷ್ಟಿಮೂಲವಾಗಿ, ತಪೋಶಬ್ದ ವಾಚ್ಯನೇ ಜಗತ್ಕಾರಣನು.) ಅವನಿಂದ ಸೃಷ್ಟವಾದ ಈ ಜಗತ್ತು, ಕಾರ್ಯ

ಕಾರಣ ಐಕ್ಯನಿಮಿತ್ತ, ಮಾತಾ, ಪಿತಾ, ಪುತ್ರರೂಪದಲ್ಲಿದೆ. (ಅವನಿಗೆ ಅವನೇ ತಂದೆ, ತಾಯಿ, ಮಗ.) ಅಥವಾ ಇಂಥ ಮಹಿಮಾನ್ವಿತನು ಯಜಮಾನನಿಗೆ ಮಾತಾ, ಪಿತಾ, ಪುತ್ರರೂಪದ ಎಲ್ಲವಿಧ ನಿರುಪಾಧಿಕ ಬಂಧುವೂ ಆಗಿದ್ದಾನೆ. ಇಂಥ ದೇವರು ಮೊದಲು ಪೂಜ್ಯವಾದ ಸಂಕಲ್ಪರೂಪ ತಪಸ್ಸಾದನು. (ತಪಸ್ಸು ಮಾಡಿದನು.) (ಆಗ) ಶ್ರದ್ಧೆಯೆಂಬ ದೇವಿಯೊಡಗೂಡಿ ಈ ದೇವನು ದೇವತ್ತ್ವವನ್ನು ಹೊಂದಿದನು. ಈ ಲೋಕಕ್ಕೆ ಆಶ್ರಯವೆಂಬ ಶಾಶ್ವತ ಪ್ರತಿಷ್ಠಾರೂಪ ಶ್ರೇಯಸ್ಸು ಈ ದೇವಿಯಿಂದಲೇ ಆಯಿತು. ಅವಳು ಪ್ರೀತಳಾಗಿ ನಮ್ಮ ಯಜ್ಞಕ್ಕೆ ಇಳಿದುಬರಲಿ. ಫಲವನ್ನು ಆಸೆಪಡುವುದೆಂಬ ರೂಪದ ಕರುವು ಯಾವಳಿಗುಂಟೋ ಆ ಕಾಮವತ್ಸಳು ನಮಗೆ ಅಮೃತವನ್ನು ಕರೆಯುವ ಕಾಮಧೇನುವಾಗಲಿ. ಈ ಶ್ರದ್ಧಾದೇವಿಯೂ (ಭಗವಂತನಂತೆಯೇ) ಋತಾತ್ಮಕವಾದ (ಅಪ್ರಾಕೃತ) ವೈಕುಂಠಲೋಕದಲ್ಲಿ ಮೊದಲೇ ಹುಟ್ಟಿಬಂದವಳು. (ಇವಳಾಗಲೀ, ಭಗವಂತನಾಗಲೀ ಈ ಮೊದಲು ಇಲ್ಲದ ಕಾಲವಿರಲಿಲ್ಲವೆಂಬು ಭಾವ.) ವಿಶ್ವದ ರಕ್ಷಕಳೂ, ಜಗತ್ತಿಗೆ ಆಶ್ರಯಳೂ ಆದ ಈ ಶ್ರದ್ಧಾದೇವಿಯನ್ನು ಹವಿಸ್ಸಿನಿಂದ ಯಜ್ಞದಲ್ಲಿ ಅರ್ಜಿಸೋಣ. ಈ ಲೋಕವನ್ನು ಅವಳು (ತನ್ನ ಕಟಾಕ್ಷದಿಂದ) ಅಮೃತಮಯವನ್ನಾಗಿ ಮಾಡಲಿ. ಇವಳು ಲೋಕಕ್ಕೆಲ್ಲ ಒಡೆಯಳೂ, ಜಗತ್ಸ್ವರೂಪನೂ ಆದ ಭಗವಂತನ ಅಧಿಪತ್ನಿ, ಪಟ್ಟಮಹಿಷಿಯಾಗಿದ್ದಾಳೆ."

ಈ ಪ್ರಕರಣದಿಂದ 'ಶ್ರದ್ಧಾ' ನಾಮವು ಲಕ್ಷ್ಮೀವಾಚಕವೆಂಬಲ್ಲಿ ಸಂದೇಹವಿರಲಾರದಷ್ಟೆ !

## ಶ್ರದ್ಧಾ ಸೂಕ್ತ

(ಋ. ಸಂಹಿತೆಯಲ್ಲಿನಂತೆ)

ಶ್ರದ್ಧಯಾಗ್ನಿಃ ಸಮಿಧ್ಯತೇ ಶ್ರದ್ಧಯಾ ಹೂಯತೇ ಹವಿಃ ।
ಶ್ರದ್ಧಾಂ ಭಗಸ್ಯ ಮೂರ್ಧನಿ ವಚಸಾ ವೇದಯಾಮಸಿ ॥೧॥

ಪ್ರಿಯಂ ಶ್ರದ್ಧೇ ದದತಃ ಪ್ರಿಯಂ ಶ್ರದ್ಧೇ ದಿದಾಸತಃ ।
ಪ್ರಿಯಂ ಭೋಜೇಷು ಯಜ್ವಸು ಇದಂ ಮ ಉದಿತಂ
ಕೃಧಿ ॥ ೨ ॥

ಯಥಾ ದೇವಾ ಅಸುರೇಷು ಶ್ರದ್ಧಾಮುಗ್ರೇಷು ಚಕ್ರಿರೇ ।
ಏವಂ ಭೋಜೇಷು ಯಜ್ವಸು ಅಸ್ಮಾಕಮುದಿತಂ
ಕೃಧಿ ॥ ೩ ॥

ಶ್ರದ್ಧಾಂ ದೇವಾ ಯಜಮಾನಾಃ ವಾಯುಗೋಪಾ
ಉಪಾಸತೇ ।
ಶೃದ್ಧಾಂ ಹೃದಯ್ಯಯಾ ಕೂತ್ಯಾ ಶ್ರದ್ಧಯಾ ವಿಂದತೇ
ವಸು ॥ ೪ ॥

ಶ್ರದ್ಧಾಂ ಪ್ರಾತರ್ಹವಾಮಹೇ ಶ್ರದ್ಧಾ ಮಧ್ಯಂದಿನಂ ಪರಿ ।
ಶ್ರದ್ಧಾಂ ಸೂರ್ಯಸ್ಯ ನಿಮ್ರುಚಿ ಶ್ರದ್ಧೇ ಶ್ರದ್ಧಾಪಯೇಹ
ನಃ (ಮಾ) ॥ ೫ ॥

(ತೈ. ಬ್ರಾಹ್ಮಣದಲ್ಲಿ ಮುಂದುವರೆದ ಶ್ರದ್ಧಾಸೂಕ್ತಭಾಗ)
ಶ್ರದ್ಧಾದೇವಾನಧಿವಸ್ತೇ । ಶ್ರದ್ಧಾ ವಿಶ್ವಮಿದಂ ಜಗತ್ ।
ಶ್ರದ್ಧಾಂ ಕಾಮಸ್ಯ ಮಾತರಂ । ಹವಿಷಾ
ವರ್ಧಯಾಮಸಿ ॥ ೬ ॥

ಅರ್ಥ : ಅಗ್ನಿಯು ಸಮಿತ್ತುಗಳಿಂದೊಡಗೂಡಿ ಪ್ರಜ್ವಲಿಸುವುದೇ ಶ್ರದ್ಧಾ ದೇವಿಯ ಕೃಪೆಯಿಂದ. (ಯಜಮಾನನು ಹವಿಸ್ಸನ್ನು ಸಮರ್ಪಿಸುವುದೂ ಶ್ರದ್ಧೆಯಿಂದಲೇ (ಶ್ರದ್ಧೆಯೇ ಹಾಗೆ ಮಾಡಿಸುತ್ತಾಳೆ). ಭಗವಂತನ ಶಿರಸ್ಸಿನಲ್ಲಿಯೇ ಧರಿಸಲ್ಪಟ್ಟಿರುವ ಶ್ರದ್ಧಾದೇವಿಯು ನಮ್ಮ ವಾಗ್ರೂಪ ಪ್ರಶಂಸೆಗಳಿಂದ ಸ್ತುತಿಸಲ್ಪಡುತ್ತಾಳೆ. ಎಲೈ ಶ್ರದ್ಧಾದೇವಿಯೇ ! ದಾನಿ

ಯಾದ ಯಜಮಾನನಿಗೆ ಪ್ರಿಯವಾದ್ದನ್ನು ಅನುಗ್ರಹಿಸು. ದಾನಮಾಡ ಬೇಕೆಂಬವನಿಗೂ ಹಾಗೇ ಮಾಡು. ಭೋಗಾಪೇಕ್ಷಿಗಳಿಗೂ, ತ್ಯಾಗಾಪೇಕ್ಷಿಗಳಿಗೂ, ನಮಗೂ ಶ್ರದ್ಧೆಯುಂಟಾಗುವಂತೆ ಮಾಡು. ಹೇಗೆ ದೇವತೆಗಳು ಉಗ್ರರಾದ ಅಸುರರಲ್ಲೂ ಶ್ರದ್ಧೆಯಿಟ್ಟರೋ, ಆ ರೀತಿ ಭೋಗಾರ್ಥಿಗಳಾದ ನಮ್ಮಲ್ಲೂ ಅದು ಉದಿಸಲಿ. ದೇವತೆಗಳೂ, ಯಜ್ಞಶೀಲರೂ ವಾಯುದೇವತಾ ರಕ್ಷಿತವಾದ ಶ್ರದ್ಧಾದೇವಿಯನ್ನು (ಅಥವಾ ತಮ್ಮ ಉಸಿರು ಉಳಿಸಿಕೊಳ್ಳಲು ಉಪಾಸಿಸುತ್ತಾರೆ. ಹೃದಯಂಗಮವಾದ ಸ್ತುತಿ, ಕ್ರಿಯಾ ಚರಣೆಗಳಿಂದ ಅರ್ಚಿಸಿ; ಇಷ್ಟವಾದ ಧನಾದಿಗಳನ್ನು ಪಡೆಯುತ್ತಾರೆ. (ಇಂಥ ಮಹಿಮಾನ್ವಿತಳಾದ ) ಶ್ರದ್ಧಾದೇವಿಯನ್ನು ಬೆಳಗ್ಗೆ ಯಜ್ಞದಲ್ಲಿ ಕರೆದು ಹವನಮಾಡುತ್ತೇವೆ; ಮಧ್ಯಾಹ್ನವೂ. ಸೂರ್ಯಾಸ್ತಮಾನ ಕಾಲದಲ್ಲೂ ಸಹ, ಎಲೈ ದೇವಿ! ನನಗೆ ಶ್ರದ್ಧೆಯುಂಟಾಗುವಂತೆ ಮಾಡು. ಶ್ರದ್ಧಾದೇವಿಯು ದೇವತೆಗಳನ್ನಾಶ್ರಯಿಸಿ, ಅವರಲ್ಲಿ ಮನೆ ಮಾಡಿಕೊಂಡಿದ್ದಾಳೆ, ವಿಶ್ವವನ್ನೇ ಅವಳು ವ್ಯಾಪಿಸಿದ್ದಾಳೆ, ಮನ್ಮಥನಿಗೂ ಅವಳು ತಾಯಿ. ಇವಳನ್ನು ಹವಿಸ್ಸಿನಿಂದ .ಬೆಳೆಸುತ್ತೇವೆ.

## ವಿಶ್ವವ್ಯಾಪಕ ವೈಭವ ಉಳ್ಳವಳು

ವಿವರಣೆಗಳು : ಅಗ್ನಿಗೆ ಪ್ರಜ್ವಲಿಸುವ ಶಕ್ತಿಯನ್ನು ಕೊಟ್ಟವರಾರು? ಜೀವನದಲ್ಲಿ ಯಜ್ಞವೆಂಬ ತತ್ತ್ವ ಉದಿಸುವಂತೆ (ಅರ್ಪಣೆಯಿಂದ ಸೃಷ್ಟಿ ಎಂಬ ನಿಯಮವನ್ನು ಮಾಡಿದವರಾರು? ಭೋಗವನ್ನು ಬಯಸುವವರಿಗೆ ಭೋಗಫಲಗಳನ್ನೂ, ತ್ಯಾಗಿಗಳಿಗೆ ( ಯಜಮಾನರಿಗೆ ) ಯಜ್ಞಫಲವನ್ನು ಅನುಗ್ರಹಿಸುವವರಾರು ?— ಎಂಬ ಪ್ರಶ್ನೆಗಳಿಗೆ ಇಲ್ಲಿ ಉತ್ತರವಿದೆ. ಭಗ್ನಸ್ವರೂಪೀ ದೇವರು ತನ್ನ ತಲೆಯ ಮೇಲೆಯೇ ಕೂಡಿಸಿಕೊಂಡು ಭೋಗ್ರಪಡುತ್ತಿರುವ ಈ ಶ್ರದ್ಧಾ ಶಬ್ದವಾಚ್ಯಳಾದ ಲಕ್ಷ್ಮೀದೇವಿಯ ಕೃಪೆಯಿಂದಲೇ ಎಂದು ಮಂತ್ರಾರ್ಥ.

ಶ್ರದ್ಧೆಯು ವಿಶ್ವವ್ಯಾಪಕಳು; ಎಲ್ಲದೇವತೆಗಳಲ್ಲಿಯೂ ವಾಸಿಸುವವಳು; ಎಲ್ಲ ಆಸೆಗಳ ಸ್ವರೂಪನಾದ ಕಾಮನಿಗೂ ಅವಳು ತಾಯಿ; ಬೇಡಿದವರ ಎಲ್ಲ ಇಷ್ಟಾರ್ಥಗಳದ್ದೂ ಪೂರೈಸುವಳು— ಎಂಬೀ ವರ್ಣನೆಗಳೂ ಇವಳು ಲಕ್ಷ್ಮೀದೇವಿಯೇ ಎಂಬುದನ್ನು ದೃಢಪಡಿಸುತ್ತವೆ.

## ಶ್ರದ್ಧಾದೇವಿಯ ಸ್ವರೂಪ

ಶ್ರದ್ಧೆಯೆಂದರೆ— ಶ್ರತ್‌ಅಸ್ಯಾಂಧೀಯತೇ ಎಂದು ಯಾಸ್ಕರು ನಿರುಕ್ತದಲ್ಲಿ ವಿವರಿಸುವಂತೆ ಸತ್ಯದಲ್ಲಿ ನಿಷ್ಠೆ ಎಂದು ತಿಳಿಯೋಣ. (ಶ್ರತ್–ಸತ್ಯಂ) ಯಾವ ವಸ್ತುವಿಗೂ ಯಾವುದರಲ್ಲಾದರೂ ಶ್ರದ್ಧೆಯುಂಟಾದಾಗ ಮಾತ್ರ ವಿಶ್ವವ್ಯಾಪಾರವು ಸಾಧ್ಯ. ಪ್ರವಹಿಸುವ ನದಿಗಳಿಗೆ ಸಮುದ್ರವನ್ನು ಸೇರಿಯೇವು" ಎಂದೂ, ಪರ್ವತಗಳಿಗೆ "ದೃಢವಾಗಿರಬಲ್ಲೆವು" ಎಂದೂ, ಅಗ್ನಿಗೆ "ಜ್ವಲಿಸಬಲ್ಲೆ"ನೆಂದೂ, ಮನುಷ್ಯನಿಗೆ "ಬದುಕಬಲ್ಲೆ, ಹಿಡಿದ ಕೆಲಸ ಮಾಡಬಲ್ಲೆ, ತಿಳಿಯಬಲ್ಲೆ." ಮುಂತಾಗಿಯೂ ಹೀಗೆ ಜಗತ್ತಿನ ಎಲ್ಲ ವಸ್ತುಗಳಿಗೂ ಒಂದೊಂದು ಬಗೆಯ (ಅನೇಕ ವಿಷಯಗಳಲ್ಲಿ ಅನೇಕ ಬಗೆಯ) ವಿಶ್ವಾಸವಿದ್ದ ಹೊರತು ಜೀವನ ಮಸಣವೇ ಆಗುತ್ತಿತ್ತು ಆದರೆ ಉಲ್ಲಾಸಮಯವಾಗಿಯೂ, ಸಂಪದ್ಯುಕ್ತವಾಗಿಯೂ, ಚೆಲುವಿನಿಂದ ಕೂಡಿದುದಾಗಿಯೂ ಸುಖ, ಶಾಂತಿ, ಪುಷ್ಟಿ, ಆನಂದಮಯವಾಗಿಯೂ ಜೀವನ ಆಗಲು ಈ ದೇವಿಯ ಕೃಪೆಯೇ ಕಾರಣವೆಂದ ಮೇಲೆ ಇವಳು ಲಕ್ಷ್ಮಿ ಎಂಬಲ್ಲಿ ಸಂದೇಹವೇ ಉಳಿಯಲಾರದು. ಧನಕಾಮನು ಧನವನ್ನೂ, ಜ್ಞಾನಕಾಂಕ್ಷಿಯು ಜ್ಞಾನವನ್ನೂ, ಮೋಕ್ಷಾಪೇಕ್ಷಿಯು ಮೋಕ್ಷವನ್ನೂ, ಐಹಿಕಸುಖಾಪೇಕ್ಷಿಗಳು ಆಸೆಪಟ್ಟ ಸುಖಪ್ರಕಾರಗಳನ್ನೂ, ಹೆಚ್ಚೇನು, ಉಸಿರುಳಿಸಿಕೊಳ್ಳಲು ಉಗ್ರರಾದ ಅಸುರರೊಡನೆ ಆಗಾಗ ಹೆಣಗಾಡುವ ದೇವತೆಗಳು ವಿಜಯವನ್ನೂ ಪಡೆಯುವುದೇ ಇವಳ ಕೃಪೆಯಿಂದ ಎಂದು ಮಂತ್ರ ಹೇಳುತ್ತದೆ. ಅಥವಾ

ಸಮುದ್ರಮಥನಾದಿ ಕಾಲಗಳಲ್ಲಿ "ಇವರಿಂದ ನಮಗೆ ಭಯವಿಲ್ಲ" ಎಂಬ ಶ್ರದ್ಧೆಯಿಂದಲೇ ಅವರನ್ನೂ ಕೂಡಿಸಿಕೊಂಡು ಮಥಿಸಿದರು !

## ಆನಂದಮಯನ ಪತ್ನಿ

"ನಮ್ಮ ಹೃದಯಾಕಾಶದಲ್ಲಿ ಆನಂದ ರೂಪೀ, ಆನಂದಮಯನಾದ ಭಗವಂತನಿಲ್ಲದಿದ್ದರೆ, ಯಾರು ತಾನೇ ನಮ್ಮನ್ನು ಉಸಿರಾಡುವಂತೆ ಮಾಡಿ ಬದುಕಿಸುತ್ತಿದ್ದರು ? " ಎಂದು ತೈತ್ತಿರೀಯ ಉಪನಿಷತ್ತು ಕೇಳುತ್ತದೆ, ಇವನೇ "ಆನಂದಗೊಳಿಸುವವನು" ಎಂದೂ ಉತ್ತರಿಸುತ್ತದೆ,

ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ ? ಯದೇಷ ಆಕಾಶ-
ಆನಂದೋ ನಸ್ಯಾತ್ । ಏಷ ಹ್ಯೇವಾನಂದ ಯಾತಿ ॥

ಹಾಗೇ ಶ್ರದ್ಧೆಯು ಲೋಕದಲ್ಲಿ ಅವತರಿಸದಿದ್ದರೆ, ವಿಶ್ವದ ಗತಿ ಏನಾಗುತ್ತಿತ್ತು ? ದೇವತೆಗಳ ಗತಿ ಏನಾಗುತ್ತಿತ್ತು ? ಜೀವನಕ್ಕೆ ಅರ್ಥವೆಲ್ಲಿರುತ್ತಿತ್ತು ? ಎಂಬ ಪ್ರಶ್ನೆಗೆ ಪ್ರಕೃತ ಸೂಕ್ತವು ಉತ್ತರಿಸಿ, ಇದೆಲ್ಲ ಲಕ್ಷ್ಮೀ ಕೃಪೆಯೆಂದು ತಿಳಿಸುತ್ತದೆ.

ನಚೀಕೇತನಿಗೆ, ಕೋಪಿಷ್ಠ ತಂದೆಯು, ಯಮನಿಗೆ ದಾನ ಕೊಟ್ಟ ಕಾಲದಲ್ಲೂ "ಶ್ರದ್ಧಾ ವಿವೇಶ" ಎಂಬಂತೆ, ಅವನ ಬುದ್ಧಿಯನ್ನು ಹೊಕ್ಕು ದಿವ್ಯ ಆಧ್ಯಾತ್ಮಜ್ಞಾನ ಸಂಪತ್ತನ್ನು ತಂದುಕೊಟ್ಟವಳು ಇವಳೇ ಎಂಬುದನ್ನು ನಮ್ಮ ಎರಡನೆಯ ಸಂಪುಟದಲ್ಲಿ ನಿರೂಪಿಸಿದ್ದೇವೆ.

ಇಂಥ ಮಹಿಮಾನ್ವಿತಳಾದ ದೇವಿಯು ಇಂದು ಜಾಡ್ಯಾಂಧಕಾರದಲ್ಲಿ ಮುಳುಗಿರುವ ಜಗತ್ತಿಗೆ ದಿವ್ಯ ಆಧ್ಯಾತ್ಮಜ್ಞಾನ ಸಂಪತ್ತನ್ನೂ, ಪರಲೋಕ ಪುಣ್ಯಪಾಪ, ಅಮೃತತ್ತ್ವಾದಿಸುಖಗಳಲ್ಲಿ ಶ್ರದ್ಧೆಯನ್ನೂ ನೀಡಲೆಂದು ಪ್ರಾರ್ಥಿಸೋಣ.

# ೩. ಮೇಧಾಸೂಕ್ತ — ವಿವರಣೆ

ಪ್ರವೇಶ : ಶ್ರದ್ಧಾಸೂಕ್ತದ ಜೊತೆಯಲ್ಲಿಯೇ ಖಿಲ (ಪರಿಶಿಷ್ಟ) ವಾಗಿ ಪಠಿಸಲ್ಪಡುವ ಮೇಧಾಸೂಕ್ತವೂ ಇದರೊಡನೆಯೇ ಋಗ್ವೇದದಲ್ಲಿ (X–151) ಸೇರಿಸಲ್ಪಟ್ಟಿದೆ. ಆದರೂ ಇದಕ್ಕೆ ಸಾಯಣಾದಿ ಆಚಾರ್ಯರುಗಳ ಭಾಷ್ಯ ದೊರಕುದುದು ಸೋಜಿಗವಾಗಿದೆ. ಲಕ್ಷ್ಮೀದೇವಿಯ ಅನೇಕ ಶ್ರೀನಾಮಗಳಲ್ಲಿ ಮೇಧಾ ಎಂಬುದೂ ಒಂದೆಂದು ಹಿರಿಯರ ಗ್ರಹಿಕೆ. ಈ ದೇವಿಯ ವಿಷಯವಾದಿ ಸುಪ್ರಸಿದ್ಧ ಖಿಲಸೂಕ್ತವಲ್ಲದೆ ಬೇರೆ ಇತರ ಮಂತ್ರಗಳೂ ಅಲ್ಲಲ್ಲಿ ಬಂದಿವೆ.

ಉದಾಹರಣೆಗಾಗಿ ತೈತ್ತಿರೀಯ ಆರಣ್ಯಕದಲ್ಲಿ (X–39–42) ಈ ಕೆಳದಿನ ಪ್ರಸಿದ್ಧ ಮಂತ್ರಗಳಿವೆ. ಮೊದಲು ಇವನ್ನು ಪರಿಶೀಲಿಸೋಣ. (ಇದಕ್ಕೆ ಸಾಯಣಭಾಷ್ಯ ಉಂಟು.)

## ದೇವರನ್ನು ನೆನಪಿನಲ್ಲಿ ತರುವವಳು

ಮೇಧಾ ದೇವೀ ಜುಷಮಾಣಾ ನ ಆಗಾತ್
ವಿಶ್ವಾಚೀ ಭದ್ರಾ ಸುಮನಸ್ಯಮಾನಾ ।
ತ್ವಯಾ ಜುಷ್ಟಾ ಜುಷಮಾಣಾ ದುರುಕ್ತಾನ್
ಬೃಹದ್ವದೇಮ ವಿದಥೇ ಸುವೀರಾಃ ॥

ಅರ್ಥ : (ಮನುಷ್ಯಾದಿ ಪ್ರಾಣಿಗಳ ಬುದ್ಧಿಶಕ್ತಿಗೆ ಅಭಿಮಾನೀ ದೇವತೆಯಾದ) ಮೇಧಾದೇವಿಯು ಸುಪ್ರೀತಳಾಗಿ ನಮ್ಮನ್ನು ಕುರಿತು ಬಂದು ಸೇರಲಿ. ಅವಳು ವಿಶ್ವವ್ಯಾಪಕಳೂ ಕಲ್ಯಾಣಸ್ವರೂಪಳೂ, ನಮಗೆ ಶೋಭನ

ಮನಸ್ಸನ್ನು ಅನುಗ್ರಹಿಸುವವಳೂ, ಆಗಿದ್ದಾಳೆ ಎಲೈ, ದೇವಿ ! ನೀನು ಅನುಗ್ರಹ ಮಾಡಿದರೆ, ಆಗ (ಇತರರು) ನಮ್ಮನ್ನು ದುರುಕ್ತಿಗಳಿಂದ (ಶಾಪ ಗಳಿಂದ, ನಿಂದಾವಾಕ್ಯಗಳಿಂದ) ಬೈದರೂ, ಅದನ್ನು ಕೇಳಿಯೂ, ವೇದೈಕ ನಿಷ್ಠರಾಗಿರುತ್ತಾ, ಸುವೀರರಾಗಿ (ಪುತ್ರಪೌತ್ರಾದಿಗಳೊಡನೆ), ಶುದ್ಧಾಂತಃ ಕರಣರಾಗಿರುತ್ತಾ, ವೇದವನ್ನೇ ಪಾರಾಯಣ ಮಾಡುತ್ತಾ ಪರಬ್ರಹ್ಮನನ್ನು (ಎಂದೆಂದೂ) ಕೊಂಡಾಡುವಂತಾಗಲಿ.

ವಿವರಣೆ : ಈ ಮಂತ್ರದಲ್ಲಿ ಲಕ್ಷ್ಮೀದೇವಿಯನ್ನು ಏಕೆ ಮೇಧಾ ಎಂದು ಕರೆಯುತ್ತಾರೆಂಬುದಕ್ಕೆ ಉತ್ತರವಿರುವಂತಿದೆ. ಮೊದಲನೆಯದಾದಿ ಅವಳು ನಮ್ಮ ಬುದ್ಧಿಶಕ್ತಿಗೆ ಅಭಿಮಾನೀ ದೇವತೆ. ಇವಳ ಅನುಗ್ರಹವಿದ್ದ ವರು, ಹೆಚ್ಚು ಬುದ್ಧಿಶಾಲಿಗಳಾಗಿಯೂ, ವಾಗ್ವಿಲಾಸವುಳ್ಳವರಾಗಿಯೂ, ಜ್ಞಾಪಕಶಕ್ತಿ ಉಳ್ಳವರಾಗಿಯೂ ಆಗುತ್ತಾರೆ. ಇಲ್ಲದವರು ಮನುಷ್ಯರಲ್ಲೇ ದಡ್ಡತನದ ಅನೇಕ ವಿಚಿತ್ರರೂಪಗಳನ್ನೂ, ತಾರತಮ್ಯಗಳನ್ನೂ ಪಡೆಯು ವುದು ಎಲ್ಲರ ಅನುಭವದಲ್ಲಿದೆ. ಪ್ರಾಣಿಗಳೂ ಹಾಗೆಯೇ. ಅವುಗಳ ವ್ಯತ್ಯಾಸಕ್ಕೂ ಈ ದೇವಿಯ ಕೃಪೆಯ ತಾರತಮ್ಯವೇ ಕಾರಣ. ತಾನೇ ಒಲಿದು ಯಾರಲ್ಲಿ ವಾಸಿಸುವಳೋ ಅವನು ಬೃಹಸ್ಪತಿಯಾಗುವುದೂ, ಹಾಗೆ ಒಲಿಯದವರು ವನಸ್ಪತಿಗಳಂತಿರುವುದೂ ಅನುಭವವೇದ್ಯ ! ಈ ದೇವಿಯೂ ಭಗವಂತನಂತೆಯೇ ವಿಶ್ವವನ್ನು ವ್ಯಾಪಿಸಿದ್ದಾಳೆ. (ವಿಶ್ವಂ ಅಂಚತೀತಿ ವಿಶ್ವಾಚೀ.) ಮಂಗಳಕರಳು. (ಭದ್ರಾ) ಒಳ್ಳೆಯ ಮನಸ್ಸನ್ನು ನಮ್ಮಲ್ಲಿ ಕೊಡಬಯಸುವವಳು.

## ವೈದಿಕರ ಶತ್ರುಗಳು !

ಆದರೆ ಅಂಥ ಮನಸ್ಸು ನಮಗೆ ಆಗಾಗ ದೊರೆಯದಿರುವುದಕ್ಕೆ ನಮ್ಮ ಶತ್ರುಗಳು ಕಾರಣ. ವೈದಿಕರ ಶತ್ರುಗಳಾರೆಂದರೆ, ವೈದಿಕರ ವೈದಿಕ ನಿಷ್ಠೆ

ಯನ್ನು ಕೆಡಿಸಲು ಯತ್ನಿಸುವವರೇ ! ಈ ಸಿಷ್ಟ ಹೋದವರಿಗೆ ಜೀವನದಲ್ಲಿ ಯಾವುದು ಪುರುಷಾರ್ಥ, ಯಾವುದಲ್ಲ— ಎಂಬ ತಿಳುವಳಿಕೆಯೂ, ವ್ಯತ್ಯಾಸವೂ ಅಳಿಸಿ ಹೋಗುವುದನ್ನು ದಿನಾ ಕಣ್ಣಿಂದಲೇ ಕಾಣುತ್ತಿದ್ದೇವೆಯಷ್ಟೆ ! ಧರ್ಮಾರ್ಥಕಾಮಮೋಕ್ಷಗಳಲ್ಲಿ ಉತ್ತಮವಾದ ಮೋಕ್ಷವೂ, ಅಧಮವಾದ ಅರ್ಥ ಕಾಮವೂ, ಮಧ್ಯಮವಾದ ಧರ್ಮವೂ— ಯಾವುದಾದರೊಂದು ಗ್ರಾಹ್ಯವೆನಿಸಬೇಕಾದರದ ಅದಕ್ಕೆ ಕೊಂಚ ವೈದಿಕ ಹಿನ್ನೆಲೆ ಬೇಕೇ ಬೇಕು. ಇದಾವುದೂ ಇಲ್ಲದೆ ದಿನವೂ ಜನಗಳಲ್ಲಿ ಜಗಳ ಹಚ್ಚುವುದು, ತನಗೂ ಇತರರಿಗೂ ಯಾವ ಪ್ರಯೋಜನವೂ, ಕ್ಷೇಮವೂ ಅಲ್ಲದ ಅನೇಕ ವ್ಯರ್ಥ, ದುಃಖ ಫಲಕಾರಕವಾದ ಕೆಲಸಗಳನ್ನೇ ಮಾಡುವವರಿಗೆ ಈ ಜೀವನದಿಂದ ಏನನ್ನು ನಿರೀಕ್ಷಿಸಬಹುದು, ನಿರೀಕ್ಷಿಸಬೇಕೆಂಬುದೇ ಗೊತ್ತಿರುವುದಿಲ್ಲವಷ್ಟೆ ! ಆದ್ದರಿಂದ ದುಃಖವನ್ನೇ ವೈದಿಕರು ಅಪುರುಷಾರ್ಥವೆನ್ನುವರು ! ಲೋಕದಲ್ಲಿ ಯಾರೂ ನೇರವಾಗಿ ಇದನ್ನು ಬಯಸದೇ, ಎಲ್ಲರೂ ಸುಖವನ್ನೇ ಬಯಸುತ್ತಿದ್ದರೂ, ಅನೇಕರಿಗೆ ದೊರಕುವ ಬಹುಪಾಲು ಅನುಭವ ದುಃಖವೇ ಆಗಿರುತ್ತದೆ. ಏಕೆಂದರೆ ಅವರಿಗೆ ವೇದದರ್ಶನದ ಪರಿಚಯವೇ ಇರುವುದಿಲ್ಲ ! ಇಂಥವರು ಇತರರಿಗೆ ಏನೆಂದರೂ ಅದೆಲ್ಲ ದುರುಕ್ತವೇ ! ಒಮ್ಮೊಮ್ಮೆ ಇಂಥವರ ಸಹವಾಸದಲ್ಲಿ ವೈದಿಕರಿಗೂ ಕೇಡು ತಪ್ಪಿದ್ದಲ್ಲ ! ಅದನ್ನು ತಪ್ಪಿಸಿಕೊಳ್ಳಲು ಈ ಮಂತ್ರದಲ್ಲಿ ಪ್ರಾರ್ಥಿಸಲಾಗಿದೆ. ಹೊರಗಿನ ಪ್ರಪಂಚದ ಅವೈದಿಕರು ಏನೇ ದುರುಕ್ತಿಗಳನ್ನು ಅಂದರೂ ನಾವು ಮಾತ್ರ ದೇವರನ್ನು ಸ್ತೋತ್ರ ಮಾಡದೇ ಇರುವಂತಾಗಬಾರದು. ದೇವರನ್ನು ತೋರಿಸಿಕೊಡುವುದೇ ವೈದಿಕ ದರ್ಶನದ ವೈಶಿಷ್ಟ್ಯ. ಅವನನ್ನು ಕಾಣುವುದೇ ಪರಮ ಪುರುಷಾರ್ಥ. ಮರೆಯುವುದೇ ಮಹಾನಷ್ಟ.

## ವೈದಿಕರ ಮಹಾಭಯ

ಯನ್ಮುಹೂರ್ತಂ ಕ್ಷಣಂ ವಾಪಿ ವಾಸುದೇವೋ ನ ಚಿಂತ್ಯತೇ ।
ಸಾ ಹಾನಿಃ ತನ್ಮಹಚ್ಛಿದ್ರಂ ಸಾ ಭ್ರಾಂತಿಃ ಸಾ ಚ ವಿಕ್ರಿಯಾ ॥

ಎಂಬ ಆರ್ಯೋಕ್ತಿಯಂತೆ, ಕ್ಷಣಕಾಲವಾದರೂ ದೇವರನ್ನು ಮರೆತರೆ ಅದೇ ಮಹಾನಷ್ಟ. ಆ ಸಣ್ಣ ರಂಧ್ರದಲ್ಲಿ ಮನುಷ್ಯನ ಸರ್ವಸ್ವವೂ ಹೋಗಿ ಬಿಡುವುದು. ಭ್ರಾಂತಿಗಳುಂಟುಟಾಗುವುವು. ವಿಕಾರವೇರ್ಪಡುತ್ತದೆ. ಇದೇ ಭಯ ಕಾರಕವೆಂದು ಉಪನಿಷತ್ತು ಹೇಳುತ್ತದೆ.

> ಯದಾ ಹ್ಯೇವೈಷ ಏತಸ್ಮಿನ್ನುದರಮಂತರಂ ಕುರುತೇ ।
> ಅಥ ತಸ್ಯ ಭಯ ಭವತಿ । ... ...
>
> ( ಇತ್ಯಾದಿ; ತೈ. ಉ. )

'ಉತ್-ಅರಂ'— ಎಂದರೆ, ಕೊಂಚ. ಈ ಬ್ರಹ್ಮಾನಂದಾನುಭವದಲ್ಲಿ ವಿಚ್ಛಿತಿ (ಅಂತರ) ಏರ್ಪಟ್ಟರೂ ಸಾಕು; ಅದೇ ಭಯ ಎಂದರ್ಥ.

ಈ ಭಯ ಬಾರದಂತೆ ವೈದಿಕ ಜ್ಞಾನದ ಭದ್ರ ಸ್ಮೃತಿ, ನೆನಪು ಸದಾ ಇರಬೇಕಾದರೆ ಅದಕ್ಕೆ ಮೇಧಾದೇವಿಯ ಕೃಪೆ ಬೇಕೆನ್ನುತ್ತದೆ. ಮಂತ್ರ

ಈ ದೇವಿಯು ಕೃಪೆಯಿದ್ದರೆ ನಾಸ್ತಿಕನಿಗೂ ಬಾಯಿಬಡಿದು, ವಾದಿಸಿ, ಅವನೆದುರೂ, ಅವನಲ್ಲೂ ದೇವರನ್ನು ಸ್ಥಾಪಿಸುವ ಜಾಣತನ, ಬುದ್ಧಿಶಕ್ತಿ ವೈದಿಕರಿಗೆ ಉಂಟಾದೀತು ! ಬೃಹದ್ವದೇಮ ಎನ್ನುತ್ತದೆ. ಮಂತ್ರ— "ಬೃಹತ್‌ಶಬ್ದವಾಚ್ಯನಾದ ದೇವರನ್ನು ದೊಡ್ಡದಾಗಿ ಕೊಂಡಾಡೋಣ," ಎಂದು ಇದಕ್ಕೆ ಶುದ್ಧಾಂತಃಕರಣಬೇಕು. ಅದು ನಿತ್ಯ ನೈಮಿತ್ತಿಕ ಅನುಷ್ಠಾನಗಳಿಂದ ಬರತಕ್ಕದ್ದು. ಇವನ್ನು ಅನುಷ್ಠಿಸಬೇಕೆಂಬ ಧೀರಭಾವವೂ ಮತ್ತೆ ಮೇಧಾದೇವಿಯ ಅನುಗ್ರಹದಿಂದಲೇ ಮಾತ್ರ ಸಾಧ್ಯ.

ನಾವು ಮಾತ್ರ ಹಾಗೆ ಮಾಡಿದರೆ ಸಾಲದು. ನಮ್ಮ ಪುತ್ರ ಮಿತ್ರ ಶಿಷ್ಯಾದಿಗಳೂ ಹಾಗೇ ಮಾಡಬೇಕು. "ಸುವೀರಾಃ— ಶೋಭನ ಪುತ್ರ ಮಿತ್ರ ಶಿಷ್ಯಾದಿರೂಪಾ" (ಸಾಯಣರು)

ಹೀಗೆ ಇಲ್ಲಿ ಮೇಧಾದೇವಿಯು ಅನುಗ್ರಹ ಬಗೆಯನ್ನು ತೋರಿಸಿ, ಇವಳನ್ನು ಲಕ್ಷ್ಮೀ ಎಂದು ಸಂಜ್ಞೆಯಿಂದ ಸೂಚಿಸಿದಂತಾಗಿರುವುದು ಗಮನೀಯ. ಏಕೆಂದರೆ ಜ್ಞಾನಿಗಳಿಗೆ ನಿಜವಾಗಿ ಇದೇ ಐಶ್ವರ್ಯವಾಗುವುದು.

ಈ ಬಗೆಯ ಸಂಪತ್ತುಗಳಿಗೆಲ್ಲ ಲಕ್ಷ್ಮೀದೇವಿಯೇ ಒಡೆಯಳೆಂಬುದನ್ನು ಈ ಹಿಂದೆ ವರ್ಣಿಸಿಯಾಗಿದೆ.

## ಇಹಪರ ಐಶ್ವರ್ಯ ಅನುಗ್ರಾಹಕಳು

ತ್ವಯಾ ಜುಷ್ಟ ಋಷಿರ್ಭವತಿ ದೇವಿ
ತ್ವಯಾ ಬ್ರಹ್ಮಾಗತಶ್ರೀರುತ ತ್ವಯಾ ।
ತ್ವಯಾ ಜುಷ್ಟಶ್ಚಿತ್ರಂ ವಿಂದತೇ ವಸು
ನೋಜುಷಸ್ವ ದ್ರವಿಣೇನ ಮೇಧೇ ॥ ೨ ॥

ಅರ್ಥ : ಎಲೈ ದೇವಿಯೇ ! ನಿನ್ನಿಂದ ಅನುಗ್ರಹಿಲ್ಪಟ್ಟ ಪುರುಷನು ಕ್ರಾಂತದರ್ಶಿಯಾಗಿ ಋಷಿ ಎನಿಸುವನು. (ತ್ರಿಕಾಲಜ್ಞನಾಗುವನು). ಹಾಗೇ ನಿನ್ನಿಂದನುಗ್ರಹಿಸಲ್ಪಟ್ಟ ಮತ್ತೊಬ್ಬನು ಐಶ್ವರ್ಯದಲ್ಲಿ ಬ್ರಹ್ಮನಾಗುವನು. (ಚತುರ್ಮುಖ ಪದವಿಯನ್ನೂ ಐಶ್ವರ್ಯವನ್ನೂ ಪಡೆಯುವನು.) ಅಥವಾ ನಿನ್ನಿಂದ ಅನುಗ್ರಹಿಸಲ್ಪಟ್ಟ ಬ್ರಹ್ಮದೇವನು ಮತ್ತೆ ಐಶ್ವರ್ಯವನ್ನು ಪಡೆದುಕೊಂಡವನಾಗುವನು. ಮ:ಗದೊಬ್ಬನು ನಿನ್ನ ಕೃಪೆಯನ್ನು ಪಡೆದು ಗೋ, ಅಶ್ವ, ಭೂ, ಹಿರಣ್ಯ. ಧಾನ್ಯಾದಿ ಬಹು ಚಿತ್ರವಿಚಿತ್ರವಾದ ಐಹಿಕ ಐಶ್ವರ್ಯವನ್ನೂ ಅಥವಾ ಕೈವಲ್ಯ, ಮೋಕ್ಷಗಳೆಂಬ ಪಾರಲೌಕಿಕ ವಿಚಿತ್ರ ಐಶ್ವರ್ಯಗಳನ್ನೂ ಪಡೆಯುವನು. (ಇಂಥ ಮಹಿಮಾನ್ವಿತಳಾದ) ಎಲೈ ದೇವಿಯೇ ! ನಮ್ಮನ್ನೂ ಇಹ–ಪರ ಸಂಪತ್ತುಗಳೊಡನೆ ಅನುಗ್ರಹಿಸು.

ವಿವರಣೆ : ಮೇಧಾ ದೇವಿಯು ಲಕ್ಷ್ಮಿಯೇ ಎಂಬುದರಲ್ಲಿ ಅಳಿದುಳಿದ ಸಂದೇಹಗಳನ್ನೆಲ್ಲ ಈ ಮಂತ್ರ ಪ್ರಕಟವಾಗಿಯೇ ನಿವಾರಿಸುತ್ತದೆ. ಲಕ್ಷ್ಮೀ ಕಟಾಕ್ಷದಿಂದಲೇ ಸಕಲ ಫಲಸಿದ್ಧಿ ಎಂದು ಮಂತ್ರವು ಆ ಸಿದ್ಧಿಗಳ ಕೆಲವು ಬಗೆಗಳನ್ನು ಉದಾಹರಿಸಿದೆ. ಜ್ಞಾನಿಗಳ ಜ್ಞಾನೈಶ್ವರ್ಯವು ಅವರನ್ನು

ಋಷಿಗಳನ್ನಾಗಿಸಬಲ್ಲುದಾದರೆ, ಈ ಐಶ್ವರ್ಯವು ಲಕ್ಷ್ಮೀಕಟಾಕ್ಷಮಹಿಮೆಯೇ ಆಗುವುದು. ಬ್ರಹ್ಮರುದ್ರಾದಿ ಪದವಿಗಳೂ ಜೀವರಾಶಿಗೆ ದೊರಕಿ ಅನೇಕ ಬ್ರಹ್ಮರೂ, ರುದ್ರರೂ, ಇಂದ್ರರೂ ಆ ಆ ಪಟ್ಟಗಳನ್ನನುಭವಿಸಲೂ ದೇವಿಯ ಕಟಾಕ್ಷವೇ ಕಾರಣ. ಪಟ್ಟ ದೊರಕುವುದಲ್ಲದೆ, ದೊರಕಿದ ಪಟ್ಟ ಉಳಿಯಲೂ, ಕಳೆದರೂ ಮತ್ತೆ ದೊರಕುವಂತಾಗಲೂ ಸಹ ಲಕ್ಷ್ಮೀಕಟಾಕ್ಷ ಬೇಕೇಬೇಕು. ಬ್ರಹ್ಮನಿಗೆ ವೇದೋಪದೇಶವಾಗಿ, ಜಗನ್ನಿರ್ಮಾಣ ನೈಪುಣ್ಯ ದೊರೆತದ್ದೂ ಈ ಲಕ್ಷ್ಮೀ ಕಟಾಕ್ಷದಿಂದಲೇ. ಅದನ್ನವನ್ನು ಒಮ್ಮೆ ಕಳೆದು ಕೊಂಡು,

ವೇದಾ ಮೇ ಪರಮಂ ಚಕ್ಷುಃ ವೇದಾ ಮೇ ಪರಮಂ
ಧನಂ ।

ಎಂಬಂತೆ, ತನ್ನ ಸಕಲ ಧನ ಸ್ವರೂಪವೂ ಸಕಲ ದರ್ಶನ ಸರ್ವಸ್ವವೂ ಆಗಿದ್ದ ವೇದಗಳನ್ನು ಮಧುಕೈಟಭರು ಅಪಹರಿಸಲಾಗಿ, ಅದನ್ನು ಮತ್ತೆ ಭಗವಂತನಿಂದ ಪಡೆದದ್ದೂ ಈ ಲಕ್ಷ್ಮೀಕಟಾಕ್ಷದಿಂದಲೇ. ಎಂದ ಮೇಲೆ ಬ್ರಹ್ಮನಿಂದ ಹಿಡಿದು ಹುಲ್ಲುಕಡ್ಡಿಯ ವರೆಗೆ ಸಕಲ ಜೀವರಾಶಿಗಳಿಗೂ ಅವರವರಿಗೆ ಉಚಿತವಾದ ಐಶ್ವರ್ಯದಾತೆಯು ಲಕ್ಷ್ಮಿಯೇ ಎಂದಂತಾಗುತ್ತದೆ. ಇಂಥವಳು ನಮಗೂ ದ್ರವ್ಯಸಂಪತ್ತನ್ನನುಗ್ರಹಿಸಲೆಂದು ಇಲ್ಲಿ ಮಾಡಿರುವ ಪ್ರಾರ್ಥನೆ ಯುಕ್ತವಾಗಿದೆ.

## ಇಂದ್ರಾದಿಗಳೂ ದೇವೀಕಟಾಕ್ಷದಿಂದಲೇ ಪದವಿ ಪಡೆದವರು

ಮೇಧಾಂ ಮ ಇಂದ್ರೋ ದದಾತು
ಮೇಧಾಂ ದೇವೀ ಸರಸ್ವತೀ ।

ಮೇಧಾಂ ಮೇ ಅಶ್ವಿನಾವುಭೌ
ದೇವಾವಾಧತ್ತಾಂ ಪುಷ್ಕರಸ್ರಜಾ ॥ ೩

ಅರ್ಥ : (ಇಷ್ಟು ಪ್ರಸಿದ್ಧ ವೈಭವಳಾದ) ಮೇಧಾದೇವಿಯನ್ನು— ಎಂದರೆ ಅವಳ ಕೃಪೆಯನ್ನು— ನನಗೆ ಇಂದ್ರನೂ, ಸರಸ್ವತಿಯೂ, ಕಮಲಮಾಲೆಗಳನ್ನು ಧರಿಸಿದ ಇಬ್ಬರು ಅಶ್ವಿನೀ ದೇವತೆಗಳೂ ಕೊಡಲಿ. (ಕೊಡಿಸಲಿ.)

ವಿವರಣೆ : ಮೇಧಾ ಎಂದರೆ ಬುದ್ಧಿಸ್ವರೂಪಿಣಿಯಾದ ಸರಸ್ವತಿಯೇ ಎಂದು ಭ್ರಮಿಸಿರುವವರಿಗೆ ಇಲ್ಲಿ ಚಿಕಿತ್ಸೆ ಇರುವಂತಿದೆ. "ಮೇಧಾಂ ದೇವೀ ಸರಸ್ವತೀ ದಧಾತು" ಎಂಬಲ್ಲಿ ಇವರು ಬೇರೆ ಎಂಬುದು ಸ್ಪಷ್ಟ.

ಇಂದ್ರಾದಿಗಳೂ ಇವಳನ್ನು "ಕೊಡಲಿ" ಎಂದರೇನರ್ಥ ? ಈ ಹಿಂದಿನ ಮಂತ್ರದಲ್ಲಿ ಬ್ರಹ್ಮನನ್ನು ಹೆಸರಿಸಿ, ಆತನ ಸ್ಥಾನವು ಅವನಿಗೆ ಲಕ್ಷ್ಮೀಕಟಾಕ್ಷದಿಂದ ದೊರೆಯಿತೆಂದು ಹೇಳಿದ ಮೇಲೆ, ಈ ಮಂತ್ರದ ಇಂದ್ರನೂ, ಸರಸ್ವತಿಯೂ, ಅಶ್ವಿನಿಗಳೂ ತಂತಮ್ಮ ಸ್ಥಾನಗಳನ್ನೂ, ವಿಲಕ್ಷಣ ಬುದ್ಧಿಮತ್ತತೆಯನ್ನು ಪಡೆದುದೂ ಈ ದೇವಿಯ ಮಹಿಮೆಯಿಂದಲೇ ಎಂದು ಬೇರೆ ಹೇಳಬೇಕಿಲ್ಲವಷ್ಟೆ ! ಇವರು ತಾವು ಹೇಗೆ ಆಸ್ಥಾನಗಳನ್ನು ಪಡೆದರೋ ಆ ಗುಟ್ಟನ್ನು ಸಾಧಕನಿಗೆ ಉಪದೇಶಿಸುವ ಮೂಲಕ, ಲಕ್ಷ್ಮೀಮಂತ್ರೋಪದೇಶಕರಾಗಿ, ಪುರುಷಕಾರ ಸ್ವರೂಪರಾಗಿ, ತನಗೂ ಲಕ್ಷ್ಮಿಯನ್ನು ದೊರಕಿಸಿಕೊಡಲಿ ಎಂದು ಅರ್ಥ.

## ಗಂಧರ್ವಾಪ್ಸರೆಯರಲ್ಲೂ ನಿತ್ಯವಾಸ

ಅಪ್ಸರಾಸು ಚ ಯಾ ಮೇಧಾ
ಗಂಧರ್ವೇಷು ಚ ಯನ್ಮನಃ (ಯದ್ಯಶಃ)

ದೈವೀ ಮೇಧಾ ಮನುಷ್ಯಜಾ
ಸಾ ಮಾಂ ಮೇಧಾ ಸುರಭಿರ್ಜುಷತಾಂ ॥

ಅರ್ಥ : ದೇವಸ್ತ್ರೀಯರಾದ ಅಪ್ಸರೆಯರಲ್ಲಿ ಯಾವ ದೇವಿಯು ವಾಸಿಸುವಳೋ (ಅನುಗ್ರಹ ಮಾಡಿರುವಳೋ), ದೇವಗಾಯಕರಾದ ಗಂಧರ್ವರಲ್ಲಿ ಯಾವ ಮನೋರೂಪದಲ್ಲಿ ( ಅವಳು ) ಅಥವಾ ಕೀರ್ತಿರೂಪದಲ್ಲಿ ಇರುವಳೋ, ವೇದಶಾಸ್ತ್ರಾದಿ ಜ್ಞಾನಸಂಪನ್ನರಾದ ಮನುಷ್ಯರಲ್ಲಿ ಯಾವ ದೇವಿಯು ನಿತ್ಯವಾಸವಿರುವುದೋ ಆ ದೇವಿಯು ಸುಗಂಧ ( ಸುಕೀರ್ತಿ ) ಯುಕ್ತಳಾಗಿ, ಸಕಲೇಷ್ಟಾರ್ಥವರ್ಷಕಳಾದ ಕಾಮಧೇನುವಾಗಿ ನನ್ನನ್ನೂ ಅನುಗ್ರಹಿಸಲಿ.

ವಿವರಣೆ : ಇಲ್ಲೂ ಲಕ್ಷ್ಮೀಕಟಾಕ್ಷ ಪಾತ್ರರಾದ ದೇವತೆಗಳನ್ನು ಉಲ್ಲೇಖಿಸಿ ಸಾಧಕನು ಈ ಬಗೆಯ ಅನುಗ್ರಹ ತನಗೂ ಆಗಬೇಕೆಂದು ಪ್ರಾರ್ಥಿಸುತ್ತಾನೆ. ಅಪ್ಸರೆಯರ ನಿತ್ಯ ಯೌವ್ವನ. ನರ್ತನನೈಪುಣ್ಯ. ಸ್ಫೂರ್ತಿ ವಿಲಾಸ. ಮಿಂಚಿನಗತಿಯು, ಹೊಳಪಿನ ನಡಗೆ ಇತ್ಯಾದಿಗಳೆಲ್ಲ ಲಕ್ಷ್ಮೀಕಟಾಕ್ಷದ ಪರಿಣಾಮವೇ. ಗಂಧರ್ವರ ಗಾನ ನೈಪುಣ್ಯವೂ, ಅದರಿಂದ ಬಂದ ಕೀರ್ತಿಯೂ, ಆ ಗಾನ ಮಾಧುರ್ಯಕ್ಕೆ ಬೇಕಾದ ಮನೋಧರ್ಮ ಮೊದಲಾದುವೂ ದೇವೀ ಕಟಾಕ್ಷಮಹಿಮೆಯೇ. ಮನುಷ್ಯರಲ್ಲೂ ವೇದಾರ್ಥವಿದ್ದರೂ ಲಕ್ಷ್ಮೀಕಟಾಕ್ಷಕ್ಕೆ ಪಾತ್ರರಾದ ಹೊರತು ದಿವ್ಯಜ್ಞಾನರಹಿತರೇ ಆದಾರು !

ಆ ಮಾಂ ಮೇಧಾ ಸುರಭಿರ್ವಿಶ್ವರೂಪಾ
ಹಿರಣ್ಯವರ್ಣಾ ಜಗತೀ ಜಗಮ್ಯಾ ।
ಊರ್ಜಸ್ವತೀ ಪಯಸಾ ಪಿನ್ವಮಾನಾ
ಸಾ ಮಾಂ ಮೇಧಾ ಸುಪ್ರತೀಕಾ ಜುಷತಾಂ ॥೫॥

ಅರ್ಥ : ಸುಗಂಧಯುಕ್ತಳೂ (ಕಾಮಧೇನುವಿನಂತಿರುವಳೂ ), ಸಕಲ ಜ್ಞಾನಾದಿಸಂಪತ್ತನ್ನು ಧರಿಸಬಲ್ಲ ಬಹುರೂಪಗಳುಳ್ಳ ವಿಶ್ವರೂಪೆಯೂ, ಹಿತ ರಮಣೀಯ ವರ್ಣವುಳ್ಳವಳೂ, ಜಗದಾತ್ಮಕಳೂ (ಭಗವಂತನೊಡನೆ ಎಲ್ಲೆಲ್ಲೂ

ವ್ಯಾಪಿಸಿರುವವಳೂ), ಪುರುಷಾರ್ಥಗಳಿಗಾದಿ ಆಶ್ರಯಿಸಲು ಯೋಗ್ಯಳೂ, ಬಲಯುಕ್ತಳೂ, ಗೋಕ್ಷೀರಾದಿರಸಗಳಿಂದ ನಮ್ಮನ್ನು ಅನುಗ್ರಹಿಸುವವಳೂ, ಆದ ಮೇಧಾ ದೇವಿಯು ಸುಪ್ರಸನ್ನಳಾಗಿ ನನ್ನನ್ನು ಅನುಗ್ರಹಿಸಲಿ.

ವಿವರಣೆ : ಇಲ್ಲಿ ಲಕ್ಷ್ಮೀದೇವಿಯ ದಿವ್ಯಗುಣಗಳನ್ನು ವರ್ಣಿಸಿ ಅವಳು ಆಶ್ರಯಣೀಯಳೇಕಾದಿರುವಳೆಂಬುದನ್ನು ವಿವರಿಸಲಾಗಿದೆ, ಈ ಪೈಕಿ ಊರ್ಜ ಸ್ವತೀ, ಹಿರಣ್ಯವರ್ಣಾ, ವಿಶ್ವರೂಪಾ ಮುಂತಾದ ಶ್ರೀನಾಮಗಳನ್ನು ಹಿಂದೆಯೇ ವಿವರಿಸಿ ಆಗಿದೆ.

ಹೀಗೆ ತೈತ್ತೀರಿಯ ಆರಣ್ಯಕದ ಈ ಐದು ಮಂತ್ರಗಳೂ ಮೇಧಾಸೂಕ್ತ ವಿವರಣಪರವಾಗಿವೆ.

## ಅಥರ್ವವೇದೀಯ ಮೇಧಾಸೂಕ್ತ

ಅಥರ್ವವೇದದಲ್ಲೂ ಮೇಧಾದೇವಿಯ ವಿಷಯವಾಗಿ ಐದು ಮಂತ್ರಗಳ ನ್ನುಳ್ಳ ಒಂದು ಅದ್ಭುತವಾದ ಸೂಕ್ತವಿದೆ, ಅದನ್ನು ಈಗ ಕೊಂಚ ಪರಿ ಶೀಲಿಸೋಣ.

### ಯಜ್ಞಾರ್ಹಳು

ತ್ವಂ ನೋ ಮೇಧೇ ಪ್ರಥಮಾ
ಗೋಭಿರಶ್ವೇಭಿರಿಹಾ ಗಹಿ।
ತ್ವಂ ಸೂರ್ಯಸ್ಯ ರಶ್ಮಿಭಿಃ
ತ್ವಂ ನೋ ಅಸಿ ಯಜ್ಞಿಯಾ ॥೧॥

ಅರ್ಥ : ಎಲೈ ಮೇಧಾದೇವಿಯೇ! ನೀನು ನಮ್ಮಲ್ಲಿಗೆ ಮೊದಲು ಗೋವುಗಳೊಡನೆಯೂ, ಅಶ್ವಗಳೊಡನೆಯೂ ದಯಮಾಡು. ಯಜ್ಞಾರ್ಹಳಾದ (ಪೂಜ್ಯಳಾದ) ನೀನು, ಸೂರ್ಯರಶ್ಮಿಗಳು ಬೇಗನೇ ಜಗತ್ತನ್ನೆಲ್ಲ ವ್ಯಾಪಿಸುವಂತೆ, ನಿನ್ನದೇ ವಿಶಿಷ್ಟಶಕ್ತಿ, ಕಾಂತಿ ಮೊದಲಾದವುಗಳೊಡನೆ ಶೀಘ್ರವಾಗಿ ನಮ್ಮ (ಜೀವಲೋಕವನ್ನೆಲ್ಲ) ಜಗತ್ತನ್ನೆಲ್ಲ ವ್ಯಾಪಿಸು.

ವಿವರಣೆ : ಮೇಧಾದೇವಿಯೇ ಇಲ್ಲವಾಗಿದ್ದರೆ ಸಮಸ್ತ ಜಗತ್ತೂ ಜಡಮಯವಾಗಿಯೇ ಆಗಿಬಿಡುತ್ತಿತ್ತೆಂಬ ಆಶಯ ಇಲ್ಲಿದೆ. ಸರ್ವವ್ಯಾಪಿಯಾದ ಇವಳ ಪ್ರಭಾವವನ್ನು ಸೂರ್ಯರಶ್ಮಿಗಳಿಗೆ ಹೋಲಿಸಿರುವುದು ಯುಕ್ತವಾಗಿದೆ. ಅದಕ್ಕೇ ಇವಳು ಮೊದಲು ಪೂಜಾರ್ಹಳು.

## ಪರಮಾತ್ಮನನ್ನು ಎಡೆಬಿಡದಿರುವವಳು

ಮೇಧಾಮಹಂ ಪ್ರಥಮಾಂ ಬ್ರಹ್ಮಣ್ವತೀಂ
ಬ್ರಹ್ಮಜೂತಾಂ ಋಷಿಷ್ಟುತಾಂ ।
ಪ್ರಪೀತಾಂ ಬ್ರಹ್ಮಚಾರಿಭಿಃ
ದೇವಾನಾಮ್ ಅವಸೇ ಹುವೇ ॥೨॥

ಅರ್ಥ : ದೇವತೆಗಳ ರಕ್ಷಣೆಗೆಂದು ಮೊದಲು ನಾನು ಮೇಧಾದೇವಿಯನ್ನು ಕರೆಯುತ್ತೇನೆ. ಅವಳು ಪರಬ್ರಹ್ಮನಿಂದ ಸದಾ ಒಡಗೂಡಿಯೇ ಪೂರ್ಣಳಾಗಿರುವಳು; ಪರಬ್ರಹ್ಮನಿಂದಲೇ ಚೈತನ್ಯಯುಕ್ತಳಾದಿರುವವಳು; ಋಷಿಗಳಿಂದ ಸ್ತುತಳಾದವಳು; ಮತ್ತು ಬ್ರಹ್ಮಚಾರಿಗಳು (ದೇವರಿಗಾಗಿಯೇ ಬಾಳನ್ನು ಮೀಸಲಾಗಿಟ್ಟವರು) ಇವಳನ್ನು (ಭೋಗ್ಯವಾದ ಕ್ಷೀರಾದಿ ಪಾನಗಳಂತೆ) ಪಾನಮಾಡಿರುವರು.

ವಿವರಣೆ : ಇಲ್ಲೂ ಮೇಧಾದೇವಿಯ ಮುಖ್ಯ ಗುಣಗಳು ಕೊಂಡಾ

ಡಲ್ಪಟ್ಟಿವೆ. ಅವಳು ಪರಮಾತ್ಮನನ್ನು ಎಂದೂ ಬಿಟ್ಟಿರದವಳು, ಅವನಿಂದಲೇ ಚೈತನ್ಯಮಯಳಾಗಿರುವವಳು, ಭಕ್ತರಿಗೆ ಭೋಗ್ಯಸ್ವರೂಪಳಾಗಿರುವವಳು. ಚೇತನ ರಕ್ಷಣಕಾರ್ಯದಲ್ಲಿ ಬದ್ಧಕಂಕಣಳಾಗಿರುವುದರಿಂದ ಮೊದಲು ಆಶ್ರಯಣೀಯಳು. ಆದ್ದರಿಂದ ಇವಳಾವಳೆಂಬುದರಲ್ಲಿ ಸಂದೇಹವೇ ಇಲ್ಲ. (ಬರೀ Goddess or wisdom ಅಲ್ಲ !)

## ಇವಳ ಕೃಪೆ ಯಾರಿಗೆ ಬೇಡ ?

ಯಾಂ ಮೇಧಾಂ ಋಭವೋ ವಿದುಃ
ಯಾಂ ಮೇಧಾಂ ಅಸುರಾ ವಿದುಃ ।
ಋಷಯೋ ಭದ್ರಾಂ ಮೇಧಾಂ ಯಾಂ ವಿದುಃ
ತಾಂ ಮಯ್ಯಾವೇಶಯಾಮಸಿ ॥ ೩ ॥

ಅರ್ಥ : ಯಾವಳನ್ನು ಕುರಿತು ಋಭುಗಳೆಂಬ ದೇವತೆಗಳೂ, (ಕೊನೆಗೆ) ಅಸುರರೂ (ಸಹ) ತಿಳಿದಿರುವರೋ, ಋಷಿಗಳಂತೂ ಯಾವ ಮೇಧಾದೇವಿಯನ್ನು ಮಂಗಳಕರಳೆಂದು ತಿಳಿದಿದ್ದಾರೆಯೋ, ಅವಳನ್ನು ನನ್ನಲ್ಲಿ ಪ್ರವೇಶಿಸುವಂತೆ ಬೇಡುತ್ತೇನೆ.

ವಿವರಣೆ : ದೇವತೆಗಳಲ್ಲಿ ಋಭುಗಳು ತುಂಬ ಕಡಿಮೆ ಸ್ಥಾನಮಾನದವರು. ಅವರಿಗೂ ಈ ದೇವಿಯ ಕೃಪೆ ಬೇಕು. ಅಸುರರೂ ಸಹ ಇವಳ ಮಹಿಮೆಯನ್ನರಿತೇ ಅವಳ ಕೃಪೆಗಾಗಿ ಪ್ರಾರ್ಥಿಸುವರು. (ಅದು ಅವರಿಗೆ ದೊರಕದುದು ಬೇರೆ ಮಾತು !) ದೇವತೆಗಳಿಗೆ ಅದು ದೊರಕಿ ಅವರು ಮೇಲುಗೈಯ್ಯವರಾದದ್ದು ತಿಳಿದೇ, ಅಸುರರೂ ಆ ದಿವ್ಯ ಕೃಪೆಗೆ ಹಾತೊರೆಯುವಂತಾಗಿದೆಯೆಂದರೆ, ದೇವೀಕೃಪೆಯ ಬೆಲೆ ಎಂಥದು ! ತಿಳಿಯ

ಲಾರದೇ ? ಇನ್ನು ಋಷಿಗಳನ್ನು ಕೇಳುವುದೇ ಬೇಡ. ಅವರ ಪಾಲಿಗೆ ಇವಳು ಮಂಗಳ ಸ್ವರೂಪಿಣಿ. ಸಾಧಕನಿಗಂತೂ ಈ ಕೃಪೆಗಾಗಿ ಇಲ್ಲಿ ತವಕವೇ ಇದೆ.

## ನನ್ನನ್ನು ಬುದ್ಧಿವಂತನನ್ನಾಗಿ ಮಾಡು

ಯಾಂ ಋಷಯೋ ಭೂತಕೃತೋ
ಮೇಧಾಂ ಮೇಧಾವಿನೋ ವಿದುಃ ।
ತಯಾ ಮಾಮದ್ಯ ಮೇಧಯಾಗ್ನೇ
ಮೇಧಾವಿನಂ ಕೃಣು ॥೪॥

ಅರ್ಥ : ಭೂತಗಳನ್ನು (ವಸ್ತುಗಳನ್ನು) ಸೃಷ್ಟಿ ಮಾಡಬಲ್ಲ ಚತುರ್ಮುಖ ಬ್ರಹ್ಮ, ಪ್ರಜಾಪತಿಗಳು, ಮನುಗಳು ಮೊದಲಾದ ಕ್ರಾಂತದರ್ಶಿಗಳಾದ ಋಷಿಪ್ರಾಯರೂ, ಮೇಧಾವಿಗಳೂ ಯಾವಳ ಪ್ರಭಾವವನ್ನು ಚೆನ್ನಾಗಿ ಬಲ್ಲರೋ, ಆ ಮೇಧಾದೇವಿಯ ಕೃಪೆಯಿಂದ ನಾನೂ ಬುದ್ಧಿವಂತನಾಗುವಂತೆ, ಎಲೈ ಅಗ್ನಿಯೇ, ಮಾಡು.

ವಿವರಣೆ : ಅಗ್ನಿಯು ಮಾನವಾದಿ ಎಲ್ಲ ಪ್ರಾಣಿಜಾತಕ್ಕೂ ಪ್ರಜ್ಞಾ ಸಂರಕ್ಷಕ. ಅವನು ಈ ಸ್ಥಾನದಲ್ಲಿ ಇರುವುದೇ ಮೇಧಾದೇವಿಯ ಕೃಪೆಯಿಂದ ತನಗುಂಟಾಗಿರುವ ಬುದ್ಧಿ ಸೂಕ್ಷ್ಮತೆಯನ್ನು ಇತರರಿಗೂ ಅವನು ಕೊಡಿಸಬೇಕೆಂಬ ಪ್ರಾರ್ಥನೆ ಯುಕ್ತವಾಗಿದೆ. ಶ್ರೀಸೂಕ್ತದ ಮೊದಲನೆಯ ಮಂತ್ರದಲ್ಲೂ ಅಗ್ನಿಗೂ ಲಕ್ಷ್ಮೀದೇವಿಗೂ ಹೀಗೊಂದು ಸಂಬಂಧವಿರುವುದನ್ನು ಈಗಾಗಲೇ ವಿವರಿಸಿಯಾಗಿದೆ.

## ಹಗಲಿರುಳೂ ಇವಳ ಕೃಪೆಬೇಕು

ಮೇಧಾಂ ಸಾಯಂ ಮೇಧಾಂ ಪ್ರಾತಃ
ಮೇಧಾಂ ಮಧ್ಯಂದಿನಂ ಪರಿ ।
ಮೇಧಾಂ ಸೂರ್ಯಸ್ಯ ರಶ್ಮಿಭಿಃ
ವಚಸಾ ವೇಶಯಾಮಹೇ ॥ ೫ ॥

ಅರ್ಥ : ಬೆಳಿಗ್ಗೆ, ಮಧ್ಯಾಹ್ನ, ಸಾಯಂಕಾಲಗಳೆಂಬ ಕಾಲಭೇದಗಳಿಂದ ಉಪಲಕ್ಷಿತವಾದ ಸರ್ವಕಾಲಗಳಲ್ಲೂ ಈ ದೇವಿಯ ಕೃಪೆ, ಸೂರ್ಯರಶ್ಮಿಗಳು ಜಗತ್ತನ್ನು ವ್ಯಾಪಿಸುವಂತೆ. ಜಗತ್ತಿಗೆ ದೊರೆಯಲೆಂದು ಮಂತ್ರೋಕ್ತ ಶಬ್ದಗಳಿಂದ ನಿರ್ಬಂಧಿಸಿ ಕರೆಯುತ್ತೇವೆ.

( ವಿವರಣೆ ಬೇಕಿಲ್ಲ. )

## ೫. ಋಗ್ವೇದೀಯ (ಖಿಲ) ಮೇಧಾಸೂಕ್ತ

ಈಗ ಸುಪ್ರಸಿದ್ಧವಾದ ಮೇಧಾಸೂಕ್ತವನ್ನು ನೋಡೋಣ. ಋಕ್ಸಂಹಿತೆಯಲ್ಲಿ ( X–151 ) ಶ್ರದ್ಧಾಸೂಕ್ತದೊಡನೆಯೇ ಇದನ್ನು ಪಠಿಸಬೇಕೆಂದು ಹೇಳಿದೆ. ಇದನ್ನು ಬೃಹದ್ದೇವತಾಕಾರರಾದ ಶೌನಕರೂ, ಋಗ್ವಿಧಾನಕರ್ತರೂ ಪರಿಗಣಿಸಿರುವುದರಿಂದ, ಸಮ್ಮತಿಸಿರುವುದರಿಂದ, ಈ ಸೂಕ್ತದ ಪ್ರಾಚೀನತೆಯ ಬಗೆಗೂ, ಪ್ರಮಾಣಬದ್ಧತೆಯ ಬಗೆಗೂ ಸಂದೇಹ ಬೇಡ. ಇದಕ್ಕೆ ಯಾವ ವ್ಯಾಖ್ಯಾನವೂ ದೊರೆಯದಿರುವುದು ಮಾತ್ರ ಶೋಚನೀಯ. ಸೂಕ್ತ ಹೀಗಿದೆ.

ಮೇಧಾಂ ಮಹ್ಯಂ ಅಂಗಿರಸೋ
ಮೇಧಾಂ ಸಪ್ತರ್ಷಯೋ ದದುಃ ।
ಮೇಧಾಂ ಇಂದ್ರಶ್ಚಾಗ್ನಿಶ್ಚ ಮೇಧಾಂ
ಧಾತಾ ದದಾತು ತೇ ॥೧॥

ಮೇಧಾಂ ತೇ ವರುಣೋ ರಾಜಾ
ಮೇಧಾಂ ದೇವೀ ಸರಸ್ವತೀ ।
ಮೇಧಾಂ ತೇ ಅಶ್ವಿನೌ ದೇವಾವಾಧತ್ತಾಂ
ಪುಷ್ಕರಸ್ರಜಾ ॥೨॥

ಯಾ ಮೇಧಾ ಅಪ್ಸರಸ್ಸು
ಗಂಧರ್ವೇಷು ಚ ಯನ್ಮನಃ ।
ದೈವೀ ಯಾ ಮಾನುಷೀ ಮೇಧಾ
ಸಾ ಮಾಂ ಆವಿಶತಾದಿಮಾಂ ॥೩॥

ಯನ್ಮೇ ನೋಕ್ತಂ ತದ್ರಮತಾಂ
ಶಕೇಯಂ ಯದನು ಬ್ರುವೇ ।
ನಿಶಾಮತಂ ನಿಶಾಮಹೈ ಮಯಿ ವ್ರತಂ
ಸಹ ವ್ರತೇಷು ಭೂಯಾಸಂ
ಬ್ರಹ್ಮಣಾ ಸಂಗಮೇ ಮಹಿ ॥೪॥

ಶರೀರಂ ಮೇ ವಿಚಕ್ಷಣಂ
ವಾಙ್ಮೇ ಮಧುಮದ್ದುಹಾಂ ।
ಅವೃದ್ಧಮಹಮಸೌ ಸೂರ್ಯೋ
ಬ್ರಹ್ಮಣಾ ನೀ ಸ್ಥಃ
ಶ್ರುತಂ ಮೇ ಮಾ ಪ್ರಹಾಸೀಃ ॥೫॥

ಮೇಧಾಂ ದೇವೀಂ ಮನಸಾ ರೇಜಮಾನಾಂ
ಗಂಧರ್ವಜುಷ್ಟಾಂ ಪ್ರತಿ ನೋ ಜುಷಸ್ವ ।
ಮಹ್ಯಂ ಮೇಧಾಂ ವದ ಮಹ್ಯಂ ಶ್ರಿಯಂ
ವದ ಮೇಧಾವೀ ಭೂಯಾಸಂ ಅಜರಾಜರಿಷ್ಣು ॥೬॥

ಸದಸಸ್ಪತಿಮದ್ಭುತಂ ಪ್ರಿಯಮಿಂದ್ರಸ್ಯ ಕಾಮ್ಯಂ ।
ಸನಿಂ ಮೇಧಾ ಮಯಾಸಿಷಂ ॥೭॥

ಯಾಂ ಮೇಧಾಂ ದೇವಗಣಾಃ
ಪಿತರಶ್ಚೋಪಾಸತೇ ।
ತಯಾ ಮಾಮದ್ಯ ಮೇಧಯಾಗ್ನೇ
ಮೇಧಾವಿನಂ ಕುರು ॥೮॥

ಮೇಧಾವ್ಯಹಂ ಸುಮನಾಃ ಸುಪ್ರತೀಕಃ
ಶ್ರದ್ಧಾಮನಾಃ ಸತ್ಯಮತಿಃ ಸುಶೇವಃ ।
ಮಹಾಯಶಾಃ ಧಾರಯಿಷ್ಣುಃ ಪ್ರವಕ್ತಾ
ಭೂಯಾಸ್ ಅಸ್ಮೈ ಶರಯಾ ಪ್ರಯೋಗೇ ॥೯॥

ನಾಶಯಿತ್ರೀ ಪಲಾಶಸ್ಯ ಅರುಷಸೌ ಪಥಿಕಾಮಸು ।
ಅಥೋ ತತಸ್ಯ ಯಕ್ಷ್ಮಾಣಂ ಅಪಾಪಾ
ರೋಗಶಾಶಿನೀ ॥೧೦॥

ಬ್ರಹ್ಮವೃಕ್ಷ ಪಲಾಶ ತ್ವಂ ಶ್ರದ್ಧಾಂ ಮೇಧಾಂ ಚ
ದೇಹಿ ಮೇ ।
ವೃಕ್ಷಾಧಿಪ ನಮಸ್ತೇಽಸ್ತು ಅತ್ರತ್ವಂ ಸಂನ್ನಿಧೌ
ಭವ ॥೧೧॥

ಅರ್ಥ : ವಿವರಣೆ : ಈ ಸೂಕ್ತದ ಮೂರನೆಯ ಮಂತ್ರವು ಈಗಾಗಲೇ

ರೂಪಾಂತರದಿಂದ ವ್ಯಾಖ್ಯಾತವಾಗಿದೆ. ಉಳಿದ ಮಂತ್ರಗಳ ಬಹುಪಾಲು ಅರ್ಥವೂ ವಿವೃತವಾಗಿದೆ. ಬಿಟ್ಟದ್ದನ್ನು ಹೀಗೆ ಸಂಗ್ರಹಿಸಬಹುದು. (ನಾಲ್ಕನೆಯ ಮಂತ್ರ ಕಠಿಣವಾಗಿದೆ.)

"ಆಂಗಿರಸರೂ, ಸಪ್ತರ್ಷಿಗಳೂ, ಇಂದ್ರನೂ, ಅಗ್ನಿಯೂ, ಚತುರ್ಮುಖಬ್ರಹ್ಮನೂ, (ಅಥವಾ ದೇವರೂ) ನಿನಗೆ ಮೇಧಾದೇವಿಯ ಅನುಗ್ರಹವನ್ನುಂಟುಮಾಡಲಿ. ದೊರೆಯಾದ ವರುಣನೂ ದೇವಿಯಾದ ಸರಸ್ವತಿಯೂ, ಕಮಲಗಳ ಮಾಲಾಧರರಾದ ಅಶ್ವಿನಿಗಳೂ ನಿನಗೆ ಆ ದೇವಿಯ ಕೃಪಾಪ್ರಸಾದವಾದ ಬುದ್ಧಿಶಕ್ತಿಯನ್ನು ಅನುಗ್ರಹಿಸಲಿ. ಗಂಧರ್ವಾಪ್ಸರೆಯರಲ್ಲಿರುವ ಮೇಧಾಶಕ್ತಿಯೂ, ಮನೋಧರ್ಮವೂ, ಮನುಷ್ಯೋತ್ತಮರಲ್ಲಿರುವ ದೈವೀ ಮೇಧಾಶಕ್ತಿಯೂ ನನ್ನನ್ನು ಇಲ್ಲೇ ಪ್ರವೇಶಿಸಲಿ. ನನ್ನಲ್ಲಿ (ನನ್ನಿಂದ), ನನಗಾಗಿ ಏನು ಹೇಳಲ್ಪಟ್ಟಿಲ್ಲವೋ: ಅದೆಲ್ಲ ಆನಂದಕರವಾಗಲಿ. (ನನ್ನ ಮನೋಗತವೆಲ್ಲ ನೆರವೇರಲಿ. ಅಥವಾ ಹಿರಿಯರು ನನ್ನನ್ನು ಬಾಯ್ಬಿಟ್ಟು ಆಶೀರ್ವದಿಸಲಿಲ್ಲವಾದರೂ ಅವರ ಮನೋಗತವು ಪೂರ್ತಿಯಾಗಿ ನಾನು ಆನಂದಿಸುವಂತಾಗಲಿ.) ನಾನು ಬಾಯ್ಬಿಟ್ಟು ಹೇಳುವುದು ಸಾಧ್ಯವಾಗಲಿ. ಕೇಳಬೇಕಾದ ಶುಭವನ್ನೆಲ್ಲ ನಾನು ಕೇಳುವಂತಾಗಲಿ. ನಾನು ವ್ರತಬಿಟ್ಟಿರದಂತಾಗಲಿ. ಆ ವ್ರತಗಳು ನನಗೆ ಸಿದ್ಧಿಸಿ, ಪರಮಾತ್ಮನೊಡನೆ ನಾನು ಸಂಗಮಿಸುವಂತಾಗಲಿ. ನನ್ನ ಶರೀರವು ಕಾರ್ಯಪಟುವಾಗಲಿ. ನನ್ನ ಮಾತು ಜೇನು ಸುರಿಯುವಂತೆ ಮಧುರವಾಗಿರಲಿ. ನಾನು ಜಡ, ಅಥವಾ ಜೀರ್ಣನಾಗದೆ ಬಹು ಸೂರ್ಯರನ್ನು (ವರ್ಷೇ ವರ್ಷೇ) ಕಾಣುವಂತಾಗಲಿ. ನಾನು ಕಲಿತ ವೇದವಿದ್ಯೆ ನನ್ನನ್ನು ಬಿಟ್ಟು ಹೋಗದಿರಲಿ. ನನ್ನ ಕಿವಿಗಳು ವೇದವನ್ನು ಸದಾ ಕೇಳಲಿ, ನನ್ನನ್ನು ದೇವರಲ್ಲಿಗೆ ಕರೆದೊಯ್ಯಲಿ. (ಈ ಮುಂದಿನ ೭ನೆಯ ಮಂತ್ರವು. ತೈ. ಆ. 10.1 ರಲ್ಲೂ ಬರುತ್ತದೆ.) ಅದ್ಭುತ ಸ್ವರೂಪನೂ, ಪ್ರಿಯನೂ, ಸರ್ವಕಾರಣನಾದ ಭಗವಂತನಲ್ಲಿ ನಾನು ಶರಣು ಹೊಕ್ಕಿದ್ದೇನೆ. ಆವನು ಇಂದ್ರನಿಗೂ ಪ್ರಿಯನಾದವನು. ಕರ್ಮಫಲಪ್ರದನಾದ ಆ ದೇವರು ನಾನು ಕಲಿತ ವೇದಾರ್ಥಗಳೂ, ವೇದಾಕ್ಷರಗಳೂ ನನ್ನಲ್ಲಿ ದೃಢವಾಗಿ ನಿಲ್ಲುವಂತೆ ಮೇಧಾದೇವಿಯ ಅನುಗ್ರಹವನ್ನು ದೊರಕಿಸಿಕೊಡಲಿ.

ದೇವಗಣಗಳೂ, ಪಿತೃಗಳೂ ಯಾವ ಮೇಧಾ ದೇವಿಯ ಕೃಪೆಯ ಸಲುವಾಗಿ ಅವಳನ್ನುಪಾಸಿಸುವರೋ. ಆ ದೇವಿಯು ಕೃಪೆಯಿಂದ ನಾನು ಬುದ್ಧಿವಂತ ನಾಗುವಂತೆ, ಎಲೈ ಅಗ್ನಿಯೇ ನನ್ನನ್ನು ಮಾಡು, ಮೇಧಾದೇವಿಯು ಸನ್ಮಾರ್ಗಗಾಮಿಯಾದ ಮನುಷ್ಯನ ಸಕಲರೋಗಗಳನ್ನು ನಾಶಮಾಡಬಲ್ಲಳು. ಎಲೈ ಪಲಾಶ ವೃಕ್ಷವೇ ! ವೃಕ್ಷಧಿಪತಿಯೇ । ನನಗೆ ಶ್ರದ್ಧಾ, ಮೇಧಾ ದೇವಿಯರ ಕೃಪೆಯುಂಟಾಗಿ, ನನಗೆ ವೈದಿಕಾರ್ಥಗಳಲ್ಲಿ ಶ್ರದ್ಧೆಯೂ, ನೆನ ಪಿನ ಶಕ್ತಿಯೂ ಆಗುವಂತೆ ಮಾಡು. ನಾನು ಹಿಡಿದಿರುವ ಈ ದಂಡ ದಲ್ಲಿ ಸದಾವಾಸಿಸು."

ಮಂತ್ರಗಳ ಸಂನ್ನಿವೇಶವನ್ನೂ, ಉಪಸಂಹಾರವನ್ನು ನೋಡಿದರೆ, ಉಪನೀತನಾದ ವಟುವು ಆದನ್ನುಚ್ಚರಿಸುವ ಸಂದರ್ಭದಲ್ಲಿರುವಂತೆ ತೋರು ತ್ತದೆ. ಮೇಧಾ ದೇವಿಯು ಎಲ್ಲರಿಗೂ ಬೇಕಾದವಳಾದುದರಿಂದ ಉಳಿದ ಭಾಗಾರ್ಥಗಳೂ ಎಲ್ಲರಿಗೂ ಗ್ರಾಹ್ಯ. ಇಂಥ ದೇವಿಯು ಇಲ್ಲಿ ಉದಾ ಹರಿಸಲ್ಪಟ್ಟ ಪೂರ್ಣ ಮಂತ್ರಗಳಲ್ಲಲ್ಲದೆ, ಭಾಗಶಃ ಅಲ್ಲಲ್ಲೇ ಸ್ತುತಳಾಗಿರುವು ದನ್ನೂ ವೇದಜ್ಞರು ಬಲ್ಲರು.

—೦—

## ನಾಲ್ಕನೆಯ ಅಧ್ಯಾಯ

# ೧. ವಾಕ್ಸೂಕ್ತ

ಪ್ರವೇಶ: ವೇದೋಕ್ತವಾದ ಲಕ್ಷ್ಮೀವಿಷಯಕಗಳಾದ ಇನ್ನೆರಡು ಸೂಕ್ತಗಳನ್ನು ಈಗಾಗಲೇ (ಪುಟ ೧೬ ರಲ್ಲಿ ವಾಗಾಂಭೃಣೀ ಸೂಕ್ತವನ್ನೂ, ಪುಟ ೧೧೯ ರಲ್ಲಿ ವಾಕ್‌ಸೂಕ್ತವನ್ನೂ ) ಪ್ರಸ್ತಾಪಿಸಿ, ಅಲ್ಲಿ ಪ್ರಸಂಗಕ್ಕೆ ಸಾಕಾಗುವಷ್ಟನ್ನೂ ವಿವರಿಸಿಯೂ ಆಗಿದೆ. ಸೂಕ್ತ ವಿವರಣೆಯ ಮರ್ಯಾದೆಯಲ್ಲಿ ಈಗ ಅವನ್ನೇ ಪ್ರಧಾನವಾಗಿ ಅಭ್ಯಸಿಸೋಣ. ಪ್ರಕೃತ ವಾಕ್ಸೂಕ್ತವು ತೈ. ಬ್ರಾ. ( II–8–8 ) ರಲ್ಲಿ ಹೀಗೆ ಬಂದಿದೆ:

॥ ೧ ॥ ದೇವೀಂ ವಾಚಮಜನಯನ್ತ ದೇವಾಃ ।
ತಾಂ ವಿಶ್ವರೂಪಾಃ ಪಶವೋ ವದನ್ತಿ ।
ಸಾನೋ ಮಂದ್ರೇಷಮೂರ್ಜಂ ದುಹಾನಾ ।
ಧೇನುರ್ವಾಗಸ್ಮಾನುಪಸುಷ್ಟುತೈತು ॥

(ಇದಿಷ್ಟು ಭಾಗವು ಮಾತ್ರ ಋ. ಸಂ. VIII-100-11ರಲ್ಲೂ ತೈ. ಬ್ರಾ. II-4-6 ರಲ್ಲಿಯೂ ಬಂದಿದೆ.)

॥ ೨ ॥ ಯದ್ವಾಗ್ವದಂತ್ಯವಿಚೇತನಾನಿ ।
ರಾಷ್ಟ್ರೀದೇವಾನಾಂ ನಿಷಸಾದ ಮಂದ್ರಾ ।
ಚತಸ್ರ ಊರ್ಜಂ ದುದುಹೇ ಪಯಾಂಸಿ ।
ಕ್ವಸಿದಸ್ಯಾಃ ಪರಮಂ ಜಗಾಮ ॥

(ಇದು ಋ. ಸಂ. VIII-100-10 ರಲ್ಲೂ. ತೈ. ಬ್ರಾ. II-4-6ರಲ್ಲೂ ಬಂದಿದೆ.)

॥ ೩ ॥ (ಗೌರೀ ರ್ಮಿಮಾಯ ಸಲಿಲಾನಿ ತಕ್ಷತೀ ।
ಏಕಪದೀ ದ್ವಿಪದೀ ಸಾ ಚತುಷ್ಪದೀ ।

ಅಷ್ಟಾಪದೀ ನವಪದೀ ಬಭೂವುಷೀ ।
ಸಹಸ್ರಾಕ್ಷರಾ ಪರಮೇ ವ್ಯೋಮನ್ ॥

॥ ೪ ॥ ತಸ್ಯಾಂ ಸಮುದ್ರಾ ಅಧಿ ವಿಕ್ಷರನ್ತಿ ।
ತೇನ ಜೀವನ್ತಿ ಪ್ರದಿಶಶ್ಚತಸ್ರಃ ।
ತತಃ ಕ್ಷರತ್ಯಕ್ಷರಂ ।
ತದ್ವಿಶ್ವಮುಜೀವತಿ ॥ )

( ಈ ಮೇಲಿನ ಎರಡೂ ಮಂತ್ರಗಳು ತೈ. ಬ್ರಾಹ್ಮಣದ ಪ್ರಕೃತ ಭಾಗಕ್ಕೆ ( II-8-8 ) ಸೇರಿಲ್ಲವಾದರೂ, II-4-6ರಲ್ಲಿ ಬಂದಿರುವುದಲ್ಲದೆ ಮೊದಲನೆಯದು ಋ. ಸಂ. I-164-41 ರಲ್ಲೂ, ಈಗಾಗಲೇ ಉಕ್ತವಾಗಿದೆ, ಇವನ್ನು ವಾಕ್ಸೂಕ್ತದೊಡನೆ ಪಠಿಸುವ ವಾಡಿಕೆಯುಂಟು.)

॥ ೫ ॥ ಅನಂತಾಮಂತಾದಧಿ ನಿರ್ಮಿತಾಂ ಮಹೀಂ ।
ಯಸ್ಯಾಂ ದೇವಾಅದಧುರ್ಭೋಜನಾನಿ ।
ಏಕಾಕ್ಷರಾಂ ದ್ವಿಪದಾಂ ಷಟ್ಪದಾಂ ಚ ।
ವಾಚಂ ದೇವಾ ಉಪಜೀವನ್ತಿ ವಿಶ್ವೇ ॥

॥ ೬ ॥ ವಾಚಂ ದೇವಾ ಉಪಜೀವನ್ತಿ ವಿಶ್ವೇ ।
ವಾಚಂ ಗಂಧರ್ವಾಃ ಪಶವೋ ಮನುಷ್ಯಾಃ ।
ವಾಚೀಮಾ ವಿಶ್ವಾ ಭುವನಾನ್ಯರ್ಪಿತಾ ।
ಸಾ ನೋ ಹವಂ ಜುಷತಾಂ ಇಂದ್ರ ಪತ್ನೀ ॥

॥ ೭ ॥ ವಾಗಕ್ಷರಂ ಪ್ರಥಮಜಾ ಋತಸ್ಯ ।
ವೇದಾನಾಂ ಮಾತಾಮೃತಸ್ಯ ನಾಭಿಃ ।
ಸಾ ನೋ ಜುಷಾಣೋಪ ಯಜ್ಞ ಮಾಗಾತ್ ।
ಅವನ್ತೀ ದೇವೀ ಸುಹವಾ ಮೇ ಅಸ್ತು ॥

॥ ೮ ॥ ಯಾಮೃಷಯೋ ಮಂತ್ರಕೃತೋ ಮನೀಷಿಣಃ ।
ಅನ್ವೈಚ್ಛನ್ ದೇವಾಸ ಪಸಾ ಶ್ರಮೇಣ ।
ತಾಂ ದೇವೀಂ ವಾಚಗ್ಂ ಹವಿಷಾ ಯಜಾಮಹೇ ।
ಸಾ ನೋ ದಧಾತು ಸುಕೃತಸ್ಯ ಲೋಕೇ ॥

॥ ೯ ॥ ಚತ್ವಾರಿ ವಾಕ್ ಪರಿಮಿತಾ ಪದಾನಿ ।
ತಾನಿ ವಿದುರ್ಬ್ರಾಹ್ಮಣಾಃ ಯೇ ಮನೀಷಿಣಃ ॥
ಗುಹಾ ತ್ರೀಣಿ ನಿಹಿತಾ ನೇಂಗಯನ್ತಿ ।
ತುರೀಯಂ ವಾಚೋ ಮನುಷ್ಯಾ ವದನ್ತಿ ॥

(ಇದು ಋ. ಸಂ. I-164-45 ರಲ್ಲೂ ಬಂದಿದೆ)

**ಅರ್ಥವಿವರಣೆ :** ಈ ಮಂತ್ರಗಳ ಪೈಕಿ ೧ ನೆಯದರ ವಿವರಣೆಯನ್ನು ಇದೇ ನಮ್ಮ ಗ್ರಂಥದಲ್ಲಿ ಈಗಾಗಲೆ ಪುಟ ೧೧೯ ರಲ್ಲೂ, ೨ ನೆಯದನ್ನು ೧೧೫ ರಲ್ಲೂ ವಿವರಿಸಿಯಾಗಿದೆ. ವಿಸ್ತಾರಕ್ಕೆ ವಾಚಕರು ಅಲ್ಲೇ ಮತ್ತೆ ನೋಡಬೇಕು. ಪ್ರಕೃತದಲ್ಲಿ ಇಡೀ ಸೂಕ್ತಾರ್ಥವನ್ನು ಸ್ಥೂಲವಾಗಿ ಪರಾಮರ್ಶಿಸುತ್ತಾ ಉಳಿದವನ್ನು ಭಾವದಲ್ಲಿ ಚೆನ್ನಾಗಿ ಅಭ್ಯಸಿಸೋಣ :

ಇಂದು ಮನುಷ್ಯ ಪಶುಪಕ್ಷಿಗಳಾದಿಯಾಗಿ ಎಲ್ಲ ಜೀವಿಗಳೂ ಆಡುವ ಮಾತನ್ನು, ಮಾಡುವ ಶಬ್ದವನ್ನು ಮೂಲದಲ್ಲಿ ದೇವತೆಗಳು ಉಂಟು ಮಾಡಿರು. ಆದರೆ ಶಬ್ದತತ್ವಾಭಿಮಾನೀ ದೇವತೆಯು ಅವರಿಂದ ಹುಟ್ಟಿದಳೆಂದು ಅರ್ಥವಲ್ಲ. ಅವರು ಅವಳನ್ನು ಸಾಕ್ಷಾತ್ಕರಿಸಿಕೊಂಡರು ಮಾತ್ರ, ಅದನ್ನೇ ವಿಶ್ವಾದ್ಯಂತ ಎಲ್ಲ ಬಗೆಯ ಪಶುಗಳೂ ಆಡುತ್ತವೆ, ಮನುಷ್ಯರೂ ಆಡುತ್ತಾರೆ. ಲಕ್ಷ್ಮೀದೇವಿಯ ಅಪರಾವತಾರವಾದ ವಾಗ್ದೇವಿಯ ಈ ದಿವ್ಯ ಕೊಡಗೆಯಲ್ಲೇ ಸಕಲ ಭುವನಗಳೂ ಅರ್ಪಿತವಾಗಿ, ಆಧರಿಸಿ, ನಿಂತಿವೆ. ಇಂದ್ರಶಬ್ದವಾಚ್ಯನಾದ — ಪರಮೇಶ್ವರನಾದ—ಭಗವಂತನ ಪತ್ನಿಯಾದ ಈ ವಾಗಭಿಮಾನಿನೀ ದೇವಿಯೂ ನಮ್ಮ ಸ್ತೋತ್ರವನ್ನು ಕೇಳಿ

ತೃಪ್ತಿಪಡಲಿ. ನಮಗೆ ನಾನಾ ವಿಧ ಸುಖಭೋಗಾದಿಗಳನ್ನನುಗ್ರಹಿಸಲಿ. ನಮ್ಮಲ್ಲಿ ಬಂದು ನೆಲೆಸಲಿ. ಮೂಕಪ್ರಾಣಿಗಳೂ ಸಹ ಯಾವ (ಇತರ ಅಸಂಬದ್ಧ) ಶಬ್ದ ಮಾಡುತ್ತವೆಯೋ, ಅವನ್ನೂ ಚೆನ್ನಾಗಿ ಮಾತಾಡುವಂತೆ ಮಾಡಬಲ್ಲಳು ವಾಗ್ದೇವೀ. ದೇವತೆಗಳು ರಾಷ್ಟ್ರೀಟ್ಟದಲ್ಲಿ ಇವಳ ಅನು ಗ್ರಹದಿಂದಲೇ. (ರಾಷ್ಟ್ರಮಾತ್ರವಲ್ಲದೆ ಸಕಲ ಇತರ ಸಾಮಾಜಿಕ, ರಾಜ ಕೀಯವಾಗಿ ಸಾಂಘಿಕ ಸಂಸ್ಥೆಗಳೂ, ಇವುಗಳಿಂದ ಸಮಾಜಕ್ಕೆ ಬ ವ ಸ್ವಾಸ್ಥ್ಯ, ಸಮೃದ್ಧಿ, ಸುಖ ಶಾಂತಿಗಳೂ ಈ ದೇವಿಯು ಕೊಡುಗೆಯೇ ಆಗಿವೆ ಎಂದರ್ಥ.) ಇಂಥವಳು ನಮ್ಮ ವೈದಿಕಾಚರಣೆಗಳಲ್ಲೇ ಸುಪ್ರತಿಷ್ಠಿತ ಳಾಗಿದ್ದಾಳೆ. (ಇವನ್ನು ಬಿಟ್ಟರೆ ಆ ಸುಖಶಾಂತಿಗಳು ಅಲಭ್ಯವೆಂದು ಭಾವ.) ಇವಳ ಪ್ರಸಾದದಿಂದಲೇ ನಾಲ್ಕೂ ದಿಕ್ಕುಗಳ ದೇವತೆಗಳೂ ಕ್ಷೀರಾದಿ ಸದ್ದ್ರವ್ಯಗಳನ್ನು, ಸಮೃದ್ಧತೀರ್ಥಗಳನ್ನೂ ಲೋಕಕ್ಕೆ ಅನುಗ್ರಹಿಸುತ್ತಿರು ವರು. ಇವಳ ಪರಮ ಪದವನ್ನು (ನಿತ್ಯವಾಸಕ್ಷೇತ್ರವನ್ನು) ಮಾತ್ರ ಯಾರೂ ಪೂರ್ಣ ಅರಿಯರು. (ನಾವಾಡುವ ವಾಕ್ಕಿನ ಬುಡ ಯಾರಿಗೂ ತಿಳಿಯದು!)

ಪರಮವ್ಯೋಮದಲ್ಲಿ ಪರಮಾತ್ಮನಲ್ಲಿಯೇ ಪ್ರತಿಷ್ಠಿತಳಾಗಿರುವ ಈ ವಾಗ್ದೇವಿಯು ಸೃಷ್ಟಿಯ ಆರಂಭ ಕಾಲದಲ್ಲಿ ನೀರಿನಂತೆ ಏಕಾಕಾರವಾಗಿ ವರ್ಣ, ಪದ, ಅಕ್ಷರ, ವಾಕ್ಯಗಳನ್ನು ಸೃಜಿಸುತ್ತಾ ಶಬ್ದಮಾಡಿದಳು. ಪ್ರಣವ ವೆಂಬ ಏಕಾಕ್ಷರವು ಆಗ ಪರಮಾತ್ಮನ ಬಾಯಿಯಿಂದ ಹೊರಟಿತು. (ಪರ ಮಾತ್ಮನ ಸರ್ವಸ್ರಷ್ಟೃತ್ವವೂ ಇವಳ ಪತಿಯಾದ ಪ್ರಯುಕ ವೆ ಆಯಿತು!) ಆಮೇಲೆ ವ್ಯಾಹೃತಿರೂಪದಲ್ಲೂ ದ್ವಿಪದಿಯೂ ಇವಳೇ ಆದಳು!) ಆಮೇಲೆ ನಾಲ್ಕು ವೇದರೂಪ ಚತುಷ್ಪದಿಯಾಗಿಯೂ ಅವತರಿಸಿದಳು. ನಂತರ ಆರು ವೇದಾಂಗಗಳೂ, ಪುರಾಣ, ಧರ್ಮಶಾಸ್ತ್ರಗಳೆಂಬ ಎರಡೂ ಉಂಟಾಗಿ, ಅಷ್ಟಾಪದಿಯಾದಳು. ಆಮೇಲೆ ಮೀಮಾಂಸಾ, ನ್ಯಾಯ, ಸಾಂಖ್ಯ, ಯೋಗ ಪಾಂಚರಾತ್ರ, ಪಾಶುಪತ, ಆಯುರ್ವೇದ, ಧನುರ್ವೇದ, ಗಾಂಧರ್ವವೇದ ವೆಂಬ ಒಂಭತ್ತು ಶಾಸ್ತ್ರರೂಪದಲ್ಲಿ ನವಪದಿಯೂ ಆದಳು. ಆಮೇಲೆ ಅನಂತವಾಕ್ಯಸಂದರ್ಭಗಳಲ್ಲಿ ಸಹಸ್ರಾಕ್ಷ ಆದಿ, ಅನಂತ ವಿಧಳಾದಿ, ಸಂಪನ್ನ

ಳಾದಳು.

ಇಂಥ ವಾಗ್ದೇವತೆಯಲ್ಲಿ ಆಶ್ರಯ ಹೊಂದಿದ ವೇದಗಳು ಸಮುದ್ರ ಸಮಾನವಾಗಿ (ಸಮುದ್ರಗಳಂತೆ) ವಿಧವಿಧವಾಗಿ (ಜ್ಞಾನ, ಕರ್ಮ, ಉಪಾಸನೆ ಮುಂತಾದ ರೂಪಗಳಲ್ಲಿ) ಪ್ರವರ್ತಿಸುತ್ತವೆ. ಈ ಪ್ರವರ್ತನೆಯಿಂದಲೇ (ಪ್ರಾಚುರ್ಯದಿಂದಲೇ) ನಾಲ್ಕುದಿಕ್ಕುಗಳಲ್ಲೂ, ಉಪದಿಕ್ಕುಗಳಲ್ಲಿಯೂ ನಾನಾ ಪ್ರಾಣಿಗಳು ಬದುಕುವಂತಾಗಿ ಐಹಿಕಾಮುಷ್ಮಿಕ ಫಲಗಳಿಗೆ ಕಾರಣವಾದ ವೇದೋಕ್ತಕರ್ಮಾನುಷ್ಠಾನಗಳಿಂದ ಬದುಕುತ್ತವೆ. ಹೀಗೆ ಪ್ರಣವಾತ್ಮಕವಾದ ಅಕ್ಷರವೂ ಪ್ರವರ್ತಿತವಾಗಿದೆ, ಈ ಪ್ರಣವವನ್ನು (ಇದರರ್ಥವನ್ನು) ಅನುಷ್ಠಿಸಿಯೇ ಎಲ್ಲ ಜನರೂ ತಮಗಪೇಕ್ಷಿತವಾದ ಫಲಗಳನ್ನು ಪಡೆಯುತ್ತಾ, ಜೀವಿಸಿರುತ್ತಾರೆ.

ವೈದಿಕ ಲೌಕಿಕ ಬಳಕೆಗಳಲ್ಲಿ ಕೊನೆಯೇ ಇಲ್ಲದಷ್ಟು ಅಪಾರಳು ಈ ವಾಗ್ದೇವಿ. ಪೂರ್ವಸೃಷ್ಟಿಯ ಕೊನೆಯಲ್ಲಿ (ಪ್ರಳಯದಲ್ಲಿ) ಭಗವಂತನಲ್ಲಿಯೇ ಲೀನಳಾಗಿ, 'ಅಂತ'ನೆಂದು ಖ್ಯಾತನಾದ ಆ ಪರಮೇಶ್ವರನಿಂದಲೇ ಅಧಿಕವಾಗಿ ಪುನಃ ನಿರ್ಮಿಸಲ್ಪಟ್ಟ (ಬಳಕೆಗೆ ತರಲ್ಪಟ್ಟ)ವಳು ಈ ವಾಗ್ದೇವಿ. ಆದ್ದರಿಂದಲೇ ಮಹತ್ವ ಇವಳಿಗೆ. ದೇವತೆಗಳಿಗೆ ಇವಳೇ ದಿನ ಅನ್ನ ಹಾಕುವವಳು. (ಏಕೆಂದರೆ "ಇಂದ್ರಾಯಸ್ವಾಹಾ, ಅಗ್ನಯೇ ಸ್ವಾಹಾ" ಮುಂತಾಗಿ ವಾಗ್ದೇವಿಯು ವೈದಿಕ ಸ್ವರಯುಕ್ತ ಭಾಷೆಯಲ್ಲಿ ಹೇಳಿದ ಮೇಲೆಯೇ ಆ ದೇವತೆಗಳಿಗೆ ಹವಿಸ್ಸು ಸಿಗುವುದು!) (ಬೃಹಸ್ಪತಿಗಳು ಹೇಳಿಕೊಟ್ಟು, ಇಂದ್ರನಂಥ ವಟುವು ಕಲಿಯಲು ಹೊರಟರೂ ಅವರ ಆಯುಷ್ಯದಲ್ಲಿ ಸಾವಿರ ವರ್ಷಗಳು ಹಿಡಿದೂ, ಅಧ್ಯಯನ ಮುಗಿಯಲಾರದೆಂದು ಮಹಾಭಾಷ್ಯಕಾರರು ಹೇಳಿರುವುದನ್ನು ಶ್ರೀಸಾಯಣರು ಉದಾಹರಿಸಿ ಇವಳೇಕೆ ಅನಂತಳೆಂಬುದನ್ನು ವಿವರಿಸಿದ್ದಾರೆ!) ಹೀಗೆ ಪ್ರಣವರೂಪದಲ್ಲಿ ಏಕಾಕ್ಷರಳೂ, ಸಂಸ್ಕೃತ ಪ್ರಾಕೃತರೂಪದಲ್ಲಿ ದ್ವಿಪದಳೂ, ಅಪಭ್ರಂಶ, ಪೈಶಾಚಾದಿ ಭೇದದಿಂದ ಷಟ್ಪದಳೂ ಈ ವಾಗ್ದೇವಿ ಆಗಿದ್ದಾಳೆ. ಆದ್ದರಿಂದ ದೇವತೆಗಳೂ ಈ ವೇದಮಾತೆಯನ್ನು ಮುಂದಿಟ್ಟುಕೊಂಡೇ ತಮ್ಮ ನಿತ್ಯಜೀವನ ನಡೆಸುತ್ತಿದ್ದಾರೆ.

ಗಾನ ಮಾಡುವ ಗಂಧರ್ವರೂ ಈ ದೈವೀವಾಕ್ಕನ್ನೇ ಅವಲಂಬಿಸಿದ್ದಾರೆ! ಮನುಷ್ಯ, ಪಶು ಮೊದಲಾದವೂ ಸಹ. ಇಡೀ ವಿಶ್ವದ ವ್ಯಾಪಾರ ನಿಂತಿರುವುದೇ ವಾಕ್ಕಿನಲ್ಲಿ. (ವಾಕ್ಕೇ ಎಲ್ಲ ವ್ಯವಹಾರಕ್ಕೂ ಮೂಲ. "ವಾಚಾರಂಭಣಂ" ಎಂದು ಬ್ರಹ್ಮಸೂತ್ರಕಾರರು ಹೇಳಿರುವುದೂ ಸ್ಮರಣೀಯ.) ಸಕಲ ಭುವನಗಳೂ ವಾಕ್ಕನ್ನೇ ಅವಲಂಬಿಸಿವೆ. ಇಂದ್ರ ಶಬ್ದವಾಚ್ಯನಾದ ಭಗವಂತನ ಪತ್ನಿಯಾದ ಈ ವಾಗ್ದೇವಿಯು ಈ ನಮ್ಮ (ವಾಗ್ರೂಪದ) ಹವಿಸ್ಸನ್ನು ಪ್ರೀತಿಯಿಂದ ಸ್ವೀಕರಿಸಲಿ.

ಭಗವಂತನಿಂದಲೇ ಉತ್ಪನ್ನವಾದ, ಅವಿನಾಶಿಯಾದ ಈ ದೈವೀ ವಾಕ್ಕು (ವಾಗ್ದೇವಿಯು) ಋತುಮಯವಾದ, ವಿಶ್ವಕ್ಕೆ, ಸೃಷ್ಟಿಗೆ ಮೊದಲೇ ಹುಟ್ಟಿದುದಾಗಿದೆ. ಇದರ ಅಭಿಮಾನೀ ದೇವತೆಯು ಸಕಲ ವೇದಗಳಿಗೂ ತಾಯಿಯಾಗಿದ್ದಾಳೆ. (ವೇದಮಂತ್ರಗಳಿಂದಲೇ ಸಕಲ ವೈದಿಕಾಚರಣಾರೂಪ ಕರ್ಮಗಳೂ ಹುಟ್ಟಿಕೊಂಡವು. ಮುಂಡಕ ಶ್ರುತಿಯಲ್ಲಿ ಅದಕ್ಕಾಗಿಯೇ "ತದೇತತ್ ಸತ್ಯಂ, ಮಂತ್ರೇಷು ಕರ್ಮಾಣಿ ಕವಯೋ ಯಾನ್ಯ ಪಶ್ಯನ್ " ಇತ್ಯಾದಿ ಭಾಷ್ಯಕಾರರು ಜ್ಞಾಪಿಸಿದ್ದಾರೆ.) ಅಮೃತತ್ವಕ್ಕೆ, ಇವಳೇ ನಾಭಿಯಂತೆ, ಕೇಂದ್ರದಲ್ಲಿದ್ದಾಳೆ. ಇಂಥ ದೇವಿಯು ಪ್ರೀತಿಯುಕ್ತಳಾಗಿ, ನಮ್ಮ ಯಜ್ಞಕ್ಕೆ ದಯಮಾಡಲಿ. ನಮ್ಮನ್ನು ರಕ್ಷಿಸುತ್ತಾ ಈ ದೇವಿಯು, ನಮ್ಮ ಯಜ್ಞಕ್ಕೆ ಸುಲಭಳಾಗಿ ಕರೆಯಲ್ಪಡುವವಳಾಗಲಿ.

ಸಂಪ್ರದಾಯ ಪ್ರವರ್ತಕರಾಗಿ, ಮಂತ್ರಗಳನ್ನು ತಲೆತಲಾಂತರದಿಂದ ಲೋಕಕ್ಕೆ ಉಳಿಸಿಕೊಟ್ಟು ಪ್ರತ್ಯಕ್ಷಮಾಡಿಕೊಂಡ, ಬುದ್ಧಿಶಾಲಿಗಳಾದ ಮಂತ್ರ ಪ್ರವರ್ತಕರಾದ ಋಷಿಗಳು, ಬಹು ಶ್ರಮದಿಂದ ಇವಳನ್ನು ಪ್ರತ್ಯಕ್ಷ ಮಾಡಿಕೊಂಡರು, ಧರಿಸಿದರು. ದೇವತೆಗಳೂ ಅಷ್ಟೇ— ತಪಸ್ಸು, ಶ್ರಮದಿಂದ ಇವಳನ್ನು ಹುಡುಕಿ ಪಡೆದರು. ಇಂಥ ಮಹಿಮಾನ್ವಿತಳಾದ ದೇವಿಯನ್ನು ಹವಿಸ್ಸಿನಿಂದ ಅರ್ಚಿಸುತ್ತೇವೆ. ಸುಕೃತ ಫಲದಿಂದ ದೊರಕುವ ಉತ್ತಮ ಲೋಕದಲ್ಲಿ ನಮ್ಮನ್ನು ಈ ದೇವಿಯು ಸ್ಥಾಪಿಸಲಿ.

ಅಪರಿಚ್ಛಿನ್ನಳಾಗಿದ್ದರೂ, ಈ ವಾಗ್ದೇವಿಯು ನಾಲ್ಕು ಅವಯವಗಳನು

ಹೊಂದಿರುತ್ತಾಳೆ. ಪರಾ, ಪಶ್ಯನ್ತೀ, ಮಧ್ಯಮಾ, ವೈಖರಿ— ಎಂಬುದೇ ಅವಳ ನಾಲ್ಕು ಪಾದಗಳು. ವಿದ್ವಾಂಸರಾದ ಬ್ರಹ್ಮನಿಷ್ಠರು ಮಾತ್ರವೇ ಈ ನಾಲ್ಕು ಪಾದಗಳನ್ನು ಬಲ್ಲರೇ ಹೊರತು, ಇತರರಲ್ಲ! ಈ ಪೈಕಿ ಮೂರನ್ನು— ಪರಾ, ಪಶ್ಯನ್ತೀ, ಮಧ್ಯಮಾ— ಎಂಬುವನ್ನು ಯಾರೂ ತಿಳಿಯರು; ಏಕೆಂದರೆ. ಹೃದಯ ಗುಹೆಯಲ್ಲೇ ಅವು ಗೂಢವಾಗಿವೆ. ವೈಖರೀ ರೂಪದ ನಾಲ್ಕನೆಯದನ್ನು ಮಾತ್ರ ಎಲ್ಲ ಮನುಷ್ಯರೂ ಉಚ್ಚರಿಸುತ್ತಾರೆ".

ಈ ಸೂಕ್ತದಿಂದ ಪರಬ್ರಹ್ಮವೈಭವಪ್ರಕಾಶಕಳಾದ, ವಾಕ್ ಶಬ್ದವಾಚ್ಯಳಾದಲಕ್ಷ್ಮೀದೇವಿಯು ಇಲ್ಲದಿದ್ದರೆ (ನಾಸದೀಯದಲ್ಲಿ ಹೇಳಿರುವಂತೆ) ಜಗತ್ತು ಎಷ್ಟು ಅವ್ಯಂಗಳ ಸ್ಥಿತಿಯಲ್ಲಿರುತ್ತಿತ್ತೆಂಬುದು ವ್ಯಕ್ತವಾಗುವುದು. ನಾಸದೀಯದಲ್ಲಿ ಲಕ್ಷ್ಮೀಯನ್ನು ಸ್ವಧಾ ಶಬ್ದದಿಂದ ನಿರ್ದೇಶಿಸಲಾಗಿದೆ. "ಆನೀದವಾತಗ್ಂ ಸ್ವಧಯಾ ತದೇಕಂ" ಎಂಬಲ್ಲಿ ಆ "ಏಕೋ ಹ ವೈ ನಾರಾಯಣನು" ಸ್ವಧಾಯುಕ್ತನಾಗಿದ್ದಾನೆಂಬಲ್ಲಿ ಈ ನಿರೂಪಣೆಯಿದೆ. ಅನಂತಶಬ್ದಗಳಿಂದ ಕರೆಯಲ್ಪಡುವ ಈ ದೇವಿಯನ್ನು ಎಷ್ಟುಕೊಂಡಾಡಿದರೂ ಕಡಿಮೆಯೆ ಆಗುವುದು.

## ಸ್ವಧಾ ದೇವಿ

ಲಕ್ಷ್ಮೀವಾಚಕವಾದ ಅನೇಕ ಶ್ರೀನಾಮಗಳಲ್ಲಿ ವೇದೋಕ್ತವಾದ ಸ್ವಧಾ ಎಂಬುದೂ ಒಂದು. ಈ ಶ್ರೀನಾಮವು ಋಗ್ವೇದದ ಅನೇಕ ಮಂತ್ರಗಳಲ್ಲಿ ಬಂದಿದ್ದು ಆಮೇಲೆ ಇತರ ವೇದಗಳಲ್ಲಿ ಬಂದಿರುವುದುಂಟು.

ಉದಾಹರಣೆಗೆ ಸುಪ್ರಸಿದ್ಧವಾದ ಋಗ್ವೇದೀಯ ನಾಸದೀಯಂ ಸೂಕ್ತದಲ್ಲಿ ಪ್ರಳಯಕಾಲದಲ್ಲಿ ಉಳಿದೆಲ್ಲ ವಸ್ತುಗಳೂ ನಾಮರೂಪಗಳನ್ನು ಕಳೆದು

ಕೊಂಡು, ಲಯವಾಗಿ ಪರಬ್ರಹ್ಮನೊಬ್ಬನೇ ಇರುತ್ತಾನೆಂದು ಹೇಳುವಾಗ ಅವನು ಸ್ವಧಾ ಸಮೇತನಾಗಿಯೇ ಇದ್ದನೆಂದು ಹೇಳಿದೆ.

ತಮ ಆಸೀತ್ ತಮಸಾ ಗೂಳ್ಹಮಗ್ರೇ ಪ್ರಕೇತಂ
ಸಲಿಲಂ ಸರ್ವಮಾ ಇದಂ।
ತುಚ್ಛ್ಯೇನಾ ಭ್ವಪಿಹಿತಂ ಯದಾಸೀತ್
ತಪಸಸ್ತನ್ಮಹಿನಾ ಜಾಯತೈಕಂ॥ (X-೧೨೯-೩)

"ಸೃಷ್ಟಿಗೆ ಪೂರ್ವದಲ್ಲಿ ಗಾಢಾಂಧಕಾರದಲ್ಲಿ ಗೂಢವೂ, ಅಪ್ರಕಾಶಕವೂ ಆದ ಕತ್ತಲೆಯು (ಅವ್ಯವಸ್ಥಿತಿಯು) ಒಂದೇ ವ್ಯಾಪಿಸಿಕೊಂಡಿತ್ತು. ಈಗ (ಸುವ್ಯವಸ್ಥಿತವಾಗಿ ನಾಮರೂಪಗಳಿಂದ ವಿಭಕ್ತವಾಗಿ) ಕಾಣುವ ಎಲ್ಲ ಜಗತ್ತೂ ಆಗ ಏಕಾರ್ಣವವಾಗಿ ನೀರಿನಲ್ಲಿ ಮುಳುಗಿತ್ತು. ಶೋಚನೀಯತೆಯಲ್ಲಿ (ಅಲ್ಪೀಭಾವದಲ್ಲಿ, ಹೇಳಹೆಸರಿಲ್ಲದ ಸ್ಥಿತಿಯಲ್ಲಿ) ಕಾರ್ಯಕಾರಣಗಳು ಸೇರಿ ಮಿಶ್ರವಾಗಿ, ಮುಚ್ಚಿ ಹೋಗಿದ್ದ ಕಾಲದಲ್ಲಿ ಆ (ಸತ್‌ಶಬ್ದವಾಚ್ಯವಾದ) ಏಕಮೇವ ಪರವಸ್ತುವಿನ, ಸೃಷ್ಟಿಮಾಡಬೇಕೆಂಬ ಸಂಕಲ್ಪರೂಪ ತಪಸ್ಸಿನಿಂದ, ತನ್ನದೇ ಅಸಾಧಾರಣ ಮಹಿಮೆಯಿಂದ, ಅದು ತಾನೇ ಕಾರ್ಯರೂಪ ಜಗತ್ತಾಗಿ ಈ ಎಲ್ಲವೂ ಹುಟ್ಟಿತು"

ಇಲ್ಲಿ ಮಹಾ ಪ್ರಳಯ ಕಾಲದಲ್ಲಿ ಅಳಿದುಹೋದ ತದಿತರವಸ್ತುಗಳಂತಲ್ಲದೆ, ಒಂದಾನೊಂದು 'ತತ್' ಶಬ್ದ, 'ಸತ್' ಶಬ್ದವಾಚ್ಯವಾದ ಪರವಸ್ತುವು ಇದ್ದಿತೆಂದೂ, ಅದು ಮುಂದೆ ಜಗದೇಕ ಕಾರಣವಾಯಿತೆಂದೂ, ಅದು ಸಂಕಲ್ಪ ವಿಶಿಷ್ಟವಾಗಿತ್ತೆಂದೂ, ನಿತ್ಯಚೈತನ್ಯಯುಕ್ತವಾಗಿತ್ತೆಂದೂ, ಮಹಿಮಾಯುಕ್ತವಾಗಿತ್ತೆಂಬೂ ಹೇಳಿದೆ. (ಆದ್ದರಿಂದ ಬೌದ್ಧರಂತೆ 'ಶೂನ್ಯ'ಕ್ಕೆ ಇಲ್ಲಿ ಅವಕಾಶವಿಲ್ಲ).

ಹಾಗಾದರೆ ಆಗಲೂ, ಈಗಲೂ, ಎಂದೆಂದೂ ಅವಿನಾಶಿಯಾದ ಆ ಒಂದು ವಸ್ತುವು ಹೇಗಿತ್ತು ಎಂದು ಕೇಳಿದರೆ ಹಿಂದಿನ ಮಂತ್ರವು ಹೀಗೆ ಉತ್ತರಿಸುತ್ತದೆ

ನ ಮೃತ್ಯುರಾಸೀತ್ ಅಮೃತಂ ನ ತರ್ಹಿ
ನ ರಾತ್ರ್ಯಾ ಅಹ್ನ ಆಸೀತ್ ಪ್ರಕೇತಃ।
ಆನೀದವಾತಂ ಸ್ವಧಯಾ ತದೇಕಂ
ತಸ್ಮಾದ್ಧಾನ್ಯನ್ನ ಪರಃ ಕಿಂ ಚನಾಸ॥ (X–೧೨೯–೨)

"ಮೃತ್ಯುವಾಗಲೀ, ಅಮೃತವಾಗಲೀ, ರಾತ್ರಿ ಹಗಲುಗಳಾಗಲೀ, (ಹೀಗೆ ಯಾವುದೇ ದ್ವಂದ್ವಗಳು) ಇರದ ಆ ಕಾಲದಲ್ಲಿ ಸಕಲ ವೇದಾಂತವೇದ್ಯವಾದ ಆ ಪರಬ್ರಹ್ಮವಸ್ತುವು ತನ್ನದೇ ವಿಶಿಷ್ಟ ಶಕ್ತಿಯೊಡಗೂಡಿ ಉಸಿರಾಟವೂ ಇಲ್ಲದೆ ಜಡವಸ್ತುವಿನಂತಿದ್ದ (ಜೀವಾತ್ಮ)ನನ್ನು ಉಸಿರಾಡುವಂತೆ ಮಾಡಿತು. ಸ್ವಧಾವಿಶಿಷ್ಟ ಪರವಸ್ತುವಿನ ಹೊರತು ಬೇರಾವ ವಸ್ತುವೂ ಆಗಲೂ ಇರಲಿಲ್ಲ. ಆಮೇಲೂ ಆಗಲಿಲ್ಲ!

ಈ ಮಂತ್ರದಲ್ಲಿ "ಸ್ವಧಾವಿಶಿಷ್ಟವಾದ ಆ ಪರವಸ್ತು" ಎಂದದ್ದರಲ್ಲಿ ಸ್ವಧಾ ಎಂಬುದಕ್ಕೆ ಶ್ರೀಸಾಯಣರು :

ಸ್ವಸ್ಮಿನ್ಧೀಯತೇ ಧ್ರಿಯತ ಆಶ್ರಿತ್ಯ ವರ್ತತ ಇತಿ ಸ್ವಧಾ—ಮಾಯಾ ಎಂದು ಅರ್ಥಮಾಡಿದ್ದಾರೆ "ಪರಮಾತ್ಮನಲ್ಲಿ ಸದಾ ಆಶ್ರಯಿಸಿ, ಅವನಿಂದ ಧರಿಸಲ್ಪಡುವ ಶಕ್ತಿ, ಮಾಯಾ" ಎಂದು "ಅವನನ್ನು ಬಿಟ್ಟು ಅವಳಂ ಬೇರ್ಪಡಿಸಲಾರದಂತೆ ಏಕೀಭೂತವಾಗಿರುವಳು" ತಯಾ ತದ್ಬ್ರಹ್ಮೈಕಂ ಅವಿಭಾಗಾಪನ್ನಮಾಸೀತ್ ), ಎಂದೂ ವಿವರಿಸಿ ( ಮಾಯಾ ಶಬ್ದಕ್ಕೆ ಅವರ ಸಂಪ್ರದಾಯದಂತೆ ಮುಂದಿನ ವಿವರಣೆ) ಕೊಟ್ಟಿದ್ದಾರೆ. ಈ ಸ್ವಧಾಶಬ್ದವಾಚ್ಯಳೇ ಲಕ್ಷ್ಮೀದೇವಿಯೆಂದೂ, ಪರಬ್ರಹ್ಮವು ಆಗಲೋ, ಯಾವಾಗಲೋ ಎಂದಾದರೋ ಹೀಗಲ್ಲದೆ ನಿಃಶ್ರೀಕವಾಗಿದ್ದರೆ, ಅದಕ್ಕೆ ಸೃಷ್ಟ್ಯಾದಿ ಸಾಮರ್ಥ್ಯವು ಅಸಾಧ್ಯವಾಗುತ್ತಿತ್ತೆಂದು ಲಕ್ಷ್ಮೀತತ್ತ್ವವಿದರ ಮತ. "ನಿಃ ಶ್ರೀಕಾಣಾಂ ಕುತಃ ಸತ್ತ್ವಂ ?" ಎಂಬ ಪುರಾಣೋಕ್ತಿ ಇಲ್ಲಿ ವಿವೇಚನೀಯ. ಪರತತ್ತ್ವವು "ಶ್ರೀ–ನಿವಾಸವೇ", ಆಗಿತ್ತೆಂದು ಇಲ್ಲಿ ಪರ್ಯಾಯೋಕ್ತಿಯಲ್ಲಿ ಹೇಳಿರುವುದು ಜಾಣರ ಗಮನಕ್ಕೆ ಬೀಳಬೇಕು. ಇದ್ದದ್ದು ಒಂದೇ ಆದರದು ಶ್ರೀಯುಕ್ತವಾಗಿ ಒಂದೇ ಎಂದ ಮೇಲೆ ಇನ್ನೇನು !

ಇಲ್ಲೇ ಮುಂದೆ ಇನ್ನೊಂದು ಐದನೆಯ ಮಂತ್ರದಲ್ಲಿ (ತಿರಶ್ಚೀನೋ ವಿತತೋ...), "ಸ್ವಧಾ ಅವಸ್ತಾತ್ ಪ್ರಯತಿಃ ಪುರಸ್ತಾತ್" ಎಂಬಲ್ಲಿ ಈ ಮಂತ್ರವು ತೈ. ಬ್ರಾಹ್ಮಣ (II-8-9) ರಲ್ಲಿ ಬರುವಾಗ ಶ್ರೀಸಾಯಣರೇ ಸ್ವಧಾ ಶಬ್ದಕ್ಕೆ "ಪಾರಮೇಶ್ವರೀ ಶಕ್ತಿಃ" ಎಂದೇ ಅರ್ಥೈಸಿ, ಸೃಷ್ಟಿಗೆ ಇವಳು ಕೆಳಗಿನ ಕಾರಣವೆಂದೂ, ಈ ಶಕ್ತಿಯು ಯಾವನನ್ನಾಶ್ರಯಿಸಿದೆಯೋ ಅವನು (ಯಸ್ಮಿನ್ ಪ್ರಯತತೇ ಪರಮಾತ್ಮನಿ, ಸೋಽಯಂ ಶಕ್ತಿಪ್ರಯತ್ನಾ ಧಾರಃ, ಪರಮಾತ್ಮಾ ಪ್ರಯತಿಃ) ಮೇಲಿನ ಕಾರಣವೆಂದೂ, ಹೀಗೆ ಪುರುಷ, ಪ್ರಕೃತಿಗಳಲ್ಲಿ ಪರಮಾತ್ಮಾ, ಅವನ ಪತ್ನಿಯರ ಅಂಶದಿಂದ, ಕಾರ್ಯ ಕಾರಣ ಭಾವದಿಂದ ಸೃಷ್ಟಿಯಾಯಿತೆಂದು ವಿವರಿಸಿದ್ದಾರೆ.

ಹೀಗೆ ಬೇರೆಡೆಗಳಲ್ಲಿಯೂ ಲಕ್ಷ್ಮೀ ಪರ್ಯಾಯವಾಗಿಯೇ ಸ್ವಧಾ ಶಬ್ದ ಬಂದಿರುವುದಕ್ಕೆ ಒಂದೆರಡು ನಿದರ್ಶನಗಳನ್ನು ಈಗ ನೋಡೋಣ. ಅಗಸ್ತ್ಯ ದೃಷ್ಟವೂ ಇಂದ್ರ ವಿಷಯಕವೂ ಆದ ಈ ಮಂತ್ರವನ್ನು ನೋಡಿ :

ತಸ್ಮಿನ್ನಾವೇಶಯಾ ಗಿರೋ ಯ ಏಕಶ್ಚರ್ಷಣೀನಾಂ ।
ಅನುಸ್ವಧಾ ಯಮುಪ್ಯತೇ ಯವಂ ನ ಚರ್ಕೃಷದ್ವೃಷಾ ॥
(I-176-2)

ಎಲೈ ಅಂತರಾತ್ಮನೇ ! ಯಾವ ಇಂದ್ರನು ಜ್ಞಾನಿಗಳಿಗೆಲ್ಲಾ ಏಕ ಆಶ್ರಯಣೀಯನಾಗಿದ್ದಾನೆಯೋ, ಯಾವನನ್ನನುಸರಿಸಿಯೇ ಸ್ವಧಾ ದೇವಿಯು ವರ್ತಿಸುವಳೋ, (ಎಂದರೆ ಯಾವನ ಇಷ್ಟಾನುಸಾರವಾಗಿಯೇ ಅವಳು ಲೋಕಕ್ಕೆ ಬೇಕಾದ ಇಷ್ಟಾರ್ಥಗಳನ್ನೆಲ್ಲ ನೀಡಿ. ಮಳೆ, ಬೆಳೆ, ವ್ಯವಸಾಯಾದಿಗಳಾಗುವಂತೆ ಮಾಡುವಳೋ,) ಅಂಥ ಇಂದ್ರ ಶಬ್ದವಾಚ್ಯನಾದ ಭಗವಂತನು ವರ್ಷೇ ವರ್ಷೇ ಬೀಜಗಳು ಮೊಳೆಯುವಂತೆ ಮಾಡಿ ಅನುಗ್ರಹಿಸುತ್ತಾನೆ. ಅವನಲ್ಲಿ ನಿನ್ನ ವಾಕ್ಕನ್ನು ಸ್ತೋತ್ರರೂಪವಾಗಿ ಸಮರ್ಪಿಸು; ಸ್ತುತಿಸು."

ಇಲ್ಲಿ ಇಂದ್ರನೆಂದರೆ ಸ್ವರ್ಗಭೋಗ ಲೋಕಾಧಿಪತಿಯಲ್ಲವೆಂಬುದನ್ನು "ಯ ಏಕಃ" ಎಂಬ ಆಶ್ರಣೀಯತಮತ್ವವಾಚಕವು ತೋರಿಸುತ್ತದೆ.

ಪರಮೈಶ್ವರ್ಯ ಸಂಪನ್ನನಾದ ಇವನನ್ನನುಸರಿಸುವ ಸ್ವಧಾದೇವಿಯು ಯಾರೆಂಬುದನ್ನು ತಿಳಿಯಲಾರದೇ ?

ಇದೇ ಅಗಸ್ತ್ಯರಿಂದ ದೃಷ್ಟವಾದ ಇಂದ್ರವಿಷಯಕವಾದ ಮತ್ತೊಂದು ಮಂತ್ರದಲ್ಲಿಯೂ ಹೀಗೇ ಸ್ವಧಾದೇವಿಯ ಪ್ರಸ್ತಾಪವಿದೆ.

ಅತೋ ವಯಮಂತಮೇಭಿರ್ಯುಜಾನಾಃ
ಸ್ವಕ್ಷತ್ರೇಭಿಸ್ತನ್ವಃ ಶುಂಭಮಾನಾಃ ।
ಮಹೋಭಿರೇತಾಂ ಉಪಯುಜ್ಮಹೇ ನು
ಇಂದ್ರ ಸ್ವಧಾಮನು ಹಿ ನೋ ಬಭೂಥ ॥
(I-165-5)

"ಎಲೈ ಇಂದ್ರನೇ! (ಈ ಹಿಂದಿನ ಮಂತ್ರದಲ್ಲಿ ನಿನ್ನ ಶಕ್ತಿಯನ್ನು ಮಹಿಮೆಯನ್ನು ವರ್ಣಿಸಿದ) ಈ ಕಾರಣದಿಂದಲೇ, ನಾವೂ ನಮ್ಮ ಹೃದಯದ ಅಂತರಾಳದಲ್ಲಿರುವ ಭಾವನೆಗಳೊಡಗೂಡಿ, ನಮ್ಮ ಶರೀರಬಲಗಳಿಂದಲೂ, ತೇಜಸ್ಸುಗಳಿಂದಲೂ, ಶರೀರಗಳನ್ನು ಪ್ರಕಾಶಿಸುವಂತೆ ಮಾಡಿಕೊಂಡು ಈ ಸ್ತೋತ್ರಗಳನ್ನು ಹೀಗೆ ಶೀಘ್ರವಾಗಿ ಪ್ರಯೋಗಮಾಡುತ್ತಿದ್ದೇವೆ. (ತ್ರಿಕರಣಗಳಲ್ಲೂ ಪ್ರಾರ್ಥಿಸುತ್ತೇವೆ) ನಮಗಾಗಿಯಲ್ಲವೇ ನೀನು ಸ್ವಧಾದೇವಿಯನ್ನನುಭವಿಸುತ್ತಾ ಅವಳಿಂದೊಡಗೂಡಿರುವುದು?".

ಇಲ್ಲೂ ಕೆಲವು ಇತರ ಕಡೆಗಳಲ್ಲೂ 'ಸ್ವಧಾ' ಎಂದರೆ ಅನ್ನ, ಬಲ, ಎಂಬ ಸಾಮಾನ್ಯಾರ್ಥಗಳನ್ನು ಆಗಾಗ ಸಾಯಣರು ಮಾಡಿದ್ದರೂ, ಅದು ಲಕ್ಷ್ಮೀ, ಶ್ರದ್ಧಾ, ಮೇಧಾ ಶಬ್ದಗಳಿಗೂ ಸಾಮಾನ್ಯಾರ್ಥ ಮಾಡಿ ಐಶ್ವರ್ಯ, ನಂಬಿಕೆಯ ಶಕ್ತಿ, ಬುದ್ಧಿಶಕ್ತಿ ಎಂದು ಕೆಳಗಿನ ಅರ್ಥವನ್ನೇ ಮಾತ್ರ ಮಾಡಿದಂತಾಗಿದೆ! ಇವೇ ಅರ್ಥಗಳನ್ನು ಎತ್ತರದಲ್ಲಿ ನಿಂತು ನೋಡಿದಾಗ, ಈ ಗುಣಗಳ, ಶಕ್ತಿಗಳ ಅಭಿಮಾನೀ ದೇವತೆಯೇ ಲಕ್ಷ್ಮಿಯೆಂಬುದನ್ನು ಕಂಡಾಗ, ನಾವು ವಿವರಿಸುವ ಅರ್ಥಗಳು ಸಿದ್ಧಿಸುವುವು.

ಉದಾಹರಣೆಗೆ (ಋ. ಸಂ I–113–13) ಮಂತ್ರಭಾಷ್ಯದಲ್ಲಿ ಸ್ವಧಾ

ಎಂದರೆ 'ತನ್ನ ಮಹಿಮೆ', 'ತನ್ನ ತೇಜಸ್ಸು', 'ತನ್ನನ್ನಾಶ್ರಯಿಸಿರುವ ಶಕ್ತಿ' ಎಂಬರ್ಥಗಳನ್ನು ಸಾಯಣರೇ ಮಾಡಿದ್ದಾರೆ. (ಇದು ಉಷಾದೇವಿಯ ವಿಷಯಕವಾದ ಸೂಕ್ತ.) ಹಾಗೇ (VIII-10-6)ರ ಭಾಷ್ಯದಲ್ಲೂ ಇದೇ ಅರ್ಥ ಮಾಡಿದ್ದಾರೆ. ಇದನ್ನು ಭಗವಂತನಿಗೆ ಅನ್ವಯಿಸಿದರೆ, 'ಅವನನ್ನಾಶ್ರಯಿಸಿರುವವಳು', 'ಅವನ ಮಹಿಮಾಸ್ವರೂಪಳು'. 'ತೇಜೋಸ್ವರೂಪಿಣಿ' ಎಂದರ್ಥವಾಗಿ, ಲಕ್ಷ್ಮೀಪರವಾಗುವುದು. ಈ ಶಬ್ದಕ್ಕೆ ಪ್ರಸಂಗೋಚಿತವಾಗಿ ಬೇರೆ ಅರ್ಥಗಳನ್ನು ಹೇಳಿರುವುದು ಕೇವಲ ಗೌಣಾರ್ಥದಲ್ಲಿ ಮಾತ್ರವೆಂದು ತಿಳಿಯಬೇಕು. ಉದಾಹರಣೆಗೆ 'ಸ್ವಧಾ'' ಎಂದರೆ ಪಿತೃಗಳಿಗೆ ಅರ್ಪಿಸುವ ಹವಿಸ್ಸು ಎಂದೂ ಅರ್ಥವಿದೆ (ದೇವತೆಗಳಿಗೆ ಅರ್ಪಿಸುವುದಕ್ಕೆ ವಷಟ್ಕಾರವೆಂದಂತೆ). ಆದರೆ 'ವಷಟ್ಕಾರ'ವು ವಿಷ್ಣುವಾಚಕವೆಂದು ಶ್ರೀವಿಷ್ಣುಸಹಸ್ರನಾಮವು ತೋರಿಸಿರುವಂತೆ ನೋಡಿದಾಗ, ಸ್ತ್ರೀಲಿಂಗದಲ್ಲಿರುವ ಸ್ವಧಾಶಬ್ದವು, ಅದೇ ನ್ಯಾಯದಲ್ಲಿ ಲಕ್ಷ್ಮೀವಾಚಕವಾಗಲು ಬಾಧಕವೇನಿಲ್ಲ. 'ಸ್ವಾಹಾ' ಶಬ್ದವೂ ಅಷ್ಟೇ. ಇವಳು ಅಗ್ನಿಪತ್ನಿ, ಅಗ್ನಾಯೀ ಎನ್ನುವಾಗ, ಅಗ್ನಿಶಬ್ದವು ಪರಮಾತ್ಮಪರವಾಗಿ, ಅದೂ ಲಕ್ಷ್ಮೀವಾಚಕವೇ ಆಗುವುದು. ಧನಿಕನು ದಾನಮಾಡುವ ಅನ್ನವನ್ನು ಸ್ವಧಾ ಎನ್ನುವುದೂ, ರಾಜನ ಸೈನ್ಯವನ್ನೇ ಸ್ವಧಾ ಎನ್ನುವುದೂ, ಮೂಲದಲ್ಲಿ ತೋರಿಸಿದ ನಿರುಕ್ತಿಯಂತೆ, ಇವು ಆ ಮನುಷ್ಯರನ್ನು ಎಡೆಬಿಡದೆ ಹಿಂಬಾಲಿಸುವುದರಿಂದ. ಆದ್ದರಿಂದ ಇವು ಆರೋಪಿತಾರ್ಥಗಳು ಮಾತ್ರ.

ಕೊನೆಯದಾಗಿ ಇನ್ನೊಂದು ಪ್ರಮಾಣವನ್ನು ನೋಡೋಣ. ಸುಪ್ರಸಿದ್ಧವಾದ ವಿಷ್ಣುಸೂಕ್ತ ಮಂತ್ರದಲ್ಲಿ (I-154-4) "ಯಸ್ಯ ತ್ರೀ ಪೂರ್ಣಾ ಮಧುನಾ ಪದಾನಿ ಅಕ್ಷೀಯಮಾಣಾ ಸ್ವಧಯಾಮದಂತಿ..." ಎಂಬಲ್ಲಿ, "ಪರಮಾತ್ಮನ ಮೂರು ಪಾದವಿಕ್ಷೇಪಗಳು ಜೇನಿನಿಂದ ತುಂಬಿ, ಕ್ಷಯಿಸದೆ, ತಮ್ಮದೇ ಸಹಜಕಾಂತಿಯಿಂದ, ತೇಜಸ್ಸಿನಿಂದ, ಮಹಿಮೆಯಿಂದ ಲೋಕದ ಜನರನ್ನು ಉನ್ಮಾದಗೊಳಿಸುತ್ತವೆ" ಎಂಬಲ್ಲಿ ಈ ಪಾದಗಳಲ್ಲಿನ ಸೊಬಗಿನಲ್ಲಿ ಋಷಿಯು ಲಕ್ಷ್ಮೀದೇವಿಯನ್ನೇ ಕಂಡಿರುವುದು ಸ್ಪಷ್ಟ!

ದೃಷ್ಟಿಸರಿಯಾಗಿದ್ದರೆ ದೇವರು ಕಂಡಲ್ಲೆಲ್ಲಾ ಲಕ್ಷ್ಮಿಯೂ ಕಾಣುತ್ತಾಳೆಂಬುದಕ್ಕೆ ಈ ಋಕ್ಕೇ ಪ್ರಮಾಣವಾಗಬಲ್ಲುದು.

# ೩ ಅದಿತಿದೇವೀ

ಅದಿತಿಯನ್ನು ಸ್ಪಷ್ಟವಾಗಿ ವಿಷ್ಣುಪತ್ನಿಯೆಂದು ತೈತ್ತಿರೀಯ ಸಂಹಿತೆಯಲ್ಲಿ (VII-5-14) ಒಂದು ಕಡೆ "ಅದಿತ್ಯೈ ವಿಷ್ಣುಪತ್ನ್ಯೈ" ಎಂದು ಹೇಳಿರುವುದರಿಂದ ಪ್ರಕೃತದಲ್ಲಿ ಈ ದೇವಿಯ ವಿಷಯಕವಾದ ಕೆಲವು ಮಂತ್ರಗಳನ್ನಾದರೂ ಇಲ್ಲಿ ಗಮನಿಸಬೇಕಾದುದು ಅವಶ್ಯ.

'ದಾ' ಧಾತುವಿಗೆ ಬಂಧಿಸು ಎಂಬರ್ಥವಿದ್ದು, ದಿತಿ ಶಬ್ದವು ಬಂಧಕಳು ಎಂದಾದಾಗ, ಅದಿತಿಯು ಬಂಧನರಹಿತಳೂ ಹಾಗೂ ಬಂಧಮೋಚಕಳಾಗುತ್ತಾಳೆ. ಅಲ್ಲದೆ ಕ್ಷಯಾರ್ಥವನ್ನು ಕೊಡುವ ದೀಙ್‌ಧಾತುವಿನಿಂದ ದಿತಿ ಶಬ್ದವನ್ನು ಗ್ರಹಿಸಿ, 'ನಾಶವಾಗುವವಳು' ಎಂದರ್ಥಮಾಡಿದರೆ, ಅದಿತಿಯು 'ಕ್ಷಯರಹಿತ'ಳಾಗುತ್ತಾಳೆ. 'ದೋ ಅವಖಂಡನೇ' ಎಂಬಂತೆ ದಿತಿ ಶಬ್ದಾರ್ಥ ಹೇಳುವಾಗ, 'ತುಂಡಾಗುವವಳು' ದಿತಿಯಾದರೆ, ಅದಿತಿಯು 'ಅಖಂಡಿತ'ಳೆನಿಸುತ್ತಾಳೆ. 'ನ ದೀನಾ ಭವತಿ' ಎಂಬಂತೆ, 'ಎಂದೆಂದೂ ದೀನಾವಸ್ಥೆಗೆ ಬರದವಳು' ಅದಿತಿ ಎಂದರೂ ಸರಿಯೇ. 'ಸಕಲ ಪ್ರಪಂಚಧಾರಕಳಾಗಿಯೂ ಕೊಂಚವೂ ವ್ಯಥೆಹೊಂದದವ'ಳೆಂದರ್ಥ. "ಶುನಶ್ಶಿಚ್ಛೇಪಂ ನಿದಿತಂ..." (ಋ. ಸಂ V-2-7) ಎಂಬಲ್ಲಿ, ನಿದಿತಂ ಎಂಬಲ್ಲಿ, ಸಾಯಣರು 'ನಿತರಾಂ ಬದ್ಧಂ' ಎಂದು ವ್ಯಾಖ್ಯಾನಿಸಿರುವುದನ್ನು ಗಮನಿಸಿದಾಗ, ದಿತಿಯು 'ಬದ್ಧ'ಳೂ, ಅದಿತಿಯೂ 'ಬಂಧರಹಿತ'ಳೂ ಆಗಬೇಕಾಗುತ್ತದೆ. ಈ ಎಲ್ಲ ಅರ್ಥಗಳೂ ವಿಷ್ಣುಪತ್ನಿಯಾದ ಲಕ್ಷ್ಮೀದೇವಿಗೆ ಸರಿಯಾಗಿ ಒಪ್ಪುತ್ತವೆ. (ಅದಿತಿ ಎಂದರೆ ಗೋವು, ಭೂಮಿ, ಕಶ್ಯಪ ಪತ್ನೀ ಇತ್ಯಾದಿ ರೂಢಿಯ ಅರ್ಥಗಳು ಇಲ್ಲಿ ಅಪ್ರಕೃತ. ಮೂಲಾರ್ಥಮಾತ್ರ ಇಲ್ಲಿ ಗಮನೀಯ.) ಉದಾಹರಣೆಗೆ :

ಸಮಿಧಾ ಯೋ ನಿಶಿತೀ ದಾಶದದಿತಿಂ ಧಾಮಭಿ ರಸ್ಯ
ಮರ್ತ್ಯಃ ।
ವಿಶ್ವೇತ್ಸ ಧೀಭಿಃ ಸುಭಗೋ ಜನಾಂಅತಿದ್ಯುಮ್ನೈಃ ಉದ್ನ
ಇವ ತಾರಿಷತ್ ॥ (VIII-9-14)

ಎಂಬಲ್ಲಿ "ಯಾವನು ಅಗ್ನಿಶರೀರಗಳಾದ ಗಾರ್ಹಪತ್ಯಾದಿ ಅಗ್ನಿರೂಪಗಳಿಂದ ಅಖಂಡನೀಯಳಾದ ಅದಿತಿಯನ್ನು ಪ್ರಜ್ವಲಿಸಲು ಸಾಧನವಾದ ಸಮಿತ್ತುಗಳಿಂದ ಪರಿಚರ್ಯೆ ಮಾಡುತ್ತಾನೋ, ಅವನು ವಿಶೇಷ ಬುದ್ಧಿಶಾಲಿಯಾಗಿ, ಧನಧಾನ್ಯವಂತನಾಗಿ, ದಾನಿಯಾಗಿ, ಸಮುದ್ರವನ್ನು (ನದಿಯನ್ನು) ದಾಟದವನಾಗುತ್ತಾನೆ" ಎಂದು ಹೇಳಿರುವುದರಿಂದ, ಅದಿತಿಯು ಐಶ್ವರ್ಯದಾತಳೆಂದೂ, ಮೋಕ್ಷಪ್ರದಳೆಂದೂ ವೇದ್ಯವಾಗುತ್ತದೆ. (ಇದೇ ಸಂಪುಟದಲ್ಲಿ ಪು ೩೦೬–೭ನ್ನು ನೋಡಿರಿ.)

## ಅಥರ್ವವೇದೀಯ ಅದಿತಿಸೂಕ್ತ

ಈ ಸುಪ್ರಸಿದ್ಧವಾದ ಈ ಕೆಳಗಿನ ಮಂತ್ರವನ್ನು ಗಮನಿಸಿ, ಅದಿತಿ ಸ್ವರೂಪವನ್ನು ಅರಿಯೋಣ. (ಈ ಮಂತ್ರವು ಪ್ರಕೃತ ಅಥರ್ವವೇದದಲ್ಲಿ ಹೇಳಲ್ಪಟ್ಟಿರುವುದಕ್ಕೆ . ವಿನಿಯೋಗವನ್ನು. ನದೀ, ಸಮುದ್ರಾದಿಗಳನ್ನು ಧಾಟುವಾಗ ಪಠಿಸುವುದಕ್ಕೆಂದು ಹೇಳಿದ್ದರೂ, ಮಂತ್ರದ ಮೂಲೋದ್ದೇಶ್ಯ ಅದಿರುವಂತೆ ಕಾಣುವುದಿಲ್ಲ. ನಮಗೆ ಮಂತ್ರದ ಮೂಲಸ್ವರೂಪ ತಿಳಿದ ಮೇಲೆ, ಯಾವ 'ನದಿ'ಯನ್ನು ದಾಟಲು ಯಾವ 'ನಾವೆ' ಇಲ್ಲಿ ಹೇಳಲ್ಪಟ್ಟಿದ್ದು ಉಪಯುಕ್ತವೆಂಬುದು ಸಾಂಕೇತಿಕಾರ್ಥದಲ್ಲಿ ತಿಳಿಯಲು ಶಕ್ಯ. ಈ ಸೂಕ್ತದ ಒಂದೊಂದು ಮಂತ್ರಕ್ಕೂ ಹೀಗೆಯೇ ಅಶ್ವಯಾನಕ್ಕೂ, ಸೋಮಯಾಗ ದೀಕ್ಷಿತನು ಕೃಷ್ಣಾಜಿನಸ್ಥನಾಗಿ ಕುಳಿತು ಹೇಳಲಿಕ್ಕೂ ವಿನಿಯೋಗ ಹೇಳಿದೆ.

ಆದರೆ ಈ ಮಂತ್ರಗಳೂ ಬೇರೆ ವೇದಭಾಗಗಳಲ್ಲೂ ಬರುವುದರಿಂದ, ವಿನಿಯೋಗವೇನೇ ಇದ್ದರೂ ಅದಕ್ಕೆ ಮೀರಿದ ಅರ್ಥವಿಶೇಷವು ಇಲ್ಲಿರುವುದು ವ್ಯಕ್ತ.)

ಅದಿತಿ ರ್ದ್ಯೌರದಿತಿ ರಂತರಿಕ್ಷಂ ಅದಿತಿರ್ಮಾತಾ ಸ ಪಿತಾ ಸಪುತ್ರಃ ।
ವಿಶ್ವೇ ದೇವಾ ಅದಿತಿಃ ಪಂಚಜನಾ ಅದಿತಿರ್ಜಾತಂ ಅದಿತಿ ರ್ಜನಿತ್ವಂ ॥೧॥

(ಅಥರ್ವಸಂಹಿತೆ. VII-6-1) ಮತ್ತು (ಋ. ಸಂ. I-89-10.)

ಅರ್ಥ : ಅದಿತಿಯು ದ್ಯುಲೋಕವಾಗಿದ್ದಾಳೆ; ಅವಳೇ ಅಂತರಿಕ್ಷ; ಅದಿತಿಯೇ ತಾಯಿ, ತಂದೆ; ಅವಳೇ ಪುಗ; ಎಲ್ಲ ದೇವತೆಗಳೂ ಅದಿತಿಯೇ. ಪಂಚವಿಧ ಜನರೂ, ಹಿಂದೆ ಹುಟ್ಟಿದ್ದೆಲ್ಲವೂ, ಮುಂದೆ ಹುಟ್ಟತಕ್ಕದ್ದೆಲ್ಲವೂ ಅದಿತಿಯೇ."

ವಿವರಣೆ : ಬ್ರಹ್ಮಜ್ಞಾನಿಯ ಅನುಭವದ ದಿವ್ಯಲೋಕಗಳನ್ನು ಕುರಿತು ಹೇಳುವ ಭಾಷೆಯಲ್ಲಿ, ದ್ಯೌಃ, ಅಂತರಿಕ್ಷಂ ಎಂಬ ಎರಡನ್ನು ಹೇಳುವಾಗ, ಪರಿಶುದ್ಧ ಮನಸ್ಸು ವಿಹರಿಸಬಲ್ಲ ಅತಿ ಎತ್ತರದ ಅನುಭವ ಲೋಕವೇ ದ್ಯುಲೋಕವೆಂದು ವ್ಯವಹರಿಸಲ್ಪಡುವುದು. ಕೊಂಚ ಕೆಳಗಿನ (ಮಧ್ಯಮ) ಅನುಭವ ಲೋಕವು ಅಂತರಿಕ್ಷವೆನಿಸುವುದು. ದೇವಮಾತೆಯಾದ ಅದಿತಿಯು ಬ್ರಹ್ಮಜ್ಞಾನಿಯ ಪಾಲಿಗೆ ಈ ಎರಡೂ ಲೋಕಗಳ ಸ್ಥಾನದಲ್ಲಿರುತ್ತಾಳೆ. ಔಪಾಧಿಕ ಸಂಬಂಧದ ತಂದೆ ತಾಯಿಗಳಂತಲ್ಲದೆ, ಸರ್ವಜಗನ್ಮಾತೆಯಾಗಿರುವುದು ಮಾತ್ರವಲ್ಲದೆ, ದೇವರನ್ನು ಕಂಡರೆ ಹೆದರುವ ಅನೇಕ ಭಕ್ತರಿಗೆ ಅವಳು ತಂದೆಯ ಸ್ಥಾನದಲ್ಲೂ ಇರುತ್ತಾಳೆ. ನಿಯಾಮಕತ್ವ, ರಕ್ಷಕತ್ವ, ಶಾಸಕತ್ವಾದಿಗಳು ತಂದೆಯ ಗುಣವಾದರೆ, ವಾತ್ಸಲ್ಯ, ದಯೆ, ಮಾರ್ದವ, ಕ್ಷಮೆ ಮೊದಲಾದುವು ತಾಯಿಯ ಗುಣವಾಗಿರುತ್ತವೆ. ಅದಿತಿಗೆ ಈ ಎರಡೂ ಬಗೆಯ ಗುಣಗಳುಂಟೆಂದು ಭಾವ. ಎಲ್ಲ ದೇವತೆಗಳೂ ಅವಳೇ ಎಂದರೆ, ಇವಳಂಶವಿಲ್ಲದ ಯಾವ ದೇವತೆಯೂ ಇಲ್ಲವೆಂದರ್ಥ. ಅಷ್ಟು

ವ್ಯಾಪಕಳು ಆವಳು. ಭಗವಂತನು ಸರ್ವದೇವತಾತ್ಮಕನೆಂದಮೇಲೆ, ವಿಷ್ಣು ಪತ್ನಿಗೂ ಈ ಗುಣವಿರಬೇಕಲ್ಲವೇ ? ಎಲ್ಲ ಪುತ್ರಪ್ರಾಯರಾದ ದೇವ ಮನುಷ್ಯಾದಿ ಜೀವರಲ್ಲೂ ಇವಳ ನಿತ್ಯವಾಸ, ನಿತ್ಯಕಟಾಕ್ಷವಿರುವುದರಿಂದ ಎಲ್ಲ ಪುತ್ರರೂ ಆವಳೇ ಎಂದು ಈ ಅರ್ಥದಲ್ಲಿ ಹೇಳಬಹುದು. ನಾಲ್ಕು ವರ್ಣದವರೂ ನಿಷಾದರೂ ಸೇರಿ ಐದು ಬಗೆಯ ಜನರಲ್ಲೆಲ್ಲಾ ಇವಳಂಶ ಇದ್ದೇ ಇದೆಯಾಗಿ, ಪಂಚಜನರೊಡನೆಯೂ ಇವಳಿಗೆ ತಾದಾತ್ಮ್ಯ ಹೇಳಿದೆ. ಅದಿತಿಯು ಪ್ರಕೃತಿತತ್ತ್ವಕ್ಕೂ ಅಭಿಮಾನಿದೇವತೆಯಾದುದರಿಂದ ಜಾತವಾದ, ಜನಿಷ್ಯಮಾಣವಾದ ಎಲ್ಲ ಭೂತರಾಶಿಗಳಲ್ಲೂ ಆವಳ ಅನುಪ್ರವೇಶವಿದ್ದೇ ಇದೆ. ಎಂದರೆ ಶ್ರೀಮಹಾವಿಷ್ಣುವಿನಂತೆಯೇ ಇವಳೂ ಸರ್ವಗತಳು, ಸರ್ವ ವ್ಯಾಪಕಳು, ಎಂದಮೇಲೆ ಪರ್ಯಾಯವಾಗಿ ಲಕ್ಷ್ಮೀದೇವಿಯನ್ನೇ ಇಲ್ಲಿ ವರ್ಣಿಸಿದಂತಾಗಿದೆ. (ಪಂಚಜನರೆಂದರೆ, ಗಂಧರ್ವ, ಪಿತೃ, ದೇವ ಆಸುರ, ರಾಕ್ಷಸರೆಂದು ಹೇಳುವುದೂ ಉಂಟು)

## ದಾರಿತೋರುವ ಮಹಾತಾಯಿ

ಮಹೀಮೂಷು ಮಾತರಂ ಸುವ್ರತಾನಾಮೃತಸ್ಯ ಪತ್ನೀಮವಸೇ
ಹವಾಮಹೇ ।
ತುವಿಕ್ಷತ್ರಾಂ ಅಜರನ್ತೀಂ ಉರೂಚೀಂ ಸುಶರ್ಮಾಣಂ
ಅದಿತಿಂ ಸುಪ್ರಣೀತಿಂ ॥೨॥

(ತೈ. ಸಂ. ಮೊದಲಕಾಂಡದಲ್ಲೂ ಈ ಮತ್ತು ಮುಂದಿನ ಮಂತ್ರಗಳು ಬರುತ್ತವೆ.)

ಅರ್ಥ : "ಶೋಭನ ಕರ್ಮಗಳನ್ನು ಆಚರಿಸುವವರಿಗೆ ತಾಯಿಯೂ, ಋತ ಸತ್ಯಸ್ವರೂಪನಾದ ಭಗವಂತನಿಗೆ ಪತ್ನಿಯೂ, ಬಹುಬಲವನ್ನೂ, ಬಹುಧನ ವನ್ನೂ ಉಳ್ಳವಳೂ, ಅವಿನಾಶಿನಿಯೂ, (ಕಾಲವಶಳಲ್ಲದವಳೂ), ಎಲ್ಲ

ವನ್ನೂ ವ್ಯಾಪಿಸಿರುವವಳೂ, (ಅಥವಾ ಬಹುಪ್ರಕಾರ ಗತಿಯನ್ನು ಹೊಂದಿ, ಅತಿದೂರ ಸಂಚರಿಸಬಲ್ಲವಳೂ, ಸುಸುಖ ಸ್ವರೂಪಳೂ, ಅಥವಾ ಸುಖಾಶ್ರಯಳೂ, ಸುಲಭ ಆಶ್ರಯಣೀಯಳೂ ಭಕ್ತರನ್ನು ಸುಖವಾಗಿ ಮುಂದೆ ನಡೆಸುವವಳೂ ಆದ ಅದಿತಿಯನ್ನು ಕರೆಯುತ್ತೇನೆ."

ವಿವರಣೆ : ಸುವ್ರತವೆಂದರೆ ಆತ್ಮತ್ಯಾಗರೂಪ ಯಜ್ಞಾಚರಣೆ, (ಶುಷ್ಕಕ್ರಿಯಾವಿಧಿಯಲ್ಲ; ಅದರ ಅರ್ಥರೂಪ ಜೀವ ನಾನು ಸಂಧಾನವೇ ಯಜ್ಞ.) ಇದನ್ನು ನಡೆಸುವವರಿಗೆಲ್ಲ ಅದಿತಿಯು ಮಹಾ ತಾಯಾಗಿರುವಳು. ಇದರ ಪ್ರೇರಕಳೂ ಅವಳೇ, ಪಾಲಕಳೂ ಅವಳೇ. (ಮಾತಾ = ತಾಯಿ; 'ನಿರ್ಮಾತಾ' ಎಂಬರ್ಥದಲ್ಲಿ 'ಮಾತಾ' ಎಂದರೆ, ಯಜ್ಞಗಳಿಗೆ ಅವಳೇ ಪ್ರಚೋದಕಳೆಂದೂ ಹಿರಿಯರು ಅರ್ಥಮಾಡಿದ್ದಾರೆ. ತ್ಯಾಗಾತ್ಮಕ ಜೀವನಸಂಸ್ಥೆಗಳೆಲ್ಲ ಇವಳಿಂದಲೇ ನಿರ್ಮಿಸಲ್ಪಟ್ಟವೆಂದರೂ ಸರಿಯೇ.

'ಋತಕ್ಕೆ ಪತ್ನಿ'ಯೆಂದರೆ, ಋತಶಬ್ದವು ಸರ್ವನಿಯಾಮಕನಾದ ಭಗವಂತನಿಗೆ ವಾಚಕವಾಗಿದ್ದು, ಅವನ ಮಹಿಷೀ ಈ ಅದಿತಿ. ಸುಪ್ರಸಿದ್ಧವಾದ "ಹಗ್ಂಸಃ ಶುಚಿಷತ್‌ವಸು ರನ್ತರಿಕ್ಷ...." (ತೈ. ನಾ. ಮತ್ತು ಶ್ವೇತಾಶ್ವತರ.) ಎಂಬ ಮಂತ್ರವು ಭಗವಂತನನ್ನು 'ಋತಂ ಬೃಹತ್' ಎಂದೇ ಕರೆದಿರುವುದು ಸ್ಮರಣೀಯ. ಸೃಷ್ಟ್ಯುನ್ಮುಖನಾದ ಭಗವಂತನಿಗೆ ಇದು ವಿಶೇಷ ವಾಚಕ. ಈ ಕಾರ್ಯದಲ್ಲಿ ಅವನ ಸಹಧರ್ಮಿಣಿಯಾದ ಲಕ್ಷ್ಮಿಯ ರೂಪವೇ ಅದಿತಿ. ಇವಳಿಗೂ ಅನ್ಯೋನ್ಯ ಸತ್ತಾಕಾರಕ ನಿಯಾಮು. ಸಂಬಂಧವಿದ್ದೆ, ಅದಕ್ಕೇ ಇವಳು ವಿಷ್ಣುಶಕ್ತಿ.

ತುವಿಕ್ಷತ್ರಾಂ —ಬಹುಬಲಾಂ, ಎಂದರೆ ಭಗವಂತನ ಶಕ್ತಿಸ್ವರೂಪಿಣಿಗೆ ಎಂಥ ಬಲವುಂಟೆಂಬುದನ್ನು ಇದು ತೋರಿಸುತ್ತದೆ. (ಇದರ ವಿವರವನ್ನು ಮುಂದಿನ ವಾಗಾಂಭೃಣೀ ಸೂಕ್ತದಲ್ಲಿ ನೋಡೋಣ).

ಅಜರನ್ತೀಂ — ಜರೆಯಿಲ್ಲದ್ದರಿಂದ, ನಿತ್ಯಯೌವ್ವನಶಾಲಿಯಾಗಿದ್ದಾಳೆ. "ಚೈತನ್ಯಸ್ತನ್ಯದಾಯಿನೀಂ" ಎಂದು ಪೂರ್ವಿಕರು ಕೊಂಡಾಡಿರುವಂತೆ, ಎಲ್ಲರಿಗೂ ಚೈತನ್ಯ ಕೊಡುವ ಈ ದಿವ್ಯ ಚೈತನ್ಯಕ್ಕೆ ಮುಪ್ಪೆಲ್ಲಿ !

ದೇಶಕಾಲಾವಚ್ಛಿನ್ನಳಲ್ಲವಾದ್ದರಿಂದ ಇವಳ ವ್ಯಾಪಿತ್ವ, ಗಮನಶಕ್ತಿ ನಿರಾಬಾಧವಾಗಿಯೆಂದು ಉರೂಚೀಂ (ಅತಿದೂರಂ ಗಚ್ಛಂತೀಂ—ಸಾಯಣ ಭಾಷ್ಯ), ಎಂಬ ವಿಶೇಷಣ ಹೇಳುತ್ತದೆ.

ಪ್ರಣೀತಿಂ ಎಂದರೆ, ಸುಖವಾಗಿ ಕರ್ಮಗಳಿಗೆ ದಾರಿದೋರುವವಳು ಸುಶರ್ಮಾಣಂ ಎಂದರೆ ಸುಖ ಶಾಂತಿ ಸ್ವರೂಪಳಾಗಿರುವವಳು.

ದೋಣಿಯಿಂದ ನದಿಯನ್ನು ದಾಟುವಾಗ ಈ ಮಂತ್ರವನ್ನು ಹೇಳಲು ಕಾರಣ, ಉತ್ತಮವಾದ ದೋಣಿಯಲ್ಲಿ ಈ ಎಲ್ಲ ಗುಣಗಳೂ ಇರಬೇಕಾಗಿ, ದಡಸೇರಿಸುವುದಾದ್ದರಿಂದ ವಿಶಾಲ ಸಂಕೇತಾರ್ಥದಲ್ಲಿ ನೋಡಿದರೆ, 'ಸಂಸಾರಾರ್ಣವತಾರಿಣೀಂ' ಎಂಬಂತೆ, ಸಂಸಾರನದಿ. ಸಮುದ್ರವನ್ನು ದಾಟಿಸಲು ಈ ದೇವಿಯು ನಮ್ಮ ಪಾಲಿಗೆ ಉತ್ತಮ ನಾವೆಯಂತಿದ್ದಾಳೆಂಬ ಅವಳ ಸರ್ವ, ಸುಲಭ, ಸಮಾಶ್ರಯಣೀಯತ್ತ್ವವು ಇಲ್ಲಿ ಕೊಂಡಾಡಲ್ಪಡುತ್ತದೆ.

## ಸಂಸಾರನದಿಯನ್ನು ದಾಟಿಸುವ ದೋಣಿ

ಸುತ್ರಾಮಾಣಂ ಪೃಥಿವೀಂ ದ್ಯಾಮನೇಹಸಂ
ಸುಶರ್ಮಾಣಮದಿತಿಂ ಸುಪ್ರಣೀತಿಂ ।
ದೈವೀಂ ನಾವಂ ಸ್ವರಿತ್ರಾಂ ಅನಾಗಸೋ (ಸಂ)
ಅಸ್ರವಂತೀಮಾರುಹೇಮಾ ಸ್ವಸ್ತಯೇ ॥ ೩ ॥

ಅರ್ಥ : ಚೆನ್ನಾಗಿ ರಕ್ಷಿಸುವುದೂ, ವಿಶಾಲವಾಗಿ ಹರಡಿಕೊಂಡಿರುವುದೂ, ಪಾಪರಹಿತವಾದುದ್ದೂ, ಪ್ರಕಾಶಯುಕ್ತವಾದದ್ದೂ, ಸುಖಶಾಂತಿದಾಯಕವಾದದ್ದೂ. ದಾರಿತೋರತಕ್ಕದ್ದೂ ಆದ ಅದಿತಿಯೆಂಬ ಈ ದೈವೀನಾವೆಯನ್ನು ಹತ್ತಿಕೊಳ್ಳೋಣ, (ಆಶ್ರಯಿಸೋಣ) ಏಕೆಂದರೆ, ಇದು ತೂತು

ಬೀಳದ ದೋಣಿ ಮತ್ತು ನೀರನ್ನು ತಳ್ಳಿ ಮುಂದೆ ನಡೆಸುವ ಒಳ್ಳೆಯ ಹುಟ್ಟುಗಳನ್ನು ಹೊಂದಿರುವುದು. ನಾವು ಅಪರಾಧ ಮಾಡದೆ ಇದನ್ನು ಹತ್ತೋಣ. ನಮಗೆ ಒಳ್ಳೆಯದಾಗಲಿ.

ವಿವರಣೆ : ಇಲ್ಲಿ ದೇವಿಯ ಸವಾಶ್ರಯಣೀಯತ್ತ್ವಕ್ಕೆ ದೀಪಬೆಳಗಿದಂತಿದೆ. ಭಕ್ತರಕ್ಷಣೆಯಲ್ಲಿ ಆವಳು ಸಮರ್ಥಳೆಂಬುದನ್ನು, "ತಾನೇ ಮುಳುಗದ, ತೂತು ಬೀಳದ ದೋಣಿ ಇದು" ಎಂಬ ರೂಪಕ ತೋರಿಸುತ್ತದೆ. ಚೆನ್ನಾಗಿ ರಕ್ಷಿಸಬಲ್ಲ ತ್ರಾಣವುಳ್ಳವಳೂ, ಸರ್ವಾಶ್ರಯಕ್ಕೆ ಯೋಗ್ಯವಾಗಿ ವಿಸ್ತಾರವಾಗಿರುವುದೂ, ಎಂಬ ( ದೋಣಿಯ ) ವಿಶೇಷಣಗಳು ಈಕೆಯ ರಕ್ಷಕತ್ತ್ವವು ಚ್ಯುತಿಯಿಲ್ಲದ್ದೆಂದು ತೋರಿಸುತ್ತವೆ. ಪಾಪಸ್ಪರ್ಶವಿಲ್ಲದ ಇವಳ ಸ್ವಭಾವ (ಅನೇಹಸಂ) ಅಪಹತಪಾಪ್ಮನಾದ ಭಗವಂತನ ಸ್ವಭಾವಕ್ಕೆ ಸರಿ ಹೊಂದುತ್ತದೆ. ಇಂಥವಳನ್ನು ನಿಷ್ಪಾಪಬುದ್ಧಿಯಿಂದ ಆಶ್ರಯಿಸಬೇಕೆಂಬುದನ್ನು ಸಾಧಕನ ವಿಶೇಷಣವಾದ " ಅನಾಗಸಃ " ತಿಳಿಸುತ್ತದೆ. ಹೀಗೆ ಆಶ್ರಯಿಸುವುದರಿಂದ ಪರಮಮಂಗಳಕರವಾದ ಪದವಿಯು ( ಮೋಕ್ಷವು ) ಪ್ರಾಪ್ತವಾಗುವುದೆಂಬುದನ್ನು "ಸ್ವಸ್ತಯೇ" ಎಂಬ ಕಾರಣವಾಚೀ ಶಬ್ದವು ತಿಳಿಸುತ್ತದೆ.

## ಮೂರು ಲೋಕಕ್ಕೂ ಸುಖ, ಶಾಂತಿ, ಆನಂದ ಕೊಡುವವಳು

ವಾಜಸ್ಯನು ಪ್ರಸವೇ ಮಾತರಂ
ಮಹೀಮದಿತಿಂ ನಾಮ ವಚಸಾ ಕರಾಮಹೇ ।
ಯಸ್ಯಾ ಉಪಸ್ಥ ಉರ್ವಂತರಿಕ್ಷಂ
ಸಾನಃ ಶರ್ಮ ತ್ರಿವರೂಥಂ ನಿ ಯಚ್ಛಾತ್ ॥

(ಅಥರ್ವ, VII-6-4)

ಅರ್ಥ : ಅನ್ನಾದಿ ಸಮೃದ್ಧಿಗಾಗಿ ಮಹಾತಾಯಿಯಾದ ಅದಿತಿಯನು ವಾಕ್ಕಿನಿಂದ ಸ್ತೋತ್ರ ಮಾಡುತ್ತೇವೆ. ಈ ಅದಿತಿದೇವಿಯ ಉಡಿಯಲ್ಲಿ ವಿಸ್ತಾರವಾದ ಅಂತರಿಕ್ಷವು ನಿಂತಿದೆ. (ಆಶ್ರಯಿಸಿದೆ.) ಇಂಥ ಮಹಿಮಾನ್ವಿತಳು ನಮಗೆ ಮೂರು ಲೋಕಗಳ (ಮೂರು ಭೂಮಿಕೆಗಳನ್ನುಳ್ಳ, ಮೂರು ಅಂತಸ್ತುಗಳನ್ನುಳ್ಳ) ಶಾಂತಿಯನ್ನು ಅಥವಾ ನೆಲೆ, ವಾಸಸ್ಥಾನವನ್ನು ದಯಪಾಲಿಸಲಿ.

ವಿವರಣೆ : 'ವಾಜ'ವೆಂದರೆ ಸಾಯಣಾದಿಭಾಷ್ಯಕಾರರು 'ಅನ್ನ'ವೆಂದೇ ಸಾಮಾನ್ಯವಾಗಿ ಅರ್ಥೈಸಿದ್ದಾರೆ. ಈ ಅನ್ನವು ಭೌತಿಕವೇ ಆಗಬೇಕಿಲ್ಲ ! ಆಧ್ಯಾತ್ಮಿಕವೂ, ಮಾನಸಿಕವೂ, ಸೌಂದರ್ಯಾತ್ಮಕವೂ ಆಗಬಲ್ಲುದು. ಪಶು, ಪುತ್ರ, ಕಳತ್ರ ಮುಂತಾದವೂ 'ವಾಜ'ವೇ. ವಿಶಾಲಾರ್ಥದಲ್ಲಿ ಶಾಂತಿ, ಸುಖ, ಸಮೃದ್ಧಿಗಳೂ 'ವಾಜ' ದರೂಪಾಂತರವೇ ಇದನ್ನೆಲ್ಲ ಅದಿತಿಯು ಅನುಗ್ರಹಿಸಬಲ್ಲಳೆಂದರೆ ಶ್ರೀಸೂಕ್ತದಲ್ಲಿ ಉಕ್ತವಾದದ್ದನ್ನೆಲ್ಲ ಇಲ್ಲಿ ಹೇಳಿದಂತಾಗುವುದು ! ಭಕ್ತನ ಮನಸ್ಸಿನ ವಿಕಾಸ, ಬುದ್ಧಿಶಕ್ತಿಯ ಚುರುಕುತನ ಆಧ್ಯಾತ್ಮ ಸತ್ಯಗಳ ಸಾಕ್ಷಾತ್ಕಾರಕ್ಕೆ ಬೇಕಾದ ಬಲ, ಧೈರ್ಯ. ಆ ಸಂಪತ್ತನ್ನು ಧರಿಸಲು ಬೇಕಾದ ದಾರ್ಢ್ಯ ಇವೆಲ್ಲ 'ವಾಜ'ದ ವಿಶಾಲಾರ್ಥಗಳು 'ಶ್ರದ್ಧಾ' ದೇವಿಯ ರೂಪದಲ್ಲಿ ಇವನ್ನೆಲ್ಲ ನಚಿಕೇತನಿಗೆ ಅವಳು ಕೊಟ್ಟಿದ್ದರಿಂದ ಆ ಬಾಲಕ ಧೀರನಾಗಿ, ಜ್ಞಾನಲಕ್ಷ್ಮೀ ಪುತ್ರನಾದ! ತಂದೆಗೆ ಸಿಗದೆ, ವಿಡಂಬನೆಯ ಮಟ್ಟದಲ್ಲಿ ನಿಂತಿದ್ದ 'ವಾಜ' (ವಾಜಶ್ರವಸ್ !), ಮಗನಿಗೆ ಹೀಗೆ ದೊರಕಿದ್ದು ಲಕ್ಷ್ಮೀಕಟಾಕ್ಷದಿಂದ ಮಾತ್ರ. ದೈವೀ ಜ್ಞಾನಭಂಡಾರವು, ಆನಂದವು, 'ವಾಜ'ವಾಗುವುದೇ ಹೀಗೆ. ಇದು ಅದಿತಿಯ ಕೊಡುಗೆ.

ಅವಳು ಕೊಡುಗೈಯಾದರೆ ಸಾಲದು. ನಾವೂ ಸತ್ಪಾತ್ರರಾಗಬೇಕು. ವಾಕ್ಕಿನ ಶುದ್ಧಿಯಿಂದ, ನಿರ್ಮಲಾಂತಃಕರಣದಿಂದ ಪ್ರಾರ್ಥಿಸಬೇಕು.

ಎತ್ತರದ ಅಧ್ಯಾತ್ಮ ಜೀವನದ ಗುಟ್ಟಿರುವುದು 'ಅಂತರಿಕ್ಷ' ಶಬ್ದವಾಚ್ಯವಾದ, ಸಾಂಕೇತಿಕ, ಅಗೋಚರ, ಅಗಮ್ಯ, ಸುದೂರವಾದ ಲೋಕ

ದಲ್ಲಿ ಈ ಪ್ರಪಂಚವು ಅದಿತಿಯ ಉಡಿಯಲ್ಲೇ ಇದೆ. ಅದು ಬರಿಯ ಮಡಿಲಲ್ಲ; ದಾನವಸ್ತುಪೂರ್ಣವಾದದ್ದು.

ಸಾಧಕನು ಪ್ರಾರ್ಥಿಸುವುದು "ಶರ್ಮತ್ರಿವರೂಥ"ಕ್ಕಾಗಿ! ಶರೀರ, ಪ್ರಾಣ, ಮನಸ್ಸು ಎಂಬುವೇ ಮಾನವನ ವ್ಯಕ್ತಿತ್ವದ ಮೂರು ಮಹಲುಗಳು; ಅಂತಸ್ತುಗಳು. ಈ ಮೂರರಲ್ಲೂ ಶಾಂತಿ, ಸುಖ, ಆನಂದಗಳು ಅವನಿಗೆ ದೊರೆಯುವುದು ಈ ದೇವಿಯ ಕೃಪೆಯಿಂದ ಮಾತ್ರ. ರೋಗ, ಕ್ಷೀಣತೆ, ಮೃತ್ಯುಗಳು ಅವನ್ನು ದೊರೆಯದಂತೆ ಮಾಡುತ್ತಿರುವ ಶತ್ರುಗಳು. ಇಲ್ಲಿ ಅದಿತಿಯ ರಕ್ಷಣೆ ಬೇಕೇ ಬೇಕು. ಹೀಗೆ ಸರ್ವತೋಮುಖ ರಕ್ಷಣೆಯನ್ನು ಮಾಡುತ್ತಿರುವುದರಿಂದಲೇ ಇವಳು ತಾಯ್ತನದ ಪೂರ್ಣ ಲಕ್ಷಣಗಳನ್ನೆಲ್ಲ ಹೊಂದಿದ್ದಾಳೆಂಬುದು ಸುವ್ಯಕ್ತ.

## ಅದಿತಿಯ ಉಳಿದ ವಿಶೇಷಣಗಳು

ಜಮದಗ್ನಿ ಋಷಿ ದೃಷ್ಟವಾದ ಋಙ್ಮಂತ್ರವೊಂದು ಅದಿತಿಯನ್ನು ರುದ್ರರ ಮಾತೆಯೆಂದೂ, ವಸುಗಳ ಪುತ್ರಿಯೆಂದೂ, ಆದಿತ್ಯರ ಸೋದರಿಯೆಂದೂ, ಅವಳು ಅಮೃತದ ನಾಭಿಯೆಂದೂ ವರ್ಣಿಸಿ, ಬುದ್ಧಿವಂತರಾದ ಜನರಿಗೆ ಋಷಿಯು ಘೋಷಿಸುವುದೇನೆಂದರೆ, "ನಿರ್ದೋಷಳಾದ ಈ ಗೋಸ್ವರೂಪಿಣಿ ಅದಿತಿಯನ್ನು ಕೊಲ್ಲಬೇಡಿ, ಹಿಂಸಿಸಬೇಡಿ" ಎನ್ನುತ್ತದೆ. ಇದು ಬಹು ಮಾರ್ಮಿಕವಾದ ಮಂತ್ರ.

ಮಾತಾ ರುದ್ರಾಣಾಂ ದುಹಿತಾ ವಸೂನಾಂ
ಸ್ವಸಾದಿತ್ಯಾನಾಂ ಅಮೃತಸ್ಯ ನಾಭಿಃ ।
ಪ್ರ ನು ವೋಚಂ ಚಿಕಿತುಷೇ
ಮಾ ಗಾಂ ಅನಾಗಾಂ ಅದಿತಿಂ ವಧಿಷ್ಟ ॥

(V.II-101-15)

ಜಮದಗ್ನಿಗಳು ಕಾಮಧೇನುವನ್ನು ಆಶ್ರಮದಲ್ಲಿ ಸಂರಕ್ಷಿಸುತ್ತಿದ್ದರೆಂದೂ, ಗೋಪ್ರೇಮಿಗಳಾದ ಅವರು ಜಗತ್ತಿಗೆ ಹೀಗೊಂದು ಸಂದೇಶ ನೀಡಿ, "ನಿರ್ದೋಷಳಾದ ಗೋಮಾತೆಯನ್ನು ಹಿಂಸಿಸಬೇಡಿ" ಎಂದು ಹೇಳಿರುವುದಷ್ಟನ್ನೇ ಸಾಮಾನ್ಯರು ಇಲ್ಲಿ ಕಂಡಾರು !

ಜಮದಗ್ನಿಗಳು ಭೃಗುವಂಶಸಂಭೂತರು. ಇವರ ವಂಶದಲ್ಲಿಯೇ ಲಕ್ಷ್ಮೀದೇವಿಯು ಅವತಾರ ಮಾಡಿದಳೆಂಬ ಕಥೆಯನ್ನು ಪುರಾಣಗಳು ಹೇಳುತ್ತವೆ. ಶುಕ್ರಾಚಾರ್ಯರೂ ಇದೇ ವಂಶದವರೇ. ಶುಕ್ರವಾರಕ್ಕೂ ಲಕ್ಷ್ಮೀಪೂಜೆಗೂ ಇಂದಿಗೂ ಈ ರೀತಿ ಸಂಬಂಧವಿರುವುದನ್ನು ಎಲ್ಲರೂ ಬಲ್ಲರು. ಜಮದಗ್ನಿಗಳು ಉಪಾಸಿಸುತ್ತಿದ್ದ 'ಗೋ'ವು, ಅವರ 'ಅದಿತಿ', ಯಾರೆಂಬ ಪ್ರಶ್ನೆಗೆ ಇಲ್ಲಿ ಮಾರ್ಮಿಕ ಉತ್ತರವಿರುವಂತಿದೆ. ಲಕ್ಷ್ಮೀದೇವಿಗಿಂತ ಇಷ್ಟಾರ್ಥವರ್ಷಕಳಾದ ಬೇರೊಂದು ಕಾಮಧೇನು ಇರಬಲ್ಲದೆ ? ಮೇಲ್ನೋಟಕ್ಕೆ 'ಗೋ'ವೆಂದು ಕರೆಯಲ್ಪಟ್ಟವಳು, ಮಾರ್ಮಿಕಾರ್ಥದಲ್ಲಿ ಲಕ್ಷ್ಮೀದೇವಿಯೇ ಆದಾಳು.

## ಜಮದಗ್ನಿಗಳ ಉಪಾಸ್ಯ ದೇವತೆ

ಆದರೆ ಇಲ್ಲಿನ ವಿಶೇಷಣಗಳು ಅವಳಿಗೆ ಹೇಗೆ ಹೊಂದಿವೆಯೆಂದರೆ, ಪರಿಶೀಲಿಸೋಣ. ಮೊದಲನೆಯದಾಗಿ ರುದ್ರರಿಗೆ ಇವಳು ತಾಯಿಯೆಂದರೇನು? ಈ ರುದ್ರರು ಯಾರು? ಅಷ್ಟವಸುಗಳಿಗೂ, ಏಕಾದಶರುದ್ರರಿಗೂ ದ್ವಾದಶಾದಿತ್ಯರಿಗೂ ಇವಳಿಗೂ ಹೇಗೆ ಸಂಬಂಧ ? ನೋಡೋಣ.

ಸಪ್ತಮರುತ್ತುಗಳಿಗೂ ವೇದದಲ್ಲಿ ರುದ್ರರೆಂಬ ವ್ಯವಹಾರ ಉಂಟು. (ಇಂದ್ರನು ದಿತಿಗರ್ಭವನ್ನು ಭೇದಿಸಿ, ಅಲ್ಲಿದ್ದ ಮರುತ್ತರನ್ನು 'ಅಳಬೇಡಿ' ಎಂದು ಹೇಳಿದ್ದರಿಂದ, "ಮಾ ರುದ" ಎಂಬ ಸಂಕೇತದಿಂದ ಅವರಿಗೆ ಮಾರುತ

ರೆಂದು ಹೆಸರಾಯಿತೆಂಬ ಕಥೆ ಶ್ರೀರಾಮಾಯಣದ ಬಾಲಕಾಂಡದಲ್ಲಿ ಬರುತ್ತದೆ. ಇವರು ಇಂದ್ರಾನುಚರರಾಗಿ, ಇಂದ್ರನ ಗಣದೇವತೆಗಳೂ ಆದರು.) ಇವರಲ್ಲಿ ರುದ್ರಾಂಶವೂ ಇರುವುದನ್ನು ಚಂಡಮಾರುತಗಳಲ್ಲಿ ಇಂದೂ ಕಾಣುತ್ತೇವಷ್ಟೇ. ಋಗ್ವೇದದಲ್ಲೇ ( I-23-10 ) ರಲ್ಲಿ ವೇದೋಕ್ತ ಗೋವನ್ನು ಮಾರುತರ ತಾಯಿಯೆಂದು ಕರೆದಿದೆ". ಪೃಶ್ನಿಮಾತರಃ- ಚುಕ್ಕೆಗಳನ್ನುಳ್ಳ ಗೋವನ್ನು ತಾಯಾಗಿ ಉಳ್ಳವರು" ಎಂದರ್ಥ. (ಆಧ್ಯಾತ್ಮಿಕಾರ್ಥದಲ್ಲಿ ಮನುಷ್ಯನಲ್ಲಿ ವಿಚಾರಪ್ರಚೋದಕ ಶಕ್ತಿಗಳು ಈ ಮಾರುತರು; ನರಮಂಡಲಕ್ಕೆ ಶಕ್ತಿಕೊಟ್ಟು ಪ್ರಚೋದಿಸುವ ಪ್ರಾಣಶಕ್ತಿಗಳು. ಉಪನಿಷತ್ತುಗಳಲ್ಲಿ— ಉದಾಹರಣೆಗೆ ಛಾಂದೋಗ್ಯದಲ್ಲಿ— ಪ್ರಾಣಗಳನ್ನೇ ಮಾರುತರೆಂದೂ ವ್ಯವಹರಿಸುವುದುಂಟು. ) ಲಕ್ಷ್ಮೀದೇವಿಯು ಇವನು ಪೋಷಿಸಿ ಬೆಳೆಸುವಳಾದ್ದರಿಂದ ಇವರ ತಾಯಿಯೆಂಬ ಸಾಂಕೇತಿಕ ವ್ಯವಹಾರ ಸರಿಯಾಗಿದೆ. ಲಕ್ಷ್ಮೀಕಟಾಕ್ಷವಿಲ್ಲದವರು ಇದರಿಂದಲೇ ಜಡವಸ್ತುಗಳಂತಿರುತ್ತಾರೆ!

ಅಷ್ಟವಸುಗಳು ಭೌತವಸ್ತುಗಳ ಅಭಿಮಾನೀ ದೇವತೆಗಳು. ಪೃಥ್ವೀತತ್ತ್ವಕ್ಕೆ ಇವರೊಡನೆ ಸಂಬಂಧ. ಅವರು ಅದರ ರಕ್ಷಕರು. ಭೌತಮಟ್ಟದಲ್ಲಿ ಲಕ್ಷ್ಮಿಯು ಇವರ ಮಗಳೆಂದರೆ ಈ ತತ್ತ್ವಗಳೊಡನೆ ಇವಳು ಸಂಬಂಧಪಟ್ಟವಳೆಂದು ತಿಳಿಯುತ್ತದೆ.

ಆದಿತ್ಯರು ಅಧ್ಯಾತ್ಮಲೋಕದ ಬೆಳಗುವ ಶಕ್ತಿಗಳು, ಇವರೊಡನೆ ಲಕ್ಷ್ಮೀದೇವಿಗೆ ಸಾಹಚರ್ಯವುಂಟೆಂಬುದನ್ನು ಸೋದರ-ಸೋದರಿ ಸಂಬಂಧದ ಸಂಕೇತದಲ್ಲಿ ತಿಳಿಸಿದೆ. ಅಮೃತತತ್ವಕ್ಕೆ ನಾಭಿ ಇವಳೆಂದರೆ, ಇವಳ ಕಟಾಕ್ಷವಿಲ್ಲದೆ ಆ ಪದವಿ ದೊರೆಯಲಾರದೆಂದರ್ಥ. ಪರಮಾತ್ಮನನ್ನು ಅರಿತು ಆನಂದಿಸುವ ಅಪಾರಪ್ರಜ್ಞಾಸಂಪತ್ತಿನ ರೂಪದಲ್ಲಿರುವ ಈ ದೇವಿಯ ಕೃಪೆಯಿಲ್ಲದೆ ಆ ಆನಂದಸಾಗರವು ಸಂವೇದನೆಗೆ ಗೋಚರಿಸುವುದೆಂತು? ಗೋಶಬ್ದಕ್ಕೆ ಬೆಳಕೆಂಬ ಅರ್ಥವೂ ಇರುವುದರಿಂದ, ದೇವರನ್ನು ಜಗತ್ತಿಗೆ ತೋರಿಸಿಕೊಡುವ ದಿವ್ಯಬೆಳಕಿವಳೆಂಬರ್ಥದಲ್ಲಿ ಲಕ್ಷ್ಮಿಯು ಗೋವಾದರೆ ಸಮಂಜಸವಾಗಿಯೇ ಇದೆ. ಇದು ನಿರ್ದೋಷವಾದ ಗೋವಾಗಿದೆ —ಏಕೆಂದರೆ ಅಪಾರ

ವಾದ ಆ ದಿವ್ಯಪ್ರಜ್ಞಾಸ್ವರೂಪದಲ್ಲಿ ಕತ್ತಲೆಯ ಸಂಭವವೇ ಇಲ್ಲ ! ಇದನ್ನು ಘಾಸಿಮಾಡಬಾರದೆಂದರೆ, ಈ ಜ್ಞಾನವು ಹಿಂಸಿತವಾದರೆ, ಜೀವನವು ವಿಕಸಿತವಾಗುವುದರ ಬದಲು ಜಡಮಯವಾಗುವುದೆಂದು ಎಚ್ಚರಿ ಲು ಮಾತ್ರ. ಈ ಮಾತು ಬುದ್ಧಿವಂತರಿಗೆ ಮಾತ್ರ, ಎಂಬ ಋಷಿವಾಣಿಯಲ್ಲೂ ಮರ್ಮವಿದೆ. ವೈದಿಕರ ಗೋವಾದ ಇವಳ ಸಂಕೇತಾರ್ಥವನ್ನು ತಿಳಿಯದ ಮೂಢರಿಗೆ ಇದನ್ನೆಲ್ಲ ಹೇಳಿ ಏನು ಪ್ರಯೋಜನ ? ಹೀಗೆ ಜಮದಗ್ನಿಗಳ ಮಂತ್ರದಲ್ಲಿ ಲಕ್ಷ್ಮೀತತ್ತ್ವದ ಭಂಡಾ ದ ಬೀಗದಕ್ಕೆ ಇರುವಂತಿದೆ. ಮುಂದಿನ ಈ ಮಂತ್ರ ಇದನ್ನು ಇನ್ನಷ್ಟು ವಿವರಿಸುತ್ತದೆ.

## ಲಕ್ಷ್ಮೀದೇವಿಯನ್ನು ಮರೆಯುವವರಾರು ?

ವಚೋವಿದಂ ವಾಚಮುದೀರಯಂತೀ
ವಿಶ್ವಾಭಿರ್ಧೀಭಿರುಪತಿಷ್ಠಮಾನಾಂ।
ದೇವೀಂ ದೇವೇಭ್ಯಃ ಪರ್ಯೇಯುಷೀಂ
ಗಾಮಾಮಾವೃಕ್ತ ಮರ್ತ್ಯೋ ದಭ್ರಚೇತಾಃ॥

(ಅದೇ, ಮಂತ್ರ 16.)

"ಮಾತಿನ ತತ್ತ್ವವನ್ನು ತಿಳಿದವಳೂ, ಮಾತನ್ನು ಉಚ್ಚರಿಸುವವಳೂ (ಆಡುವಂತೆ ಮಾಡುವವಳೂ), ಸಮಸ್ತ ವಾಕ್ಕುಗಳಿಂದ ಸ್ತುತಿಸಲ್ಪಡುವವಳೂ, ದೇವತೆಗಳ ಉಪಾಸನೆಯ ಸಲುವಾಗಿ ನನಗೆ ಸಹಾಯಕ್ಕಾಗಿ ಬಂದಿರುವವಳೂ, ಗೋರೂಪಿಣಿಯೂ ಆದ ಈ (ಅದಿತಿ) ದೇವಿಯನ್ನು ಬುದ್ಧಿಹೀನನಾದ ಮಾನವನು ಮಾತ್ರ ಪರಿತ್ಯಜಿಸುತ್ತಾನೆ."

ಮಾನವನು ಸಾಮಾನ್ಯವಾಗಿ ಬುದ್ಧಿಹೀನನೇ. ಏಕೆಂದರೆ ಭೌತಾತೀತ ಪ್ರಪಂಚ ಬಹುಪಾಲು ಮಾನವರ ಪಾಲಿಗೆ ಇಲ್ಲವೇ ಆಗಿದೆ, ಅವನ

ತಮಸ್ಸು ಅವನನ್ನು ಸೆರೆಹಿಡಿದಿಟ್ಟಿರುವ ಬಗೆ ಇದುವೇ. ಈ ತಮಸ್ಸಿನಿಂದ ಅವನನ್ನು ಬಿಡಿಸಿ ದಿವ್ಯಜ್ಞಾನ ನೀಡುವುದೇ 'ಗೋ', 'ಅದಿತಿ', ಸ್ವರೂಪಿಣಿಯಾದ ಲಕ್ಷ್ಮೀದೇವಿಯ ಕೆಲಸ. ಈ ದಿವ್ಯಜ್ಞಾನ ದೊರೆಯುವುದು ಆ ಜ್ಞಾನವನ್ನು ಈಗಾಗಲೇ ಪಡೆದ ಋಷಿಗಳ ವಾಣಿಯಾದ ವೇದದಿಂದ. ವೈದಿಕರಿಗೆ ಮಾತೆಂದರೆ ಇದೊಂದೇ. ಶಬ್ದಬ್ರಹ್ಮ. ಇದರ ಪೂರ್ಣ ಆಳ ತಿಳಿದ ವಾಗ್ದೇವತೆಯೂ ಲಕ್ಷ್ಮಿಯೇ. ಅದನ್ನು ನಮಗೆ ತಿಳಿಸಿಕೊಡುವ ವಾಣೀ ಸ್ವರೂಪದಲ್ಲಿರುವವಳೂ ಅವಳೇ. ಬೆಳಗುವ ದೀಪಗಳಂತಿರುವ ವೇದವಾಕ್ಯೆಲ್ಲಾ ಅವಳನ್ನು ಸೇವಿಸುತ್ತಿದೆಯೆಂದರೆ ಆ ವಾಕ್ಕಿಗೆ ವೇದ್ಯಳೂ, ವಿಷಯಳೂ ಅವಳೇ; ಅದನ್ನು ತಿಳಿಸಿ ಕೊಡುವವಳೂ ಅವಳೇ. ಜಮದಗ್ನಿಗಳು ಈ 'ಗೋ' ಉಪಾಸನೆ ಮಾಡಿದುದೂ ಈ ದಿವ್ಯಜ್ಞಾನಪ್ರಾಪ್ತಿಗಾಗಿಯೇ. ಆದರೆ ಇಂಥದೊಂದು ಗೋವಿರುವುದೇ ಅನೇಕರಿಗೆ ತಿಳಿಯದೆ, ಅವರು ಪರಿತ್ಯಾಗಮಾಡಿದಂತಾದಿರುವುದೇ ಆಶ್ಚರ್ಯ ಎಂದು ಮಂತ್ರದ ಭಾವ,

ವೇದದಲ್ಲಿ ಅಲ್ಲಲ್ಲೇ ಬಂದಿರುವ ಇವಳ ಗುರುತುಗಳು ಹೀಗಿವೆ. (೧) ಸರ್ವದೇವಮಾತೆ, (೨) ಅನರ್ವಾ– ಕುಂದು ಕೊರತೆಯಿಲ್ಲದವಳು; ಅಥವಾ ಕುದುರೆಯಿಲ್ಲದೆಯೇ ಎಲ್ಲ ಕಡೆ ಸಂಚರಿಸಬಲ್ಲಳು. (೩) ಜಗತ್ತಿಗೆ ಪ್ರತಿಷ್ಠೆ (ಆಸರೆ) ಯಾಗಿರುವವಳು, (ಜಗತಃಪ್ರತಿಷ್ಠಾ) (೪) ಜಗತ್ತಿಗೆ ಒಡೆಯಳು (ವಿಶ್ವಸ್ಯಭರ್ತ್ರೀ) (೫) ಉತ್ತಮ ಗೃಹಿಣೀ (ಪಸ್ತ್ಯಾ) (೬) ಕಷ್ಟದಿಂದ ನಮ್ಮನ್ನು ಸಂರಕ್ಷಿಸುವವಳು (೭) ವಿಶೇಷ ತೇಜೋಯುಕ್ತಳು (ಜ್ಯೋತಿಷ್ಮತೀ) (೮) ಸುಲಭಾರಾಧ್ಯಳು (ಸುಹವಾ) ಇತ್ಯಾದಿ. ಇವೆಲ್ಲವೂ ಲಕ್ಷ್ಮೀದೇವಿಗೇ ಹೊಂದುವುವೇ ವಿನಾ ಸಾಮಾನ್ಯ ದೇವತೆಯೊಂದಕ್ಕಲ್ಲ. ಅದಿತಿ ವಿಷಯಕವಾದ ಎಲ್ಲ ಮಂತ್ರಗಳಲ್ಲೂ ಎದ್ದು ಕಾಣುವ ಅವಳ ಸ್ವರೂಪ ಇದೇ ಆಗಿದೆ

# ೪. ವಾಗಾಂಭೃಣೀ ಸೂಕ್ತ— ವಿವರಣೆ

ಪ್ರವೇಶ :

ವಾಗ್ದೇವಿಯ ವಿಷಯವಾಗಿ ಈಗಾಗಲೇ ಸಾಕಷ್ಟು ವಿಷಯಗಳನ್ನು ಈ ಸಂಪುಟದಲ್ಲಿ ಮಂಡಿಸಲಾಗಿದೆ. ಹಯಗ್ರೀವಾವತಾರದಲ್ಲಿ ಭಗವಂತನಿಗೆ ಪತ್ನಿಯಾಗಿ ಅವತರಿಸಿದ ಲಕ್ಷ್ಮಿಯ ರೂಪಾಂತರವೇ ಈ ವಾಗ್ದೇವಿ ಎಂಬುದನ್ನು ಈದಾಗಲೇ ತೋರಿಸಿಯಾಗಿದೆ. ಇನ್ನೂ ಪ್ರಮಾಣಗಳು ಅವಶ್ಯವಾದರೆ ತೋರಿಸೋಣ.

೧) ವಿಷ್ಣುಸ್ಮೃತಿಯೂ ಆರಂಭದಲ್ಲೇ ಭಗವಂತನನ್ನು "ಧ್ರುವಂ ವಾಚಸ್ಪತಿಂ ಪ್ರಭುಂ" ಎಂದು ಕೊಂಡಾಡಿರುವಲ್ಲಿ ವಾಕ್‌ತತ್ತ್ವಕ್ಕೂ, ವಾಗ್ದೇವಿಗೂ ಇವನು ಪತಿ ಎಂದು ಹೇಳಿದಂತಾಗಿದೆ.

೨) ಅಲ್ಲೇ ಲಕ್ಷ್ಮೀಸ್ತುತಿಯಲ್ಲಿ :

ತ್ವಮೇವ ನಿದ್ರಾ ಜಗತಃ ಪ್ರಧಾನಾ
ಲಕ್ಷ್ಮೀರ್ಧೃತಿಃ ಶ್ರೀರ್ರತಿರ್ಜಯಾ ಚ।
ಕಾಂತಿಃ ಪ್ರಭಾ ಕೀರ್ತಿರಥೋ ವಿಭೂತಿಃ
ಸರಸ್ವತೀ ವಾಗಥ ಪಾವನೀ ಚ॥

ಎಂದು ಹೇಳುವಲ್ಲಿ ಲಕ್ಷ್ಮೀ ಪರ್ಯಾಯ ನಾಮಗಳಲ್ಲಿ ಧೃತಿಃ, ಶ್ರೀಃ ಇತ್ಯಾದಿಗಳೊಡನೆ ಸರಸ್ವತೀ, ವಾಕ್ ಎಂಬುವನ್ನು ಸೇರಿಸಿ ಹೇಳಿದೆ.

೩) ಕೀರ್ತಿಃ ಶ್ರೀಃ ವಾಕ್ ಚ– ಇತ್ಯಾದಿ, ಭಗವದ್ಗೀತೆಯಲ್ಲಿ (X-34) ಶ್ರೀನಾಮದೊಡನೆ ಸಮಾನಾರ್ಥಕವಾಗಿ ವಾಕ್ ನಾಮವು ಬಂದಿರುವುದೂ ಗಮನೀಯ.

೪) ಭಗವಂತನು ತ್ರಿಗುಣಾತೀತನೂ, ಶುದ್ಧಸತ್ತ್ವಮಯ ಮಂಗಳ ವಿಗ್ರಹಸ್ವರೂಪನೂ ಆಗಿರುವಂತೆ ವಾಗ್ದೇವೀ, ಸರಸ್ವತೀ ಶಬ್ದವಾಚ್ಯಳಾದ

ಲಕ್ಷ್ಮಿಯೂ ಶುದ್ಧಸತ್ತ್ವಮಯ ವಿಗ್ರಹವುಳ್ಳವಳೆಂದೂ, (ಆದ್ದರಿಂದ ಬ್ರಹ್ಮ ಪತ್ನಿಯೂ, ರಜೋಮೂರ್ತಿಸಹಚರಿಯೂ ಆದ) ರೂಢಿಯ ಸರಸ್ವತಿಯಿಂದ ಇವಳು ಬೇರೆಯೆಂದೂ ಬ್ರಹ್ಮವೈವರ್ತ ಪುರಾಣ ತೋರಿಸಿದೆ :

ಆವಿರ್ಬಭೂವ ತತ್ಪಶ್ಚಾನ್ಮುಖತಃ ಪರಮಾತ್ಮನಃ।
ಏಕಾ ದೇವೀ ಶುಕ್ಲವರ್ಣಾ ವೀಣಾಪುಸ್ತಕಧಾರಿಣೀ।
ವಾಗಧಿಷ್ಠಾತೃದೇವೀ ಸಾ ಕವೀನಾಂ ಇಷ್ಟದೇವತಾ।
ಶುದ್ಧ ಸತ್ವಸ್ವರೂಪಾ ಸಾ ಶಾಂತರೂಪಾ ಸರಸ್ವತೀ॥

(1-2-54-56)

"ವೀಣಾಪುಸ್ತಕವಿರುವುದು ರೂಢಿಯ ಸರಸ್ವತಿಯ ಕೈಯ್ಯಲ್ಲಲ್ಲವೆ?" ಎನ್ನುವುದಾದರೆ, ಇದೇ ಪುರಾಣವೇ :

ನಾರಾಯಣಪ್ರಿಯೂ ಲಕ್ಷ್ಮೀಃ ಸರ್ವಸಂಪತ್‌ಸ್ವರೂಪಿಣೀ।

(I–30–20)

ವ್ಯಾಖ್ಯಾಮುದ್ರಾಕರಾ ಶಾಂತಾ ವೀಣಾಪುಸ್ತಕಧಾರಿಣೀ ।
ಶುದ್ಧಸತ್ವಸ್ವರೂಪಾ ಯಾ ಸುಶೀಲಾ ಶ್ರೀಹರಿಪ್ರಿಯಾ ॥

( 2-1-35 )

ಎಂದೂ ಹರಿಪ್ರಿಯಳಾದ ಲಕ್ಷ್ಮಿಗೂ ಇಂಥದೊಂದು ರೂಪವಿರುವುದರಿಂದ ಇವಳು ಬೇರೆಯೆ ಂಬುದನ್ನು ತೋರಿಸಿದೆ.

ಲಕ್ಷ್ಮೀತಂತ್ರದಲ್ಲೂ ಲಕ್ಷ್ಮಿಯ ಈ ವಾಗ್ದೇವೀ ರೂಪದ ಪ್ರಸ್ತಾಪ ಹೀಗೆ ಬಂದಿದೆ

ಅಕ್ಷಮಾಲಾಂಕುಶಧರಾ ವೀಣಾಪುಸ್ತಕಧಾರಿಣೀ ।

( IV-65 )

ಮಾಧ್ವಸಂಪ್ರದಾಯದಲ್ಲೂ ಈ ಬಗೆಯ ವಿವರಣೆಗಳುಂಟು.

(೫) ಹೆಚ್ಚೇನು ! ಲೌಕಿಕ ಕಾವ್ಯಗಳಲ್ಲೂ ಈ ಬಗೆಯ ಪ್ರಸ್ತಾಪವುಂಟೆಂಬುದಕ್ಕೆ ಹರ್ಷಚಕ್ರವರ್ತಿಯ ನೈಷಧಕಾವ್ಯದಿಂದ ಹಿರಿಯರು ಈ ಕೆಳಗಿನ ಶ್ಲೋಕವನ್ನುದಾಹರಿಸುವುದುಂಟು

ಪದ್ಮಾಂಕಸದ್ಮಾನಮವೇಕ್ಷ್ಯ ಲಕ್ಷ್ಮೀಂ
ಏಕಸ್ಯ ವಿಷ್ಣೋಃ ಶ್ರಯಣಾತ್ ಸಪತ್ನೀಂ ।
ಆಸ್ಯೇಂದುಮಸ್ಯಾ ಭಜತೇ ಜಿತಾಬ್ಜಂ
ಸರಸ್ವತೀ ತದ್ವಿಜಿಗೀಷಯಾ ಕಿಂ ॥

(ನೈಷಧಂ, 7-49)

"ಒಬ್ಬನೇ ಆದ ವಿಷ್ಣುವನ್ನು ತನ್ನಂತೆಯೇ ಅವಳೂ ಆಶ್ರಯಿಸಿರುವುದರಿಂದ, ತನ್ನ ಸವತಿಯಾಗಿ, ತಾವರೆಪುಷ್ಪದಲ್ಲಿ ಆಸೀನಳಾಗಿರುವ ಲಕ್ಷ್ಮಿಯನ್ನು ನೋಡಿ, ಅವಳನ್ನು ಜಯಿಸುವುದಕ್ಕಾಗಿಯೇ, ಈ ದಮಯಂತಿಯ ಕಮಲವನ್ನೂ ಗೆಲ್ಲುವ ಮುಖಚಂದ್ರನನ್ನು ಸರಸ್ವತಿಯು ತನ್ನ ವಾಸಸ್ಥಾನವನ್ನಾಗಿ ಆರಿಸಿಕೊಂಡಳೋ ?"

(ಇದು ದಮಯಂತಿಯ ಮುಖವರ್ಣನೆಯ ಪ್ರಸಂಗ. ಇವಳ ಬಾಯಲ್ಲಿ ಸರಸ್ವತೀ ಕುಳಿತಳೋ ! ಎಂಬಂತಿದೆ, ಅವಳ ವಾಗ್ವೈಖರಿ. ಇವಳು ಅಲ್ಲಿ ಆಶ್ರಯಿಸಿದ್ದು ಲಕ್ಷ್ಮಿಯನ್ನು ಗೆಲ್ಲಲು; ಏಕೆಂದರೆ ಇಬ್ಬರೂ ಸವತಿಯರು ! ಲಕ್ಷ್ಮಿಗೇನೋ ತಾವರೆ ಆಶ್ರಯ ದೊರೆಯಿತು. ಈಗ ಸರಸ್ವತಿಗೂ ಅದಕ್ಕಿಂತ ಮಿಗಿಲಾದದ್ದು ದೊರೆಯಿತು, ಎಂಬ ಭಾವವನ್ನು ವಿವರಿಸುವಾಗ ಲಕ್ಷ್ಮೀಸರಸ್ವತಿಯರನ್ನು ಸವತಿಯರೆಂದು ಹೇಳಿರುವುದು ಗಮನೀಯ.)

ಇದು ಕೇವಲ ಕವಿಚಮತ್ಕಾರವಲ್ಲವೆಂಬುದನ್ನು ಇಲ್ಲಿ ಮಲ್ಲಿನಾಥನ ವ್ಯಾಖ್ಯಾನ ತೋರಿಸುತ್ತದೆ.

"ಸರಸ್ವತ್ಯಾ ವಿಷ್ಣುಪತ್ನೀತ್ವಂ ಪುರಾಣ ಪ್ರಸಿದ್ಧಂ, ತಥಾ ಅರ್ಚಾಸ್ವಪಿ ದೃಶ್ಯತೇ, ಯಥಾ ಪುರುಷೋತ್ತಮಸ್ಯ ಜಗನ್ನಾಥಸ್ಯ ಪಾರ್ಶ್ವೇ ಲಕ್ಷ್ಮೀ ಸರಸ್ವತ್ಯೌ" (ಸರಸ್ವತಿಯು ವಿಷ್ಣುಪತ್ನಿಯೆಂಬುದು ಪುರಾಣಪ್ರಸಿದ್ಧವಾದದ್ದು. ಹಾಗೆಯೇ ಅರ್ಚಾಮೂರ್ತಿಗಳಲ್ಲೂ ಕಾಣಲ್ಪಡುತ್ತದೆ, ಉದಾಹರಣೆಗೆ ಪುರುಷೋತ್ತಮಪುರಿಯ ಜಗನ್ನಾಥನ ಪಕ್ಕದಲ್ಲಿ ಲಕ್ಷ್ಮೀಸರಸ್ವತಿಯರುಂಟು.) ಎಂದು.

ಈ ಎಲ್ಲ ಹಿನ್ನೆಲೆಯಲ್ಲಿ ಪ್ರಕೃತ ವಾಗಾಂಭೃಣೀ ಸೂಕ್ತದಲ್ಲಿ ತನ್ನ ಮಹಿ

ಮೆಯನ್ನು ತಾನೇ ಪ್ರಕಟಪಡಿಸಿಕೊಂಡಿರುವವಳು ಲಕ್ಷ್ಮೀದೇವಿಯ ರೂಪಾಂತರವೇ ಆದ ವಾಗ್ದೇವಿಯು. ಅಂಭೃಣರೆಂಬ ಮಹರ್ಷಿಗೆ ಪುತ್ರಿಯಾಗಿ ಅವತರಿಸಿದ ವಿಷಯ ಪುರಾಣ ಪ್ರಸಿದ್ಧವಾದುದು. ಆದ್ದರಿಂದ ಪ್ರಕೃತ ಸೂಕ್ತಕ್ಕೆ ಅವಳೇ ಋಷಿ, ಅವಳೇ ದೇವತೆಯೂ ಆಗಿದ್ದಾಳೆ.

ಅಂಭೃಣೀ– ಎಂದರೆ "ಅಂ, ಬಿಭರ್ತಿ, ನಯತಿ ಚ" ಎಂಬ ನಿಷ್ಪತ್ತಿಯಂತೆ, ಆಕಾರ ವಾಚ್ಯನಾದ ಭಗವಂತನನ್ನು ಆಲಿಂಗನಾದಿಗಳಿಂದ ಭರಿಸಿ, ವಾಲ್ಲಭ್ಯದಿಂದ ವಶೀಕರಿಸಿ ಜೀವಹಿತಾರ್ಥವಾಗಿ ಸೃಷ್ಟಿಸ್ಥಿತ್ಯಾದಿಗಳಲ್ಲಿ ಸಹಕರಿಸಿ ನಿರ್ದೇಶಿಸುವವಳು. ಸಹಚರಳಾಗಿದ್ದು ದಾರಿತೋರುವಳು ಎಂಬರ್ಥವಾಗುತ್ತದೆ. ಮಾಧ್ವಸಂಪ್ರದಾಯದಲ್ಲಿ ಈ ಸೂಕ್ತಕ್ಕೆ ಶ್ರೀವಾದಿರಾಜಸ್ವಾಮಿಗಳ ವ್ಯಾಖ್ಯಾನವೂ ಧೀರೇಂದ್ರತೀರ್ಥರ ವ್ಯಾಖ್ಯಾನವೂ ಇವೆ. ಲಕ್ಷ್ಮೀಯೇ ಇವಳೆಂಬುದನೊಪ್ಪದವರು ಸಾಮಾನ್ಯ ಋಷಿಪುತ್ರಿಯೊಬ್ಬಳಲ್ಲಿ ಮಂತ್ರದಲ್ಲಿ ಹೇಳಿರುವ ದೇವತಾ ಲಕ್ಷಣಗಳನ್ನು ಕಾಣುವುದು ಅಶಕ್ಯವಾಗಿ, ಮಂತ್ರವನ್ನು ಅರ್ಥೈಸುವುದೇ ಕಠಿಣವಾಗುತ್ತದೆಯೆಂಬುದನ್ನು ನೆನಪಿನಲ್ಲಿಡಬೇಕು.

### ಮೊದಲನೆಯ ಮಂತ್ರ

## ಲೋಕಾಧಾರಳು

ಅಹಂ ರುದ್ರೇಭಿರ್ವಸುಭಿಶ್ಚರಾಮಿ
ಅಹಮಾದಿತ್ಯೈರುತ ವಿಶ್ವೇ ದೇವೈಃ।
ಅಹಂ ಮಿತ್ರಾವರುಣೋಭಾ ಬಿಭರ್ಮಿ
ಅಹಮಿಂದ್ರಾಗ್ನೀ ಅಹಮಶ್ವಿನೋಭಾ ॥೧॥

ಅರ್ಥ : "ನಾನು (ಏಕಾದಶ) ರುದ್ರರಿಂದಲೂ, (ಅಷ್ಟ) ವಸುಗಳಿಂದಲೂ, (ದ್ವಾದಶ) ಆದಿತ್ಯರಿಂದಲೂ, ಹಾಗೇ ಹತ್ತು ವಿಶ್ವೇದೇವತೆಗಳಿಂದಲೂ ಒಡ

ಗೂಡಿ ಸಂಚರಿಸುತ್ತೇನೆ. (ಅಥವಾ ಅವರ ಮೂಲಕ ಕೆಲಸ ಮಾಡಿಸುತ್ತೇನೆ.) ಮಿತ್ರಾವರುಣರಿಬ್ಬರನ್ನೂ, ಇಂದ್ರಾಗ್ನಿಗಳಿಬ್ಬರನ್ನೂ, ಅಶ್ವಿನೀ ದೇವತೆಗಳಿಬ್ಬರನ್ನೂ ನಾನೇ ಧರಿಸಿದ್ದೇನೆ".

ವಿವರಣೆ : ಈ ಇಡೀ ಸೂಕ್ತದಲ್ಲಿ ಮಾತನ್ನಾಡುತ್ತಿರುವವಳು ಲಕ್ಷ್ಮೀದೇವಿಯೆಂದು ಮೊದಲು ನೆನಪಿನಲ್ಲಿಡತಕ್ಕದ್ದು ಮತ್ತು ಸೂಕ್ತದಲ್ಲಿ ಇಡೀ ಹೇಳಿಕೊಂಡ ಈ ಮಹಿಮೆಗಳು ಅವಳಿಗೆ ಹೇಗೆ ಅನ್ವಯವೆಂಬುದನ್ನು ಇಲ್ಲೇ ನಿರ್ಧರಿಸಿಕೊಂಡೇ ಮುಂದೆ ಓದಬೇಕಾಗಿದೆ. ಇಲ್ಲವಾದರೆ ಅಪಾರ್ಥವೇ ಆದೀತು. ವಸುರುದ್ರಾದಿಸಕಲ ದೇವತೆಗಳಿಗೂ ಪರಮಾತ್ಮನೇ ನಿರುಪಾಧಿಕ ಸ್ವಾಮಿಯೂ ನಿರ್ದೇಶಕನೂ ಆಗಿರುವಾಗ, ಈ ಕೆಲಸವನ್ನು ಲಕ್ಷ್ಮೀದೇವಿಯೇ ಮಾಡುತ್ತಿರುವುದಾಗಿ ಹೇಳುವುದರಲ್ಲಿ ಏನರ್ಥ? ಎಂದರೆ, ಇದನ್ನು ಹಲವು ರೀತಿಯಲ್ಲಿ ನಿರ್ವಹಿಸಬಹುದು.

೧) ಪತಿಯ ಸಕಲ ವ್ಯಾಪಾರಗಳಲ್ಲೂ ಪತ್ನಿಗೂ ಅನ್ವಯವುಂಟು. ಇವಳಿಲ್ಲದೆ ಅವನು ಯಜ್ಞದೀಕ್ಷಿತನಾಗುವಂತಿಲ್ಲ; ದಾನ ಮಾಡುವಂತಿಲ್ಲ. ಆದ್ದರಿಂದ ಸಪತ್ನೀಕನು ಮಾಡುವ ಈ ಬಗೆಯ ವ್ಯಾಪಾರಗಳಲ್ಲಿ ಪತ್ನಿಗೂ ಅನ್ವಯವಿರುವಷ್ಟೇ ಪ್ರಕೃತದಲ್ಲೂ ಅನ್ವಯಿಸಿಕೊಳ್ಳತಕ್ಕದ್ದು. ಪತಿಯನ್ನು ಬಿಟ್ಟು ವ್ಯವಹರಿಸುವ ಪತ್ನೀ ಭಾವಕ್ಕೆ ಇಲ್ಲಿ ಅವಕಾಶವಿಲ್ಲ.

೨) ಬ್ರಹ್ಮಸೂತ್ರಕಾರರು "ಜಗದ್ವ್ಯಾಪಾರವರ್ಜಂ" ಇತ್ಯಾದಿ ಸೂತ್ರದಲ್ಲಿ ಈಶ್ವರನೇ ಈ ಜಗನ್ನಿರ್ವಹಣೆಯ ಹೊರೆಯನ್ನು ಹೊರುತ್ತಾನೆಂದೂ, ನಿತ್ಯ, ಮುಕ್ತಜೀವಾತ್ಮರು ಅದರಲ್ಲಿ ಅನ್ವಯವಿಲ್ಲದವರೆಂದೂ ಹೇಳಿರುವಂತೆ, ಭಗವಂತನಿಗೇ ಅಸಾಧಾರಣದ ಲಕ್ಷಣ, ಈ ಸೃಷ್ಟಿಸ್ಥಿತಿಲಯ ವ್ಯಾಪಾರಗಳು. ಲಕ್ಷ್ಮೀದೇವಿಗೆ ಪತಿಪ್ರಯುಕ್ತವಾದ ಈ ವ್ಯಾಪಾರದಲ್ಲಿ ಗೌಣಾನ್ವಯ ಮಾತ್ರ, ಆಗಲೂ ಅವನು ಶ್ರೀ-ನಿವಾಸನಾಗಿಯೇ ಇರುತ್ತಾನಾದ್ದರಿಂದ. ಸ್ವತಂತ್ರಳಾಗಿಯೇ ಅವಳಿದನ್ನು ಮಾಡುವಳಾದರೆ ಆಗ ಲಕ್ಷ್ಮೀತತ್ತ್ವವು ಶಾಕ್ತರ 'ಶಕ್ತಿ' ಕಲ್ಪನೆಯಲ್ಲಿ ಮುಗಿಯುವುದಾಗಿ, ಇದು ವೇದವಿರುದ್ಧವಾಗಿರುವುದು.

೩) ಭಗವಂತನೊಡನೆ ಭಕ್ತಿಯ ಆವೇಶದಲ್ಲಿ ತಾದಾತ್ಮ್ಯ ಹೊಂದಿ ತಮ್ಮ ಅಂತರಾತ್ಮನಾದ ಆ ಭಗವಂತನೇ ಮಾತನಾಡುತ್ತಿರುವಂತೆ ಕೆಲವೊಮ್ಮೆ

ಭಕ್ತಾಗ್ರೇಸರರು, ಆತ್ಮವಿಸ್ಮರಣ ಭಾವದಲ್ಲಿ, "ತಾವೇ" (ಭಗವಂತನೇ) ಈ ಜಗದ್ವ್ಯಾಪಾರ ನಡೆಸುವಂತೆ ಹೇಳಿಕೊಂಡ ವೇದಮಂತ್ರಗಳೂ ಉಂಟು. ಸ್ಮೃತಿಗಳಲ್ಲಿಯೂ ಪ್ರಕರಣಗಳುಂಟು. ಉದಾಹರಣೆಗೆ ವಾಮದೇವರು "ಅಹಂ ಮನುರಭವಂ ಸೂರ್ಯಶ್ಚ..." (ನಾನೇ) ಮನುವೂ ಸೂರ್ಯರೂ ಆದೆ...), ಎಂದು ನುಡಿದ ಋಕ್ಸೂಕ್ತಿಯುಂಟು. (IV–26.27.) ವೇ. ಸಂ. ಪರಿಚಯ, ಸಂಪುಟ ೧, ಪುಟ ೩೮–೩೯ನ್ನೂ, ಸಂಪುಟ ೮, ಪುಟ ೨೧೩ ನ್ನೂ ನೋಡಿರಿ.) ವೇದವ್ಯಾಸರೇ ಇಲ್ಲಿ ನಿರ್ಣಯಿಸಿರುವುದೇನೆಂದರೆ, ಈ ಮಾತುಗಳು ವಾಮದೇವರೆಂಬ ಜೀವಾತ್ಮರದಲ್ಲವೆಂದೂ, ಭಗವಂತನೇ ಅಂತರಾತ್ಮನೆಂಬ ಶಾಸ್ತ್ರದೃಷ್ಟಿಯಿಂದ ನೋಡಲ್ಪಡತಕ್ಕದ್ದೆಂದೂ, "ಶಾಸ್ತ್ರದೃಷ್ಟ್ಯಾತೂಪದೇಶೋ ವಾಮದೇವವತ್" ( ಬ್ರ. ಸೂ, I–1–31 ) ಎಂಬಲ್ಲಿ ನಿರ್ಧರಿಸಿದ್ದಾರೆ. ಇಂದ್ರನೂ ಹೀಗೆ ತಾನೇ ಮಾತಾಡಿಕೊಂಡದ್ದನ್ನು ಈ ಇಂದ್ರಪ್ರಾಣಾಧಿಕರಣದಲ್ಲಿ ಹೀಗೇ ನಿರ್ಣಯಿಸಿದ್ದಾರೆ. ಅಥರ್ವಶಿರಸ್ಸಿನಲ್ಲಿ ರುದ್ರನೂ ಹೀಗೇ ಮಾತಾಡಿದ್ದುಂಟು. (ವೇ. ಸಂ. ಪರಿಚಯ ಸಂಪುಟ ೮. ಪುಟ ೨೫೫ ನ್ನು ನೋಡಿರಿ). ಶ್ರೀವಿಷ್ಣುಪುರಾಣದಲ್ಲಿ ಪ್ರಹ್ಲಾದನೂ ಭಕ್ತಿಯ ಆವೇಶದಲ್ಲಿ ಹೀಗೇ ಮಾತನಾಡುತ್ತಾನೆ. (ವಿ.ಪು I–19-85). ಸಹಸ್ರಗೀತಿಯೆಂಬ ದ್ರಾವಿಡ ಪ್ರಬಂಧದಲ್ಲಿ ಶಠಕೋಪರೆಂಬ ನಮ್ಮಾಳ್ವಾರರು. ನಾಯಿಕಾಭಾವದಲ್ಲಿರುತ್ತಾ ಹೀಗೆ ಮಾತಾದಿದ್ದೂ ಉಂಟು. (V-6.) ಶ್ರೀ ಭಾಗವತದಲ್ಲಿ ಕೃಷ್ಣವಿರಹದಿಂದ ಸಂತಪ್ತರಾದ ಗೋಪಿಕಾಸ್ತ್ರೀಯರೂ ತಾವೇ ಕೃಷ್ಣನಂತೆ ಮಾತನಾಡುತ್ತಾ, ಅವನ ಲೀಲೆಗಳನ್ನೂ, ನುಡಿಗಳನ್ನೂ ಅನುಕರಿಸುತ್ತಾ ಇಂಥವೇ ಮಾತುಗಳನ್ನು ಆಡಿದ ಪ್ರಸ್ತಾಪವಿದೆ. (ದಶಮಸ್ಕಂಧ, 30-15 ಇತ್ಯಾದಿ.) ಇಲ್ಲೆಲ್ಲಾ ಪರಾತ್ಪರನಾದ ಪರಮಾತ್ಮನ ದೃಷ್ಟಿಯನ್ನು, ಭಾವನಾಪ್ರಕರ್ಷದಿಂದುಂಟಾದ ತಾದಾತ್ಮ್ಯ ಭಾವವನ್ನು ಗಮನದಲ್ಲಿಟ್ಟೇ ನೋಡಿ ತಿಳಿಯಬೇಕೇ ಹೊರತು, ವಾಚ್ಯಾರ್ಥವನ್ನಲ್ಲ ಹಾಗೆ ಇಲ್ಲೂ ಪರಮಾತ್ಮಾವೇಶದಿಂದ ಆಡಿದಂತೆ ತಿಳಿದರೆ ಬಾಧಕವೇನಿಲ್ಲ.

೪) ಭಗವಂತನು ವಸುರುದ್ರಾದಿತ್ಯದೇವತೆಗಳೊಡನೆ ಸಂಚರಿಸುವಾಗ, ಸಪತ್ನೀಕನಾಗಿಯೇ,– ಎಂದೂ ಅವನನ್ನೆಡೆಬಿಡದ ಲಕ್ಷ್ಮೀದೇವಿಯೊಡನೆಯೇ

ಹಾಗೆ ಮಾಡುತ್ತಾನೆಯಾದ್ದರಿಂದ, ಲಕ್ಷ್ಮೀದೇವಿಯು ಇದನ್ನೇ ಇಲ್ಲಿ ಹೇಳಿಕೊಂಡುದರಲ್ಲಿ ವಿಸಂಗತವೇನಿಲ್ಲ. ಮಿತ್ರಾವರುಣಾದಿದೇವತೆಗಳನ್ನು ತಾನೊಬ್ಬಳೇ ಮಾತ್ರ ಧರಿಸಿಲ್ಲ, ದಿವ್ಯದಂಪತಿಗಳು ಜೊತೆಯಲ್ಲೇ ಇದನ್ನು ಮಾಡುವುದನ್ನು ನೆನಪಿಟ್ಟರೆ ಎಲ್ಲವೂ ಸರಿಯೇ.

## ಎರಡನೆಯ ಮಂತ್ರ

# ದೇವತೆಗಳಿಗೂ ಧಾರಕಳು

ಅಹಂ ಸೋಮಮಾಹನಸಂ ಬಿಭರ್ಮ್ಯ
ಅಹಂತ್ವಷ್ಟಾರಮುತ ಪೂಷಣಂ ಭಗಂ।
ಅಹಂ ದಧಾಮಿ ದ್ರವಿಣಂ ಹವಿಷ್ಮತೇ
ಸುಪ್ರಾವ್ಯೇ ಯಜಮಾನಾಯ ಸುನ್ವತೇ ॥೨॥

ಅರ್ಥ : (ಶತ್ರು) ಸಂಹಾರಕನಾದ ಸೋಮನನ್ನೂ ನಾನೇ ಧರಿಸುತ್ತೇನೆ. ತ್ವಷ್ಟಾರನನ್ನೂ, ಪೂಷಾ ಎಂಬ ದೇವತೆಯನ್ನೂ, ಭಗನನ್ನೂ ನಾನೇ ಧರಿಸುತ್ತೇನೆ. ಉತ್ತಮ ಹವಿಸ್ಸನ್ನುಳ್ಳವನೂ, ಅದನ್ನು ದೇವತೆಗಳಿಗೆ ಅರ್ಪಿಸುವವನೂ, ಸೋಮವನ್ನು ಹೋಮಮಾಡುವವನೂ ಆದ ಯಜಮಾನನಿಗೆ ನಾನೇ ದ್ರವ್ಯ ಸಂಪತ್ತಿಯನ್ನು (ಐಶ್ವರ್ಯವನ್ನು) ಅನುಗ್ರಹಿಸುತ್ತೇನೆ.

ವಿವರಣೆ : 'ಆಹನಸಂ' ಎಂಬುದಕ್ಕೆ "ಆ ಸಮಂತಾತ್ ಹನ್ಯತೇ ಇತ್ಯಾಹನಾಃ", ಎಲ್ಲ ಕಡೆಯಿಂದ ಕೊಲ್ಲುವವನು ಎಂಬರ್ಥಮಾಡಿ, ಸೋಮನನ್ನು ಶತ್ರುಸಂಹಾರಕನೆಂದು ಹೇಳುವುದು ಒಂದರ್ಥ, ಹನನವೆಂದರೆ ಕೇವಲ 'ಹಿಂಡುವುದು' ಎಂದರ್ಥಮಾಡಿ, ಹೀಗೆ ಹಿಂಡಲ್ಪಡುವ ಸೋಮನಿಗೇ ಇದನ್ನು ವಿಶೇಷಣ ಮಾಡಿ, 'ಚೆನ್ನಾಗಿ ಹಿಂಡಲ್ಪಡುವ ಸೋಮಲತೆಗೆ ಅಭಿಮಾನಿಯಾದ ಚಂದ್ರನನ್ನು' ಎಂದು ವಾದಿರಾಜಸ್ವಾಮಿಗಳು ಅರ್ಥೈಸಿದ್ದಾರೆ. 'ದಧಾಮಿ' ಎಂದರೆ ಧರಿಸುವುದಾಗಿ, ಇದೂ ಅನುಗ್ರಹವೇ.

## ಮೂರನೆಯ ಮಂತ್ರ

# ಬಹುರೂಪವುಳ್ಳ ಆರಾಧ್ಯಳು

ಅಹಂ ರಾಷ್ಟ್ರೀ ಸಂಗಮನೀ ವಸೂನಾಂ
ಚಿಕಿತುಷೀ ಪ್ರಥಮಾ ಯಜ್ಞಿಯಾನಾಂ ।
ತಾಂ ಮ ದೇವಾ ವ್ಯದಧುಃ ಪುರುತ್ರಾ
ಭೂರಿಸ್ಥಾತ್ರಾಂ ಭೂರ್ಯಾವೇಶಯನ್ತೀಂ ॥ ೩ ॥

ಅರ್ಥ : ನಾನೇ ರಾಷ್ಟ್ರಾಭಿಮಾನೀ ದೇವತೆ (ಜಗದೀಶ್ವರಿ) ಯಾಗಿದ್ದೇನೆ. ಐಶ್ವರ್ಯವನ್ನು (ಉಪಾಸಕರಿಗಾಗಿ) ಶೇಖರಿಸುವವಳೂ ಆಗಿರುವೆನು. ಭಗವಂತನ ವಿಷಯಕ ಜ್ಞಾನವನ್ನು (ಪೂರ್ಣವಾಗಿ) ಹೊಂದಿರುವವಳೂ ನಾನೇ. ಯಜ್ಞಪುರುಷನಾದ ಭಗವಂತನನ್ನು ಸೇರಿದವರಲ್ಲಿ (ಅವನ ಸಂಬಂಧವುಳ್ಳವರಲ್ಲಿ) ನಾನೇ ಮೊದಲಿನವಳು. ಹಲವೆಡೆಗಳಲ್ಲಿ ನಿಲ್ಲುವವಳೂ, ಹಲವೆಡೆಗಳಲ್ಲಿ ಆವೇಶಿಸುವವಳೂ ಆದ ಈ ನನ್ನನ್ನು ದೇವತೆಗಳು ಬಹುಸ್ಥಳಗಳಲ್ಲಿ ಆರಾಧಿಸುವರು.

ವಿವರಣೆ : 'ರಾಷ್ಟ್ರೀಂ' ಎಂದರೆ 'ಈಶ್ವರೀಂ ಸರ್ವಭೂತಾನಾಂ' ಎಂಬುದಕ್ಕೆ ವಿವರಣೆ. ರಾಷ್ಟ್ರವೆಂಬ ಭೂರೂಪಕ್ಕೆ ಅಭಿಮಾನಿ ದೇವತೆಯೆಂದೂ ಹೇಳುವುದುಂಟು. ರಾಷ್ಟ್ರವೆಂಬುದೂ ರಾಜಕೀಯ ಸಂಪತ್ತೇ. ಇದಿದ್ದರೆ ಉಳಿದ ಧನಕನಕ ಧಾನ್ಯಾದಿ ಇತರ ಎಲ್ಲವೂ ಸಾಧ್ಯವಾದುದರಿಂದ, ಲಕ್ಷ್ಮೀದೇವಿಯನ್ನು ರಾಷ್ಟ್ರೀ ಎಂದು ಕರೆಯುವುದು ಸರಿಯಾಗಿದೆ. 'ಸಂಗಮನೀ' ಎಂದರೆ ಭಕ್ತರಿಗಾಗಿ ಧನಸಂಚಯ ಮಾಡುವವಳೆಂದೂ, ತಂದು ಕೊಡುವವಳೆಂದೂ ಅರ್ಥ. ಭಗವಂತನು ಯಜ್ಞಸ್ವರೂಪನಾಗಿ 'ಯಜ್ಞೋ ವೈ ವಿಷ್ಣುಃ' ಎನಿಸಿದ ಮೇಲೆ, ಇವಳೂ ಯಜ್ಞಿಯಳಾಗುತ್ತಾಳಲ್ಲವೇ ! ಭಗವಂತನನ್ನಾಶ್ರಯಿಸಿದವರಲ್ಲಿ ಇವಳೇ ಮೊದಲಿಗಳೆಂಬುದೂ ಸರಿಯೇ.

ಪ್ರಥಮ ಶೇಷಭೂತಳೆಂದರ್ಥ. (ನಮ್ಮ ದೃಷ್ಟಿಯಲ್ಲಿ ಅವಳು ನಮಗೆ ಶೇಷಿಯಾದರೂ, ದೇವರ ದೃಷ್ಟಿಯಲ್ಲಿ ಶೇಷಭೂತಳು.) ಇಂಥವಳೇ ಹಲವು ರೂಪ ಧರಿಸಿ, ಹಲವೆಡೆಗಳಲ್ಲಿ, ದಿವ್ಯಮಂಗಳ ವಿಗ್ರಹಗಳನ್ನು ಧರಿಸಿ, ಧನ ಲಕ್ಷ್ಮೀ, ಧಾನ್ಯಲಕ್ಷ್ಮೀ, ವಿದ್ಯಾಲಕ್ಷ್ಮಿ, ವೀರಲಕ್ಷ್ಮೀ ಮುಂತಾದ ರೂಪಗಳಲ್ಲಿ ಭಕ್ತರನ್ನನುಗ್ರಹಮಾಡುತ್ತಿರುವುದೂ ಪ್ರಸಿದ್ಧ —ಭೂರಿಸ್ಥಾತ್ರಾಂ.

ಯಥಾ ಸರ್ವಗತೋ ವಿಷ್ಣುಃ ತಥೈವೇಯಂ ದ್ವಿಜೋತ್ತಮ ।
(ವಿ. ಪು. I–8–17)

ಎಂಬುದು ಇಲ್ಲಿ ಸ್ಮರಣೀಯ. ಭಗವಂತನಂತೆಯೇ ಇವಳೂ ಸರ್ವಗತ ಳೆಂದರ್ಥ.

ಯಾವದ್ಬ್ರಹ್ಮ ವಿಷ್ಠಿತಂ ತಾವತೀ ವಾಕ್ (ಋ. ಸಂ. X-114-8)

ಎಂಬಂತೆ ಶ್ರುತಿಯೂ ಈ 'ವಾಗ್ದೇವಿ'ಯನ್ನು ಪರಮಾತ್ಮನಷ್ಟೇ, ಅವ ನಂತೆಯೇ, ಸರ್ವವ್ಯಾಪಿನಿಯನ್ನಾಗಿ ಕೊಂಡಾಡಿದೆ.

ನಾಲ್ಕನೆಯ ಮಂತ್ರ

## ನಿಗ್ರಹಾನುಗ್ರಹವುಳ್ಳವಳು

ಮಯಾ ಸೋ ಅನ್ನಮತ್ತಿ ಯೋ ವಿಪಶ್ಯತಿ
ಯಃ ಪ್ರಾಣಿತಿ ಯ ಈಂ ಶೃಣೋತ್ಯುಕ್ತಂ ।
ಅಮನ್ತವೋ ಮಾನ್ತ ಉಪಕ್ಷಿಯನ್ತಿ
ಶ್ರುಧಿ ಶ್ರುತಃ ಶ್ರದ್ಧಿವಂ ತೇ ವದಾಮಿ ॥೪॥

ಅರ್ಥ : ಯಾವನು ಅನ್ನವನ್ನುಣ್ಣುತ್ತಾನೋ, ಅವನು ನನ್ನಿಂದಲೇ

(ನನ್ನನುಗ್ರಹದಿಂದಲೇ) ಹಾಗೆ ಮಾಡುತ್ತಾನೆ ಯಾವನು (ಮಂಗಳವನ್ನು) ಕಾಣುತ್ತಾನೋ ಅವನು ನನ್ನನುಗ್ರಹದಿಂದಲೇ ಅದನ್ನು ಕಾಣುತ್ತಾನೆ. ಯಾವನು ಉಸಿರಾಡುತ್ತಾನೋ, ಕೇಳುತ್ತಾನೋ ಅದನ್ನೆಲ್ಲ ನನ್ನ ಕೃಪೆಯಿಂದಲೇ ಉಸಿರಾಡಿ, ಕೇಳುತ್ತಾನೆ. ಅಕಾರವಾಚ್ಯನ ಪತ್ನಿಯಾದ ನನ್ನನ್ನು ಯಾರು ಅಪಮಾನಗೊಳಿಸುತ್ತಾರೋ ಅವರು ಹಾಳಾಗುತ್ತಾರೆ. ಕಿವಿಯುಳ್ಳವನೇ ! ಕೇಳು. ಶ್ರೀಮನ್ನಾರಾಯಣ ತತ್ತ್ವವನ್ನು (ಅಷ್ಟಾಕ್ಷರ ಮಂತ್ರವನ್ನು) ನಿನಗೆ ಉಪದೇಶಿಸುತ್ತೇನೆ.

ಅಥವಾ ಶ್ರೀವಾದಿರಾಜರ ಪ್ರಕಾರ : ಯಾವನು. ವಿಪಶ್ಯತಿ— ನಾನು (ಮೇಲೆ) ಹೇಳಿದ್ದಕ್ಕಿಂತ ವಿಪರೀತವಾಗಿ ತಿಳಿಯುವನೋ, ಯಾವನು ಪ್ರಾಣಿತಿ —ಸಾಯದೇ ಉಸಿರಾಡುವುದೇ ಪುರುಷಾರ್ಥವೆಂದು ಭ್ರಮಿಸಿರುವನೋ, ಮತ್ತು, ಯಾವನು, ಈಂ ಉಕ್ತಂ —ನನ್ನಿಂದ ಹೇಳಲ್ಪಟ್ಟ ಎಲ್ಲ ತತ್ತ್ವಗಳನ್ನು ಶಿಷ್ಯಭಾವದಿಂದ ಕೇಳುವನೋ, ಇವರೆಲ್ಲರೂ (ಪ್ರತಿಕೂಲರೂ, ಅನುಕೂಲರೂ ಸಹ) ನನ್ನಿಂದಲೇ ಅನ್ನಾದಿಗಳನ್ನು ಪಡೆದು ಉಣ್ಣುತ್ತಾರೆ. (ಆದರೆ) ನನ್ನನ್ನು ಅವಮಾನಮಾಡುವವರೆಲ್ಲ ಬೇಗನೆ ನಾಶವನ್ನು ಹೊಂದುತ್ತಾರೆ ನಾನು (ಶ್ರದ್ಧಿವಂ —ಶ್ರದ್ಧಾವದ್ಭಿಃ ಪ್ರಾಪ್ಯಂ ವಚನಂ) ಶ್ರದ್ಧಾಳುಗಳಿಗೆ ಲಭ್ಯವಾಗುವ ಈ ಮಾತನ್ನು ನಿನಗೆ ಉಪದೇಶಿಸುತ್ತಿದ್ದೇನೆ. ನೀನೂ ಕೇಳು, ತಟಸ್ಥರೂ ಕೇಳಲಿ.

ವಿವರಣೆ : 'ವಿಪಶ್ಯತಿ, ಪ್ರಾಣಿತಿ, ಶೃಣೋತಿ' ಎಂದರೆ, ನೋಡುವವನು, ಕೇಳುವವನು, ಉಸಿರಾಡುವವನು —ಇವರೆಲ್ಲ ಭಗವಂತನಿಂದಲೇ ಆ ಶಕ್ತಿಯನ್ನು ಪಡೆದಿದ್ದಾರೆಂಬುದು ಶ್ರುತಿಪ್ರಸಿದ್ಧ. ಕೇನೋಪನಿಷತ್ತಿನಲ್ಲಿ "ಯಚ್ಚಕ್ಷುಷಾ ನಪಶ್ಯತಿ, ಯೇನ ಚಕ್ಷೂಂಷಿ ಪಶ್ಯಂತಿ..." ಇತ್ಯಾದಿ ವಾಕ್ಯ ಇಲ್ಲಿ ಸ್ಮರಣೀಯ.) ಇವು ಉಳಿದೆಲ್ಲ ಚೈತನ್ಯಲಕ್ಷಣಕ್ಕೂ ಅನ್ವಯ. ರಕ್ತ ಸಂಚಲನ, ಉಂಡ ಅನ್ನದ ಪಚನ, ಬುದ್ಧಿಯ ಕೆಲಸ, ಇವೆಲ್ಲಕ್ಕೂ ಭಗವಂತನೇ ಆಧಾರ, ಮೂಲ ಕಾರಣ. "ಕೋಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ ? ಯದೇಷ ಆಕಾಶ ಆನಂದೋ ನ ಸ್ಯಾತ್" ಎಂದು ತೈತ್ತಿರೀಯ ಉಪನಿಷತ್ತು

ಕೇಳುತ್ತದೆ. "ಹೃದಯಾಕಾಶದಲ್ಲಿ ಈ ಆನಂದಮಯನಾದ ಭಗವಂತನಿಲ್ಲ ದಿದ್ದರೆ, ಯಾರು ತಾನೇ ಉಸಿರಾಡುತ್ತಿದ್ದರು ? ಬೇರಾರುತಾನೇ ಉಸಿರಾ ಡುವಂತೆ ಮಾಡಬಲ್ಲರು ?" ಎಂದು. ಇದನ್ನು ಮಾಡಿಸುವ ಭಗವಂತನು ಸದಾ ಶ್ರಿಯಃ ಪತಿಯಾಗಿಯೇ ಇರುವನಾದ್ದರಿಂದ, ಅವಳಿಗೂ ಇದರಲ್ಲಿ ಅನ್ವಯವಿದೆಯೆಂದು ಇಲ್ಲಿ ಹೇಳಿದಂತಾಗಿದೆ ಮಾತ್ರ.

ಶ್ರೀ ವಾದಿರಾಜರ ವಿವರಣೆಯಲ್ಲಿ 'ವಿಪಶ್ಯತಿ' ಎಂಬುದನ್ನು 'ವಿಶೇಷಣ ಪಶ್ಯತಿ' ಎಂದು ಹೇಳದೆ, 'ವಿರುದ್ಧತಯಾ ಪಶ್ಯತಿ' ಎಂದು ಹೇಳಿ ವಿವರಿಸಿ, ಇದು ಲಕ್ಷ್ಮೀಕಟಾಕ್ಷ ಬಾಹಿರನಾಗುವ ಬಗೆಯೆಂದು ವಿವರಿಸಿದೆ. ಮತ್ತು 'ವಿಪಶ್ಯತಿ, ಪ್ರಾಣಿತಿ, ಶೃಣೋತಿ' ಎಂಬ ಮೂರನ್ನೂ ಮೂರು ಬೇರೆ ಬೇರೆ ಬಗೆಯ ಜೀವರುಗಳಿಗೆ— (ಮಾಧ್ವಸಂಪ್ರದಾಯದಲ್ಲಿ ಜೀವರಲ್ಲೇ ನಿತ್ಯ ತ್ರೈವಿಧ್ಯವನ್ನು ಹೇಳುವುದುಂಟು;) ಅನ್ವಯಿಸುವಂತೆ ವಿವರಿಸಲಾಗಿದೆ. ಶಿಷ್ಯಭಾವದಿಂದ ಕೇಳುವವನು ಸಾತ್ವಿಕ, ವಿಪರೀತವಾಗಿ ನೋಡುವವನು ರಾಜಸ. ಕೇಳಿಯೂ; ನೋಡಿಯೂ, ಕೇಳದೇ, ನೋಡದೇ, ಬದುಕಿಯೂ ಸತ್ತಂತೆ ಕೇವಲ ಉಸಿರಾಡುವವನು ತಾಮಸ ಎಂದು ಭಾವ ಈ ತಾರತಮ್ಯ ಕ್ಕನುಗುಣವಾಗಿ ಲಕ್ಷ್ಮೀಕಟಾಕ್ಷ ಫಲದಲ್ಲೂ ತಾರತಮ್ಯವನ್ನು ಅಲ್ಲಿ ಗ್ರಹಿಸ ಬೇಕು.

ಈಂ ಎಂಬುದು ಲಕ್ಷ್ಮೀವಾಚಕವೆಂದು ವೇದಪ್ರಸಿದ್ಧಿಯುಂಟು : "ಗಾಯತ್ರಿ ಈಂ ಜುಷಸ್ವ ನಃ" "ಎಲೈ ಗಾಯತ್ರಿಯೇ, ಲಕ್ಷ್ಮೀದೇಯು ನಮ್ಮಲ್ಲಿ ಪ್ರೀತಿಯುಳ್ಳವಳಾಗುವಂತೆ ಮಾಡು" ಎಂದು ದಿನವೂ ಗಾಯತ್ರೀ ಆವಾಹನ ಕಾಲದಲ್ಲಿ ಹೇಳುತ್ತೇವಷ್ಟೆ !

ಈಂ ಎಂಬುದಕ್ಕೆ 'ಈದೃಶೀಂ ಮಾಂ' —'ಇಂಥ ನನ್ನನ್ನು' ಎಂದು ಲಕ್ಷ್ಮೀಭಾವದಲ್ಲಿ ಸಾಯಣರ ವಿವರಣೆ. 'ಇತ್ಥಂ ಉಕ್ತಂ', 'ಹೀಗೆ ಹೇಳ ಲ್ಪಟ್ಟದ್ದೆಲ್ಲವನ್ನೂ' ಎಂದು ವಾದಿರಾಜರು ಗ್ರಹಿಸಿ, ಲಕ್ಷ್ಮಿಯಿಂದ ಉಕ್ತ ವಾದ ಹಿತೋಪದೇಶದೊಡನೆ ಇದನ್ನು ಅನ್ವಯ ಮಾಡಿದ್ದಾರೆ.

ಲಕ್ಷ್ಮೀಕಟಾಕ್ಷ ಬಾಹಿರರು ಹಾಳಾಗುವರೆಂದು ಮಂತ್ರದಲ್ಲಿ ಹೇಳಿರು

ವುದು ಅನುಭವದಲ್ಲೇ ಇರುವಾಗ ಉದಾಹರಣೆಗಳನ್ನು ಹುಡುಕುವುದು ಅವಶ್ಯವಾಗಲಾರದಷ್ಟೆ ! "ಅಮನ್ತವಃ" ಎಂದರೆ ಲಕ್ಷ್ಮೀದೇವಿಯ ಮಹಿಮೆಯನ್ನು ತಿಳಿಯದವರೂ, ತಿಳಿದೂ ಅಪಮಾನ ಮಾಡುವವರೂ, ಉದಾಸೀನರಾಗಿರುವವರೂ ಆಗಬಹುದು. ಅವತಾರ ಕಾಲಗಳಲ್ಲಿ ಭಗವಂತನಿಗೇ ಈ ಬಗೆಯ ಅನುಭವಗಳುಂಟೆಂಬುದನ್ನು ಅವನೇ ಗೀತೆಯಲ್ಲಿ ಹೇಳಿಕೊಂಡಿರುವುದು ಪ್ರಸಿದ್ಧ. "ಅವಜಾನನ್ತಿ ಮಾಂ ಮೂಢಾಃ, ಪರಂ ಭಾವಂ ಅಜಾನನ್ತಃ, ಮಾಂ ತು ವೇದ ನ ಕಶ್ಚನ," ಇತ್ಯಾದಿ ಗೀತಾವಾಕ್ಯಗಳು ಇಲ್ಲಿ ಅನುಸಂಧೇಯ. ದೇವರಿಗೇ ಆದ ಅಪಮಾನ ಲಕ್ಷ್ಮಿಗೂ ಆದಂತೆ. ಐಶ್ವರ್ಯಮದಮತ್ತರು ತಮ್ಮ ಬಲದಿಂದಲೇ ತಮಗೆ ಐಶ್ವರ್ಯ ಪ್ರಾಪ್ತಿಯಾಯಿತೆಂದು ತಿಳಿದರೆ ಸಾಕು; ಇದೇ ಲಕ್ಷ್ಮಿಗೆ ಅಪಮಾನ. ಇಂದ್ರಾದಿ ದೇವತೆಗಳಿಗೆ ಆಗಾಗ ರಾಜ್ಯಭೋಗ ಹೋಗುವುದೇ ಹೀಗೆ. ಈ ಕಟಾಕ್ಷ ದೊರೆತರ ಅಯೋಗ್ಯನೂ ಅಧಿಕಾರಕ್ಕೆ ಬರುವುದನ್ನು ಕಣ್ಣಿಂದಲೇ ಕಾಣುತ್ತಿದ್ದೇವೆ. ನಹುಷನು ಇಂದ್ರಪದವಿಗೆ ಬಂದುದೂ, ಆಮೇಲೆ ಅಲ್ಲಿಂದ ಬಿದ್ದುದೂ ಈ ಕಟಾಕ್ಷಪ್ರಾಪ್ತಿ, ಅಪ್ರಾಪ್ತಿಗಳಿಂದಲೇ. ಇದು ನಶ್ವರಭೋಗಕ್ಕೆ ಉದಾಹರಣೆ. ಪರಮನಿಃಶ್ರೇಯಸವಾದ ಮೋಕ್ಷಕ್ಕೆ ಲಕ್ಷ್ಮೀದೇವಿಯೇ ದಾರಿತೋರುವವಳು. "ನಿನಗೆ ಹಿತವನ್ನು ಹೇಳುತ್ತೇನೆ, ಕೇಳು" ಎಂದು ಇಲ್ಲಿ ಹೇಳುವವಳೇ, ಹಿಂದೆ ರಾವಣನಿಗೆ "ತೇನ ಮೈತ್ರೀ ಭವತು ತೇ" ಎಂದು ರಾಮನೊಡನೆ ಸ್ನೇಹಭಾವದ ಶರಣಾಗತಿಗೆ (ಮೈತ್ರಿಯೂ ಶರಣಾಗತಿಯ ಪ್ರಕಾರವೇ,) ಪ್ರೇರಿಸಿದಳು. ಅವನು ಕೇಳಲಿಲ್ಲ! ಹಾಳಾದ! "ನಿನಗೆ ಹಿತವನ್ನೇ ಹೇಳುತ್ತೇನೆ, ಕೇಳು", "ತತೋ ವಕ್ಷ್ಯಾಮಿ ತೇ ಹಿತಂ" ಎಂದು ಭಗವಂತನು (ಅವನ ದಯೆಯು) ಅರ್ಜುನನಿಗೆ ಹೇಳಿದ ಹಿತವನ್ನು ಅವನು ಕೇಳಿ ಧನುರ್ಧರನಾದ! "ತತ್ರಶ್ರೀಃ ವಿಜಯಃ" ಎಂಬಂತೆ ಅಜರಾಮರ ಕೀರ್ತಿಯೂ, ರಾಜ್ಯಪ್ರಾಪ್ತಿಯೂ, ಇಹಪರ ಸೌಖ್ಯವೂ ಅರ್ಜುನನಿಗೆ ಆಯಿತು! ಆದ್ದರಿಂದ ಕರುಣಾಪೂರ್ಣಳಾದ ಲಕ್ಷ್ಮೀದೇವಿಯ ಬೋಧನೆ ಸಕಲರಿಗೂ ಹಿತವಾದುದು.

ಐದನೆಯ ಮಂತ್ರ

## ಬ್ರಹ್ಮರುದ್ರಾದಿಗಳನ್ನು ನಿಯಮಿಸುವವಳು

ಅಹಮೇವ ಸ್ವಯಮಿದಂ ವದಾಮಿ
ಜುಷ್ಟಂ ದೇವೇಭಿರುತ ಮಾನುಷೇಭಿಃ।
ಯಂ ಕಾಮಯೇ ತಂ ತಮುಗ್ರಂ ಕೃಣೋಮಿ
ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಸಂ ॥೫॥

**ಅರ್ಥ :** ದೇವತೆಗಳಿಂದಲೂ ಅಥವಾ ಮನುಷ್ಯರಿಂದಲೂ ಸೇವಿಸಲ್ಪಡುವ ಪರಬ್ರಹ್ಮತತ್ತ್ವವನ್ನು ಸ್ವಯಂ ನಾನೇ ನೇರವಾದ ಉಪದೇಶ ಮೂಲಕ ಹೇಳುತ್ತೇನೆ. ಯಾವನುಯಾವನನ್ನು (ರಕ್ಷಿಸಲು) ಆಶಿಸುತ್ತೇನೋ ಅವನವನನ್ನು ರುದ್ರನನ್ನಾಗಿಯೂ. ಹಾಗೇ ಚತುರ್ಮುಖ ಬ್ರಹ್ಮನನ್ನಾಗಿಯೂ, ಋಷಿವರ್ಯನನ್ನಾಗಿಯೂ, ಮಹಾಬುದ್ಧಿಶಾಲಿಯನ್ನಾಗಿಯೂ ಮಾಡುತ್ತೇನೆ.

**ವಿವರಣೆ :** ಇಲ್ಲಿ ಪ್ರಕಟವಾಗಿಯೇ ಲಕ್ಷ್ಮೀದೇವಿಯನ್ನು ಆಚಾರ್ಯ ಪರಂಪರೆಯಲ್ಲಿ ಮೊದಲನೆಯವಳೆಂದು ತೋರಿಸಿದಂತಾಗಿದೆ. ಲಕ್ಷ್ಮೀಕಟಾಕ್ಷ ವಿಲ್ಲದೆ ಪರಬ್ರಹ್ಮಪ್ರಾಪ್ತಿಯು ಅಸಾಧ್ಯ. ಇವಳೇ ಭಗವಂತನಿಗೂ ಜೀವ ವರ್ಗಕ್ಕೂ ಪ್ರಧಾನ ಘಟಕಳೂ, ಪುರುಷಕಾರ ಸ್ವರೂಪಿಣಿಯೂ ಸಹ.

ಎರಡನೆಯದಾಗಿ ಉಗ್ರಶಬ್ದವಾಚ್ಯನಾದ ರುದ್ರನೂ, ಚತುರ್ಮುಖ ಬ್ರಹ್ಮನೂ ಹೀಗೆ ಸಕಲ ಲೋಕಕಾರ್ಯಕರ್ತರೂ ಲಕ್ಷ್ಮೀಕಟಾಕ್ಷ ವಿಶೇಷ ದಿಂದಲೇ ಆ ಆ ಪದವಿಗಳನ್ನು ಹೊಂದಿದರೆಂದೂ ಹೇಳಿದೆ.

ಯಸ್ಯಾಃ ಕಟಾಕ್ಷವೀಕ್ಷಾ ಕ್ಷಣಲಕ್ಷಂ ಲಕ್ಷಿತಾಃ
ಮಹೇಶಾಃ ಸ್ಯುಃ।

ಶ್ರೀರಂಗರಾಜಮಹಿಷೀ ಸಾ
ಮಾಮಪಿ ವೀಕ್ಷ್ಯತಾಂ ಲಕ್ಷ್ಮೀಃ ॥

(ಶ್ರೀಸ್ತವ, ಶ್ಲೋ. ೧೦)

ಎಂದು ಶ್ರೀಕೂರನಾಥರು ವರ್ಣಿಸಿರುವುದೂ ಇದನ್ನೇ. "ಯಾವಳ ಕಡೆ ಗಣ್ಣೋಟದ ಕ್ಷಣಮಾತ್ರಕಾಲಕ್ಕೆ ಲಕ್ಷ್ಯವಾದವರೂ ಮಹೇಶ (ರುದ್ರ) ಪದವಿಯನ್ನು ಪಡೆಯುವರೋ. ಆ ರಂಗನಾಯಕೀ ದೇವಿಯು ನನ್ನನ್ನೂ ಕಟಾಕ್ಷಿಸಲಿ" ಎಂದರ್ಥ.

ರುದ್ರನಿಗೆ ಉಗ್ರನೆಂಬ ಹೆಸರು ವೇದೋಕ್ತವಾಗಿದೆ. "ಉಗ್ರಸ್ತ್ವೇಷನೃಮ್ಣಃ" ಎಂದು ಋಗ್ವೇದದಲ್ಲೂ. "ಉಗ್ರೋsಸಿ" ಎಂದು ಶತಪಥದಲ್ಲೂ "ಭೀಮಮುಗ್ರಂ ಮಹಾದೇವಂ" ಎಂದು ವಿಷ್ಣು ಪುರಾಣದಲ್ಲೂ ಇದು ಪ್ರಸಿದ್ಧ. "ಉಗ್ರಃ ಕಪರ್ದೀ ಶ್ರೀಕಂಠಃ" ಎಂದು ಅಮರಕೋಶದಲ್ಲೂ ಹೇಳಿದೆ. ಶಿವನು ಉಗ್ರನಾಗಿ ಲಯಕರ್ತನಾಗಿ ನೇಮಿಸಲ್ಪಟ್ಟದ್ದೂ ಲಕ್ಷ್ಮೀ ಕಟಾಕ್ಷದಿಂದಲೇ. ಹಾಗೇ ಬ್ರಹ್ಮ, ಇಂದ್ರಾದಿ ಪಟ್ಟಗಳೂ ಸಹ, ಕ್ರಾಂತದರ್ಶಿಗಳಾದ ವಸಿಷ್ಠ, ವಿಶ್ವಾಮಿತ್ರ, ವಾಮದೇವಾದಿ ಪಟ್ಟಗಳೂ ಕೆಲವೊಂದು ಜೀವಾತ್ಮರಿಗೆ ದೊರಕಲೂ ಈ ಲಕ್ಷ್ಮೀಕಟಾಕ್ಷವೇ ಬೇಕು. ಮೇಧಾವಿಯಾಗಿ ಒಬ್ಬನು ಬೃಹಸ್ಪತಿಯೂ, ಇನ್ನೊಬ್ಬನು ವನಸ್ಪತಿಯಂತೆ ಮೂಕನೂ ಜಡನೂ ಆಗಲೂ ಈ ಕಟಾಕ್ಷತಾರತಮ್ಯವೇ ಕಾರಣ. ಹೀಗೆ ಬ್ರಹ್ಮ ರುದ್ರ, ಇಂದ್ರಾದಿ ಪಟ್ಟಗಳೂ, ಋಷಿಗಳ ಸ್ಥಾನಗಳೂ ಬದಲಾಗಿ ಅಲ್ಲಿ ಬೇರೆಯವರು ಕಾಲಾನುಕ್ರಮದಲ್ಲಿ ಬರಲೂ ಸಹ ಇದೇ ಕಾರಣವೆಂದ ಮೇಲೆ, ಇವರನ್ನು ನಿಯಮಿಸುವ ಶ್ರಿಯಃಪತಿಗೂ, ನಿಮಾಮ್ಯರಾದ ದೇವತಾಮಾತ್ರರಿಗೂ, ಸಾಮ್ಯದ ಪ್ರಶ್ನೆ ಏಳುವುದಿಲ್ಲ! ರುದ್ರಾದಿಗಳಿಗೆ ಶ್ರಿಯಃಪತಿಯೇ ನಿಯಾಮಕನೆಂಬುದನ್ನು ವೇದದಲ್ಲಿ ಅಲ್ಲಲ್ಲೇ ಬಾಯ್ಬಿಟ್ಟೇ ಹೇಳಿದೆ. ಉದಾಹರಣೆಗೆ :

೧) ಅಸ್ಯ ದೇವಸ್ಯ ಮೀಢುಷೋ ವಯಾ
ವಿಷ್ಣೋರೇಷಸ್ಯ ಪ್ರಭೃಥೇ ಹವಿರ್ಭಿಃ ।

ವಿದೇಹಿ ರುದ್ರೋ ರುದ್ರಿಯಂ ಮಹಿತ್ವಂ
ಯಾಸಿಷ್ಟಂ ವರ್ತಿರಶ್ವಿನಾವಿರಾವತ್ ॥
ಋ. ಸಂ. VII-41-5

ಅರ್ಥ : "ಇಷ್ಟಾರ್ಥಗಳನ್ನು ಸುರಿಸುವವನೂ, ಪ್ರಾರ್ಥನೀಯನೂ, (ಸಹಜವಾದ) ದೇವತ್ವವುಳ್ಳವನೂ ಆದ ವಿಷ್ಣುವಿಗೆ ಕಳೆಯಂತೆ (ಶಾಖೆಯಂತೆ) ಇರುವ ರುದ್ರನು ಸರ್ವಮೇಧವೆಂಬ ದೊಡ್ಡ ಯಾಗದಲ್ಲಿ (ಪ್ರಭೃಥೇ) ಎಲ್ಲಾ ಹವಿಸ್ಸುಗಳನ್ನೂ ಸಮರ್ಪಿಸಿ (ರುದ್ರಿಯಂ) ರುದ್ರಪದವಿಯನ್ನೂ ದೊಡ್ಡತನವನ್ನೂ, ಪಡೆದನಲ್ಲವೇ ! ಎಲೈ ಅಶ್ವಿನೀ ದೇವತೆಗಳೇ, ಐಶ್ವರ್ಯ ಸಮೃದ್ಧವಾದ ಸ್ಥಾನವನ್ನು ನೀವೂ ವಿಷ್ಣುವಿನ ಅನುಗ್ರಹದಿಂದಲೇ ಪಡೆದಿರಿ."

ಇಲ್ಲಿನ ಸಂದರ್ಭವನ್ನು ಶ್ರೀಮಹಾಭಾರತದಲ್ಲೂ (ರಾಜಧರ್ಮ ೨೨-೧೨), ಹೀಗೇ ಉಪಬೃಂಹಣ ಮಾಡಿದೆ :

ಮಹಾದೇವಃ ಸರ್ವಮೇಧೇ ಮಹಾತ್ಮಾ
ಹುತ್ವಾತ್ಮಾನಂ ದೇವದೇವೋ ಬಭೂವ ।
ಸರ್ವಾನ್ ಲೋಕಾನ್ ವ್ಯಾಪ್ಯ ವಿಷ್ಟಭ್ಯ ಕೀರ್ತ್ಯಾ
ವಿರಾಜತೇ ದ್ಯುತಿಮಾನ್ ಕೃತ್ತಿವಾಸಾಃ ॥

"ಮಹಾದೇವನು ಮಹಾತ್ಮನಾಗಿದ್ದು, ಸರ್ವಮೇಧವೆಂಬ ಯಾಗದಲ್ಲಿ ತನ್ನನ್ನೇ ಅರ್ಪಿಸಿಕೊಂಡು ದೇವದೇವನಾದನು. ಅವನ ಕೀರ್ತಿಯು ಲೋಕಗಳನ್ನೆಲ್ಲ ವ್ಯಾಪಿಸಿ, ಗಜಚರ್ಮಾಂಬರನಾದ ಅವನು (ಇಂದಿಗೂ) ಕಾಂತಿಯುಕ್ತನಾಗಿ ಬೆಳಗುತ್ತಾನೆ". (ಋ. ಸಂ. V-3-3 ನ್ನು ನೋಡಿ. ಅಲ್ಲೂ ಇದನ್ನೇ ಹೇಳಿದೆ.) ಆದ್ದರಿಂದ ಶ್ರಿಯಃಪತಿಯ ಪಾರಮ್ಯವು ನಿರಾಬಾಧವಾದುದೆಂದು ವೇದವೇ ಹೇಳಿದಂತಾಗಿದೆ.

ಲಕ್ಷ್ಮಿಯು ರುದ್ರನಿಗೆ ಆ ಪದವಿಯನ್ನು ಪತಿಯೊಡನೆ ಸೇರಿಯೇ

ಫಲವನ್ನಾಗಿ ಅನುಗ್ರಹಿಸಿದಳಾದ್ದರಿಂದ ಲೋಕಕ್ಕೆ ಇಬ್ಬರು ನಿಯಾಮಕರೆಂಬ ಚೋದ್ಯಕ್ಕೂ ಅವಕಾಶವಿಲ್ಲ.

### ಆರನೇ ಮಂತ್ರ

## ರುದ್ರನಿಗೆ ಧನುಸ್ಸನ್ನು ಕೊಟ್ಟವಳು

ಅಹಂ ರುದ್ರಾಯ ಧನುರಾತನೋಮಿ
ಬ್ರಹ್ಮದ್ವಿಷೇ ಶರವೇ ಹನ್ತವಾ ಉ।
ಅಹಂ ಜನಾಯ ಸಮದಂ ಕೃಣೋಮಿ
ಅಹಂ ದ್ಯಾವಾಪೃಥಿವೀ ಆವಿವೇಶ ॥೬॥

ಅರ್ಥ : ॥೧॥ ಬ್ರಹ್ಮದ್ವೇಷಿಗಳಾದ, ಹಿಂಸಕರಾದ, (ತ್ರಿಪುರವಾಸಿಗಳಾದ) ಅಸುರನ(ರ)ನ್ನು ಕೊಲ್ಲುವುದಕ್ಕೆಂದು ರುದ್ರನಿಗೆ ಧನುಸ್ಸನ್ನು ನಾನೇ ಕೊಡುತ್ತೇನೆ, (ಅಥವಾ ಹೆದೆಯೇರಿಸುತ್ತೇನೆ) ನನ್ನ ಭಕ್ತರಿಗಾಗಿ (ಅವರ ರಕ್ಷಣೆಗೆಂದು) ಯುದ್ಧವನ್ನು ಮಾಡುತ್ತೇನೆ. ದ್ಯಾವಾ ಪೃಥಿವಿಗಳನ್ನೂ ನಾನು ಆವೇಶಿಸಿದ್ದೇನೆ. (ಈ ವಿವರಣೆಯು ಶ್ರೀ ವೈಷ್ಣವ ಸಂಪ್ರದಾಯಕ್ಕೂ, ಸಾಯಣ ಭಾಷ್ಯಕ್ಕೂ ಅನುಗುಣವಾಗಿದೆ.)

॥೨॥ ಶ್ರೀವಾದಿರಾಜರು ಬೇರೆ ರೀತಿ ಅರ್ಥಮಾಡಿದ್ದಾರೆ. "ನಾನು ಪ್ರಳಯಕಾಲದಲ್ಲಿ, ಬ್ರಹ್ಮದ್ವೇಷಿಯಾದ— ಅಂದರೆ ಬ್ರಹ್ಮನ ಐದು ತಲೆಗಳಲ್ಲಿ ಒಂದನ್ನು ಕಡಿದು ಹಾಕಿ ಬ್ರಹ್ಮದ್ವೇಷಿಯೆನಿಸಿಕೊಂಡ. ಲಯಕರ್ತನೆನಿಸಿದ ರುದ್ರನನ್ನು ಕೊಲ್ಲಲು ಧನುಸ್ಸನ್ನು ಸೆಳೆಯುತ್ತೇನೆ. ಜನರಿಗೆ ನಾನು ಕೈವಲ್ಯವನ್ನು ಕರುಣಿಸುವೆನು. ದ್ಯಾವಾಪೃಥ್ವಿಗಳನ್ನು ಅವುಗಳ ಅಭಿಮಾನಿ ದೇವತೆಯಾಗಿ ಪ್ರವೇಶ ಮಾಡಿದ್ದೇನೆ".

ವಿವರಣೆಗಳು : ಈ ಎರಡನೆಯ ರೀತಿಯಲ್ಲಿ ನೋಡಿದಾಗ ಶಿವನು ಬ್ರಹ್ಮದ್ವೇಷಿಯೆಂಬ ಆಕ್ಷೇಪಕ್ಕೆ ಗುರಿಯಾಗುತ್ತಾನೆ. ಬ್ರಹ್ಮನಿಗೂ ಐದು ತಲೆ, ತನಗೂ ಐದು ತಲೆ ಆದರೆ ಪಂಚಾನನನೆಂಬ ಖ್ಯಾತಿ ತನಗೆ ಹೋಗುವುದರಿಂದ ಅಸೂಯೆಯಿಂದ, ತನ್ನ ತಂದೆಯಾದ ಬ್ರಹ್ಮನ ತಲೆಯನ್ನೇ ಶಿವನು ಕಡಿದು ಹಾಕಿದ ಕಥೆ ಪ್ರಸಿದ್ಧವಾದುದು. ಇದು ಮೊದಲಪಾತಕವಾದರೆ, ಶರವೇ ಎಂಬುದಕ್ಕೆ 'ಹಿಂಸಕಾಯ' ಎಂದು ಅರ್ಥಮಾಡಿ, ಸಂಹಾರ ಕಾಲದಲ್ಲಿ ಸಕಲ ಜಗದ್ವಧೆ ಮಾಡಿದ ಪಾಪವೂ ಇದೆಯಾಗಿ, ಇವೆರಡೂ ಲೋಪಗಳು ತನ್ನ ಪತಿಯಾದ ಶ್ರೀಮನ್ನಾರಾಯಣನಿಗಿಲ್ಲವಾದ್ದರಿಂದ ಅವನೇ ಸರ್ವೋತ್ತಮನೆಂದು ಈ ಮಂತ್ರ ತೋರಿಸುವುದೆಂದೂ ಅಲ್ಲಿ ವ್ಯಾಖ್ಯಾನದಲ್ಲಿ ಹೇಳಿದೆ. 'ಬ್ರಹ್ಮದ್ವಿಷೇ, ಶರವೇ' ಎಂಬ ಎರಡೂ ವಿಶೇಷಣಗಳಿಂದ ಮಹಾರುದ್ರನನ್ನೇ ಹೇಳಿದೆಯೇ ವಿನಾ ಬೇರೆಯವರನ್ನಲ್ಲ ಎಂದು ವಿವರಿಸಲಾಗಿದೆ.

## ಸರ್ವಮೃತ್ಯು ಯಾರು ?

"ಮೃತ್ಯುಃ ಯಸ್ಯೋಪಸೇಚನಂ"— "ಮೃತ್ಯುದೇವತೆಯೂ ಯಾವನಿಗೆ ಉಪ್ಪಿನಕಾಯಿಯಂತಿರುವನೋ, ಅಂಥ ಭಗವಂತನನ್ನು ಯಾರು ತಾನೆ ಅರಿಯ ಬಲ್ಲರು ?" ಎಂದು ಕಠೋಪನಿಷತ್ತಿನಲ್ಲಿ ಯಮನು ಹೇಳುವುದಕ್ಕೆ ಇದು ಅನುಗುಣವಾಗಿದೆ. ಮೃತ್ಯುವು ಯಮನೂ ಆಗಬಲ್ಲನು, ರುದ್ರನೂ ಆಗಬಲ್ಲನು. ಉಳಿದವರನ್ನೆಲ್ಲ 'ಮುಗಿಸುವುದು' ಇವರ ಕೆಲಸವಾದಲ್ಲಿ ಇವರನ್ನು ಮುಗಿಸುವುದು ದೇವರ ಕೆಲಸ ಎಂದು ಭಾವ. ಉಳಿದ ಅನ್ನವನ್ನು ಗಂಟಲಲ್ಲಿಳಿಸುವುದು ಉಪ್ಪಿನಕಾಯಿಯ ಕೆಲಸ. ಅದೆಲ್ಲ ಇಳಿದ ಮೇಲೆ ಉಪ್ಪಿನಕಾಯಿಯನ್ನು ಹೇಗೆ ತಿಂದು ಮುಗಿಸುವರೋ, ಹಾಗೆ ಯಮ ರುದ್ರಾದಿಗಳೂ ಮುಗಿದು ಹೋಗುವರೆಂಬುದು ವೇದವೇದಾಂತ

ಇತಿಹಾಸ ಪುರಾಣಾದಿಗಳಿಗೆ ಸಂಪ್ರಮ್ಮತವೇ. ( ಶೃ-ಹಿಂಸಾಯಾಂ ಧಾತುವಿನಿಂದ ಶರವೇ ಎಂದರೆ ಹಿಂಸಕನಾದ ರುದ್ರನಿಗೇ ಇದು ಅನ್ವಯ ಎಂದು ವಿವರಣಕಾರರು ಬರೆಯುತ್ತಾರೆ. ) ತಾರತಮ್ಯ ಕ್ರಮದಲ್ಲಿ ರುದ್ರನಿಗಿಂತ ಉತ್ತಮನಾದ ಬ್ರಹ್ಮನನ್ನು ಹಿಂಸಿಸಿದ (ತಲೆಕಡಿದುಕೊಂಡ) ಹಿಂಸಕನನ್ನು ಹೀಗೆ ಕೊಲ್ಲುವುದು ಯುಕ್ತವೆಂದು ವಾದಿರಾಜರ ವ್ಯಾಖ್ಯಾನದಲ್ಲಿ ಹೇಳಿದೆ: "ಏವಂ ಚ ಮಹತಾಂ ದ್ರೋಹಿಣೋಃ ಹಿಂಸಾ ಸರ್ವಥಾ ಕಾರ್ಯಾ ಇತಿ ಸೂಚನಾಯ ವಾ ಹಂತುಮೇವ ಇತ್ಯುಕ್ತಂ।"

ಶ್ರೀವೈಷ್ಣವ ಮತ್ತು ಸ್ಮಾರ್ತ ಸಂಪ್ರದಾಯಾರ್ಥಕ್ರಮದಲ್ಲಿ ಮೊದಲಿನ ಅರ್ಥ ದೊರೆತಾಗ, ಅಲ್ಲಿ ಹಿಂಸಕರೆಂದರೆ ತ್ರಿಪುರವಾಸಿಗಳಾದ ಅಸುರರು. ಅವರನ್ನು ಕೊಲ್ಲಲು ಬಿಲ್ಲೆತ್ತಿದವನು ರುದ್ರ. ಅದನ್ನು ಆವನಿಗೆ ಶ್ರಿಯಃ ಪತಿಯು ಕೊಟ್ಟಿದ್ದರಿಂದ ಲಕ್ಷ್ಮಿಯೇ ಕೊಟ್ಟಂತಾಯಿತು. ಭಕ್ತರ ರಕ್ಷಣೆಗಾಗಿ ಈ ಬಿಲ್ಲು ಇರುವುದು. ಇತ್ಯಾದಿ ವಿಷಯಗಳಿಗೆ ವೇದೋಕ್ತ ಪ್ರಮಾಣಗಳನ್ನು ಈಗ ನೋಡೋಣ.

## ವೇದೋಕ್ತ ತ್ರಿಪುರದಹನ ಕಥೆ

ತೈತ್ತಿರೀಯಸಂಹಿತೆ (VI-2-3) ಯಲ್ಲಿ ಈ ಕಥೆ ಹೀಗೆ ಬರುತ್ತದೆ:

ತೇಷಾಮಸುರಾಣಾಂ ತಿಸ್ರಃ ಪುರ ಆಸನ್ ಅಯಸ್ಮಯ್ಯಾವಮಾಥ ರಜತಾಥ ಹರಿಣೀ। ತಾ ದೇವಾ ಜೇತುಂ ನಾಶಕ್ನುವನ್। ತಾ ಉಪಸದೈವಾ ಜಿಗೀಷನ್। ತಸ್ಮಾದಾಹುಃ ಯಶ್ಚೈವಂ ವೇದ ಯಶ್ಚ ನೋಪಸದಾ ವೈ ಮಹಾಪುರಂ ಜಯನ್ತೀತಿ। ತ ಇಷುಂ ಸಮಸ್ಕುರ್ವತ। ಅಗ್ನಿಮನೀಕಂ ಸೋಮಂ ಶಲ್ಯಂ ವಿಷ್ಣುಂ

ತೇಜನಂ । ತೇऽಬ್ರುವನ್ ಕ ಇಮಾಮಸಿಷ್ಯತೀತಿ । ರುದ್ರ ಇತ್ಯಬ್ರುವನ್, ರುದ್ರೋ ವೈ ಕ್ರೂರಸ್ಸೋಽಸ್ಯತ್ವಿತಿ । ಸೋऽಬ್ರವೀತ್ ವರಂ ವೃಣಾ ಅಹಮೇವ ಪಶೂನಾಮಧಿಪತಿರಸಾನೀತಿ । ತಸ್ಮಾತ್ ರುದ್ರಃ ಪಶೂನಾಮಧಿಪತಿಃ । ತಾಂ ರುದ್ರೋ ವಾಸೃಜತ್ ಸ ತಿಸ್ರಃ ಪುರೋಽಭಿ ತ್ತ್ವೈಭ್ಯೋ ಲೋಕೇಭ್ಯೋ ಸುರಾನ್ ಪ್ರಾಣುದತ । (ಇತ್ಯಾದಿ)

ಅರ್ಥ : ಹಿಂದೊಂದು ಕಾಲದಲ್ಲಿ ತ್ರಿಪುರಾಸುರರೆಂದು ಪ್ರಸಿದ್ಧರಾದ ಅಸುರರಿಗೆ ಮೂರು ಕೋಟೆಗಳು ಇದ್ದವು ಚಿನ್ನ, ಬೆಳ್ಳಿ ಮತ್ತು ಕಬ್ಬಿಣಗಳಿಂದ ಆ ಕೋಟೆಗಳು ಆಗಿದ್ದವು, ಇವುಗಳನ್ನು ಗೆಲ್ಲಲು ದೇವತೆಗಳಿಗೆ ಆಗಲಿಲ್ಲ. ಆಗ ಉಪಸತ್ ಎಂಬ ಕ್ರಿಯಾ ವಿಶೇಷಗಳಿಂದ ಅವರನ್ನು ಗೆಲ್ಲಲು ಯೋಚಿಸಿದರು. ( ಈ ಉಪಸದಗಳೆಂದರೆ ತೈ. ಸಂ. ದಲ್ಲಿಯೇ ಬೇರೊಂದು ಕಡೆ ಮೂರು ಆಹುತಿಗಳೆಂದು ಹೇಳಿ, ಅವುಗಳನ್ನು ಅಗ್ನಿಯಲ್ಲಿ ಅರ್ಪಿಸಿದರೆ ಈ ಅಸುರರು ಸೋತು ಓಡಿಹೋಗುವವರೆಂದು ಹೇಳಿದೆ; ಯಾ ತೇ ಅಗ್ನೇ ರುದ್ರಿಯಾ ತನೂಃ ತಯಾ ನಃ ಪಾಹಿ ತಸ್ಯಾಸ್ತೇ ಸ್ವಾಹಾ ಯಾ ತೇ ಅಗ್ನೇ ಅಯಾಶಯಾ ರಜಾಶಯಾ ಹರಾಶಯಾ ತನೂಃ ವರ್ಷಿಷ್ಠಾಃ.... ... ಇತ್ಯಾದಿ. ತೈ. ಸಂ. 1–2–11.2. ಇಲ್ಲಿ ಅಗ್ನಿಯ ಮೂರು ರೂಪಗಳು ಕಬ್ಬಿಣ, ಬೆಳ್ಳಿ ಮತ್ತು ಚಿನ್ನದಲ್ಲಿ ಅಡಗಿಕೊಂಡು ಅಲ್ಲಿ ಒಳಗಿರುವ ಉಗ್ರವಾಕ್ಯಗಳು, ದ್ವೇಷವಾಕ್ಯಗಳು ಮೊದಲಾದ ಅಸುರರನ್ನು ಕೊಲ್ಲುತ್ತವೆ, ಎಂದು ಹೇಳಿದೆ ಈ ಮಂತ್ರಗಳನ್ನು ಹೇಳುತ್ತ ಆಜ್ಯಾಹುತಿಗಳನ್ನು ಸಮರ್ಪಿಸಿದರೆ ಇಂದಿಗೂ ತ್ರಿಪುರಾಸುರರು ಸಾಯುವರೆಂದು ಹೇಳಿರುವಲ್ಲಿ ಸಾಂಕೇತಿಕತೆ ಎದ್ದು ಕಾಣುತ್ತದೆ. ಮಾತೆಂಬುದೂ ಒಂದು ಕೋಟೆಯೇ. ಉಗ್ರತ್ವ, ದ್ವೇಷ ಮೊದಲಾದವು ಈ ಕೋಟೆಯಲ್ಲಿರುವ ಅಸುರರು. ಕಬ್ಬಿಣವು ಕಪ್ಪು ಬಣ್ಣದ್ದಾಗಿ ತಾಮಸ ಗುಣಕ್ಕೂ, ಬೆಳ್ಳಿಯು ಬಿಳೀ ಬಣ್ಣದ್ದಾಗಿ ಸಾತ್ತ್ವಿಕ ಗುಣಕ್ಕೂ, ಚಿನ್ನವು ಕೆಂಪು ಮಿಶ್ರ, ಹಳದೀ ಬಣ್ಣದ್ದಾಗಿ ರಾಜಸ ಗುಣಕ್ಕೂ ಸಂಕೇತವಾಗಿ ಈ ತ್ರಿಗುಣ

ಗಳು ಮನುಷ್ಯನನ್ನು ಕಟ್ಟಿಹಾಕಿರುವ ಕೋಟೆಗಳಾಗಿವೆ. ರಾಗ, ಕ್ರೋಧ ಮೊದಲಾದ ಭಾವಗಳೇ ಇಲ್ಲಡಗಿರುವ ಅಸುರರು. ಪ್ರಜ್ಞಾ ತತ್ತ್ವಕ್ಕೆ ಸಂಕೇತವಾದ ಅಗ್ನಿಯು ಈ ಕೋಟೆಗಳನ್ನು ಭೇದಿಸಿ ಅಲ್ಲಿ ವಿಶ್ರಾಂತನಾಗಿ ಅಸುರರನ್ನು ಓಡಿಸುತ್ತಾನೆಂಬ ಕಥೆಗೆ ನಿತ್ಯನೂತನ ಅರ್ಥವಿರುವುದನ್ನು ವಾಚಕರು ಇಲ್ಲಿ ಮನಗಾಣಬೇಕು) ಈ ಆಜ್ಞಾಪ್ತಿಗಳ ಫಲವಾಗಿ ಅವರು ಒಂದು ಬಾಣವನ್ನು ತಯಾರಿಸಿದರು. ಅದರಲ್ಲಿ ಅಗ್ನಿಯನ್ನು 'ಅನೀಕ' ವೆಂಬ ತುದಿಯ ಭಾಗವನ್ನಾಗಿಯೂ, ಚಂದ್ರನನ್ನು ಶಲ್ಯವೆಂಬ ಮಧ್ಯಭಾಗ ವನ್ನಾಗಿಯೂ, ವಿಷ್ಣುವನ್ನು ತೇಜನವನ್ನಾಗಿಯೂ ಮಾಡಿದರು. (ತೇಜನ ವೆಂದರೆ ಇಡೀ ಬಾಣವೂ ಹೌದು. ಬಾಣಕ್ಕೂ, ಅದನ್ನು ಪ್ರಯೋಗಿಸು ವವನಿಗೂ ತೇಜಸ್ಸನ್ನು ಕೊಡುವವನೂ ಹೌದು.) ಆಗ ಯಾರು ಇದನ್ನು ಪ್ರಯೋಗಿಸಬಲ್ಲರು ?' ಎಂದು ತಮ್ಮಲ್ಲಿಯೇ ವಿಚಾರಿಸಿಕೊಂಡರು. ಕೊನೆಗೆ "ರುದ್ರನೇ ಅದನ್ನು ಪ್ರಯೋಗಿಸಬೇಕು; ಏಕೆಂದರೆ ಅವನೇ ನಮ್ಮೆಲ್ಲರಲ್ಲಾ ಕ್ರೂರತಮನು" ಎಂದು ನಿರ್ಣಯಿಸಿದರು. ಅವನನ್ನು ಕೇಳಿಕೊಂಡಾಗ ರುದ್ರನು ತನಗೊಂದು ವರಕೊಟ್ಟರೆ ಮಾತ್ರ ತಾನು ಆ ಕೆಲಸ ಮಾಡು ವುದಾಗಿ ನಿಬಂಧನೆ ಹಾಕಿದನು. ಆ ವರ ಯಾವುದೆಂದರೆ, ತಾನು ಪಶು ಗಳಿಗೆ ಅಧಿಪತಿಯಾಗಬೇಕೆಂಬುದೇ. (ಪಶುಪ್ರಾಯರಾದ ಸಂಸಾರಿ ಜೀವ ವರ್ಗಕ್ಕೂ, ಅಥವಾ ಯಾಗಾರ್ಪಿತವಾದ ಪಶುಗಳಿಗೂ ತಾನು ಅಧಿಪತಿಯಾ ಗಬೇಕೆಂಬುದೇ ಆ ವರ.) ದೇವತೆಗಳು ಹಾಗೇ ಆಗಲೆಂದೊಪ್ಪಿದರು, ಆಗ ರುದ್ರನು ದೇವನಿರ್ಮಿತ ಬಾಣಪ್ರಯೋಗಮಾಡಿ ಆ ಮೂರು ಕೋಟೆಗ ಳನ್ನೂ ಧ್ವಂಸಮಾಡಿ, ಅಸುರರನ್ನು ಕೊಂದನು.

## ತ್ರಿಪುರ ಹಂತಕನು ವಿಷ್ಣುವೇ ಎಂಬ ನಿರ್ಣಯ ಹೇಗೆ ಸಾಧು ?

ಈ ಕಥೆಯು ಋಕ್ಸಂಹಿತಾ (II-20-8) ಮುಂತಾದ ಮಂತ್ರಗಳಲ್ಲಿ ಅಲ್ಲಲ್ಲಿ

ಸೂಚ್ಯವಾಗಿಯೂ ಐತರೇಯ ಬ್ರಾಹ್ಮಣದಲ್ಲಿ (IV-6) ವಾಚ್ಯವಾಗಿಯೂ, ವಿಸ್ತಾರವಾಗಿಯೂ ಬಂದಿದೆ. ಈ ಸಂದರ್ಭಗಳಲ್ಲಿ ಒಮ್ಮೊಮ್ಮೆ ಅಗ್ನಿಯೇ ತ್ರಿಪುರಾಸುರ ಸಂಹಾರಕನೆಂದೂ, ಇದನ್ನು ಮಾಡಿದವನು ಇಂದ್ರನೆಂದೂ, ರುದ್ರನೆಂದೂ, ವಿಷ್ಣುವೆಂದೂ ಭಿನ್ನಭಿನ್ನವಾಗಿ ಹೇಳಿದೆಯಾಗಿ, ನಿಜವಾಗಿ ಇದು ಯಾರಿಂದಾಯಿತೆಂಬಲ್ಲಿ ವಾಚಕರಿಗೆ ಸಂದೇಹ ಬರುವುದು ಸಹಜ. ಪ್ರಕೃತ ವಾಗಾಂಭೃಣೀ ಮಂತ್ರದಲ್ಲಿ ಇದನ್ನು ಲಕ್ಷ್ಮಿಯೇ ಮಾಡಿದಳೆಂದು ಹೇಳಿ ರುವುದು ಇನ್ನಷ್ಟು ಗೊಂದಲಕ್ಕೂ ಆಗುತ್ತದೆ! ಪರಿಹಾರ ಹೇಗೆ?

೧) ಅಗ್ನಿಯನ್ನೇ ವೇದದ ಅನೇಕ ಕಡೆಗಳಲ್ಲಿ ರುದ್ರನೆಂದು ಕರೆದಿದೆ. (ರುದ್ರೋ ವಾ ಏಷ ಯದಗ್ನಿಃ —ತೈ. ಬ್ರಾ. II-1-3.) ಬಾಣದ ತುದಿ ಯಲ್ಲಿದ್ದವನು ಈ ಅಗ್ನಿಯೇ ಆದ್ದರಿಂದಲೂ, ಅದನ್ನೆಸೆದವನು ರುದ್ರನಾದು ದರಿಂದಲೂ ಇಬ್ಬರಿಗೂ ತಾದಾತ್ಮ್ಯವಿರುವುದರಿಂದಲೂ ಈ ವೈವಿಧ್ಯ ಪರಿ ಹಾರವಾಗುತ್ತದೆ.

೨) ಇಂದ್ರನನ್ನು ದೇವಸೇನಾನಿ ಎಂದು ವ್ಯವಹರಿಸುವುದರಿಂದ, ಯೋಧನ ಕೀರ್ತಿಯು ಸೇನಾನಿಗೇ ಆದುದರಿಂದ ಈ ಪ್ರಯೋಗವೂ ಸರಿಯೇ. "ನಾನು ಹೊಸಮನೆ ಕಟ್ಟಿದೆ" ಎಂದೊಬ್ಬನು ಹೇಳುವಾಗ, ಅವನೇ ಕಲ್ಲು ಇಟ್ಟಿಗೆ ಸಿಮೆಂಟಿನ ಕೆಲಸ ಮಾಡದಿದ್ದಾಗ್ಯೂ, ತಾನು ನಿಂತು ಮಾಡಿಸಿದನೆಂಬ ಅರ್ಥದಲ್ಲಿ ಇದು ಸರಿಯಾಗುವಂತೆ ಇಲ್ಲೂ ತಿಳಿಯ ಬೇಕಷ್ಟೆ!

೩) ವಿಷ್ಣುವೇ ಇದನ್ನು ಮಾಡಿದನೆಂಬಲ್ಲೂ ಈ ನ್ಯಾಯವನ್ನೇ ವಿಸ್ತಾರವಾಗಿ ಅನ್ವಯಿಸಿಕೊಳ್ಳಬೇಕು. ಬಾಣದಲ್ಲೂ, ಪ್ರಯೋಗ ಮಾಡು ವವನಲ್ಲೂ ಅಂತರ್ಯಾಮಿಯಾಗಿದ್ದು ಅವರ ತೇಜಸ್ಸನ್ನು ಬೆಳೆಸಿದನೆಂದು ಅಲ್ಲೇ ಸ್ಪಷ್ಟವಾಗಿ ಹೇಳಿದೆ. ಇನ್ನೂ ಹೆಚ್ಚಿನ ವಿವರವನ್ನು ಶ್ರೀಮಹಾಭಾರತದಲ್ಲಿ ಕಾಣಬಹುದು. (ಕರ್ಣಪರ್ವ, 32, 33, 34 ನೇ ಅಧ್ಯಾಯ. 16 ನೇ ದಿನದ ಯುದ್ಧ ಆರಂಭ.) ಶಲ್ಯನನ್ನು ಕರ್ಣನಿಗೆ ಸಾರಥಿಯಾಗುವಂತೆ ದುರ್ಯೋಧನನು ಕೇಳಿಕೊಂಡಾಗ, ಶಲ್ಯ ನಿರಾಕರಿಸುತ್ತಾ, ಸೂತಪುತ್ರನಿಗೆ

ಉತ್ತಮ ಕ್ಷತ್ರಿಯನಾದ ತಾನು ಸಾರಥ್ಯ ಮಾಡುವುದು ಸರಿಯಲ್ಲವೆನ್ನುತ್ತಾನೆ. ಆಗ ದುರ್ಯೋಧನನು ಈ ವೇದೋಕ್ತ ಕಥೆ ಹೇಳಿ, ಒಪ್ಪಿಸುತ್ತಾನೆಂದು ಸಂದರ್ಭ. ಈ ಕಥೆಯ ವಿವರದಲ್ಲಿ ರುದ್ರನು ತನಗೆ ಉತ್ತಮ ಧನುಸ್ಸನ್ನೂ, ಬಾಣವನ್ನೂ, ಸಾರಥಿಯನ್ನೂ, ರಥವನ್ನೂ, ದೇವತೆಗಳೇ ತಂದು ಕೊಡಬೇಕೆಂದೂ ಕೇಳಿಕೊಳ್ಳುತ್ತಾನೆ. (ಶ್ಲೋ. ೧೫) ಆಗ ದೇವತೆಗಳು ಭೂಮಿಯನ್ನು ರಥಮಾಡಿ, ವೇದಗಳನ್ನು ಕುದುರೆಗಳನ್ನಾಗಿಸಿ, ವಿಷ್ಣುವನ್ನೇ ಬಾಣವಾಡಿ, ವಾಯುವನ್ನು ಅದರ ರೆಕ್ಕೆಗಳನ್ನಾಗಿಸಿ, ಅಗ್ನೀಷೋಮರನ್ನು ಅದರ ತುದಿಯಲ್ಲಿಟ್ಟು, ಕೊಡುತ್ತಾರೆ. ಸೂರ್ಯಚಂದ್ರರೇ ಆ ರಥಕ್ಕೆ ಚಕ್ರಗಳಾಗುತ್ತಾರೆ. "ನಿನಗೆ ಯಾರು ಸಾರಥಿಯಾಗಬೇಕು ?" ಎಂದು ರುದ್ರನನ್ನು ದೇವತೆಗಳು ಕೇಳಿದಾಗ, ಅವನು

ಮತ್ತಃ ಶ್ರೇಷ್ಠತರೋ ಹಿ ಯಃ । (ಶ್ಲೋ. ೬೩)

ಎಂದು ಹೇಳಿ ಬ್ರಹ್ಮನನ್ನೇ ಅಪೇಕ್ಷಿಸುತ್ತಾನೆ. ಎಲ್ಲ ಸಿದ್ಧವಾಯ್ತು ಅಷ್ಟರಲ್ಲಿ. ವಿಷ್ಣುವನ್ನು ಬಾಣವನ್ನಾಗಿ ಹೊಂದಿದ ಧನುಸ್ಸನ್ನು ಶಿವನು ಹೇಗೆ ಧರಿಸಬಲ್ಲನೆಂಬ ದೇವಸಂದೇಹಕ್ಕೆ ಮಹಾಭಾರತ ಹೀಗೆ ಉತ್ತರಿಸುತ್ತದೆ :

ವಿಷ್ಣುರಾತ್ಮಾ ಭಗವತಃ ಭವಸ್ಯಾಮಿತ ತೇಜಸಃ ।
ತಸ್ಮಾತ್ ಧನುರ್ಜ್ಯಾಸಂಸ್ಪರ್ಶಂ ಸ ವಿಷೇಹೇ ಮಹೇಶ್ವರಃ ॥

(34-50)

ಮಹಾತೇಜಸ್ವಿಯಾದ ಶಿವನಿಗೂ ಅಂತರಾತ್ಮನು ವಿಷ್ಣುವೇ ಆದ್ದರಿಂದ, ಆವನು ಆ ಬಿಲ್ಲಿನ ಹೆದೆಯ ಸಂಸ್ಪರ್ಶವನ್ನು ತಡೆದುಕೊಂಡನು. ಅಂದರೆ, ಹೆಸರಿಗೆ ಶಿವನಿದ್ದರೂ, ವಸ್ತುತಃ ಅಂತರ್ಯಾಮಿಯಾಗಿ ನಿಂತು ಬಾಣಪ್ರಯೋಗ ಸಾಮರ್ಥ್ಯ ಕೊಟ್ಟು, ಹಾಗೆ ಮಾಡಿದವನು ವಿಷ್ಣುವೇ ಎಂದಂತಾಯಿತು.

ಹರಿವಂಶದಲ್ಲಿ ಇನ್ನೂ ಒಂದು ವಿಶೇಷವನ್ನು ಹೇಳಿದೆ. ಭವಿಷ್ಯ ಪರ್ವ-133 ನೇ ಅಧ್ಯಾಯ ) ಈ ಯುದ್ಧಕಾಲದಲ್ಲಿ ದೇವರಥವು (ಶಿವ

ನನ್ನು ಹೊತ್ತದ್ದು) ಕೆಳಗೆ ಬಿದ್ದಾಗ, ಲೋಕಗಳು ತಲ್ಲಣಿಸುತ್ತವೆ. ಆಗ ವಿಷ್ಣುವು ಎತ್ತಿನ ರೂಪ ಧರಿಸಿ ಅದನ್ನು ಮೇಲೆತ್ತುತ್ತಾನೆ, ಎಂದು.

ಅಥ ವಿಷ್ಣುರ್ಮಹಾಯೋಗೀ ಸರ್ವತೋ ದೃಶ್ಯ ತತ್ತ್ವತಃ ।
ವೃಷರೂಪಂ ಸಮಾಸ್ಥಾಯ ಪ್ರೋಜ್ಜಹಾರ ರಥೋತ್ತಮಂ ॥

(ಶ್ಲೋ. 70)

ಯುದ್ಧಮುಗಿದು, ತ್ರಿಪುರಾಸುರರು ಸತ್ತು, ದೇವತೆಗಳು ವಿಜಯ ಹೊಂದಿದ ಮೇಲೆ, ವಿಷ್ಣುವನ್ನು ಬ್ರಹ್ಮನೂ, ರುದ್ರನೂ ಸ್ತುತಿಸುತ್ತಾ, ಈ ವಿಜಯವು ಅವನದೇ ಎಂದು ಕೊಂಡಾಡುತ್ತಾರೆ. ಉಳಿದವರು ಅವನ ಉಪಕರಣ ಗಳಂತೆ ಮಾತ್ರ ಎಂಬ ಭಾವವು ಇಲ್ಲಿ ವ್ಯಕ್ತವಾಗಿದೆ.

ಶ್ರೀ ಭಾಗವತದಲ್ಲೂ ಈ ಕಥಾಸಂದರ್ಭದಲ್ಲಿ (VII-10) ಇನ್ನೂ ಕೆಲವು ವಿಷಯಗಳನ್ನು ಹೇಳಿದೆ. ಬ್ರಹ್ಮವರದಿಂದಲೂ, ತ್ರಿಪುರಾಸುರರ ಪತ್ನಿಯರ ಪಾತಿವ್ರತ್ಯದಿಂದಲೂ, ಸತ್ತವರನ್ನು ಬದುಕಿಸಬಲ್ಲ ಅಮೃತ ತುಂಬಿದ ಭಾವಿಯ ಬಲದಿಂದಲೂ, ಆ ಅಸುರರಿಗೆ ವೇದಪ್ರಾಮಾಣ್ಯ ಬುದ್ಧಿ ಯಿದ್ದುದರಿಂದಲೂ —ಈ ನಾಲ್ಕೂ ಕಾರಣಗಳಿಂದ ಅಜೇಯರಾಗಿದ್ದ ಅವರನ್ನು ಸಂಹರಿಸಲು ವಿಷ್ಣುವೇ ಒಂದು ಉಪಾಯ ಹೂಡುತ್ತಾನೆ. ತಾನು ಗೋವಾಗಿಯೂ, ಬ್ರಹ್ಮನು ಕರುವಾಗಿಯೂ, ಹೋಗಿ ಅಮೃತದ ಭಾವಿಯ ರಕ್ಷಕರು ಮೋಸಹೋಗುವಂತೆ ಮಾಡಿ, ಆ ಅಮೃತವನ್ನೆಲ್ಲ ಕುಡಿದು ಮುಗಿಸು ತ್ತಾನೆ. (ಸತ್ತ ಅಸುರರನ್ನೆಲ್ಲ ಮಯನು ಅದರಲ್ಲಿ ಹಾಕಿ ಬದುಕಿಸಿ, ಸೈನ್ಯ ಸಾಯದೇ ಮಾಡುತ್ತಿದ್ದ ತಂತ್ರ ಇದರಿಂದ ಹಾಳಾಗುತ್ತದೆ.) ತಾನು ಬುದ್ಧಾವತಾರ ಮಾಡಿ ಅಸುರರಿಗ ವೇದ ಪ್ರಾಮಾಣ್ಯಬುದ್ಧಿ ಹೋಗುವಂತೆ ಮಾಡಿ, ಎರಡನೆಯ ಬಲ ತಗ್ಗಿಸುತ್ತಾನೆ. ಮೂರನೆಯದಾಗಿ, ಅಸುರಪತ್ನಿ ಯರಿಗೆ ಅಶ್ವತ್ಥವೃಕ್ಷವನ್ನು ಪೂಜಿಸಿ, ಆಲಿಂಗಿಸಿಕೊಂಡರೆ ಪುತ್ರೋತ್ಪತ್ತಿ ಯಾಗುವುದೆಂದು ನಂಬಿಸಿ, ಅವರು ಹಾಗೆ ಮಾಡುವಾಗ, ತಾನೇ ಆ ಮರ ದಲ್ಲಿದ್ದು ಅವರ ಆಲಿಂಗನವನ್ನು ಸ್ವೀಕರಿಸಿ, ಅವರ ಪಾತಿವ್ರತ್ಯಕ್ಕೆ ಭಂಗ ತಂದು, ಈ ಬಲ ಅಸುರರಿಗಿಲ್ಲದಂತೆ ಮಾಡುತ್ತಾನೆ. ಶಿವನು ಯಾಗ

ಮಾಡುವಂತೆ ಮಾಡಿ ಶುಕ್ರನನ್ನು ಪುರೋಹಿತನನ್ನಾಗಿಯೂ, ತನ್ನ ಜಟಾ ಜೂಟವನ್ನೇ ಸಮಿತ್ತನ್ನಾಗಿಯೂ, ವಿಷ್ಣುವನ್ನು ಕುರಿತು ಹೋಮಮಾಡು ವಾಗ, ಪ್ರಸನ್ನನಾಗಿ, "ತ್ರಿಪುರಾಸುರನನ್ನು ಜಯಿಸು" ಎಂದು ವರಪ್ರದಾನ ಮಾಡಿ, ಬ್ರಹ್ಮಕೊಟ್ಟ ವರ ಮುಕ್ತಾಯವಾಗುವಂತೆ ಮಾಡಿ ನಾಲ್ಕನೆಯ ಬಲವನ್ನು ಅಳಿಸುತ್ತಾನೆ ! ಹೀಗಾಗಿ ರುದ್ರನು ತ್ರಿಪುರದಹಿಸಲು ವಿಷ್ಣುವೇ ಕಾರಣನಾದ್ದರಿಂದ, ಹೀಗೆ ವೇದದಲ್ಲಿ ಹೇಳಿರುವುದೂ ಯುಕ್ತವಾಗಿದೆ.

ವಿಷ್ಣು ಪತ್ನಿಗೆ ಇದರಲ್ಲಿ ಭಾಗವುಂಟಾದ್ದರಿಂದಲೇ "ಅಹಂ ರುದ್ರಾಯ ಧನುರಾತನೋಮಿ" ಎಂಬ ಮಾತಿಗೂ ಅರ್ಥವುಂಟಾಗುತ್ತದೆ.

ಏಳನೆಯ ಮಂತ್ರ

## ಲೋಕಗಳನ್ನು ಸೃಷ್ಟಿಸಿದವಳು

ಅಹಂ ಸುವೇ ಪಿತರಮಸ್ಯ ಮೂರ್ಧನ್
ಮಮ ಯೋನಿರಪ್ಸ್ವಂತಃ ಸಮುದ್ರೇ ।
ತತೋ ವಿತಿಷ್ಠೇ ಭುವನಾನು ವಿಶ್ವೋ—
ತಾಮೂಂ ದ್ಯಾಂ ವರ್ಷ್ಮಣೋಪಸ್ಪೃಶಾಮಿ ॥ ೭ ॥

ಅರ್ಥ : ನಾನೇ ಈ ಪರಮಾತ್ಮನ ತಲೆಯಲ್ಲಿ ದೇವಲೋಕವನ್ನು ಸೃಷ್ಟಿ ಸುತ್ತೇನೆ. ನನಗೆ ವಾಸಸ್ಥಾನವಾದ ಭಗವಂತನು ಕ್ಷೀರಾಬ್ಧಿಯಲ್ಲಿ ವಾಸಿಸು ವನು. ಹಾಗಾದುದರಿಂದಲೇ ಎಲ್ಲಾ ಲೋಕಗಳನ್ನು ನಾನು ವ್ಯಾಪಿಸಿ ಬೆಳಗುತ್ತೇನೆ. ಎತ್ತರವಾದ ಈ ದೇವಲೋಕವನ್ನೂ ನನ್ನ ಶರೀರದಿಂದಲೇ ವ್ಯಾಪಿಸಿದ್ದೇನೆ. (ಸಾಯಣ ಭಾಷ್ಯ ಮತ್ತು ಶ್ರೀವೈಷ್ಣವ ಸಂಪ್ರದಾಯನು ಸಾರವಾದಿ ಈ ಅರ್ಥ.)

( ಶ್ರೀವಾದಿರಾಜರ ಪ್ರಕಾರ ) : "ನಾನು ಈ ಜಗತ್ತಿನ ತಂದೆಯಾದ ಚತುರ್ಮುಖನನ್ನು ಜಗತ್ತಿಗೆ ಶಿಖರದಂತಿರುವ ( ತಲೆಯಾಗಿರುವ ) ಸತ್ಯಲೋಕಾಧಿಪತಿಯನ್ನಾಗಿ (ಜೀವೋತ್ತಮನನ್ನಾಗಿ) ಮಾಡಿದ್ದೇನೆ. (ಪ್ರಸವಿಸಿದ್ದೇನೆ.) ನನಗೆ ಕಾರಣ ಪುರುಷನು ಸಮುದ್ರದಲ್ಲಿದ್ದಾನೆ. ಎಲ್ಲಾ ಲೋಕಗಳೂ, ನನಗೂ ಕಾರಣನಾದ ಆ ನಾರಾಯಣನಿಂದಲೇ ನಿಂತಿವೆ. ಅವನ್ನು ಅನುಸರಿಸಿ, ನಾನು ಈ ದ್ಯಾವಾಪೃಥಿವಿಗಳನ್ನೂ ನನ್ನ ದೇಹದಿಂದ ಸ್ಪರ್ಶಿಸಿ ನಿಮಿತ್ತಳಾಗಿರುತ್ತೇನೆ."

ವಿವರಣೆ : ಜಗತ್ತಿಗೆ ವಿಷ್ಣುವೇ ಕಾರಣವೆಂಬುದರಲ್ಲಿ ಮತತ್ರಯದ ಯಾವ ಆಚಾರ್ಯರಿಗೂ ಸಂದೇಹವಿಲ್ಲವೆಂಬುದನ್ನು ನಮ್ಮ ಎಂಟನೆಯ ಸಂಪುಟದಲ್ಲಿ ನಿರೂಪಿಸಿಯಾಗಿದೆ. ಆದ್ದರಿಂದ ಈ ಎರಡೂ ಬಗೆಯ ಅರ್ಥಗಳಲ್ಲಿ ವಿರೋಧವಿಲ್ಲ. ಪಿತಾ ಎಂದರೆ ಲೋಕಾಧಿಪತಿಯಾದ ಬ್ರಹ್ಮನೆಂದು ಒಂದು ಅರ್ಥವಾದರೆ, ದ್ಯೌಃ ಪಿತಾ ಎಂಬ ಶ್ರುತಿಯಂತೆ (ತೈ. ಬ್ರಾ. III-5-7-4) ದೇವಲೋಕವೆಂಬುದೂ ಇನ್ನೊಂದು ಅರ್ಥ. ಅನ್ವಯ ಮಾತ್ರ. ಆಗ ಬೇರೆಯಾಗುವುದು. ಜಗತ್ಕಾರಣನಾದ ಭಗವಂತನನ್ನು ಲಕ್ಷ್ಮಿಯು ಎಂದೆಂದೂ ಎಡೆಬಿಡದವಳಾದುದರಿಂದ, ಅವಳಿಗೂ ಅನ್ವಯಿಸಿ ಮಾತು ಇಲ್ಲಿ ಹೇಳಿದೆಯೆಂದು ತಿಳಿದರೆ ಸಮಂಜಸ. ಎರಡನೆಯದಾಗಿ ಭಗವಂತನಂತೆಯೇ ಇವಳಿಗೂ ವಿಗ್ರಹವ್ಯಾಪ್ತಿಯುಂಟೆಂಬುದನ್ನು ಇಲ್ಲಿ ಹೇಳಿದೆ. ಉಳಿದ ವಿಷಯಗಳು ಸ್ಪಷ್ಟ.

ಶ್ರೀವಾದಿರಾಜರ ಪ್ರಕಾರ ಲಕ್ಷ್ಮಿಗೆ ವಿಷ್ಣುವು 'ಕಾರಣಭೂತ'ನೆಂದರೆ "ಅಪಿ ಮಮ ಸಕಲಚೇಷ್ಟಾಕಾರಣಭೂತಃ" ಎಂದಷ್ಟು, ಅವಳ ಸಕಲ ವ್ಯಾಪಾರಗಳಿಗೂ ಇವನು ಮೂಲಕಾರಣನೆಂದಷ್ಟೇ ಅರ್ಥ. ತಾನೊಬ್ಬಳೇ ಅವನನ್ನು ಬಿಟ್ಟೋ, ಅವನಿಗಿಂತಲೂ ಭಿನ್ನಳಾದ, ಉತ್ತಮಳಾದ ಕಾರಣವಲ್ಲ ಎಂದರ್ಥ. (ಹಾಗೆ ಹೇಳಿದರೆ ಶಾಕ್ತ ಮತವಾಗುವುದು !)

## ಎಂಟನೆಯ ಮಂತ್ರ

## ವ್ಯಾಪಕಳು

ಅಹಮೇವ ವಾತ ಇವ ಪ್ರವಾಮಿ
ಆರಭಮಾಣಾ ಭುವನಾನಿ ವಿಶ್ವಾ ।
ಪರೋ ದಿವಾ ಪರ ಏನಾ ಪೃಥಿವ್ಯೈ
ಏತಾವತೀ ಮಹಿನಾ ಸಂಬಭೂವ ॥ ೮ ॥

ಅರ್ಥ : ಎಲ್ಲಾ ಲೋಕಗಳನ್ನೂ, ನಾನೇ ಸೃಷ್ಟಿಸತೊಡಗಿ, ಗಾಳಿಯಂತೆ ಬೀಸಿ (ರಕ್ಷಿಸುತ್ತೇನೆ.) (ವ್ಯಾಪಿಸುತ್ತೇನೆ.) ದೇವಲೋಕಕ್ಕೂ ಮೇಲ್ಪಟ್ಟವಳಾಗಿ, ಭೂಲೋಕಕ್ಕೂ ಮೇಲ್ಪಟ್ಟವಳಾಗಿ, ಮಹಿಮೆಯಿಂದ ಕೂಡಿದವಳಾಗಿರುತ್ತೇನೆ,

(ಶ್ರೀವಾದಿರಾಜರ ಪ್ರಕಾರ:) ಎಲ್ಲಾ ಲೋಕಗಳ ಸೃಷ್ಟಿಗೂ ಧಾರಣಾದಿಗಳಿಗೂ ತೊಡಗುವ ನಾನೇ ಅವನ್ನು ಮುಖ್ಯ ಪ್ರಾಣನಂತೆ ದೈವದತ್ತ ಹಿರಿಮೆಯಿಂದ ಸುಗಂಧಯುಕ್ತವನ್ನಾಗಿಸುತ್ತೇನೆ. ನನ್ನ ಈ ಭೂರೂಪಕ್ಕಿಂತಲೂ ಪರಮಾತ್ಮನೇ ಶ್ರೇಷ್ಠನು, ನನ್ನ ಮಹಿಮೆಗೆ ಇದೇ ಮಿತಿ.

ವಿವರಣೆ : ಇಲ್ಲೂ ಲಕ್ಷ್ಮೀಯುಕ್ತ ಪರಮಾತ್ಮನ ವ್ಯಾಪಾರದಲ್ಲಿ ಅವಳಿಗೆ ಅನ್ವಯ ಹೇಳಿದೆ, ಮಾತ್ರ. ಅವನಂತೆ ಇವಳೂ ವ್ಯಾಪಕಳು. ಅವಳ ಮಹಿಮೆ ಸಹಜವೇ ಹೊರತು, ಸಂಪಾದಿತವಲ್ಲ.

ಹೀಗೆ ವಾಗಾಂಭೃಣೀ ಸೂಕ್ತವೂ ಲಕ್ಷ್ಮೀ ಮಹಿಮೆಯನ್ನು ಕೊಂಡಾಡಿದೆ

—೦—

## ಉಪಸಂಹಾರ :

ಯಂ ಸ್ಮೃತ್ವಾ ಜಪ ಯಜ್ಞ ಕಾರ್ಯವಿಧಯಃ
ಪೂರ್ಣಾ ಭವೇಯುಃ ಸದಾ
ಯಸ್ಯಾತ್ಯದ್ಭುತ ದಿವ್ಯ ವಿಕ್ರಮ ಗುಣಾ
ಸ್ತುನ್ವನ್ತಿ ಚಾರ್ಷಾ ಗಿರಃ ।
ಯದ್ಭಕ್ತಾ ನ ಭವನ್ತಿ ಕಾಮಕಲುಷೈಃ
ರೋಗಾದಿಭಿಃ ಪೀಡಿತಾಃ
ತಸ್ಮಿನ್ ದೇವವರೇ ದಯಾರ್ದ್ರ ಹೃದಯೇ
ಗ್ರಂಥೋsಸ್ತ್ವಯಂ ಸ್ವರ್ಪಿತಂ ॥ ೧ ॥

"ಯಾವನನ್ನು ನೆನೆಸಿದರೆ ತಪಸ್ಸು, ಯಜ್ಞ, ಕ್ರಿಯಾಚರಣೆ, ಅವುಗಳ ವಿಧಿಗಳು ಮುಂತಾದವು (ಹೆಚ್ಚು ಕಮ್ಮಿಯಾಗಿದ್ದರೂ) ಸದಾ ಪೂರ್ಣವೇ ಆಗುವುವೋ, ಯಾವನ ಅತ್ಯದ್ಭುತವಾದ ವೀರ್ಯ, ವಿಕ್ರಮ, ಗುಣಾದಿಗಳನ್ನು ವೇದವಾಣಿಯು ಸ್ತುತಿಸುವುದೋ, ಯಾವನ ಭಕ್ತರು ಕಾಮದ ಕೊಳಕಿನಿಂದಲೂ ರೋಗವೇ ಮೊದಲಾದ ಕ್ಲೇಶ, ಅಶುಭಗಳಿಂದ ಪೀಡಿತರಾಗುವುದಿಲ್ಲವೋ, ಆ ದೇವದೇವೋತ್ತಮನೂ, ದಯೆಯಿಂದ ಒದ್ದೆಯಾದ ಹೃದಯವುಳ್ಳವನೂ ಆದ ಶ್ರೀಹರಿಯಲ್ಲಿ, ( ಅವನ ಪಾದ ಪದ್ಮಗಳಲ್ಲಿ ), ಗ್ರಂಥವು ಚೆನ್ನಾಗಿ ( ಅವನಿಗೆ ಪ್ರೀತಿಯಾಗುವಂತೆ ) ಅರ್ಪಿತವಾಗಲಿ."

॥ ೧ ॥

ಲಕ್ಷ್ಮೀತತ್ತ್ವಮಿದಂ ಭಜನ್ತು ವಿಬುಧಾಃ
ವೇದಾರ್ಣವಾದುದ್ಧೃತಂ
ನಾನಾಖ್ಯಾನ, ಪುರಾಣ, ಸಾರಸಹಿತಂ

ಶ್ರೀಪಾಂಚರಾತ್ರಾವೃತಂ ।
ಸತ್ಪಾತ್ರೇಷು ಬುಧೇಷ್ವುಪಾಹೃತಮಿದಂ
ಕರ್ಣಾಟವಾಣ್ಯಾದೃತಂ
ಭವ್ಯಂ, ಪ್ರೀತಿಕರಂ, ಸತಾಂಸುಖಕರಂ
ಶ್ರೀಶ್ರೀನಿವಾಸಪ್ರಿಯಂ ॥ ೨ ॥

"ವೇದವೆಂಬ (ಕ್ಷೀರ) ಸಮುದ್ರದಿಂದ ಎತ್ತಲ್ಪಟ್ಟುದೂ, ನಾನಾ ಇತಿಹಾಸ ಪುರಾಣಗಳ ಸಾರಸಮೇತವಾದುದೂ ಶ್ರೀಪಾಂಚರಾತ್ರಾಗಮಶಾಸ್ತ್ರದಲ್ಲಿ ಅಮೃತದಂತೆ ಅಡಗಿದ್ದುದೂ, ಈಗ (ತಮ್ಮಂಥ) ಸತ್ಪಾತ್ರರಲ್ಲಿ, (ಗ್ರಂಥ ಕರ್ತನು) ವಿನಯದಿಂದ ಸಮರ್ಪಿಸಿರುವುದೂ, ಕನ್ನಡ ಭಾಷೆಯಲ್ಲಿ ಆದರ ಹೊಂದಿದುದೂ, ಭವ್ಯವೂ, ಪ್ರೀತಿಕರವೂ, ಮನಸ್ಸಿಗೆ ಸುಖಕರವೂ ಆದುದೂ ಲಕ್ಷ್ಮೀನಾರಾಯಣರಿಗೆ ಪ್ರಿಯವಾದುದೂ ( ಈ ಗ್ರಂಥದಲ್ಲಿ ಪ್ರತಿಪಾದಿಸ ಲ್ಪಟ್ಟಿರುವುದೂ ) ಆದ ಲಕ್ಷ್ಮೀತತ್ತ್ವವನ್ನು ವಿದ್ವಾಂಸರು, ಪಂಡಿತರು ಸೇವಿಸಲಿ" ೨ ॥

ಕಾಲೇsಸ್ಮಿನ್ ಬಹುಭೀಷಣೇ, ರಚಯಿತುಂ
ಸಮ್ಮುದ್ರಣಾಯಾಪಿ ವಾ
ಗ್ರಂಥಾನ್, ವೇದವಿಚಾರಪೂರ್ಣಮಹಿತಾನ್,
ಸುಜ್ಞೋsಪಿ ಕೋ ವಾ ಕ್ಷಮಃ ? ।
ತತ್ರಾ ಜ್ಞೋ, ಧನವರ್ಜಿತೋ, ಬಹುಜನಾನಾಶ್ರಿತ್ಯ
ಪೈ ಕೇವಲಂ
ಕಾರುಣ್ಯೇನ ಚ ರಕ್ಷಿತೋ ಯದುಪತೇಃ
ಕರ್ತಾಸ್ಮ್ಯಶೇಷಾನ್ ಇಮಾನ್ ॥ ೩ ॥

"ಈ ಸಂಕಟಮಯವಾದ ಕಾಲದಲ್ಲಿ, ( ಅಂದರೆ, ಒಂದು ಕಡೆ ವೇದಾದಿ ಸಚ್ಛಾಸ್ತ್ರಗಳಿಗೆ ಅನಾದರವೂ, ಒಳ್ಳೆಯ ಕೆಲಸಗಳಿಗೆ ದ್ರವ್ಯವು ದೊರೆಯ

ಡಂತಿರುವುದೂ ಆದ ಈ ಕಲಿಗಾಲದಲ್ಲಿ) ಒಬ್ಬನು ತಿಳಿದವನಾದಿದ್ದರೂ, (ವಿದ್ವಾಂಸನಾಗಿದ್ದರೂ). ವೇದವಿಚಾರಗಳಿಂದಲೂ, ಅವುಗಳ ಮರ್ಮಗಳಿಂದಲೂ ಕೂಡಿ ಮಹಿಮೆಯುಳ್ಳ ಅನೇಕ ಗ್ರಂಥಗಳನ್ನು ಬರೆಯುವುದಕ್ಕೂ ಮುದ್ರಿಸುವುದಕ್ಕೂ ಯಾವನು ತಾನೇ ಸಮರ್ಥನಾಗಿರುವನು ? ಹೀಗಿರುವಲ್ಲಿ ಏನೂ ತಿಳಿಯದವನೂ (ಅವಿದ್ವಾಂಸನೂ). ಧನಹೀನನೂ ಆದ (ನನ್ನಂಥ ಪಾಮರನು). ನಾನು ಬಹು ಜನರ ಬೆಂಬಲದಿಂದಲೂ ಯದುಪತಿಯಾದ ಶ್ರೀಕೃಷ್ಣನ ಕೃಪೆಯಿಂದಲೂ ಸುರಕ್ಷಿತನಾಗಿ ಮಾತ್ರ ಈ ಎಲ್ಲ (ಹತ್ತೂ) ಸಂಪುಟಗಳನ್ನು ಬರೆದು ಮುದ್ರಿಸಿ ಪ್ರಚುರಪಡಿಸಿರುತ್ತೇನೆ," ॥ ೩ ॥

ಶ್ರೀಭೂನೀಳಾದಿತಿಶ್ರದ್ಧಾ ಸ್ವಧಾ-
ಮೇಧಾದಿ ನಾಮಭಿಃ ।
ವಾಗಾಂಭೃಣೀತಿ ನಾಮ್ನಾಪಿ
ಖ್ಯಾತಾ ದೇವ್ಯವತು ಸ್ವಯಂ

"(ಪ್ರಕೃತ ಸಂಪುಟದ ವಿಷಯಕ್ಕೆ ಹೇಳುವ ಮಾತೆಂದರೆ:) ಶ್ರೀದೇವಿಯೆಂದೂ, ಭೂ, ನೀಳಾ, ಅದಿತಿ, ಶ್ರದ್ಧಾ, ಸ್ವಧಾ, ಮೇಧಾ ಮುಂತಾದ ಶ್ರೀನಾಮಗಳಿಂದಲೂ. ವಾಗಾಂಭೃಣೀ ಎಂಬ ದಿವ್ಯನಾಮದಿಂದಲವ ಯಾವ ದೇವದೇವದಿವ್ಯಮಹಿಷಿಯು ಪ್ರಸಿದ್ಧಳಾಗಿರುವಳೋ ಅವಳು ಈ ಗ್ರಂಥರೂಪಕೈಂಕರ್ಯದಿಂದ ಸ್ವಯಂ ಸುಪ್ರೀತಳಾಗಲಿ," ॥ ೪ ॥

ವೇದಾಕ್ಷರಾಣಿ ಯಾವನ್ತಿ ಪಠಿತಾನಿ ದ್ವಿಜಾತಿಭಿಃ ।
ತಾವನ್ತಿ ಹರಿನಾಮಾನಿ ಕೀರ್ತಿತಾನಿ ನ ಸಂಶಯಃ ॥೫॥

ವೇದಮೇವ ಜಪೇನ್ನಿತ್ಯಂ ಯಥಾಕಾಲಂ ಅತಂದ್ರಿತಃ ।
ನ ಹ್ಯಸ್ಯಾಹುಃ ಪರಂ ಧರ್ಮಃ ಉಪಧರ್ಮೋऽನ್ಯ
ಉಚ್ಯತೇ ॥೬॥

ಪ್ರಾಯಶ್ಚಿತ್ತಾನ್ಯಶೇಷಾಣಿ ತಪಃ ಕರ್ಮಾತ್ಮಿಕಾನಿ ವೈ ।
ಯಾನಿ ತೇಷಾಂ ಅಶೇಷಾಣಾಂ ಕೃಷ್ಣಾನುಸ್ಮರಣಂ ಪರಂ ॥೭॥

ಸ್ವರಮಾತ್ರಾ ವಿಹೀನಂ ತು ಪದಾಕ್ಷರವಿವರ್ಜಿತಂ ।
ನ್ಯೂನಾತಿರಿಕ್ತಂ ಯತ್ಕಿಂಚಿತ್
ಆಭಿರ್ಗೀರ್ಭಿರುದೀರಯೇತ್ ॥೮॥

ಯದಕ್ಷರ ಪದಭ್ರಷ್ಟಂ ಮಾತ್ರಾ ಹೀನಂ ತು ಯದ್ಭವೇತ್ ।
ತತ್ ಸರ್ವಂ ಕ್ಷಮ್ಯತಾಂ ದೇವ ನಾರಾಯಣ!
ನಮೋಽಸ್ತು ತೇ ॥೯॥

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ ।
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥

॥ ಹರಿಃ ಓಂ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥

[ವೇದಾಕ್ಷರಗಳು ಎಲ್ಲಿಯವರೆಗೆ ಪಠಿಸಲ್ಪಡುವವೋ ಅಲ್ಲಿಯವರೆಗೂ ಶ್ರೀಹರಿನಾಮವೂ ಕೊಂಡಾಡಲ್ಪಡುವುದೆಂಬುದರಲ್ಲಿ ಸಂಶಯವಿಲ್ಲ. (ಏಕೆಂದರೆ 'ಹರಿಃ ಓಂ' ಎಂದುಚ್ಚರಿಸದೇ ವೇದವನ್ನು ಪಠಿಸುವಂತಿಲ್ಲ!) ವೇದವನ್ನೇ ನಿತ್ಯವೂ, ಕಾಲಕಾಲಕ್ಕೆ ಸರಿಯಾಗಿ ಸೋಮಾರಿತನವಿಲ್ಲದೆ ಪಠಿಸಿ, ಜಪಿಸಬೇಕು. ಇದಕ್ಕಿಂತ ಮೇಲ್ಪಟ್ಟ ಧರ್ಮವಿಲ್ಲ. ಉಳಿದವೆಲ್ಲ ಉಪಧರ್ಮಗಳೇ ಮಾತ್ರ. ತಪಸ್ಸು, ಸತ್ಕರ್ಮಾಚರಣೆ ಮುಂತಾದ ಪ್ರಾಯಶ್ಚಿತ್ತ ಕ್ರಿಯೆಗಳು ಏನೇನುಂಟೋ ಅವುಗಳಲ್ಲೆಲ್ಲ ಶ್ರೀ ಕೃಷ್ಣನನ್ನು ಪದೇಪದೇ ಸ್ಮರಿಸುವುದೇ ಉತ್ತಮೋತ್ತಮವಾದುದು. ವೇದವನ್ನೋದುವಾಗ ಸ್ವರವೋ, ಮಾತ್ರಾಕಾಲವೋ ಬಿಟ್ಟುಹೋದರೂ, ಪದಾಕ್ಷರಗಳು ಕಳಚಿಹೋದರೂ, ಹೆಚ್ಚುಕಮ್ಮಿ ಆದರೂ ಇವೆಲ್ಲದರ ಸರಿಹೋಗುವುದಕ್ಕಾಗಿ "ಅಭಿರ್ಗೀರ್ಭಿಃ" ಎಂಬ ಮಂತ್ರವನ್ನು ಹೇಳಬೇಕು. ಎಲೈ ಶ್ರೀಮನ್ನಾರಾಯಣನೇ! ವೇದಪಾರಾಯಣದ ಕಾಲದಲ್ಲಿ ಏನೊಂದು ಅಕ್ಷರವೋ, ಪದವೋ ಬಿಟ್ಟುಹೋಯಿತೋ, ಮಾತ್ರಾಕಾಲವು ನಷ್ಟವಾಯಿತೋ ಅದೆಲ್ಲವನ್ನೂ ಕ್ಷಮಿಸು. ನಿನಗೆ ನಮಸ್ಕಾರವಿರಲಿ. ಶರೀರದಿಂದ, ವಾಕ್ಕಿನಿಂದ, ಮನಸ್ಸು, ಇಂದ್ರಿಯಗಳಿಂದ, ಪ್ರಕೃತಿಸ್ವಭಾವದಿಂದ, ಬುದ್ಧಿಯಿಂದ, ಆತ್ಮದಿಂದ ಮಾಡಿದ್ದೆಲ್ಲವನ್ನೂ ಶ್ರೀಮನ್ನಾರಾಯಣನಿಗೆ ಸಮರ್ಪಿಸುತ್ತೇನೆ. ಶ್ರೀಕೃಷ್ಣಾರ್ಪಣವಾಗಲಿ.]

॥ ಶ್ರೀಕೃಷ್ಣಾರ್ಪಣಮಸ್ತು ॥





## ವೇದ ಸಂಸ್ಕೃತಿಯ ಪರಿಚಯ,
## ಸಂಪುಟ ೬ರ ಬಗೆಗೆ ಒಂದು ಅಭಿಪ್ರಾಯ

"ನಿಮ್ಮ ಮಹಾವಿಷ್ಣುವನ್ನು ಆಮೂಲಾಗ್ರವಾದಿ ಓದಿ ಸಂತೋಷಿಸಿದ್ದೇನೆ. ಎಷ್ಟು ಆಧಾರಗಳಿಂದ ವಿಷಯವನ್ನು ಆರಿಸಿ ನೀವು ಪ್ರತಿಪಾದಿಸಿದ್ದೀರಿ ಎಂಬುದನ್ನು ಕಂಡು ಬೆರಗಾಗಿದ್ದೇನೆ. ವಿಷ್ಣುಸೂಕ್ತದ ಪ್ರತಿ ಮಂತ್ರಕ್ಕೂ ನೀವು ಮಾಡಿರುವ ವ್ಯಾಖ್ಯಾನ ಚೇತೋಹಾರಿಯಾಗಿದೆ. ಶ್ರೀ ಶಂಕರರ ಭಾಷ್ಯಗಳಿಂದ ತೆಗೆದುಕೊಟ್ಟಿರುವ ಉಲ್ಲೇಖಗಳು ಎಂಥವರ ಕಣ್ಣನ್ನಾದರೂ ತೆರೆಸುವುವು. ಭಗವದ್ರಾಮಾನುಜರ ಸೂಕ್ತಿಗಳ ವಿಚಾರ ಹೇಳಬೇಕಾದಿಯೇ ಇಲ್ಲ. ಕೊನೆಯಲ್ಲಿ ನೀವು ತೆಗೆದುಕೊಂಡಿರುವ 'ಅವತಾರ' ವಿಚಾರ ಬಹಳ ಸಮಂಜಸವಾಗಿದೆ. ನಿಮ್ಮ ಶೈಲಿಯ ಸೊಗಸನ್ನು ನಾನು ಬಹಳ ಮೆಚ್ಚಿಕೊಂಡಿದ್ದೇನೆ. ಹಾಗೆ ಬರೆಯುವುದು ಸುಲಭವೇನಲ್ಲ. ಅದು ನಿಮಗೆ ಚೆನ್ನಾದಿ ಸಿದ್ಧಿಸಿದೆ.

ಇಂಥ ಮೇರುಕೃತಿಗೆ ಮುನ್ನುಡಿ ಬರೆಯುವುದು ಸಾಗರಕ್ಕೊಂದು ಅಲಂಕಾರ ಹೇಗೆ ಸಾಧ್ಯವೋ ಹಾಗೆಯೇ. ನಿಮ್ಮ ವಿಚಾರಪ್ರವಾಹದ ಸುಳಿಯಲ್ಲಿ ಸಿಕ್ಕಿಹೋದಿರುವ ನಾನು ಬೇರೇನನ್ನೂ ಚಿಂತಿಸದವನಾಗಿದ್ದೇನೆ. ನಿಮ್ಮ ಅಪ್ಪಣೆಯನ್ನು ಮೀರಲಾರದೆ ನಾಲ್ಕು ಸಾಲು ತೋರಿದ್ದನ್ನು ಬರೆದು ಕಳುಹಿಸಿದ್ದೇನೆ."

ಡಾ. ಎನ್. ಎಸ್. ಅನಂತರಂಗಾಚಾರ್ಯ.